ಅಂತರರಾಷ್ಟ್ರೀಯ ಮಹಿಳಾ ವರ್ಷ




# ಮಹಿಳಾ ವಿಶೇಷಾಂಕ

ಪ್ರಕಾಶಕಿ ಮತ್ತು
ವ್ಯವಸ್ಥಾಪಕ ಸಂಪಾದಕಿ :
ನಿರುಪಮಾ

ಸಂಪಾದಕಿಯರು :
ಎಚ್. ಎಸ್. ಪಾರ್ವತಿ
ಗೀತಾ ದೇಸಾಯಿ

ಚಿತ್ರಗಳು :
ಹುಬ್ಳೀಕರ್, ಮೂರ್ತಿ

ಮುಖಚಿತ್ರ : ಹುಬ್ಳೀಕರ್

**ಆ ರ ತಿ**
ನಂ. 9, 3ನೇ ಅಡ್ಡರಸ್ತೆ,
ಮಲ್ಲೇಶ್ವರಂ, ಬೆಂಗಳೂರು-3.
ದೂರವಾಣಿ [illegible]

ಬೆಲೆ ರೂ. 6–50

ಮುದ್ರಣ :
ಡಿ. ಎಸ್. ಜೆ. ಗುಪ್ತ,
ದವಲತ್ ಪ್ರಿಂಟರ್ಸ್,
೪೫, ಸಂಪಿಗೆ ರಸ್ತೆ, ಮಲ್ಲೇಶ್ವರ.
ದೂರವಾಣಿ [illegible]

## ಸಂಪಾದಕೀಯ

1975ನೇಯ ಇಸವಿಯನ್ನು ಅಂತರರಾಷ್ಟ್ರೀಯ ಮಹಿಳಾವರ್ಷವಾಗಿ ಆಚರಿಸಬೇಕೆಂದು ಯುನೆಸ್ಕೊ ಸಂಸ್ಥೆ ಘೋಷಿಸಿದೆ. ವಿಶ್ವದಾದ್ಯಂತ ವಿವಿಧ ಕ್ಷೇತ್ರಗಳಲ್ಲಿ ಮಹಿಳೆಯರ ಚಟುವಟಿಕೆ ಉತ್ಸಾಹದಿಂದ ನಡೆದಿದೆ. ಕರ್ನಾಟಕದ ಲೇಖಕಿಯರು ಅದಕ್ಕೆ ಹೊರತಾಗದೆ ಅಂತರರಾಷ್ಟ್ರೀಯ ಮಹಿಳಾವರ್ಷದ ಅಂಗವಾಗಿ "ಆರತಿ"ಯನ್ನು ಕನ್ನಡ ಜನತೆಗೆ ಅರ್ಪಿಸುತ್ತಿದ್ದೇವೆ.

ಈ ಮಹಿಳಾ ವಿಶೇಷ ಸಂಚಿಕೆಯನ್ನು ಹೊರತರುವುದಕ್ಕಾಗಿ ಅನೇಕರು ಶ್ರಮಿಸಿದ್ದಾರೆ. ಕನ್ನಡನಾಡಿನ ಲೇಖಕಿಯರು ಹಾಗೂ ಹೊರನಾಡಿನಲ್ಲಿರುವ ಕನ್ನಡ ಲೇಖಕಿಯರು ಸಹ ತಮ್ಮ ಅಮೂಲ್ಯ ಲೇಖನಗಳನ್ನು ಒದಗಿಸಿ ಸಹಕರಿಸಿದ್ದಾರೆ. ಈ ಎಲ್ಲ ಲೇಖಕಿಯರಿಗೂ ಅನಂತ ಧನ್ಯವಾದಗಳನ್ನು 'ಆರತಿ'ಯು ಅರ್ಪಿಸುತ್ತದೆ.

ಲೇಖನಗಳಿಗೆ ಚಿತ್ರಗಳನ್ನು ಒದಗಿಸಿದ ಖ್ಯಾತ ಕಲಾವಿದರಿಗೆ, ತಮ್ಮ ಜಾಹೀರಾತುಗಳನ್ನು ಕೊಟ್ಟು ಉಪಕರಿಸಿದ ಜಾಹೀರಾತುದಾರರಿಗೆ 'ಆರತಿ'ಯ ಹೃತ್ಪೂರ್ವಕ ಕೃತಜ್ಞತೆಗಳು.

ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ 'ದವಲತ್ ಪ್ರಿಂಟರ್ಸ್'ಗೆ ಆಭಾರಿಯಾಗಿದ್ದೇವೆ.

ಎಲ್ಲಾ ವಿಧದಲ್ಲಿ 'ಆರತಿ'ಗೆ ಸ್ನೇಹವೆರೆದು ಅದು ಬೆಳಗುವುದಕ್ಕೆ ಕಾರಣರಾದ ಎಲ್ಲರಿಗೂ ನೆನಕೆಗಳು ಸಲ್ಲುತ್ತವೆ.

ಮಹಿಳಾವರ್ಷದಲ್ಲಿ ಪ್ರಾರಂಭವಾದ ಈ ಸಂಚಿಕೆ ಮಹಿಳೆಯರಿಗಾಗಿ ಇನ್ನೂ ಹೆಚ್ಚಿನ ಸೇವೆ ಸಲ್ಲಿಸಲಿ ಎಂದು ಹಾರೈಸುವ,

ಸಂಪಾದಕಿಯರು

ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಗಳ ಗಂಜಿ ದೊಡೆಂತಯ್ಯ

ಸಂತೆಯೊಳಗೊಂದು ಮನೆಯಮಾಡಿ
ಶಬ್ದಕ್ಕಂಜಿ ದೊಡೆಂತಯ್ಯಾ

ಸಮುದ್ರದ ತಡಿಯಲೊಂದು ಮನೆಯಮಾಡಿ
ನೆರೆ ತೊರೆ ಗಳಿಗಂಜಿ ದೊಡೆಂತಯ್ಯಾ,

ಮಾನವನಾಗಿ ಹುಟ್ಟಿದ ಬಳಿಕ
ತಾಳು ತಾಳೆಂದರೆ ತಾಳಬೇಕಯ್ಯಾ,
ಚೆನ್ನಮಲ್ಲಿಕಾರ್ಜುನ ಕೇಳು

—ಅಕ್ಕಮಹಾದೇವಿ

# ಪ●ವಿಡಿ

## ಲೇಖನ



## ಕವನ

## ನಾಟಕ



## ಕಥೆ



## ಅನುಭವ



## ಲಘು ಬರಹ



---




ಆರತಿ ಬೆಳಗಿರಿ । ನಾರಿಯರೆಲ್ಲರು
ಶಾರದೆ ಕನ್ನಡ ದೇವಿಗೆ – ಪಾಡೀರಿ
ಕರುನಾಡ ನೆಲಕುಲ ಒಂದೇ.

ನನ್ನಿಯು ನಾಡಿದು । ಚಿನ್ನದ ಬೀಡಿದು
ಸನ್ನುತ ಜ್ಯೋತಿಯು ಬೆಳಗಿಸಿ–ಒಮ್ಮನದಿ
ಕನ್ನಡಾಂಬೆಗೆ ಜಯವೆನ್ನಿ.

ಎತ್ತಿರಿ ಆರತಿ । ಎತ್ತರದ ನಾಡಿನಲಿ
ಸುತ್ತು ಮುತ್ತೆಲ್ಲ ತನಬೆಳಕ – ಬೀರಲಿ
ನೆತ್ತಿ ಎತ್ತಿ ಜನ ಬದುಕಲಿ.

ಅಕ್ಷರವೆಂಬುದು । ಮೋಕ್ಷವೆಂದರಿದು
ಸಾಕ್ಷರ ಪ್ರಸಾರವಾಗಲಿ – ಕನ್ನಡದ
ಸಾಕ್ಷಾತ್ಕಾರವು ಅದರಲ್ಲಿ

ಬಡತನದ ಬೇತಾಳ । ಬಡದಿದೆ ದೇಶಕ್ಕೆ
ಬಿಡಿಸಲು ಬಾ ಬೇಗ ಮಾಂತ್ರಿಕ – ಕಾಯಕದ
ದುಡಿಮೆಯ ಹಿರಿಮೆಯ ಸಾರೂತ.

ಆರತಿ ಆರತಿ । ಆರದ ಆರತಿ
ತೋರದೆ ಒಡಲಿನ ಮಿಂಚನ್ನು – ನಾಡಿನ
ದಾರಿಯು ತುಂಬೆಲ್ಲ ದೀವಳಿಗೆ.

ಯಾರ್‍ಯಾರು ಆರಿಸದ । ನೂರಾರು ದೀವಳಿಗೆ
ಬೇರ್‍ಯಾರು ಹೊತ್ಸದ ಜ್ಯೋತಿಯು– ಮೆರೆಸೇವ
ಮೀರಿದ ಕ್ರಾಂತಿಯು ಸಂಕೇತ

ನೇತ್ರ ದೀವಿಗೆಮಾಡಿ । ಮಿತ್ರಿಯರೆ ಬೆಳಗಿರಿ
ಮಾತೃ ಛಾಯೆಯು ತಂಪಿನ – ಅನುಗಾಲ
ವ್ರತ ನಿಮ್ಮದು ತೆರದಿರಲಿ

— ಜಯದೇವಿತಾಯಿ

# ಶುಭ-ಕಾಮನೆ

ಬೆಳಗಲೀ....ಬೆಳಗಲೀ ...ಬೆಳಗಲೀ....
ಕನ್ನಡದ ಆರತಿಯು ಎಲ್ಲೆಲ್ಲು ಬೆಳಗಲಿ
ಮನೆಮನೆಗು ಹೂ ಬೆಳಕ ಹೊರಚೆಲ್ಲಿ ಬಾಳಲಿ
ಎತ್ತಿದಾ ಆರತಿಯು ಮತ್ತೆ ಆರದಿರಲಿ
ಮಂಗಳದ ಹೊಂಬೆಳಕ ಮನದಲ್ಲಿ ಮೂಡಿಸಲಿ ॥
ಬೆಳಗಲೀ ...ಬೆಳಗಿಲೀ ...ಬೆಳಗಲೀ....

ಕನ್ನಡದ ಕೀರುತಿಯು ಉನ್ನತಕ್ಕೆ ಏರಿಸಲಿ
ಹೊನ್ನಿನಾ ಕಲಶವಾ ಹಾಯಾಗಿ ಹೊತ್ತಿರಲಿ
ಕನ್ನಡಾ ಮಾತೆಯಾ ಮಣಿಮುಕುಟವಾಗಲಿ
ಮಹಿಳೆಯರು ಎತ್ತಿದಾ ಮುತ್ತಿನಾ ಆರತಿಯು ॥
ಬೆಳಗಲೀ....ಬೆಳಗಲೀ....ಬೆಳಗಲೀ....

ಭಾರತದ ಬಗೆಬಗೆಯ ಭಾಷೆಗಳ ತೊಡಕಿನಲಿ
ಕನ್ನಡದ ಆರತಿಯು ಚಿರಕಾಲ ಉಳಿಯಲಿ
ನವ್ಯಕಾವ್ಯಗಳ, ಸ್ವಾರಸ್ಯ ಕವನಗಳ,
ದಿವ್ಯ ರಾಮುನನಾಮ ದಿನನಿತ್ಯ ಬೆಳಗಲಿ ॥
ಬೆಳಗಲೀ....ಬೆಳಗಲೀ....ಬೆಳಗಲೀ....

—ಜಗ್ಗು–ಪ್ರಿಯದರ್ಶಿನಿ




ಮಹಿಳೆ! ಏನಿವಳ ವಿಶೇಷ? ಅಲ್ಲಲ್ಲ ಏನಿವಳ ಕ್ಲೇಶ? ಆಗಿರುವಳೇನಿವಳು ಬರೀ ಅವಶೇಷ?

ಇಂತಹುದೇ ನೂರಾರು ಪ್ರಶ್ನೆಗಳಿಗೆ ಉತ್ತರವೀಯುವೊಂದೇ ಇರಬೇಕು ವಿಶ್ವಸಂಸ್ಥೆಯಂತಹ ಪ್ರಾತಿನಿಧಿಕ ಸಂಸ್ಥೆ ಈ ವರುಷವನ್ನು ಅಂತರ ರಾಷ್ಟ್ರೀಯ ಮಹಿಳಾ ವರ್ಷ ಎಂದಿರುವುದು.

ಇಂದು ಇಲ್ಲೆಲ್ಲಿಯೂ ಅಂದರೆ ಪಟ್ಟಣಗಳಲ್ಲಿ ಬಹುತೇಕ........ಇದೇ ಮಾತು. ನಮ್ಮ ಗ್ರಾಮಗಳ ಕಥೆ ಬೇರೆ. ಅದಿರಲಿ, ಈ ಘೋಷಣೆಯಿಂದ ಆಗಿರುವ ಒಂದು ಮುಖ್ಯ ಪರಿಣಾಮ ಎಂದರೆ (ಉಳಿದ ಪರಿಣಾಮಗಳಾಗಿಲ್ಲವೆಂದಾಗಲಿ, ಆಗುವುದಿಲ್ಲವೆಂದಾಗಲಿ ಅರ್ಥವಲ್ಲ) ಮಹಿಳೆಯ ಬಗ್ಗೆ ಜಗತ್ತು ಎಚ್ಚರಗೊಳ್ಳುತ್ತಿದೆ. ಜೊತೆಗೆ ಮಹಿಳೆ ತನ್ನ ಬಗ್ಗೆ ತಾನೇ ಎಚ್ಚರಗೊಳ್ಳುತ್ತಿದ್ದಾಳೆ.

ಹೀಗೆ ಎಚ್ಚರಗೊಳ್ಳಬೇಕಾಗಿರುವಾಗ ಕೆಲವೊಮ್ಮೆ ಕೆಲವು ಮಹಿಳೆಯರು ಒಂದೊಂದು ರೀತಿಯ "Complex"ಗಳನ್ನಾಗಲಿ "obsession" ಗಳನ್ನಾಗಲಿ ಬೆಳಸಿಕೊಳ್ಳಬೇಕಾಗುವುದು ಅನಿವಾರ್ಯವಾಗಿ.

ಸ್ತ್ರೀ ಪುರುಷರು ಸೃಷ್ಟಿಯ ಸ್ಥಿತಿಗಳು. ಆದರೂ ಅದರಲ್ಲಿ ವ್ಯತ್ಯಾಸಗಳಿವೆ. ನಾವು ಇಲ್ಲಿ ದೈಹಿಕ ಮಾನಸಿಕ ವ್ಯತ್ಯಾಸಗಳನ್ನು ಗಮನಿಸುವುದು ಬೇಡ. ಅವು ಬಹುಮಟ್ಟಿಗೆ ಪ್ರಕೃತಿಜನ್ಯ. ಆದರೆ ಮಾನವ ನಿರ್ಮಿತ ಸಮಾಜದಲ್ಲೇ ಅವರಿಬ್ಬರಿಗೂ ಅಷ್ಟೊಂದು ವ್ಯತ್ಯಾಸಗಳಿರುವುದೇಕೆ? ಇವು ಇರಬೇಕೆ?

1975ರ ಮಹಿಳೆ? ಮೊದಲು ಯಾರಿವಳು ಎಂದು ಯೋಚಿಸೋಣ. ಈ ಮಹಿಳೆ ಮೂಲಭೂತವಾಗಿ ಒಂದೇ ಆದರೂ ಪರಿಸರದ ನಿಮಿತ್ತ ಹಲವಾರು ವಿಧಗಳಲ್ಲಿ ಭಿನ್ನ.

ಪುರುಷರಲ್ಲಿರುವಂತೆಯೇ ಇಲ್ಲೂ ಹೀಗೆ ಸ್ಥೂಲವಾಗಿ ವಿಭಾಗಗಳನ್ನು (ನಮ್ಮ ದೇಶಕ್ಕೆ ಸಂಬಂಧಪಟ್ಟಂತೆ ಮಾತ್ರ) ಮಾಡಬಹುದು.

1) ಗ್ರಾಮಗಳಲ್ಲಿ ವಾಸಿಸುವ ರೈತ ಮಹಿಳೆಯರು.
2) ಗ್ರಾಮಗಳಲ್ಲಿ ವಾಸಿಸುವ ರೈತರಲ್ಲದ ಮಹಿಳೆಯರು.
3) ಪಟ್ಟಣಗಳಲ್ಲಿನ ಶ್ರಮಜೀವಿ ಮಹಿಳೆಯರು.
4) ಪಟ್ಟಣಗಳಲ್ಲಿನ ಕೊಳಚೆ ಪ್ರದೇಶದ ಮಹಿಳೆಯರು.
5) ಪಟ್ಟಣಗಳಲ್ಲಿನ ಮಧ್ಯಮ ವರ್ಗದ ಮಹಿಳೆಯರು.
6) ಪಟ್ಟಣಗಳಲ್ಲಿನ ಅನುಕೂಲಸ್ಥ ಮಹಿಳೆಯರು.
7) ಪಟ್ಟಣಗಳಲ್ಲಿನ ಉದ್ಯೋಗಸ್ಥ ಮಹಿಳೆಯರು

1 ರಿಂದ 4ರ ವರೆಗಿನ ವಿಭಾಗಗಳಿಗೆ ಒಳಪಟ್ಟ ಮಹಿಳೆಯರಲ್ಲಿ ಬಹುಭಾಗ ಸುಮಾರು ನೂರಕ್ಕೆ ತೊಂಬತ್ತೊಂಬತ್ತು ಪಾಲು ಅನಕ್ಷರಸ್ಥರು. ಈ ಅನಕ್ಷರಸ್ಥರ ಸಂಖ್ಯೆ ಭಾರತದ ಪ್ರಜಾಸಂಖ್ಯೆಯಲ್ಲಿ ಸುಮಾರು ಅರ್ಧ. ಇಂದು ಭಾರತದ ಪ್ರಜಾಸಂಖ್ಯೆ 40 ಕೋಟಿಗೂ ಹೆಚ್ಚಿದೆ. 1980ರಲ್ಲಿ ಈ ಪ್ರಜಾಸಂಖ್ಯೆ 70 ಕೋಟಿ ಆಗುತ್ತದೆಂದು ಅಂದಾಜು. ಇದರಲ್ಲಿ ಶೇಕಡ 80ರಷ್ಟು ಗ್ರಾಮೀಣ ಜನ. ಇದರಲ್ಲಿ ಮಹಿಳೆಯರ ಸಂಖ್ಯೆ ಅರ್ಧ. ಈ ಜನಕ್ಕೆ ಈ ವರುಷ ಅಂತರ ರಾಷ್ಟ್ರೀಯ ಮಹಿಳಾ ವರುಷ ಎಂಬುದು ಗೊತ್ತಿರಲು ಅಶಕ್ಯ. ಗೊತ್ತಿರಬೇಕಾದ್ದೂ ಅವಶ್ಯಕವಿಲ್ಲವೇನೋ ಎನ್ನುವಷ್ಟು ಈ ಜನರ ಜೀವನ ಗತಿ, ಶೈಕ್ಷಣಿಕವಾಗಿ ಆರ್ಥಿಕವಾಗಿ ಸಾಮಾಜಿಕವಾಗಿ ಹಿಂದುಳಿದಿದೆ.

ಇನ್ನು ಮಹಿಳಾ ವರ್ಷ, ಮಹಿಳಾ ವರ್ಷ–ಎಂದು ಬೊಬ್ಬೆಯಿಡುತ್ತಿರುವ ಜನ ಯಾರು ? ನಾವು, ಅಂದರೆ ಪಟ್ಟಣಗಳಲ್ಲಿದ್ದು ಅಲ್ಪಸ್ವಲ್ಪ ವಿದ್ಯೆ ಕಲಿತು ನಮ್ಮನ್ನು ಕುರಿತು ಆಲೋಚನೆಗೆ ತೊಡಗಿ 'Complex'ಗೀಡಾದ ಜನ ಎಂದು ಅಪಹಾಸ್ಯಕ್ಕೂ ಅಪನಿಂದೆಗೂ ಈಡಾಗುವ ನಾವು.

ಯಾವುದೋ ಒಂದು ಕಾಲದಲ್ಲಿ ಮಹಿಳೆಗೆ ಸಮಾಜದಲ್ಲಿ ಒಂದು ಸ್ಥಾನವಿತ್ತಂತೆ ಆ ಕಾಲ ನಾವು ಕಂಡಿಲ್ಲ. ಆದರೆ ಇಂದು 1975ರಲ್ಲೂ ನಾವು ಕಾಣುತ್ತಿರುವ ದೃಶ್ಯವೇನು ?

ವಿದ್ಯಾವಂತ ಮಹಿಳೆಯರ ಸಂಖ್ಯೆ ಪಟ್ಟಣಗಳಲ್ಲಿ ಹೆಚ್ಚುತ್ತಿದೆ. ನಂಬಲೇಬೇಕು. ಏಕೆಂದರೆ ಕಾಲೇಜು ಶಾಲೆಗಳಲ್ಲಿ ಹೆಚ್ಚುತ್ತಿರುವ ಮಹಿಳೆಯರ ಸಂಖ್ಯೆ ನೋಡಿ.

ಇಂದಿನ ಮಹಿಳೆ ಎಲ್ಲ ರಂಗಗಳಲ್ಲಿ ಮುಂದುವರಿದಿದ್ದಾಳೆ ಎನ್ನುತ್ತಾರೆ ಜನ ? ಇದು ನಿಜವೆ ?

ಗ್ರಾಮಗಳ ಎಷ್ಟು ಮಹಿಳೆಯರು 1975 ರಲ್ಲೂ ಶಾಲೆಯ ಮುಖ ಕಂಡಿದ್ದಾರೆ ?

ಕಾಲೇಜುಗಳಿಗೆ ಹೋಗಿದ್ದಾರೆ ?

ಪದವೀಧರರಾಗಿದ್ದಾರೆ ?

ಕೊನೆಗೆ ಅಕ್ಷರಸ್ಥರಾದರೂ ಆಗಿದ್ದಾರೆ ?

ಇನ್ನು ಗ್ರಾಮದ ಮಹಿಳೆಯರಾಗಲಿ, ಕೊಳಚೆ ಪ್ರದೇಶದ ಮಹಿಳೆಯರಾಗಲಿ ತಿನ್ನಲು ಅನ್ನವಿಲ್ಲದೆ ಉಡಲು ಬಟ್ಟೆಯಿಲ್ಲದೆ ಅನೇಕ ಕಡೆಗಳಲ್ಲಿ ಕುಡಿಯಲು ನೀರೂ ಇಲ್ಲದೆ ಕಷ್ಟಪಡುತ್ತಿರುವಾಗ ಅಂತರ ರಾಷ್ಟ್ರೀಯ ಮಹಿಳಾ ವರುಷದ ಮಾತೆತ್ತುವುದಾದರೂ ಹೇಗೆ ಅಲ್ಲಿ.

ಇನ್ನು ಪಟ್ಟಣವಾಸದ ವಿಷಯ. ಶ್ರೀ ಚಂಚಲ್ ಸರ್ಕಾರ್ ಅವರ ಲೇಖನಿಯಿಂದ ಬಂದಿರುವ ಪೈಕಿ ಅಂಶಗಳಿವು–ಮಹಿಳೆಯ ಅವನತಿಯ ಬಗ್ಗೆ (Declining Sex, Indian Express).

1901 ರಿಂದ 1971ರವರೆಗೆ ಮಹನೀಯರ ಸಂಖ್ಯೆ ಶೇಕಡ 130ರಷ್ಟು ಹೆಚ್ಚಿದೆ. ಮಹಿಳೆಯರ ಸಂಖ್ಯೆಯ ಹೆಚ್ಚಳ ಶೇಕಡ 126. ಇದು ಏಕೆಂದರೆ ಸಾವಿನ ಸಂಖ್ಯೆ ಮಹಿಳೆಯರಲ್ಲಿ ಹೆಚ್ಚು. ಏಕೆ ಹೆಚ್ಚೆಂದರೆ ಅವರಿಗೆ ಆರೋಗ್ಯವಿಲ್ಲ, ಏಕೆ ಆರೋಗ್ಯವಿಲ್ಲವೆಂದರೆ ತಿನ್ನಲು ಸರಿಯಾದ ಆಹಾರವಿಲ್ಲ. ಜೊತೆಗೆ ಮಕ್ಕಳೋ ಮಕ್ಕಳು.

ಇನು ಇಲ್ಲಿ ಕೇಳಿ, ಕೂಲಿಗಾರ ಮಹಿಳೆಯರ ಸಂಖ್ಯೆ 1911 ರಿಂದ 1971 ರಷ್ಟರಲ್ಲಿ ಶೇಕಡ 34.4 ರಿಂದ 17.3ಕ್ಕೆ ಇಳಿದಿದೆ.

ಅನಕ್ಷರಸ್ಥರ ಸಂಖ್ಯೆ 1951ರಲ್ಲಿ 16.2 ಕೋಟಿ ಇದ್ದುದ್ದು 1971ರಲ್ಲಿ 21.5 ಕೋಟಿ ಆಗಿದೆ.

ಎಲ್ಲದಕ್ಕಿಂತ ಹೆಚ್ಚಾಗಿ ಲೋಕಸಭೆ, ರಾಜ್ಯಸಭೆಗಳಲ್ಲೂ ವಿಧಾನ ಸಭೆ, ವಿಧಾನ ಪರಿಷತ್ತುಗಳಲ್ಲೂ ಮಹಿಳಾ ಸದಸ್ಯರ ಸಂಖ್ಯೆ ಇಳಿದಿದೆ.

1962ರಲ್ಲಿ ಲೋಕಸಭೆಯಲ್ಲಿ 33 ಜನ ಮಹಿಳೆಯರಿದ್ದರು. (50.6ರಷ್ಟು ಮಹಿಳೆಯರು ಗೆದ್ದಿದ್ದರು) 1971ರಲ್ಲಿ ಲೋಕಸಭೆಯಲ್ಲಿನ ಮಹಿಳೆಯರ ಸಂಖ್ಯೆ 21. (ನಿಂತಿದ್ದವರಲ್ಲಿ 25.9ರಷ್ಟು ಮಾತ್ರ ಗೆದ್ದರು) ಬ್ರಿಟೀಷರ ಕಾಲದಲ್ಲಿ ಮಹಿಳೆಯರಿಗಾಗಿಯೇ ಸ್ಥಾನಗಳನ್ನು ಮೀಸಲಾಗಿಡುತ್ತಿದ್ದ ಕಾಲದಲ್ಲಿ ಶೇಕಡ 3.4 ಮಹಿಳೆಯರು ಅಸೆಂಬ್ಲಿಯಲ್ಲಿರುತ್ತಿದ್ದರು. ಈಗಾಗಿರುವ ಅಭಿವೃದ್ಧಿ ಕೇವ ನೂರಕ್ಕೆ ಐದು. ಹೀಗೆ ಹೇಳುತ್ತ ಹೋಗಬಹುದು.

ಇಷ್ಟೆಲ್ಲ ಹೇಳುತ್ತಿರುವುದರ ಉದ್ದಿಶ್ಯ ಇಷ್ಟೆ. ಅನೇಕರ ಕಣ್ಣಿಗೆ ಅಭಿವೃದ್ಧಿ ಹೊಂದಿದಂತೆ ಮಹಿಳೆ ಕಾಣುತ್ತಿದ್ದರೂ, ಮಹಿಳೆ ಎಲ್ಲ ರಂಗಗಳಲ್ಲೂ ರಾಜಸುತ್ತಿ

ಬ್ಬಾಳೆ ಎಂದು ಹೇಳುತ್ತಿದ್ದರೂ, ಆ "ಮಹಿಳೆ" ಎಲ್ಲ ಮಹಿಳೆಯರ ಪ್ರತೀಕವಲ್ಲ. ಪ್ರಗತಿಯ ಪ್ರತೀಕವೂ ಅಲ್ಲ.

ಬೆಲ್ ಬಾಟಮ್ಸ್, ಜೀನ್ಸ್, ಮಿನೀಸ್ ಇವು ಮುಂದುವರೆದಿರುವ ಭಾರತ ಮಹಿಳೆಯ ಪ್ರತೀಕವಲ್ಲ. ಇವನ್ನು ಧರಿಸಿರುವ ಹೆಣ್ಣು ಮಕ್ಕಳು ಪ್ರಗತಿಯ ಚಿನ್ಹೆಗಳಲ್ಲ. ಪಟ್ಟಣಗಳಲ್ಲಿನ ಕಾರ್ಖಾನೆಗಳಲ್ಲಿ, ಕಚೇರಿಗಳಲ್ಲಿ ದುಡಿಯುತ್ತಿರುವ ಮಹಿಳೆಯರು ಆರ್ಥಿಕವಾಗಿ ಸ್ವಲ್ಪ ಮುಂದುವರಿದಿದ್ದರೂ ಉದ್ಯೋಗಸ್ಥ ಮಹಿಳೆಯರು ಎದುರಿಸಬೇಕಾದ ಸಮಸ್ಯೆಗಳು ನೂರು. ವಿವಾಹಿತ ಉದ್ಯೋಗಸ್ಥ ಮಹಿಳೆಯರ ಮಕ್ಕಳ ಪಾಲನೆ ಒಂದು ದೊಡ್ಡ ಹೊಣೆಗಾರಿಕೆ.

ಆದರೆ ಮಹಿಳೆ ಆ ಶಾ ವಾ ದಿ . ಸಹಿಷ್ಣುತೆ ಶ್ರದ್ಧೆಯೇ ಅವಳ ಆಶಾವಾದಿತ್ವದ ಬುನಾದಿ. ಈ ಬುನಾದಿಯ ಮೇಲೆ ನಾವು 1975ರಲ್ಲಿ ಆರಂಭಿಸಬೇಕಾದ ಅತ್ಯವಶ್ಯಕ ಕೆಲಸಗಳು ಇವು.

ಮಹಿಳೆಯರಲ್ಲಿ ಅಕ್ಷರತೆ ಹೆಚ್ಚಬೇಕು. ಶಾಲಾ ಕಾಲೇಜುಗಳಿಗೇ ಹೋಗಬೇಕೆಂದಲ್ಲ. ಆದರೆ ಸುತ್ತಲಿನ ವ್ಯವಹಾರ ಜ್ಞಾನ ಬೆಳೆಯುವಷ್ಟಾದರೂ ಅ ವ ಳು ಎಚ್ಚೆತ್ತುಕೊಳ್ಳಬೇಕು. ಅಕ್ಷರ ಪ್ರ ಸಾ ರ ಇದಕ್ಕೆ ಮೊದಲ ಮೆಟ್ಟಲು.

ಮಹಿಳೆ ಮೊದಲು ತಾನು ವಿದ್ಯಾವತಿಯಾಗಿ ಆದಷ್ಟು ಜನನ ನಿಯಂತ್ರಣದ ಬಗ್ಗೆ ವೈಜ್ಞಾನಿಕ ತಿಳುವಳಿಕೆ ಪಡೆದುಕೊಳ್ಳಬೇಕು. ಹಾಗೂ ಅದನ್ನು ಅನುಷ್ಠಾನಕ್ಕೆ ತರಬೇಕು.

ವಿದ್ಯಾವಂತ ನಿರುದ್ಯೋಗಿ ಮಹಿಳೆಯರು ತಮ್ಮ ಬಿಡುವಿನ ವೇಳೆಯನ್ನು ಆದಷ್ಟು ಗ್ರಾಮೀಣ ಮಹಿಳೆಯರು ಸ್ವಾವಲಂಬಿಗಳಾಗಿ ತಯಾರು ಮಾಡಿರುವ ಸಾಮಾನುಗಳನ್ನು ಪಟ್ಟಣಗಳಲ್ಲಿ ಮಾರಾಟ ಮಾಡುವ ಏರ್ಪಾಟು ಮಾಡಬೇಕು. ಜೊತೆಗೆ ಹರಟೆಯಲ್ಲೇ ಮೋಕ್ಷವೆಂದುಕೊಳ್ಳದೆ ವಿದ್ಯಾವಂತ ನಿರುದ್ಯೋಗಿಗಳಲ್ಲನೇಕರು ಉದ್ಯೋಗಸ್ಥ ಮಹಿಳೆಯರ ಮಕ್ಕಳ ಪಾಲನೆಯನ್ನು ಕೈಗೊಳ್ಳಬೇಕು.

ಇನ್ನು ವರದಕ್ಷಿಣೆ. ಅನೇಕ ಮನೆಗಳಿಗೆ ಮಾರಿಯಾಗಿರುವ ಈ ಸಾಮಾಜಿಕ ಪಿಡುಗು ಎಂತಹ ಮುಂದುವರೆದಂತೆ ಕಾಣುವ ಬೆಲ್ ಬಾಟಮ್ಸ್ ಹುಡುಗಿಯನ್ನೂ ಕೆಲವೊಮ್ಮೆ ಬಿಡದು. 'ವರದಕ್ಷಿಣೆ' 1975ರಲ್ಲಿ ಮೊಂಡು ಹಿಡಿದ ಭಂಡ ಭೂತವಾಗಿರಲು ಬಹಳಮಟ್ಟಿಗೆ ಮಹಿಳೆಯರೇ ಕಾರಣ.

ಕೊನೆಯದಾಗಿ ಮಹಿಳೆಯರ ಬರವಣಿಗೆಯ ಬಗ್ಗೆ ಒಂದು ಮಾತು. ಇದನ್ನಂತೂ ಎಷ್ಟೇ "ಅಪಕ್ವ" ಎಂದು ಬಾಯಿಬಿಟ್ಟು ಹೇಳಿದರೂ ಅಲ್ಲವೆ, ಏಕೆ ಅಪಕ್ವ? ಅನುಭವದ ಕೊರತೆ, ಜೊತೆಗೆ ಕೆಲವೊಮ್ಮೆ ನನ್ನತನವನ್ನು ಕಂಡುಕೊಳ್ಳುವುದರಲ್ಲಿರುವ ಅಶ್ರದ್ಧೆ....ಹಳೆಯ ಕಥೆ ಹೇಳಿ ಕೇಳಿ ಸಾಕಾಗಿದೆ.

ಹೊಸ ಉಕ್ತಿ ಬೇಕು, ಹೊಸ ಶಕ್ತಿ ಬೇಕು. ಇದರಿಂದಲೇ ಕೋಟ್ಯಾಂತರ ಮಹಿಳೆಯರಿಗೆ ಬೌದ್ಧಿಕ ದಾಸ್ಯದಿಂದ ಮುಕ್ತಿ.

---

ಅಂತರ್-ರಾಷ್ಟ್ರೀಯ ಮಹಿಳಾ ವರ್ಷ
ಅಂಕುರವಿಟ್ಟಿದೆ ಈ ವರ್ಷ.
ಆಗದಿರಲಿ ಇದು ಆರಾಮ ವರ್ಷ !
ಮುಂದುವರೆಯಲಿ ತರಲಿ ಹರುಷ !

—ಉಷಾ

# ಹೂವಿನಲ್ಲಿ ಹುಳ

ಎಂ. ಕೆ. ಇಂದಿರ.



ನಾವು ಆರೇಳು ಮಂದಿ ಗೆಳೆಯರು ಬೇಸಿಗೆಯ ರಜೆಯಲ್ಲಿ ಮಲೆನಾಡಿನ ಕಡೆ ಪ್ರವಾಸ ಹೊರಟಿದ್ದೆವು. ಮುಖ್ಯವಾಗಿ ನನ್ನ ಕಾಲೇಜು ಗೆಳೆಯ ಜಯರಾಮನ ಆಹ್ವಾನವಿತ್ತು. ಅವನು ತನ್ನ ಬಿ. ಎಸ್. ಸಿ ಮುಗಿದೊಡನೆಯೇ ವಿದ್ಯಾಭ್ಯಾಸಕ್ಕೆ ಇತಿಶ್ರೀ ಹಾಡಿದ್ದ. ಜಯರಾಮನಿಗೆ ಡಿಗ್ರಿಯ ಅವಶ್ಯಕತೆ ಇರಲಿಲ್ಲವಾದರೂ ಮಲೆನಾಡಿನ ಆಗರ್ಭ ಶ್ರೀಮಂತರ ಮಗ; ಅದರಲ್ಲೂ ಅವರ ಏಕಮಾತ್ರ ಪುತ್ರ! ಮುಂದೆ ಅಷ್ಟೊಂದು ಆಸ್ತಿಗೆ ಒಡೆಯನಾಗುವವನು ವ್ಯವಹಾರ ಕುಶಲಿಯಂತೂ ಆಗಿರಲೇಬೇಕಿತ್ತು. ತಂದೆ ರಂಗನಾಥರಾಯರಿಗೂ ಮಗ ಪದವೀಧರನಾದರೆ ತಮ್ಮ ಘನತೆಗೊಂದು ಕಲಶವಿದ್ದಂತೆ ಎಂದು ಭಾವಿಸಿದ್ದರು. ಅವನ ತಂಗಿ ಸುಚರಿತಳೂ ಕಾಲೇಜು ಸೇರಬೇಕೆಂದು ಹಟ ಹಿಡಿದಿದ್ದರಿಂದ; ಎರಡು ಕಣ್ಣುಗಳಂತಿರುವ ಎರಡು ಮಕ್ಕಳನ್ನೂ ದೂರ ಕಳಿಸಿ ಇಷ್ಟು ದೊಡ್ಡ ಮನೆಯಲ್ಲಿ ಹೇಗಿರುವುದೆಂಬುದೇ ಅವರ ತಂದೆ-ತಾಯಿಗಳಿಗಾದ ಕೊರಗು. ಮನೆ ತುಂಬ ಆಳು-ಕಾಳುಗಳು, ಅಡಿಗೆಯಾಕೆ, ದೂರದ-ಹತ್ತಿರದ ನೆಂಟರಿಷ್ಟರು, ಬಂದು ಹೋಗುವವರೂ ಇದ್ದರೂ ವಾತ್ಸಲ್ಯದ ಮಕ್ಕಳನ್ನು ಕೆಲವು ಕಾಲದ ಮಟ್ಟಿಗಾದರೂ ಅನಿವಾರ್ಯವಾಗಿ ಅಗಲಿರಲೇ ಬೇಕಾಗಿತ್ತು.

ಇವೆಲ್ಲ ವಿಷಯವನ್ನೂ ಜಯರಾಮನು ನನ್ನೊಡನೆ ಹಾಸ್ಟೆಲಿನಲ್ಲಿದ್ದಾಗ ಹೇಳಿದ್ದ.

"ಹಾಗಿದ್ದೂ ನೀನು ಹತ್ತಿರದ ಶಿವಮೊಗ್ಗೆ ಕಾಲೇಜು, ಕಡೂರು, ತೀರ್ಥಹಳ್ಳಿ ಎಲ್ಲ ಬಿಟ್ಟು ಇಲ್ಲಿಯತನಕ ಏಕೆ ಬಂದೆ?"

ಎಂದು ನಾನು ಕೇಳಿದಾಗ ಒಂದು ಗಳಿಗೆ ನೆಲ ನೋಡಿ ನಕ್ಕು ಅವನು ಹೇಳಿದ್ದ.

"ಇದೇ ಮಾತನ್ನೆ ನನ್ನ ತಂದೆ–ತಾಯಿ ಇಬ್ಬರೂ ಅಂದಿದ್ದರು. ಆದರೂ ಆಗ ಬೆಂಗಳೂರು, ಮೈಸೂರು ಎಂಬುದು ನನ್ನ ಮಟ್ಟಿಗೆ ಪ್ಯಾರಿಸ್ಸಿಗೆ ಸಮಾನವಾಗಿತ್ತು. ವಯೋ ಸಹಜವಾದ ಕುತೂಹಲ! ಕಷ್ಟ ಕಾರ್ಪಣ್ಯ ಕಾಣದ ಮುದ್ದಿನ ಬೆಳವಣಿಗೆ. ಸುಮ್ಮನೆ ಹಟಹಿಡಿದೆ. ಅಪ್ಪನದೂ ಮೃದು ಮನಸ್ಸು ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಆತಂಕ ಮಾಡಬಾರದೆಂದು ಕಳಿಸಿಕೊಟ್ಟರು. ಮಕ್ಕಳನ್ನು ಬಿಟ್ಟಿರುವುದು ಮನಸ್ಸಿಗೆ ಅಸಹನೀಯವಾದರೂ ಹೊರಗೆ ಯಾವುದನ್ನೂ ತೋರಗೊಡದೆ ನನ್ನನ್ನು ಇಲ್ಲಿಗೆ ಕಳಿಸಿದರು. ಚರಿತಾಗೂ ಇಲ್ಲಿಗೇ ಬರಬೇಕೆಂಬ ಇಷ್ಟವಿದ್ದರೂ ಅಮ್ಮ ಮಾತ್ರ ವಿರೋಧಿಸಿದರು. ಈಗವಳು ಶಿವಮೊಗ್ಗೆಯ ಹಾಸ್ಟಲಿನಲ್ಲಿದ್ದುಕೊಂಡು ಕಾಲೇಜು ಕಲಿಯುತ್ತಿದ್ದಾಳೆ."

ಮುಂದೆ ಅವನು ಡಿಗ್ರಿ ತೆಗೆದುಕೊಂಡು ಊರಿಗೆ ಮರಳಿದಾಗ: "ನೀನೆಲ್ಲಾ ನಮ್ಮೂರಿಗೆ ಒಂದು ಬಾರಿ ಬರಲೇಬೇಕು. ನಮ್ಮ ಸಹ್ಯಾದ್ರಿನಾಡನ್ನೆಲ್ಲ ತೋರಿಸುವ ಹೊಣೆ ನನ್ನದು. ಬರುವ ಮುನ್ನ ಒಂದು ಕಾಗದ ಹಾಕಿ ಬನ್ನಿ" ಎಂದಿದ್ದ.

ಮುಂದೆ ನಾನು ಮೆಡಿಕಲ್ ಸೇರಿದೆ. ಉಳಿದ ಗೆಳೆಯರು ಒಬ್ಬೊಬ್ಬರು ಒಂದೊಂದು ಮಾರ್ಗ ಹಿಡಿದಿದ್ದರು.

ಈಗ ನನ್ನ ಮೆಡಿಕಲ್‌ನ ನಾಲ್ಕನೆಯ ವರ್ಷ ಕಾಲೇಜಿಗೆ ರಜೆಯಿತ್ತು. ಹಿಂದಿನ ಮೂರುವರ್ಷದ ರಜೆಯಲ್ಲಿ ಊಟಿ, ಕನ್ಯಾಕುಮಾರಿ, ಮದರಾಸು ಹೀಗೆಲ್ಲ ತಿರುಗಾಡಿ ಬಂದಿದ್ದೆವು. ಈ ಬಾರಿ ಯಾಕೋ ತಟ್ಟನೆ ಜಯರಾಮನ ನೆನಪು ಬಂದು ನನ್ನ ಮಿತ್ರ ಗೆಳೆಯರಿಗೆ ಈ ಮಾತನ್ನ ತಿಳಿಸಿದೆ. ಎಲ್ಲರೂ ಓ. ಕೆ. ಅಂದರು. ನಾವು ಬರುವ ತಾರೀಖನ್ನು ತಿಳಿಸಿ ಜಯರಾಮನಿಗೊಂದು ಪತ್ರ ಬರೆದು ಹಾಕಿದೆ. ಈ ನಾಲ್ಕು ವರ್ಷಗಳಲ್ಲಿ ಒಂದೆರಡು ಬಾರಿ ಮಾತ್ರ ಅವನಿಗೆ ಪತ್ರ ಬರೆದಿದ್ದೆ. ಈಗ್ಗೆ ಒಂದು ವರ್ಷದ ಹಿಂದೆ ಬಂದ ಅವನ ಪತ್ರ ಸತ್ವ ಹೀನವಾಗಿತ್ತು, ಮತ್ತು ವೇದನಾ ಮಯವಾಗಿತ್ತು. ಸಹಜವಾಗಿ ಓದಿದವರಿಗೆ ಅದರಲ್ಲಿ ಕಾಣುತ್ತಿದ್ದುದು ಅಸೀಮ ಮೈತ್ರಿಭಾವ ಆದರೆ ನನ್ನ ಮನಸ್ಸಿಗೇಕೋ ಆ ಪತ್ರದ ಪ್ರತಿಯೊಂದು ಅಕ್ಷರವೂ ಯಾವುದೋ ಅರುಹಲಾರದ ಮೂಕವೇದನೆಯಿಂದ ತೊಳಲುತ್ತಿದೆ ಅನಿಸಿತ್ತು. ಆಗ ಆ ಬಗ್ಗೆ ಹೆಚ್ಚು ತಲೆ ಕೆಡಿಸಿಕೊಳ್ಳಲಿಲ್ಲ. ಮತ್ತೊಂದು ವಿಷಯವೆಂದರೆ ಇತ್ತೀಚಿಗೆ ನಮಗೆಂದೂ ಬನ್ನಿರೆಂದು ಆಹ್ವಾನ ಕೊಟ್ಟಿರಲಿಲ್ಲ. ಆದರೂ ನಾವು ಹೊರಟೆವು. ಅದರಲ್ಲಿ ಶಿವಮೊಗ್ಗದವನು ಒಬ್ಬನಿದ್ದುದರಿಂದ ಅವನು ಮುಂದೆ ಬರುವುದಿಲ್ಲವೆಂದಿದ್ದ.

ನಾವು ಶಿವಮೊಗ್ಗೆಯಲ್ಲಿ ಬಸ್ಸಿನಿಂದ ಇಳಿಯುವ ವೇಳೆಗೆ ಜಯರಾಮನ ದೊಡ್ಡ ಅಂಬಾಸಿಡರ್ ಕಾರು ಅಲ್ಲಿ ಸಿದ್ಧವಿತ್ತು. ಅವನು ಬಸ್ಸಿನ ಹತ್ತಿರವೇ ಬಂದು ನಸುನಗುತ್ತ ನನ್ನನ್ನು ಮೃದುವಾಗಿ ಆಲಂಗಿಸಿ :

"ಹೇಗಿತ್ತು ಜರ್ನಿ ?" ಎಂದ. ಅವನು ನಗುತ್ತಿದ್ದರೂ ಆ ನಗುವಿನ ಹಿಂದೆ ಒಂದು ಗಹನವಾದ ನೋವು ಇದೆ ಎಂದು ನನ್ನ ಒರಟು ಬುದ್ಧಿಗೂ ತಿಳಿಯಿತು. ಆದರೂ ಅದನ್ನು ಅಲ್ಲಿಗೆ ಬಿಟ್ಟು :

"ರಾತ್ರಿ ಎಲ್ಲ ನಿದ್ರೆಗೆಟ್ಟು ಬಸ್ಸಿನಲ್ಲಿ ಬರುವ ಪ್ರಯಾಣ ಹೇಗಿತ್ತೆಂದರೆ ಏನು ಹೇಳಲಯ್ಯ ? ಇದು ನಿನಗೆ ಸ್ವಯಂ ವೇದ್ಯವಿದೆಯಲ್ಲ."

ಎಂದು ಹೇಳಿ ನನ್ನ ಉಳಿದ ವೈದ್ಯಕೀಯ ಗೆಳೆಯರನ್ನು ಜಯರಾಮನಿಗೆ ಪರಿಚಯ ಮಾಡಿಸಿದೆ. ಅವನು ನಗುತ್ತ ಎಲ್ಲರ ಕೈಕುಲುಕಿ :

"ಇರಲಿ ಈಗ ಮೊದಲು ಇಲ್ಲಿ ನನ್ನ ದೊಡ್ಡಮ್ಮನ ಮನೆಗೆ ಹೋಗಿ ಅವರಲ್ಲಿ ಮುಖ ತೊಳೆದು ಟಿಫನ್ ಮುಗಿಸಿ ಊರಿನ ದಾರಿ ಹಿಡಿಯೋಣ. ಬಾಕಿ ಮಾತು ಕಾರಿನಲ್ಲಿ ಊರತನಕ"–ಎಂದ.

ಮತ್ತೆ ಮುಕ್ಕಾಲು ಗಂಟೆಯಲ್ಲಿ ಅಷ್ಟು ಕೆಲಸ ಮುಗಿದಿತ್ತು. ಅವನ ತಾಯಿಯ ಅಕ್ಕನ ಗಂಡ ಅಡಿಕೆ ಮಂಡಿ ಸಾಹುಕಾರರು. ತುಂಬಿದ ಉಪಚಾರ. ಅಂದು ಅಲ್ಲಿಯೇ ಉಳಿಯಲು ಒತ್ತಾಯ ಎಲ್ಲಾ ಆಯ್ತು. ಹಿಂದಿರುಗುವಾಗ ಒಂದು ಮಧ್ಯಾಹ್ನ ಅಲ್ಲಿ ಉಳಿಯುವುದಾಗಿ ಭರವಸೆ ಕೊಟ್ಟು ನಾವು ಕಾರನ್ನೇರಿದೆವು. ಆರು ಮಕ್ಕಳ ತಾಯಿ ಆ ಗೃಹಿಣಿ ತಂಗಿಯ ಮಗನನ್ನು ಆಕ್ಷೇಪಿಸಿದಾಗ ಆ ವಾತ್ಸಲ್ಯದ ಆಕ್ಷೇಪಣೆಯ ಶಬ್ದಗಳೇ

ಕೇಳಲು ಬಲುಹಿತವಾಗಿತ್ತು. ಮೂರು–ನಾಲ್ಕು ಬಗೆಯ ತಿಂಡಿ ಹೊಟ್ಟೆಯನ್ನು ಗಿಟ್ಟುಗಿರಿದಿತ್ತು. ಕಾರಿನ ಹೊಟ್ಟೆಯೂ ಡ್ರೈವರನನ್ನು ಸೇರಿ ಏಳು ಜನರನ್ನು ತುಂಬಿಕೊಂಡು ಗಿಟ್ಟುಗಿರಿದು ಮದಗಜದಂತೆ ಸಾಗಿತು. ನನಗೆ ರಾತ್ರಿ ನಿದ್ರೆ ಇಲ್ಲದ್ದರಿಂದ ಈಗ ಕಾರಿನ ತೂಗು ಏಕೆಯಿಂದ ನಮ್ಮ ಕಣ್ಣು ತೂಗತೊಡಗಿತು. ಇದನ್ನರಿತ ಜಯರಾಮ ಮೌನ ತಳೆದನಾದರೂ ನನಗೆ ಮಲೆನಾಡನ್ನು ನೋಡುತ್ತಿರುವುದು ಇದೇ ಮೊದಲ ಬಾರಿಯಾದ್ದರಿಂದ ಬೆಳಗಿನ ಆ ಎಳೆ ಬಿಸಿಲಿನಲ್ಲಿ ತಲೆದೂಗುತ್ತ ನಿಂತಿರುವ ಆ ತೆಂಗು-ಕಂಗು-ಬಾಳೆ, ಗಿರಿ–ತೊರೆ ಬನಗಳನ್ನು ಮುಕ್ತಮನದಿಂದ ನೋಡುವಾಸೆ. ಶಿವಮೊಗ್ಗೆಯಿಂದ ತೀರ್ಥಹಳ್ಳಿಯವರೆಗೂ ದಾರಿಯುದ್ದಕ್ಕೂ ನಲವತ್ತು, ಐವತ್ತು ಹಳ್ಳಿಗಳು ಅಲ್ಲಲ್ಲಿ ತುಂಗೆಯ ಪ್ರವಾಹ, ಕಣ್ಣುಮುಚ್ಚುತ್ತ, ಬಿಡುತ್ತ ನಾನು ಜೂಗರಿ ಸುತ್ತಿದ್ದ. ನನ್ನ ಗೆಳೆಯರಲ್ಲಿ ಒಬ್ಬ ಮಾತ್ರ ಚೂರೂ ಕಣ್ಣು ಮುಚ್ಚದೆ ಸುತ್ತಲಿನ ನಿಸರ್ಗ ಸೌಂದರ್ಯವನ್ನು ಹೀರುತ್ತಿದ್ದ ಉಳಿದವರು ಗಡದ್ದಾಗಿ ನಿದ್ದೆ ಹೊಡೆದರು.

ಮಳೂರಿನಲ್ಲಿ ಕಾರು ನಿಂತಾಗ ನಾನು ಏಕೆಂದು ಎಚ್ಚತ್ತು ನೋಡಿದೆ. ಜಯರಾಮನ ಕಾರು ನೋಡಿದ ಕೂಡಲೇ ಪ್ರಾಯದ ಹುಡುಗನೊಬ್ಬ ಓಡಿ ಬಂದ. ಅವನೊಡನೆ ಜಯರಾಮ ಏನು ಹೇಳಿದನೆಂದು ನನಗೆ ತಿಳಿಯಲಿಲ್ಲ. ಅವನು ಕೆಳಗಿಳಿದು ಒಂದು ಅಂಗಡಿಯ ಮುಂದೆ ನಿಂತಿದ್ದ

ಹತ್ತು ನಿಮಿಷದಲ್ಲಿ ಕೆತ್ತಿ ಸಿದ್ದವಾದ ಏಳೆಂಟು ಎಳನೀರು ಬುರುಡೆಗಳು ನಮ್ಮ ಮುಂದೆ ಬಂದವು. ನಿದ್ರಿಸುತ್ತಿದ್ದವರನ್ನು ಎಬ್ಬಿಸಿ ಎರಡು–ಮೂರು ಎಳನೀರು ಕುಡಿಸಿದ ಜಯರಾಮ. ಮುಂದೆ ಅರ್ಧ ಗಂಟೆಯಲ್ಲೇ ನಾವು ತೀರ್ಥಹಳ್ಳಿಯಿಂದ ಎರಡು ಮೈಲು ದೂರದಲ್ಲಿರುವ ಜಯರಾಮನಹಳ್ಳಿಗೆ ತಲುಪಿದೆವು.

ಹೆಸರಿಗೆ ಅದು ಹಳ್ಳಿ ಅಷ್ಟೆ. ನಗರಗಳ ಎಲ್ಲಾ ಸೌಕರ್ಯಗಳೂ ಅಲ್ಲಿವೆ. ವಿದ್ಯುಚ್ಛಕ್ತಿ ದೀಪ, ರೇಡಿಯೋ, ನಲ್ಲಿ ಎಲ್ಲವೂ ಇದೆ. ಶೃಂಗೇರಿಗೆ ಹೋಗುವ ರಸ್ತೆಯಿಂದ ಎಡಕ್ಕೆ ತಿರುಗಿ ಅರ್ಧ ಪರ್ಲಾಂಗ್ ಹೋದರೆ ಜಯರಾಮನ ಮನೆ, ಅದೇ ರಸ್ತೆಯಿಂದ ಎಡಕ್ಕೆ ತಿರುಗಿದ ಕೂಡಲೇ "ಜಯಮಹಲ್" ಎಂಬ ಬೋರ್ಡು ನಮಗೆ ಎದುರಾಯಿತು. ಇಲ್ಲಿಂದಲೇ ಇವರ ರಾಜ್ಯ ಪ್ರಾರಂಭವಾಗಿರಬಹುದು ಎಂದುಕೊಂಡೆ.

ಜಯರಾಮ ಹುಟ್ಟಿದಾಗ ಕಟ್ಟಿದ ಮನೆಯಾದ್ದರಿಂದ ಅದು ಜಯಮಹಲ್ ಆಗಿದೆ. "ಜಯಮಹಲ್" ಎಸ್ಟೇಟು ನಿಜವಾಗಿ ಬೇರೊಂದು ನಿಸರ್ಗ ಲೋಕ. ಹಳತು–ಹೊಸತುಗಳ ಸಮರಸವಾದ ಮಧುರ ತಾಣ. ಸುತ್ತಲೂ ಗುಡ್ಡ, ಬೆಟ್ಟ, ತೋಟ, ಹೊಲ, ಗದ್ದೆ, ನದಿ, ಝರಿಗಳು ಅದರ ನಡುವೆ ಆಧುನಿಕ ಸೌಕರ್ಯಗಳಿಂದ ಸುಸಜ್ಜಿತವಾದ "ಜಯಮಹಲ್" ಜಯರಾಮನ ಮನೆಯಲ್ಲಿ ನಮಗೆ ರಾಜಾತಿಥ್ಯವೇ ನಡೆಯಿತು. ಅದು ಆ ಕುಟುಂಬಕ್ಕೆ ಅನುದಿನದ ಕೆಲಸ ಹಾಲು, ಹೈನುಗಳ ಸಂಮೃದ್ಧಿ ಇರುವ ಆ ಮನೆಯಲ್ಲಿ ಅಡಿಗೆಯವರು, ಕೆಲಸದವರು, ಆಳುಕಾಳುಗಳು ತಮ್ಮ ತಮ್ಮ ಕೆಲಸಗಳನ್ನು ಯಂತ್ರಗಳಂತೆ ಮಾಡುತ್ತಾರೆ. ಹಿರಿಯ ವ್ಯಕ್ತಿತ್ವದ ಮನೆಯ ಒಡೆಯ–ಒಡತಿಯರು ತಮ್ಮ ಮಗನ ಗೆಳೆಯರನ್ನು ಯಾವ ರೀತಿ ಉಪಚರಿಸಬೇಕೋ ಅಂತೇ ಉಪಚರಿಸಿದರು. ಆದರೆ ಎಲ್ಲವೂ ನಿರಾಡಂಬರ, ಅಕಲಂಕ.

ಮಹಡಿಯ ಮೇಲಿನ ತನ್ನ ವಿಸ್ತಾರವಾದ ಕೋಣೆಯೊಳಗೇ ನಮ್ಮನ್ನು ಇಳಿಸಿದ ಜಯರಾಮ. ಅಂದು ಸಂಜೆ ಹೊರಗಿನ ಬಾಲ್ಕನಿಯಲ್ಲಿ ಕುರ್ಚಿ ಹಾಕಿ ಎಲ್ಲರೂ ಹರಟೆ ಹೊಡೆಯುತ್ತ ಕುಳಿತಾಗ ಸುತ್ತಲಿನ ಪ್ರಕೃತಿ ಸುಂದರಿ ನವ ಪಲ್ಲವಿತೆಯಾಗಿ ಮೆರೆಯುತ್ತಿದ್ದಳು. ಆಗ ನಾನು ಹೇಳಿದೆ :

"ಜಯರಾಮ್ ನಿಮ್ಮ ಈ ನಿಸರ್ಗ ಲೋಕಕ್ಕಿಂತ ಆ ಬೆಂಗಳೂರೇ ? ಅದೇನು ಭ್ರಮೆ ಹಿಡಿದು ನೀನು ಅಲ್ಲಿಗೆ ಬಂದಿದ್ದೆ ?"

ಜಯರಾಮ ಒಂದು ವಿಧವಾಗಿ ನಕ್ಕು ಹೇಳಿದ :

"ಸುಮ್ಮನೆ ಹೀಗೇ ಸ್ವಲ್ಪ ಛೇಂಜ್ ಅಷ್ಟೆ."

ಮರುದಿನದಿಂದಲೇ ನಮ್ಮ ಅಲೆದಾಟ. ಆಗುಂಬೆ, ಅಂಬುತೀರ್ಥ, ಶೃಂಗೇರಿ, ಶರಾವತಿ ಉಗಮ, ಜೋಗ್ ಹೀಗೆ ಒಂದು ವಾರ ಕಾಲ ಅವನ ಕಾರಿನಲ್ಲಿ ತಿರುಗಾಡಿದ್ದೇ ತಿರುಗಿದ್ದು. ಎಲ್ಲ ಖರ್ಚು ಅವನದೇ. ನನ್ನ ಗೆಳೆಯರಿಗೆ ಸ್ವಲ್ಪ ಸಂಕೋಚವಾದರೂ ಜಯರಾಮನ ಸರಳತೆ ಅವರ ಬಾಯಿ ಮುಚ್ಚಿಸಿತು. ಇಷ್ಟು ಶ್ರೀಮಂತ

ಪದವೀಧರನಾದರೂ ಜಯರಾಮ ಎಲ್ಲ ಕಡೆಯಲ್ಲೂ ಬೆಳ್ಳಗಿನ ಲುಂಗಿಪಂಚೆ, ಅರೆ ತೋಳಿನ ಶರಟಿನಲ್ಲೇ ತಿರುಗಾಡಿದ. ಎಲ್ಲ ಅವನಿಗೆ ಚಿರಪರಿಚಿತ ಜಾಗ. ಎಲ್ಲರೂ ಗೌರವದಿಂದ ಉಪಚರಿಸುವರೇ. ಆದರೆ ಏಕೋ ಪ್ರತಿಯೊಬ್ಬರ ಮಾತು ನಡವಳಿಕೆಯಲ್ಲಿ ಜಯರಾಮನ ಮೇಲೆ ಏನೋ ಸಹಾನುಭೂತಿ, ಕನಿಕರ ಅವ್ಯಕ್ತವಾಗಿ ಸೂಚಿತವಾಗುವುದನ್ನು ನಾನು ಗಮನಿಸಿದೆ. ನನ್ನ ಜೊತೆಯವರಿಗೆ ಇದರ ಕಡೆ ಗಮನವಿದ್ದಂತೆ ತೋರಲಿಲ್ಲ. ಅಂದು ಜಯರಾಮ ತೀರ್ಥಹಳ್ಳಿಯ ಸಮೀಪದ ಹೊಂಬುಜದ ಗ್ರಾಮಕ್ಕೆ ನಮ್ಮನ್ನು ಕರೆದೊಯ್ದ. ಪದ್ಮಾವತಿ ಅಮ್ಮನವರ ದೇವಾಲಯ ಅಲ್ಲಿ ಪ್ರಸಿದ್ಧವಾದದ್ದು. ವಿದ್ಯಾವಂತ ನಾಗರೀಕರಾದ ನಾವು ದೇವರಲ್ಲಿ ಭಕ್ತಿ ತೋರಿದರೆ ಅನಾಗರೀಕರೆನ್ನಿಸಿಕೊಳ್ಳುತ್ತೇವೆ ಎಂಬ ಭ್ರಮೆಯೊಂದು ನಮಗಿದೆಯಲ್ಲ! ಅಲ್ಲದೆ ಭಕ್ತಿ ಎಂದರೆ ಏನೆಂಬುದೇ ನಮಗೆ ಗೊತ್ತಿಲ್ಲ. ಅದರಲ್ಲೂ ಈಗ ಕೊಳೆತ ಹೆಣಗಳನ್ನು ಕೊಯ್ದ ಮೇಲೆ ಮನಸ್ಸಿನಲ್ಲಿ ಅಂತಹ ಪುನೀತ ಭಾವನೆಗಳಿಗೆ ಸ್ಥಾನವೇ ಇರಲಿಲ್ಲ.

ಸಾಂಪ್ರದಾಯಿಕವಾಗಿ ಜಯರಾಮ ಅಮ್ಮನವರಿಗೆ ಪೂಜೆ ಮಾಡಿಸಿದ. ನಾವೂ ನಾಟಕೀಯವಾಗಿ ನಮಸ್ಕಾರ ಮಾಡಿದೆವು ಆಗ ಸಂಜೆಯಾಗಿತ್ತು. ಆ ವೇಳೆಗಾಗಲೇ ನಾವು ಅಮ್ಮನವರ ವಿಸ್ತಾರವಾದ ದೇವಾಲಯ, ಯಾರೋ ಜೈನ ಭಕ್ತರು ಕಟ್ಟಿಸಿದ ಸುಂದರವಾದ ಚಂದ್ರಶಾಲೆ, ಅತಿಥಿ ಗೃಹಗಳು, ಸ್ನಾನದ ಮನೆಗಳು, ಸಭಾವೇದಿಕೆ, ಸುತ್ತಮುತ್ತಲಿನ ಜಿನ ದೇವಾಲಯಗಳು, ಅಲ್ಲಿಯ ಅದ್ಭುತ ಶಿಲ್ಪ, ಹಿಂದೆ ಎತ್ತರದ ವ್ಯಾಸ ಪರ್ವತದ ಮೇಲೆ ಕಲ್ಲಿನಲ್ಲಿಯೇ ನಿರ್ಮಿತವಾದ ಸಂಸ್ಕೃತ ಪಾಠಶಾಲೆ, ಕೆಳಗಿನ ಮುತ್ತಿನ ಕೆರೆ ಎಲ್ಲ ನೋಡಿ ಬಂದಾಗಿತ್ತು. ಆ ರಾತ್ರಿ ಅಲ್ಲಿಯ ಗೆಳೆಯರಲ್ಲಿ ಉಂಡು ಅತಿಥಿ ಗೃಹದಲ್ಲಿ ಮಲಗಿದೆವು. ನಮಗೆಲ್ಲರಿಗೂ ಮನತುಂಬಿ ಬಂದಿತ್ತು. ಆದರೆ ಜಯರಾಮನಲ್ಲಿ ಮಾತ್ರ ಅಂಥ ತುಂಬು ಜೀವನವಿದ್ದರೂ ಅವನು ಬೆಂಗಳೂರಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಹುಡುಗಾಟ, ಉತ್ಸಾಹಭಾವವೇ ಇರಲಿಲ್ಲ.

ಅಂದು ರಾತ್ರಿ ಎಲ್ಲರೂ ಗಡದ್ದು ನಿದ್ದೆ ಹೊಡೆದರೂ ನನಗೆ ಮಾತ್ರ ಜಯರಾಮನ ನಿರ್ಲಿಪ್ತತೆ ಒಂದು ಸಮಸ್ಯೆಯಾಗಿ ಕಂಡಿತು. ಅದನ್ನೇ ಯೋಚಿಸಿದೆ. ಜಯರಾಮ ಎರಡು ಮುಂಗೈಯನ್ನು ತಲೆಯಡಿಗಿಟ್ಟು ಕಾಲುಚಾಚಿ ಅಂಗಾತವಾಗಿ ಮಲಗಿ ಕಣ್ಣು ಮುಚ್ಚಿದ. ಅವನಿಗೆ ನಿದ್ರೆ ಬಂದಿಲ್ಲವೆಂದು ನನಗೆ ತಿಳಿಯಿತು.

ತಟ್ಟನೆ ನೆನಪೊಂದು ಸುಳಿಯಿತು. ಜಯರಾಮನಿಗೊಬ್ಬಳು ತಂಗಿ ಇದ್ದಾಳೆ. ಅವಳು ಆಗ ಶಿವಮೊಗ್ಗೆಯ ಕಾಲೇಜಿನಲ್ಲಿ ಓದುತ್ತಿದ್ದಳು. ಮನೆಯಲ್ಲಿ ಅವಳ ಸುಳಿವೇ ಕಾಣಲಿಲ್ಲವಲ್ಲ. ಒಂದು ಪಕ್ಷ ಈಗಲೂ ಓದುತ್ತಿದ್ದರೂ ಈಗ ಎಲ್ಲಾ ಕಾಲೇಜುಗಳಿಗೂ ರಜೆ, ಊರಿಗೆ ಬಂದಿರಬೇಕಲ್ಲ !

ಈ ಯೋಚನೆ ನನ್ನ ನಿದ್ರೆಯನ್ನು ಬಹುದೂರ ಓಡಿಸಿತ್ತು. ಯಾವಾಗ ನಿದ್ರೆ ಬಂತೋ, ಬೆಳಿಗ್ಗೆ ಜಯರಾಮ ಮೈ ಅಲುಗಿಸಿದಾಗಲೇ ಎಚ್ಚರ. ಬುಡಕ್ಕನೆ ಎದ್ದು ಕುಳಿತು ಸುತ್ತಾನೋಡಿದೆ. ಅವರೆಲ್ಲ ಆಗಲೇ ಮುಖ ತೊಳೆಯಲು ಹೋಗಿದ್ದರು ನಾನು ಹಿಂದೆ – ಮುಂದೆ ಯೋಚಿಸದೆ ಕೇಳಿದೆ.

"ಜಯರಾಮ ನಿನಗೊಬ್ಬರು ತಂಗಿ ಇದ್ದಾರಲ್ಲವೇ? ಎಲ್ಲಿ ಮನೆಯಲ್ಲಿ ಕಾಣಲೇ ಇಲ್ಲವಲ್ಲ ?"

ಜಯರಾಮ ಸ್ವಲ್ಪ ಬೆಚ್ಚಿದವನಂತೆ ಕಂಡಿತು. ಮರುಗಳಿಗೆ ನಸುನಗುತ್ತ ಹೇಳಿದ. "ಮನೆಯಲ್ಲೇ ಇದ್ದಾಳಲ್ಲ. ಅವಳಿಗೆ ಸ್ವಲ್ಪ ನಾಚಿಕೆ ಸ್ವಭಾವ. ಅಲ್ಲದೆ ಸಾಮಾನ್ಯವಾಗಿ ಗದ್ದಲದಲ್ಲಿ ಬೆರೆಯುವವಳೂ ಅಲ್ಲ. ಏಕಾಂತ ಜೀವಿ. ಒಂದಿಷ್ಟು ಪಾರಿವಾಳ, ನಾಯಿಮರಿಗಳು, ಎಳೆಗರುಗಳು ಇದ್ದರೆ ಆಯಿತು ಅವಳ ಪ್ರಪಂಚ. ಮನೆಗೆ ಹೋದ ಮೇಲೆ ಪರಿಚಯ ಮಾಡಿಸ್ತೇನೆ."

"ಅವರ ಡಿಗ್ರಿ ಕ್ಲಾಸ್ ಮುಗಿಯಿತೆ ?"

ಜಯರಾಮ ನಕ್ಕು– "ವಿದ್ಯೆಗೆ ಕೊನೆ ಇದೆಯೆ ? ಅವಳು ಆರ್ಟ್ಸ್ ತೆಗೊಂಡಿದ್ದಳು. ಬಿ. ಎ. ಆಯ್ತು. ಈಗ ಮನೇಲಿದ್ದಾಳೆ."

'ಮುಂದೆ ಮದುವೆ' – ಎನ್ನುವ ಮಾತು ನನ್ನ ನಾಲಿಗೆಯ ತುದಿಗೆ ಬಂದಿತ್ತು. ಅಷ್ಟರಲ್ಲಿ ಅವನೇ ;

"ಏಳಿ ಮುಖ ತೊಳೆದು ಕಾಫಿ ಕುಡಿದು ಹೊರಡುವ ತಿಂಡಿ ತೀರ್ಥಹಳ್ಳಿಯಲ್ಲಾಗುತ್ತದೆ. ಇನ್ನು ಪರಿಚ

ಯದವರು ಕಂಡರೆ ಇಲ್ಲೇ ಕೊಳೆ ಹಾಕುತ್ತಾರೆ ಎಂದ. ನಾನು ಎದ್ದು ಮುಖಮಾರ್ಜನ ಮಾಡಿ ಬರುವುದರೊಳಗೆ ಅಲ್ಲಿಯ ಏಕಮಾತ್ರ ಹೋಟೆಲಿನಿಂದ ಕಾಫಿಯೆಂಬ ದ್ರವ ಬಂದಿತ್ತು. ಜಯರಾಮ ಕಾಫಿ ಕೈಗೆ ಕೊಡುತ್ತಾ ಹೇಳಿದ:

"ನೀವೆಲ್ಲ ನನ್ನನ್ನು ಮರೆತರೂ' ಈ ಕಾಫಿಯನ್ನು ಎಂದಿಗೂ ಮರೆಯಲಾರಿರಿ." ಹಾಗೆಯೇ ಇತ್ತು ಕಾಫಿ! ಅಂದು ಮಧ್ಯಾಹ್ನಕ್ಕೆ ಅವನ ಮನೆಗೆ ಬಂದೆವು. ನಾಳೆ ನಾವು ಹೊರಡಬೇಕು ಎಂದು ಖಚಿತವಾಗಿ ಹೇಳಿದ್ದೆವು. ಅವರ ಆತಿಥ್ಯದ ಭಾರ ಬಹಳವಾಗಿತ್ತು. ನಾನು ನಿಜವಾಗಿ ಮನತುಂಬಿ ಹೇಳಿದೆ :

"ಜಯರಾಮ ನೀನು ಪುಣ್ಯಮಾಡಿ ಈ ವಾತಾವರಣದಲ್ಲಿ ಹುಟ್ಟಿದ್ದಿ. ನಮ್ಮ ಈ ಬಾರಿಯ ಪ್ರವಾಸ ಸ್ಮರಣೀಯ"

ನನ್ನ ಹೊಗಳಿಕೆ ಅವನ ಮೆದುಳಿಗೆ ಹೋದಂತೆ ಕಾಣಲಿಲ್ಲ. ಅವನು ಮುಗಿಲನ್ನು ನೋಡುತ್ತ ಸಿಧಾನವಾಗಿ ಹೇಳಿದ :

"ಇಲ್ಲಿಯೇ ಹುಟ್ಟಿ ಬೆಳೆದು, ಇದು ಈ ವಾತಾವರಣ ನನಗೆ ಬಹಳ ಬೋರೆನಿಸಿದೆ. ಎಲ್ಲಿಯಾದರೂ ಬಹಳ ದೂರ ಅಂದರೆ ಫಾರಿನ್‌ಗೆ ಒಂದೆರೆಡು ವರ್ಷ ಹೋಗಿ ಬರೋಣ ಅನಿಸಿದೆ"

ಅವನ ಮಾತಿನಲ್ಲಿ ಅವ್ಯಕ್ತ ವೇದನೆ ಇತ್ತು. ನಾನು ಬೆರಗಾಗಿ ನೋಡಿದೆ. ಸುಮಾರು ಇಪ್ಪತ್ತೈದು ವರ್ಷದ ಶ್ರೀಮಂತ, ಸುಂದರ, ವಿದ್ಯಾವಂತ ತರುಣನ ಬಾಯಲ್ಲಿ ಇಂಥ ವೈರಾಗ್ಯದ ಮಾತು! ಎಲ್ಲವೂ ಅಸಮಂಜಸವೆನಿಸಿತು ನನಗೆ. ಯಾರೋ ಕರೆದರೆಂಬ ನೆನದಿಂದ ಜಯರಾಮ ಕೆಳಗೆಹೋದ. ನಾನು ಪಕ್ಕದಲ್ಲಿದ್ದ ಮೆಟ್ಟಿಲನ್ನು ಹತ್ತಿ ಕೊನೆಯ ಮೇಲ್ಮಹಡಿಗೆ ಹೋದ. ಆಗ ಅವರ ಸಮಗ್ರ ಎಸ್ಟೇಟು ಕಾಣಿಸುತ್ತಿತು. ಒಂದು ದೃಶ್ಯ ನನ್ನ ಕಣ್ಣು ಸೆಳೆಯಿತು. ಮನೆಯ ಹಿಂಭಾಗದ ದೂರದ ಹಲಸಿನ ಮರದ ಕೆಳಗೆ ಒಂದು ಕಲ್ಲಿನ ಮೇಲೆ ಒಬ್ಬಳು ಸುಂದರ ಕನ್ಯೆ ಕುಳಿತ್ತಿದ್ದಾಳೆ. ಅವಳ ಸುತ್ತ ಪಾರಿವಾಳಗಳು, ನಾಯಿಮರಿಗಳು, ಎಳೆಗರುಗಳು, ಅವುಗಳನ್ನು ಮುದ್ದಾಡುತ್ತ ಅವಳು ಕುಳಿತಿದ್ದಾಳೆ. ಅವಳೇ ಜಯರಾಮನ ತಂಗಿ ಎಂಬುದು ನನಗೆ ಖಚಿತವಾಯಿತು. ಆದರೆ ಮತ್ತೆ ಆಕೆಯನ್ನು ಪರಿಚಯ ಮಾಡಿಸು ಎಂದು ಕೇಳುವುದು. ನನ್ನ ಸಭ್ಯತೆಗೆ ಸರಿಯಲ್ಲ ಎನಿಸಿ ಆ ಪ್ರಸ್ತಾಪವೇ ಎತ್ತಲಿಲ್ಲ. ಹೊರಡುವ ದಿನ ಮತ್ತೆ ನಮಗೆ ಔತಣ. ಬರುವಾಗ ಸಂಪ್ರದಾಯಕ್ಕಾಗಿ ಅವನ ತಂದೆ ತಾಯಿಗಳ ಪಾದಕ್ಕೆ ಮಣಿದು ಬಂದೆವು. ಮತ್ತೆ ಶಿವಮೊಗ್ಗೆಯವರೆಗೂ ಅವನ ಕಾರಿನಲ್ಲೇ ತಂದು ಬಿಟ್ಟ. ನಾವು ಬಸ್ಸು ಹತ್ತುವವರೆಗೂ ಇದ್ದ. "ಖಂಡಿತಾ ಒಂದು ಬಾರಿ ಬೆಂಗಳೂರಿಗೆ ಬಾ" ಎಂದು ಸ್ನೇಹ ಯುಕ್ತವಾಗಿ ಹೇಳಿದೆ.

"ಖಂಡಿತ ಬರುವೆ" ಎಂದ ಚುಟುಕಾಗಿ ನಾವು ಮತ್ತೆ ಬೆಂಗಳೂರಿಗೆ ಬಂದ ನಂತರ ನಮ್ಮ ಶಿವಮೊಗ್ಗೆಯ ಗೆಳೆಯ ಬಂದು ಸೇರಿದ. ನಾನು ಅವನ ಸ್ನೇಹ, ಆತಿಥ್ಯಗಳ ಬಗೆಗೆ ಮೂರುದ್ದ ಪತ್ರ ಬರೆದೆ, ಆದರೂ ಮನಸ್ಸು ಅಪೂರ್ಣವಾಗಿತ್ತು.

ಗಟ್ಟಿ ಮನಸ್ಸು ಮಾಡಿ ಶಿವಮೊಗ್ಗೆಯ ಗೆಳೆಯನನ್ನು ಕೇಳಿದೆ :

"ನಿನಗೆ ಜಯರಾಮನ ಮನೆಯವರ ಪರಿಚಯವಿಲ್ಲವೇ ?"

"ನನಗೆ ಅಷ್ಟಾಗಿ ಪರಿಚಯವಿಲ್ಲ. ನಮ್ಮ ತಂದೆ-ತಾಯಿಗಳಿಗೆ ಅವರ ಮನೆಯ ವಿಷಯ ಪೂರಾ ಗೊತ್ತು. ಆದರೆ ಯಾಕೆ ಹೀಗೆ ಕೇಳಿವೆ ?"

"ಕೇಳಲೋ ಬೇಡವೋ ಎಂದು ಕೆಲವು ಗಳಿಗೆ ತೂಗಿ ನಂತರ ಕೇಳಿದೆ :

"ಅಂಥಾದೇನಿಲ್ಲ, ಅವರ ಮನೆಯಲ್ಲಿ ನಾಲ್ಕು ದಿನ ಇದ್ದೆವು. ಬಾಕಿ ದಿನವೆಲ್ಲಾ ಅವನ ಕಾರಿನಲ್ಲೇ ಪ್ರವಾಸ. ಆದರೆ ಜಯರಾಮ ಅವನ ತಂಗಿಯ ಪರಿಚಯ ಮಾಡಿಸಲಿಲ್ಲ. ಅಲ್ಲದೆ ಅವನೂ ಒಂದು ಬಗೆಯ ಚಿಂತೆಯಲ್ಲಿರುವಂತೆ ಕಂಡಿತು. ಜಿಗಿದಾಡಿಕೊಂಡಿರುವ ಈ ವಯಸ್ಸಿನಲ್ಲಿ ಅವನಿಗೆಂಥ ಚಿಂತೆ ? ಕಡೆಗೆ ಒಂದು ದಿನ ಮೇಲು ಮಹಡಿಯಿಂದ ದೂರದ ಮರದ ಕೆಳಗೆ ಕುಳಿತ ಅವನ ತಂಗಿಯನ್ನು ಕಂಡೆ. ತಂದೆಯ ಹೋಲಿಕೆ ಇದೆ. ಹುಡುಗಿ ಲಕ್ಷಣವಾಗಿದ್ದಾಳೆ, ಕಾಲೇಜು ಕಲಿತ ಹುಡುಗಿ. ಒಂದು ಬಾರಿಯೂ ನಮ್ಮ ಎದುರಿಗೆ ಬರಲಿಲ್ಲ. ಇವೆಲ್ಲಾ ಏನೋ ವಿಚಿತ್ರ ಅನಿಸಿತು ನನಗೆ. ಗೆಳೆಯ ನನ್ನ ಮುಖ ನೋಡದ, ಮೊದಲೇ ಹೇಳಿದ :

"ನಾನೂ ಡಾಕ್ಟರು, ನೀನೂ ಡಾಕ್ಟರು. ಎಂಥದೇ ಇದ್ದರೂ ಅದು ನಮಗೆ ಸಾಮಾನ್ಯ. ನಮ್ಮಿಂದ ರಹಸ್ಯ ಹೊರ ಬೀಳುವುದಿಲ್ಲ ಹೇಳು."

ಅವನು ಕೂಡಲೇ ನಕ್ಕ :

"ಜಯರಾಮ್ ಜೇರಿಯವರಿಗೆ ಅದು ಬಹಳ ಘೋರತರ ಪಾಪವಾಗಿರಬಹುದು, ನನಗೇನೂ ಹಾಗೆನಿಸ ಲಿಲ್ಲ. ಅದೂ ನಮ್ಮ ಮನೆಯಲ್ಲಿ ಆಡಿಕೊಂಡ ಹರಕು–ಮುರುಕು ಮಾತು. ಜಯರಾಮನ ತಂಗಿ ಸುಚರಿತ ಶಿವಮೊಗ್ಗೆಯ ಹಾಸ್ಟೆಲಿನಲ್ಲಿದ್ದಾಗ ಒಂದು ದಿನ ಅವಳ ಫ್ರೆಂಡ್ ಮನೆಯಿಂದ ರಾತ್ರಿ ಎಂಟು ಗಂಟೆಯಲ್ಲಿ ಒಂಟಿಯಾಗಿ ಹಿಂದಿರುಗುತ್ತಿದ್ದಾಗ ಒಬ್ಬ ಮುಸಲ್ಮಾನ ಹುಚ್ಚ ಅವಳನ್ನು ನಡುಬೀದಿಯಲ್ಲಿ ಕೆಡವಿಕೊಂಡು ಕೆಡಿಸಿಬಿಟ್ಟನಂತೆ. ನಂತರ ಯಾರೋ ಬಂದು ಬಿಡಿಸಿದರು. ಹುಡುಗಿಯನ್ನು ಊರಿಗೆ ಕರೆದುಕೊಂಡು ಹೋದರಂತೆ, ಅವಳೀಗೀಗ ಸ್ವಲ್ಪ ಬುದ್ಧಿ ಭ್ರಮೆಯಂತೆ, ಮನುಷ್ಯರನ್ನು ಕಣ್ಣೆತ್ತಿ ನೋಡುವುದಿಲ್ಲವಂತೆ, ತಾಯಿ ಹತ್ತಿರ ಬಂದರೂ :

"ನಾನು ಕೆಟ್ಟಿದ್ದೇನೆ, ನನ್ನ ಮುಟ್ಟಬೇಡ" ಅಂತಾಳಂತೆ. ಅದೇ ಹಕ್ಕಿ–ಪಕ್ಷಿ ನಾಯಿ ಕರುಗಳ ಹತ್ತಿರ ಇರುತ್ತಾಳಂತೆ, ಅದೂ ಯಾರೋ ನಮ್ಮ ತಾಯಿಗೆ ಹೇಳಿದ ಮಾತು."

ಮುಂದೆ ಗೆಳೆಯನ ಮಾತು ನನ್ನ ಕಿವಿಗೆ ಬೀಳಲಿಲ್ಲ. ಲಕ್ಷಾಧೀಶ ಜಯರಾಮನ ಸುಂದರ ಬಾಳನ್ನು ಎಂಥ ಕೀಟ ಕೊರೆಯುತ್ತಿದೆ ? ತಂಗಿಗೆ ಮದುವೆಯಾಗಲಾರದು. ಈ ವಿಷಯ ತಿಳಿದವರು ಅವನಿಗೂ ಹೆಣ್ಣು ಕೊಡಲಾರರು. ಹುಡುಗಿಗೆ ಬುದ್ಧಿ ಭ್ರಮಣೆ ಬೇರೆ. ಆ ಹೆತ್ತವರ ಅಂತರಂಗ ಒಂದು ಅಗ್ನಿಕುಂಡ ! ನನ್ನ ಸುರಮ್ಯ ಪ್ರವಾಸದ ಸವಿಯೆಲ್ಲಾ ಕ್ಷಣದಲ್ಲಿ ಕಹಿಯಾಗಿ ಹೋಯಿತು.

ರಾತ್ರಿ ಮಲಗಿದಾಗ "ಜಯಮಹಲ್" ಎಸ್ಟೇಟಿನ ಇತಿಹಾಸವೇ ನನ್ನ ಮುಂದೆ ಸುತ್ತುತಿತ್ತು. ಹಾಸ್ಯ, ವಿನೋದ, ಮುದವಿಲ್ಲದ ಅಖಂಡ ಸಂಸಾರ, ಮುದ್ದು ಮಕ್ಕಳ ಭವಿಷ್ಯ ! ಲಕ್ಷಾಂತರದ ವಹಿವಾಟು ! ಬಿಡಲಾಗದ, ಬೇಕಿಲ್ಲದ ವ್ಯವಹಾರ !

ಜಯರಾಮನ ತಂದೆಯ ಧೀರ ವ್ಯಕ್ತಿತ್ವ, ಸಹನೆ ನನ್ನ ಮುಂದೆ ನಿಂತಿತು. ಸುಸಂಸ್ಕೃತತೆ ಆ ತಾಯಿಯ ಒಡಲ ವೇದನೆ ಎಷ್ಟಿರಬಹುದು ?

ಒಬ್ಬಳು ನಿರ್ದೋಷಿ ಕನ್ಯೆ; ಒಬ್ಬ ಹುಚ್ಚ! ಒಂದು ಗಳಿಗೆಯ ದುರ್ಘಟನೆ ಒಂದು ಮನೆತನವನ್ನು ಅಂಧಕಾರದಲ್ಲಿ ಮುಳುಗಿಸಿದೆ. ಇದಕ್ಕೆ ಪರಿಹಾರವಿಲ್ಲವೆ ? ನುಂಗಲಾರದ, ಉಗುಳಲಾರದ ಬಿಸಿತುಪ್ಪ, ಇದನ್ನೆಲ್ಲಾ ಮರೆಯೋಸುಗುವೇ ಬಹುಶಃ ಜಯರಾಮ ವಿದೇಶಕ್ಕೆ ಹೊರಡಲಿದ್ದಾನೆ. ಹೊರಡುವುದರೊಳಗೆ ಹೇಗೂ ಒಂದು ಬಾರಿ ನನ್ನನ್ನು ಕಾಣಲು ಬಂದೇ ಬರುತ್ತಾನೆ. ಬರದಿದ್ದರೆ ನಾನೇ ಬರೆಯುತ್ತೇನೆ. ಕಡೆಗೂ ಬರದಿದ್ದರೆ ಇನ್ನೊಂದು ಬಾರಿ ಅವನಿಗೆ ತಿಳಿಯದಂತೆ ನಾನೇ ಅವರಲ್ಲಿಗೆ ಹೋಗಿ ಬರುತ್ತೇನೆ. ಹೇಗೂ ಈ ವರ್ಷ ಸೈಕಾಲಜಿ ಮುಗಿದಿದೆ. ಈ ಬಾರಿ ಹೋದರೆ ಹುಡುಗಿಯನ್ನು ಮಾತಾಡಿಸಿ ಬರಬೇಕು. ಸಾಧ್ಯವಾದರೆ ಅವಳ ಭ್ರಮೆಯನ್ನು ಹೋಗಲಾಡಿಸಬೇಕು .... ನಂತರ ? ಅವಳು ಗುಣ ಹೊಂದಿದರೆ ಅವರ ಮನೆಯವರೆಲ್ಲಾ ಒಪ್ಪಿದರೆ ? ನನ್ನ ಈ ಕಾರ್ಯದಿಂದ ನನ್ನ ಗೆಳೆಯನ ಬಾಳು ಸುಂದರವಾಗುವುದಾದರೆ ಖಂಡಿತಾ ನಾನು ಅವಳನ್ನು....ಜೊಂಪು ಮುಸುಕಿತ್ತು.

---

ಲಘು ಬರಹ

# ಹೌಸ್ ಕ್ಲೀನಿಂಗ್!!

—ಸುನೀತಿ ಕೃಷ್ಣಸ್ವಾಮಿ

ಈಗ ನಾನು ಬರೆದಿರೋ House claning ಹೊಸ ಮನೆ Clean ಮಾಡೋ ವಿಚಾರ ಅಲ್ಲ. ಐವತ್ತು ಅರವತ್ತು ವರ್ಷದ ಹಿಂದೆ ಸಂಸಾರ ಹೂಡಿದ್ದ ಮನೆ ಸಾಮಾನಿನ Cleaning ಎಷ್ಟು ಕಷ್ಟ ಅಂತ ಗೊತ್ತಾಗುತ್ತೆ. ಅದಕ್ಕೂ ಹೆಚ್ಚಿನ ಕಷ್ಟ ಹಳೇಕಾಲದವರನ್ನ ಈಗಿನ ಕಾಲದವರು ಕ್ಲೀನಿಂಗ್‌ಗೆ ಒಪ್ಪಿಸೋದು ಎಷ್ಟು ಕಷ್ಟ ಅಂತ. ಏಕೆಂದರೆ ಇಬ್ಬರಿಗೂ ಒಂದು generation gap ಇರುತ್ತೆ. ಅವರಿಬ್ಬರ ಮನಸ್ಸು ಏಕಪ್ರಕಾರವಾಗಿರೊಲ್ಲ. ಅಭಿರುಚಿ ಒಂದೇ ಆಗಿರೊಲ್ಲ. ಹಳಬರಾದ ತಂದೆ ತಾಯಿಗಳಿಗೆ ಹಳೇವಸ್ತುಗಳ ಮೇಲೆ ಅದೇನೋ ಅಭಿಮಾನ. ಕೆಲವು ಯಾವುದೋ ಮಧುರ ನೆನಪು ತರುವಂತಹುದು. ಕೆಲವು ತಾತ ಮುತ್ತಾತ ಕೋಲ್ ತಾತ ಉಪಯೋಗಿಸಿದ ಕೃಷ್ಣಾಜಿನವೊ ಸಂಧ್ಯಾವಂದನೆಯ ತಟ್ಟೆಯೊ ಮಣೆಯೋ ಮಂಚವೋ ಆಗಿರಬಹುದು. ಆಕಾರ ಕಳೆದುಕೊಂಡು ಚಿಲುಕ ಮುರಿದು ನೆಗ್ಗಿ ತಗ್ಗಾಗಿ ಬಣ್ಣ ಹೋದ ಮುತ್ತಾತನ ಪಾರಾಯಣ ಪುಸ್ತಕ ಇಡುತ್ತಿದ್ದ ತಗಡಿನ ಪೆಟ್ಟಿಗೆಯೇ ಆಗಿರಬಹುದು. ಅತ್ತೆಯೋ ಅಥವಾ ಅತ್ತೆಯ ಅತ್ತೆಯೋ ಪ್ರಯಾಣಕ್ಕೆ ಉಪಯೋಗಿಸುತ್ತಿದ್ದ ರೈಲು ತಂಬಿಗೆ ಆಗಿರಬಹುದು. ಇನ್ನು ಪೂರ್ವಿಕರ ನೆನಪಾಗಿ ಉಳಿದಿರುವ ಕೆಲವು ವಸ್ತುಗಳನ್ನಂತೂ ನಮ್ಮ ತಾಯಿ ಏನು ಮಾಡಿದರೂ ಬಿಸಾಡರು, ಮಾರಲು ಬಿಡರು ಹೀಗಾಗಿ ನಮ್ಮ ಮನೆಯಲ್ಲಿ ಬೇಡದ ವಸ್ತುಗಳೇ ಜಾಸ್ತಿ. ಹಾಂ! ಮರೆತೆ; ನಮ್ಮ ತಾಯಿಯ ಹಳೇ ಹಾರ್ಮೋನಿಯಂ ಒಂದಿದೆ. ಅದು ಸ್ವರ ಕಳೆದುಕೊಂಡು ಹಲವಾರು ವರ್ಷಗಳು ಕಳೆದಿವೆ. ಆದರೆ ಅದನ್ನು ಮಾರಿಲ್ಲ. ಯಾರಾದರೂ ಭಿಕ್ಷುಕನಿಗೊ ದಾಸರಿಗೋ ದಾನ ಮಾಡಿ ಪುಣ್ಯಕಟ್ಟಿಕೋ ಅಂತ ನಮ್ಮ ತಂದೆ ಹೇಳ್ತಾ ಇದ್ರು. ಒಂದ್ಸಲ ಯಾರೋ ಒಬ್ಬ ಗಿರಾಕಿ ಹದಿನೈದು ರೂಪಾಯಿ ಕೊಡಲು ಮುಂದೆ ಬಂದಿದ್ದ. ಆದರೆ ನಮ್ಮ ತಾಯಿ ಏನೋ ಅಪಚಾರವಾದಂತೆ "ಛೇ ಛೇ ಎಲ್ಲಾದರೂ ಉಂಟೇ. ನಮ್ಮ ತಂದೆ ನನಗೆ ನೂರು ರೂಪಾಯಿ ಕೊಟ್ಟು ಆಗಿನ ಕಾಲದ double reeds ದು ತೆಕ್ಕೊಟ್ಟಿದ್ದರು. ನಾನು ಹಾರ್ಮೋನಿಯಂ ಬಾರಿಸಿ ಹಾಡುತ್ತಿದ್ದರೆ ರೋಡಿನ ಜನರೆಲ್ಲಾ ನಿಂತು ಕೇಳ್ತಾ ಇದ್ದರು. ನನ್ನ ತಂದೆ ನೆನಪಿಗಾಗಿ ಅದು ಇರಲಿ. ಎಲ್ಲೋ ಉಗ್ರಾಣದ ಅಟ್ಟದ ಮೇಲಿರಲಿ" ಹೀಗಾಗಿ ನನ್ನ ತಮ್ಮ ಆ ಹಾರ್ಮೋನಿಯಂ ಓಡಿಸಲು ಎಷ್ಟೋ ಪಟ್ಟ ಶ್ರಮ ಎಷ್ಟೋ ಬಾರಿ ವ್ಯರ್ಥವಾಗಿದೆ.

ಒಂದು ಸಲ ನನ್ನ ತಮ್ಮನಿಗೆ ಮನೆ Clean ಮಾಡಲೇಬೇಕೆಂಬ ಛಲ ಬಂದಿತ್ತು. ಅಂದು ನಾನು ನನ್ನ ತಾಯಿ ಮನೆಗೆ ಹೋಗಿ ಕೂತಿದ್ದೆ. ಅದು Factory ರಜ. Cleaning spree ಬಂದಿದ್ದ ನನ್ನ ತಮ್ಮ ತನ್ನ ರೂಮು ಚೊಕ್ಕಟ ಮಾಡಿ ಹಾಲಿಗೆ ಬಂದ. ಅಲ್ಲಿ ಹಾಲಿನಲ್ಲಿ ಹಾಕಿರುವ ಪಿತೃಗಳ ಭಾವಚಿತ್ರ, ನನ್ನ ತಾಯಿ ಸ್ವಹಸ್ತದಿಂದ ರಿಬ್ಬನ್ work ಮಾಡಿರುವ ನನ್ನ ಅಜ್ಜತಾತನ ಚಿತ್ರ, ಮಸ್ಲಿನ್ ಹೊಲೆದ ಹಂಸ ದಮಯಂತಿ, ಲಕ್ಷ್ಮಿ ವಿಷ್ಣುಗಳ ಫೋಟೋ, ನಮ್ಮ ತಾಯಿಯವರ ತಂದೆ ಚಿತ್ರಕ್ಕೆ ಮುತ್ತು Embroidery ಮಾಡಿದ್ದನ್ನ, [illegible] ವನದ ಕೆಳಗೆ ನನ್ನ ತಾಯಿಯವರ Initials ಇರುವ Photo. ಒಂದು ಕಡೆ ನಾನು degree ತೆಗೆದು ಕೊಂಡಿರುವ Photo ಹೀಗೆ ಅಲಂಕರಿಸಿದೆ, ಹಲವಾರು ಭಾವ

ಮುಂದಿನದು Climax ಉ. ರಾಯರ ಫೋಟೋ ಮೀನಾಕ್ಷಿ Calendar ಹಾಗೂ ಲಕ್ಷ್ಮೀ ವಿಷ್ಣು ಪಟಗಳನ್ನ ದೇವರ ಮನೆಗೆ ಸಾಗ್ಸೋ ನನ್ನ ತಮ್ಮನ ಶತ ಪ್ರಯತ್ನ ಶುರುವಿನು ಬಿತ್ತು. "ರಾಯರ ಅನುಗ್ರಹದಿಂದ್ಲೇ ನಿಮ್ಮಕ್ಕ ನೀನು ಹುಟ್ಟಿದ್ದು, ಲಕ್ಷ್ಮಿ ವಿಷ್ಣು ದಯದಿಂದಲೇ ನಮ್ಮಗೆ ಸರಿಯಾದ ನೆಮ್ಮದಿ ಜೀವನ ನಡೆಸ್ತಾ ಇರೋದು ಮೀನಾಕ್ಷಿ Calender ಬಂದ ದಿನವೇ ನಿನಗೆ Engineering Pass ಆದದ್ದು ಹೀಗೆ ಹಲವು ಕಾರಣ ಒಡ್ಡಿದರು. ಎಲ್ಲಾ ಚಿತ್ರಗಳು ಗೋಡೆ ಮೇಲಿಂದ ಆಶೀರ್ವಾದ ಮಾಡ್ತಾಲೇ ಇವೆ. ಕೊನೆಗೆ Desperate ಆಗಿ ನನ್ನ ತಮ್ಮ, ನನ್ನ Degree Photo ಹಾಗೂ ವುಲ್ಲನ್‌ನಲ್ಲಿ ಹೆಣೆದ ದಸರಾ ಪಟವಾದ್ರೂ ತೆಗೆದು ಹಾಕಲು ಕೈ ಹಾಕಿದ. ನಾನು ನಗುತ್ತಲೇ ಇದ್ದೆ. ಏಕೆಂದರೆ ನನಗೆ ಹೇಗೂ ಗೊತ್ತು ವುಲ್ಲನ್ ಹಸು ಹಾಗೂ, ನಾನು ಡಂಭದಿಂದ ಮುಖಮಾಡಿ ಗೌನ್ ಹಾಕಿಕೊಂಡಿರುವ Photo ಒಂದೇ ಸೂಜಿ ಮೊನೆಯಷ್ಟೂ ಜರುಗೊಲ್ಲಾಂತ.

"ನಮ್ಮ ತಾಯಿ ಮನೆ ಕಡೆ ನಿಮ್ಮಕ್ಕನೇ ಕಣೋ First lady graduate ನಿಮ್ಮ ಭಾವನ ಇಬ್ಬರ ಮಕ್ಕಳ್ಳಿಗೆ ಅಷ್ಟೇ ಅವಳೇ ಮೊದ್ಲು degree ತೆಗೆದುಕೊಂಡಿದ್ದು. ಅಂಥಾದ್ದು ತೆಗೆದು ಹಾಕ್ತೀನಂತ ಯಾರಾದ್ರೂ ಬಾಯಲ್ಲಿ ಹೇಳ್ತೀಯ ನೀನೇನೂ ಅವಳನ್ನ ಹೊತ್ಕೊಂಡು ನಿಂತಿಲ್ಲ. ಅದರ ಪಾಡಿಗೆ ಅದಿರಲಿ ಬೇಕಾದರೆ ದಸರಾ ಪಟ ತೆಗೆದು ಒಳಗೆ ಹಾಕಿ." ನನ್ನ ಮಾತ್ರಿಗೆ ಬೇಸರ ಬಂದಿದ್ದ ತಮ್ಮ. "ಅದೊಂದು ಯಾಕೆ ಒಳಗೆ ಹೋಗಬೇಕು ಹುಲ್ಲು ಮೇಯ್ತಾ ಇಲ್ಲೇ ನಿಂತಿರಲಿ ಪಾಪ. ನಮ್ಮನೆ Museum ಆದ್ಹಾಗಿದೆ. ಪ್ರಾಣಿಗಳು, ಪಕ್ಷಿಗಳು, ಬದುಕಿರೋರು, ದೇವರುಗಳು, ಎಷ್ಟು ಚೆನ್ನಾಗಿ ಸಹಬಾಳ್ವೆ ಮಾಡಿಕೊಂಡಿದ್ದಾರೆ ಅಂತ ಯಾರೂ ಬಂದು ನೋಡ್ಲಿ" ಅಂತ ಸೋಲು ಮುಖ ಹಾಕಿ ಒಳಗೆ ಹೋದ. ಗೋಡೆ ಮೇಲಿರೋ ಪಟಗಳೇ ಕೆಳಗೆ ಇಳಿಯೋ ಲಕ್ಷಣ ತೋರಿಸದಿದ್ದ ಮೇಲೆ ಇನ್ನು ಭೂಮಿ ಮೇಲಿರೋ Furniture, ಗೂಡಿನಲ್ಲಿರುವ ಗೊಂಬೆ ಅವರೇಷ್ಟ ಇನ್ನು ಮಿಕ್ಕ ಕೋಣೆಗಳ ಸಾಮಾನಿನ ವಿಲೇವಾರಿ ವಿಷಯ ನಾನೇ ಬರೆಯಲೇ ಬೇಕಾಗಿಲ್ಲ.

---

# ಮಧ್ಯ ಯುಗದಲ್ಲಿ ಕನ್ನಡ ಮಹಿಳೆ

ಜ್ಯೋತ್ಸ್ನಾ ಕಾಮತ್

ವೇದ ಕಾಲದಲ್ಲಿದ್ದ ಸ್ತ್ರೀ–ಪುರುಷ ಸಮಾನತೆ ಬರುಬರುತ್ತಾ ಕಡಿಮೆಯಾಗಿ ಮಧ್ಯಯುಗದ ಹೊತ್ತಿಗೆ ಸ್ತ್ರೀಯರ ಸಾಮಾಜಿಕ ಸ್ಥಾನ ತೀರ ಸೀಮಿತವಾದದ್ದು ತಿಳಿದ ಮಾತು. ಮಹಿಳೆಯು ಮಾನ ಮನೆಯಲ್ಲೇ ಎಂಬುದು ಈ ಯುಗದ ಮಟ್ಟಿಗೆ ನಿಜವೆಂದು ಒಮ್ಮೆಲೇ ಅನಿಸಿದರೂ, ಈ ಕಾಲದಲ್ಲೂ ಬೇರೆ ಬೇರೆ ಕ್ಷೇತ್ರಗಳಲ್ಲಿ ಮಿಗಿಲೆನಿಸಿಕೊಂಡ ಅನೇಕ ಮಹಿಳೆಯರ ಉದಾಹರಣೆ ಗಳಿವೆ. ಒಳ್ಳೆಯ ಆಡಳಿತಗಾತಿಯರೆಂದು, ಪಂಡಿತೆ ಯರೆಂದು, ಬೇರೆ ಬೇರೆ ಕಲಾಕ್ಷೇತ್ರಗಳಲ್ಲಿ ಕುಶಲಗಾ ತೀಯರೆಂದು, ಲೋಕೋಪಕಾರಿಗಳೆಂದು ಬೆಳಗಿದವರ ಹಲವಾರು ಹೆಸರುಗಳು ದೊರೆಯುತ್ತವೆ. ಅಂದಿನ ಮಹಿಳೆಯರ ವೈವಿಧ್ಯಮಯ ಜೀವನದ ಪೂರ್ಣನೋಟ ನಮಗೆ ಸಿಗುತ್ತಿಲ್ಲವಾದರೂ ಆಗಾಗ ದೊರೆಯುವ ಶಾಸನ ಗಳ ವಿವರಗಳಿಂದ ವಿದೇಶೀಯರ ವೃತ್ತಗಳಿಂದ, ಶಿಲ್ಪ ಗಳಿಂದ ಕೆಲ ಇಣುಕು ನೋಟಗಳನ್ನು ಪಡೆಯಬಹು ದಾಗಿದೆ.

ಕರ್ನಾಟಕದಲ್ಲಿ ಈ ಯುಗದಲ್ಲಿ ಕಂಡುಬಂದ ಆಡಳಿತಗಾರ್ತಿಯರು ಭಾರತದ ಸಮಕಾಲೀನ ಇತರ ಪ್ರದೇಶಗಳಲ್ಲಿ ಇಲ್ಲದ್ದು ನೆನಪಿಡುವಂತಹ ಮಾತಾಗಿದೆ. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಅನೇಕ ಅರಸಿಯರು ಮತ್ತು ಅರಸುಮನೆತನದ ಇತರರು ಅಗ್ರಹಾರ, ಊರು, ನಾಡು, ರಾಜ್ಯಗಳನ್ನು ಕಟ್ಟಿದ್ದಾರೆ. ತುಳು ನಾಡಿನ ರಾಣಿಯರಾದ ಬಲ್ಲಮಹಾದೇವಿ ಮತ್ತು ಚೆತಾಯಿ ಯಂತವರು ಅರಸನ ಜೊತೆಗೂ, ಅರಸನು ಗತಿಸಿದ ನಂತರವೂ ಸಮರ್ಥವಾಗಿ ಆಳಿದರು. ಅಪ್ರಾಯಸ್ಥ ರಾದ ಮಕ್ಕಳಿಗೆ ಯೋಗ್ಯತರ ಬೆಲೆ ಕೊಟ್ಟರು. ಚಾಲುಕ್ಯ ಜಯಸಿಂಹ ದೊರೆಯ ಸೋದರಿ ಅಕ್ಕಾದೇವಿ 44 ವರ್ಷ ಗಳ ಕಾಲ ದೀರ್ಘಕಾಲ ಕಿಸುಗಾಡು, ಬಾಗಡಗೆ– ಮಾಸಿಯವಾಡಿ ನಾಡುಗಳಂತಹ ಚಾಲುಕ್ಯ ಸಾಮ್ರಾಜದ ಮಹತ್ವದ ಪ್ರದೇಶಗಳನ್ನು ಆಳಿದರು. ದಕ್ಷರಾದ ಆಡ ಳಿತಗಾರ್ತಿಯರಾಗಿದ್ದರಲ್ಲದೇ ,ಬಸದಿಗಳು, ಶೈವ-ವೈಷ್ಣವ ದೇವಾಲಯಗಳೆಂದು ಭೇದ ಮಾಡಗೇ ಎಲ್ಲ ಧರ್ಮ ಸಂಸ್ಥೆಗಳಿಕೂ ಬಿಚ್ಚು ಮನಸ್ಸಿನ ದಾನ ಮಾಡಿದಳು. ಅನೇಕ ವಿದ್ಯಾಕೇಂದ್ರಗಳೆಂದು ಭೇದ ಮಾಡದೇ ಎಲ್ಲ ಧರ್ಮ–ಸಂಸ್ಥೆಗಳಿಗೂ ಬಿಚ್ಚು ಮನಸ್ಸಿನಿಂದ ದಾನ ಮಾಡಿದಳು. ಅನೇಕ ವಿದ್ಯಾಕೇಂದ್ರಗಳನ್ನು ಸ್ಥಾಪಿಸಿ ದಳು. ಪೇರೂರ ಅಗ್ರಹಾರದಲ್ಲಿ ಆಕೆ ಸ್ಥಾಪಿಸಿದ ಸಾಲೆ ಯಲ್ಲ 500 ವಿದ್ಯಾರ್ಥಿಗಳು ಓದಲು ಅವಕಾಶವಿತ್ತು. ಗೋಕಾವಿಯ ಮಾಂಡಲಿಕನೊಬ್ಬ ಬಂಡೆದ್ದಾಗ ಸ್ವತಃ ದಂಡೆತ್ತಿ ಹೋಗಿ ಅವನನ್ನು ಮಣಿಸಿದಳು. 'ರಣಭೈರವಿ' ಎಂಬ ಬಿರುದು ಪಡೆದಳು.

ರಾಜರಾದವರು ತಮ್ಮ ಪತ್ನಿಯರನ್ನೊ, ಸೋದರಿ ಯರನ್ನೋ ದೊಡ್ಡ ಹುದ್ದೆಗೆ ನೇಮಿಸಿದರೆ, ಹೆಚ್ಚಿನ ಹೊಣೆಗಾರಿಕೆ ಒಪ್ಪಿಸಿದರೆ ಅದರಲ್ಲಿ ವಿಶೇಷವಾದುದೇನೂ ಇಲ್ಲ. ಆದರೆ ಜನ ಸಾಮಾನ್ಯರೆನಿಸಿಕೊಂಡವರಲ್ಲಿ ಇಂಥ ಅಧಿಕಾರಿಣಿಗಳಾಗಿ ಹೋದದ್ದು ಇಂದಿನಂತೆ ಸಾವಿರ ವರ್ಷ ಗಳ ಹಿಂದೆಯೂ ಮಹತ್ವದ ಮಾತಾಗಿತ್ತು. ರಾಷ್ಟ್ರ ಕೂಟರ ಶಾಸನವೊಂದು ಇಂಥ ಅಪೂರ್ವ ಮಹಿಳೆಯ ಕುರಿತು ಹೇಳುತ್ತದೆ. ಸತ್ತರಸ ನಾಗಾರ್ಜುನ, ನಾಗರ ಖಂಡ (ಎಪ್ಪತ್ತು) ನಾಡಿನ ನಾಳ್ಗಾವುಂಡ (ನಾಡ ಗೌಡ) ನಾಗಿದ್ದ. ಆತ ಕಾಲವಶನಾಗಲು, ಅರಸು ಆತನ ಪತ್ನಿ ಜಕ್ಕಿಯಬ್ಬೆಯೇ ಸರ್ವ ವಿಧದಲ್ಲಿ ಸಮರ್ಥಳೆಂದು

ಆ ಹುದ್ದೆಗೆ ನೇಮಿಸಿದ. ಆ ಕಾಲದ ನಾಳ್‌ಗಾವುಂಡ ನಾಡಿನ ಮುಖ್ಯ ಅಧಿಕಾರಿಯಾಗಿರುತ್ತಿದ್ದ ನಾಡಿನೊಳಗೆ ಬರುವ ಬೇರೆ ಬೇರೆ ಗ್ರಾಮಗಳ ಕಂದಾಯವನ್ನು ಅರಸು ನಾಡಗೌಡನ ಸಲಹೆ ಪಡೆದೇ ನಿರ್ಧರಿಸುತ್ತಿದ್ದ. ಸ್ಥಳೀಯ ಕೆರೆಗಳು ಮತ್ತು ಆಯ-ವ್ಯಯದ ಇತರ ವ್ಯವಸ್ಥೆಯೂ ಆತನಿಗೇ ಸೇರಿತ್ತು. ಜಕ್ಕಿಯಬ್ಬೆ ಈ ಎಲ್ಲ ಹೊಣೆಗಾರಿಕೆಯನ್ನು ದಕ್ಷ ರೀತಿಯಿಂದ ನಿರ್ವಹಿಸಿದಳು. ಸಾಲಗಳನ್ನೆಲ್ಲ ಬಗೆಹರಿಸಿದಳು. ಕೊನೆಗೆ ಶಾರೀರಿಕ ದೌರ್ಬಲ್ಯದಿಂದ ಹೊಣೆಗಾರಿಕೆ ನೀಗದ್ದಾದಾಗ ತಾನಾಗಿಯೇ ನಿವೃತ್ತಳಾದಳು.

ಸಾತೇನಹಳ್ಳಿಯ ಸೆಟ್ಟಿಕವ್ವೆ 'ಊರೊಡತಿ'ಯಾಗಿ ಸೇವೆ ಸಲ್ಲಿಸಿದ ಇನ್ನೊಬ್ಬ ಸಮರ್ಥಮಹಿಳೆ. ಆಕೆಯ ಬಗ್ಗೆ ಹಿರೇಕೆರೂರಿನ (ಧಾರವಾಡ ಜಿಲ್ಲೆ) ಕ್ರಿ. ಶ. 1204ರ ಶಾಸನವೊಂದು ವಿವರಗಳನ್ನು ನೀಡುತ್ತದೆ. ಅಧಿಪೋತ್ತಮೆಯೆಂದು ಅವಳು ಹೆಸರು ಮಾಡಿದ್ದಳು.

'ಮಡದಿಯರಾವಗಂ ಕೆರಸಿ, ಕಾವಲಿ, ತಂಬುಗೆ, ಹುಟ್ಟು, ಸಟ್ಟುಗಂ, ಕೊಡೂರಲಕ್ಕಿಯಂಬಿವನೆ ಚಿಂತಿಸಿ ಕೋಟಲೆಗೊಂಬರಲ್ಲದೇಂ ಮೃಡನನೆ ಸುಪ್ರತಿಷ್ಠೆಯನೆ ಮಾಡಿ ಕಲ್ವೆಸದಿಂದೆ ನೇಹವುಂ ಪೋಡವಿಯೊಳೊಪ್ಪ ಮಾಡಿಪರೆ ?" ಸಾಮನ್ಯ ಹೆಂಗಸರು ಗೆರಸಿ ಕಾವಲಿ, ತಂಬಿಗೆ, ಸವುಟು, ಕೊಡ, ಒರಳು, ಅಕ್ಕಿ ಎಂಬುವಗಳನ್ನೇ ಕುರಿತು ಚಿಂತಿಸುವವರಿದ್ದಾಗ, ಸೆಟ್ಟಿಕವ್ವೆ ಪಾರಮಾರ್ಥ ಪತ್ತ ಲಕ್ಷ ಹಾಕಿದಳು. ಊರಲ್ಲಿ ಶಿವನ ಪ್ರತಿಮೆಯ ಪ್ರತಿಷ್ಠಾಪನೆ ಮಾಡಿ ದೇವಾಲಯವನ್ನೂ ಕಟ್ಟಿಸಿದಳು. ಶಿಷ್ಟ ಜನ ಪರಿಪಾಲನೆಯೇ ತನ್ನ ಗುರಿಯೆಂದು ದೃಢವಾಗಿ ನಂಬಿ ಊರ ರಕ್ಷಣೆಗೆ ಬೇಕಾಗುವ ಯಾವತ್ತೂ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದಳು. ಅಂದಿನ ಊರೊಡೆಯರು ಇಂದಿನ ಮೇಯರಂತೆ, ಆದರಂತೆ ನಾಡಗಾಂವುಡರು ಡಿವಿಷನಲ್‌ಕಮೀಷನರಂತೆ ಎಂದು ತೀರ ಸ್ಥೂಲವಾಗಿ ಹೇಳಬಹುದು. ಜಕ್ಕಿಯಬ್ಬೆ ಜೈನಳಾದರೆ, ಸೆಟ್ಟಿಕವ್ವೆ ವೈಶ್ಯಳು. ಯೋಗ್ಯತೆಗಲ್ಲದೇ ಜಾತಿ-ಪಂಥಗಳಿಗೆ ಅಂದಿನ ದಿನಗಳಲ್ಲಿ ಪ್ರಾಧಾನ್ಯವಿರಲಿಲ್ಲವೆಂಬ ಸತ್ಯಾಂಶ ಇವರ ಉದಾಹರಣೆಗಳಿಂದ ತಿಳಿದುಬರುತ್ತದೆ.

ನೂಲುವುದು, ನೇಯುವುದು, ಹೊಲದಲ್ಲಿ ಗೆಯ್ಯುವುದು, ದಾಯಿಯ ಕೆಲಸ ಮುಂತಾದುವುಗಳನ್ನು ಅನಾದಿಕಾಲದಿಂದ ಹೆಂಗಳೆಯರು ಮಾಡುತ್ತಾ ಬಂದಿದ್ದಾರೆ. ಮಧ್ಯಯುಗದ ಮಹಿಳೆ ಇನ್ನಿತರ ಎಷ್ಟೋ ವೃತ್ತಿಗಳಲ್ಲಿ ಮಿಗಿಲೆನಿಸಿ ಕೊಂಡಿದ್ದಳು. ಇಂದಿನ ಸರಕಾರದಂತೆ ಅಂದಿನ ಅರಸರೇ ಬಗೆಬಗೆಯ ಸೇವೆಗಳಿಗೆ, ನೌಕರಿಗಳಿಗೆ ಅವಕಾಶಮಾಡಿಕೊಡುತ್ತಿದ್ದರು. ಕಾವಲುಗಾರರಲ್ಲಿ ಬೇಕಾದಷ್ಟು ಹಿರಿಯ ಮತ್ತು ಕಿರಿಯ "ಪಡಿಯರತಿ" (ಸ್ತ್ರೀ ಪ್ರತೀಹಾರಿ) ಯರಿರುತ್ತಿದ್ದರು. ರಾಜಮನೆತನದವರನ್ನೈ, ಮುಖ, ತಲೆ, ಕೈ-ಕಾಲುಗಳಿಗೆ, ಕಾಲ, ಸಮಯ, ಋತುಗಳಿಗನುಸಾರವಾಗಿ ಸುಗಂಧ ದ್ರವ್ಯಗಳನ್ನು ತಯಾರಿಸಿ ಕೊಡಲು "ಘಟ್ಟವಳ್ತಿ"ಯರಿರುತ್ತಿದ್ದರು. ವಿಜಯನಗರದ ಕಾಲದಲ್ಲಿ ಅರಮನೆಯದಷ್ಟೇ ಅಲ್ಲದೇ ರಾಜ್ಯದ ಆಯ-ವ್ಯಯಗಳ ಲೆಕ್ಕಪತ್ರಗಳನ್ನಿಡುವ ಮಹಿಳಾ ಲೆಕ್ಕಿಗರಿದ್ದರು. ಮಹಿಳಾ ನ್ಯಾಯಾಧೀಶರು, ಬೇಲಿಫರು, ಜ್ಯೋತಿಷಿಗಳು ಇದ್ದಂತೆ ಬೇರೆ ಬೇರೆ ಆಯುಧಗಳನ್ನು ಬಳಸಬಲ್ಲ ವೀರಾಂಗನೆಯರಿದ್ದರು. ಊದುವ, ಬಾರಿಸುವ ವಾದ್ಯಗಳನ್ನು ಕರಗತಮಾಡಿಕೊಂಡವರು ಅನೇಕ ಜನ. ರಾಮಾಯಣ ಮಹಾಭಾರತ ಮತ್ತಿತರ ಗ್ರಂಥಗಳನ್ನು ಹೆಂಗಳೆಯವರೆ ಓದಿ, ವಿವರಿಸಿ ಹೇಳುವ ಪಂಡಿತೆಯರಿದ್ದರು. 'ಮಹಿಳಾಮಲ್ಲ'ರೂ ಬೆಳಗಿದ್ದು ಈ ಯುಗದ ಸೋಜಿಗ. ನವರಾತ್ರಿಯ ಕಾಲಕ್ಕೆ ಸಾಮ್ರಾಜ್ಯದ ಸಿದ್ಧ ನರ್ತಕಿಯರಿಗೂ, ಮಲ್ಲರಿಗೂ ರಾಜಧಾನಿಗೆ ಬಂದು ತಮ್ಮ ಕಲಾ ನೈಪುಣ್ಯದ ಪ್ರದರ್ಶನ ನೀಡುವಂತೆ ಅರಸರಿಂದ ಆಮಂತ್ರಣ ಹೋಗುತ್ತಿತ್ತು. ಆಂದು ವಿಜಯನಗರವನ್ನು ಸಂದರ್ಶಿಸಿದ ವಿದೇಶೀಯರು ಮಹಿಳೆಯರ ಮಲ್ಲಗಾಳಗಳಿಗೆ ಮೀಸಲಾದ ಕಣವನ್ನು ಉಲ್ಲೇಖಿಸಿದ್ದಾರೆ. ಇತರ ಚಿಕ್ಕ ಪುಟ್ಟ ಅರಸರು, ಸಾಮಂತರು, ಸಾಮ್ರಾಟರನ್ನು ಅನುಕರಿಸುತ್ತಿದ್ದುದರಿಂದ ತಮ್ಮ ಅರಮನೆಗಳಲ್ಲೂ ಇಂಥ ವಿವಿಧ ಊಳಿಗ ವ್ಯವಸಾಯಗಳಿಗೆ ಅವಕಾಶಗಳನ್ನು ಕಲ್ಪಿಸಿ ಕೊಡುತ್ತಿದ್ದರೆಂದು ಊಹಿಸಬಹುದಾಗಿದೆ. ಜನಸಾಮಾನ್ಯರೂ ಹುಡುಗಿಯರಿಗೆ ಬಾಲ್ಯದಿಂದಲೇ ನೃತ್ಯ ಮುಂತಾದವನ್ನು ಕಲಿಸಿ ಅವರ ಗತಿ-ಗಮನಗಳು ಲಾವಣ್ಯಪೂರ್ಣವಾಗುವಂತೆ ಲಕ್ಷ ಪೂರೈಸುತ್ತಿದ್ದರೆಂದು ವಿದೇಶೀ ಪ್ರವಾಸಿ 'ಫ್ರೆಡರಿಕ್ ಬಾರ್ಬೊಸಾ' ಗಮನಿಸಿದ್ದಾನೆ. ವಿವಿಧ ಆಟ ಕೂಟಗಳಲ್ಲಿ, ನೃತ್ಯ-ಸಂಗೀತ, ಮಲ್ಲಯುದ್ಧಗಳಲ್ಲಿ, ಬೇಟೆಯಲ್ಲಿ, ವಿವಿಧ ಕಸರತ್ತುಗಳಲ್ಲಿ ತೊಡಗಿರುವಂತೆ ಕೆತ್ತಿದ ಸ್ತ್ರೀ ಶಿಲ್ಪಗಳಿವೆ.

ತಮ್ಮ ಮಕ್ಕಳು ವೀರಾಗ್ರೇಸರರಾಗಿರುವಂತೆ ಪರೋಪಕಾರಿಗಳೂ ಆಗಬೇಕೆಂದು ತಾಯಂದಿರು ಬಯಸುತ್ತಿದ್ದರು. ಲಕ್ಷ್ಮೀಧರನೆಂಬ ಅಮಾತ್ಯನು ನಿಲ್ಲಿಸಿದ ಕ್ರಿ. ಶ. 1411ರ ಶಾಸನವೊಂದು, ಲೋಕೋಪಕಾರದ ಅಮೃತವನ್ನು ಆತನು ಮಗುವಾಗಿದ್ದಾಗ ತಾಯಿ ಹೇಗೆ ಎರೆದಳು ಎಂಬದನ್ನು ಸುಂದರವಾಗಿ ಬಣ್ಣಿಸುತ್ತದೆ.

"ಕೆರೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಾಗಾರಮಂ ಮಾಡಿಸು, ಸೆರೆಯೊಳ್ ಸಿಲ್ಕಿದ ಅನಾಥರಂ ಬಿಡಿಸು, ಮಿತ್ರರ್ಗೆ ಇಂಬುಕೆಯ್। ನಂಬಿದರ್ಗೆ ಎರೆವೆಟ್ಟಾಗಿರು, ಶಿಷ್ಯರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾಯೆರೆದಳ್ ಪಾಲ್‌ರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ !" ಹೊಟ್ಟೆಗೆ ಹಾಲೆರೆಯುವಾಗಲೇ ಲೋಕ ಸಂಗ್ರಹದ ಈ ವಿಚಾರಗಳನ್ನು ಮಗುವಿನ ಕಿವಿಯಲ್ಲಿ ಎರೆದಳಂತೆ ಈ ಮಹಾಮಾತೆ ! ಮಕ್ಕಳನ್ನು ಯೋಗ್ಯತಾಮತರನ್ನಾಗಿ ಮಾಡಲು ತಾಯಂದಿರು ಹೆಣಗಿದಂತೆ, ಇಂಥ ತಾಯಂದಿರನ್ನು ಕೃತಜ್ಞತೆಯಿಂದ ನೆನೆಯುವ ಮಕ್ಕಳೂ ಇರುತ್ತಿದ್ದರು.

ಕೆರೆ-ಬಾವಿಗಳನ್ನು ಅಗೆಸುವುದು, ಅನ್ನಛತ್ರ-ಅರವಟ್ಟಿಗೆಗಳನ್ನು ನಿಲ್ಲಿಸಿ ಪ್ರಯಾಣಿಕರಿಗೆ ನೀರು-ಆಹಾರದ ವ್ಯವಸ್ಥೆ ಮಾಡುವುದು, ತೋಪುಗಳನ್ನು ನಿಲ್ಲಿಸುವದು, ವಿದ್ಯಾರ್ಥಿಗಳಿಗೆ ಓದುವ, ವಸತಿಯ ಸೌಕರ್ಯಗಳನ್ನು ಕೊಡಮಾಡುವುದು ಅಂದಿನ ಯುಗದಲ್ಲಿ ಸಾಮಾನ್ಯವಾಗಿತ್ತು. ಇಂಥ ದಾನಿಗಳಲ್ಲಿ ಮಹಿಳೆಯರೂ ತುಂಬ ಸಂಖ್ಯೆಯಲ್ಲಿರುತ್ತಿದ್ದರು. ಪುಣ್ಯಸಂಪಾದನೆ ಇವುಗಳ ಮೂಲ ಉದ್ದೇಶವಾದರೂ ಇವು ಉಳ್ಳವರು, ಇಲ್ಲದವರಿಗೆ ಕೊಡಮಾಡುವ ಔದಾರ್ಯದ ಮಾದರಿಗಳಾಗಿದ್ದವು. ಕೊಡುಗೈದೊರೆಗಳು ಕೆಲವರಾದರೂ, ಲಾಭ ಪಡೆಯುವವರು ಅಸಂಖ್ಯರು. ಸಿರಿಯದೇವಿಯೆಂಬಾಕೆಯ ಅಪೂರ್ವ ದಾನವೊಂದು ಚಿರಸ್ಮರಣೀಯವಾಗಿದೆ. ಆಕೆ 'ಕ್ಷಿತಿರುಹ ನೋಂಪಿ' ಯನ್ನು ಕೈಕೊಂಡು ಕಿತ್ತಳೆ, ನೇರಿಳೆ, ಮಾವು ಹಲಸು ತೆಂಗು, ಖರ್ಜೂರಗಳ ಸಸಿಗಳನ್ನು ನೆಡಿಸಿದಳು. ಸುಂದರವಾದ ತೋಪೊಂದು ನಿರ್ಮಿತವಾದಾಗ ತನ್ನ ಪತಿಯ ಅಪ್ಪಣೆ ಪಡೆದು ಅದನ್ನು ಧರ್ಮಸಂತೆಗೆ ದಾನ ಮಾಡಿದಳು. ಮುತ್ತುಗಳಿಂದ ಆನೆಗಳವರೆಗಿನ ವಿವಿಧ ವಸ್ತು-ಪ್ರಾಣಿಗಳ ಬಹುದೊಡ್ಡ ಮಾರಾಟ ಈ ತೋಪಿನಲ್ಲಿ ನಡೆಯುವಂತಾಯಿತು. ಸಂತೆಗೆ ನೆರೆದ ಜನ ಈ ಅಂದವಾದ ತೋಟದ ಗಿಡಮರಗಳಿಗೆ ಹಾನಿ ತರದಂತೆ ನಡೆದುಕೊಳ್ಳುತ್ತಿದ್ದರು. ತೋಟದ ವಿವಿಧ ಹಣ್ಣುಗಳ ಆದಾಯ ಅಲ್ಲಿಯೇ ಇದ್ದ ದೇವಾಲಯದಲ್ಲಿ ದೇವರ ಸೇವೆಗೆ ಮೀಸಲಾಯಿತು. ಇದ್ದ ಗಿಡಮರಗಳನ್ನು ನಿರ್ದಯದಿಂದ ಕಡಿದುಹಾಕಿ ಭರದಿಂದ ಬೋಳುಮಾಡಿದ ಪರಿಸರದಲ್ಲಿ ದಿನನೂಕುವ ನಾವು ಗಿಡಮರ ನೆಡುವದನ್ನೇ ವ್ರತವಾಗಿ ಕೈಗೊಂಡು ಸಾವಿರಾರು ಜೀವಿಗಳಿಗೆ ಉಪಕಾರ ಮಾಡಿದ ಆ ಮಹಾಸಾಧ್ವಿಯನ್ನು ಅಭಿಮಾನದಿಂದ ಇಂದು ನೆನೆಯ ಬೇಕಾಗಿದೆ !

ದಾನಚಿಂತಾಮಣಿಯೆಂದು ಹೆಸರು ಪಡೆದ ; ಕನ್ನಡಿಗರಿಗೆಲ್ಲ ಸುಪರಿಚಿತಳಾದ ಅತ್ತಿಮಬ್ಬೆ ಇದೇ ಯುಗದಾಕೆ. ಎಣಿಯಿಲ್ಲದಷ್ಟು ದಾನಧರ್ಮಗಳನ್ನು ಮಾಡಿ ಮುಂದಿನ ಪೀಳಿಗೆಗೆಲ್ಲ ಆದರ್ಶಪ್ರಾಯಳಾದ ಆಕೆಯ ಎರಡು ಮಹತ್ವದ ದಾನಗಳನ್ನು ಇಲ್ಲಿ ನೆನೆಯಬಹುದು. ಕವಿಯೆಂದು ಅದೇ ರೂಪಗೊಳ್ಳುತ್ತಿದ್ದ ರನ್ನನ ಪ್ರತಿಭೆಯನ್ನು ಗುರುತಿಸಿ, ಪ್ರೋತ್ಸಾಹಿಸಿ ಆತನಿಂದ ಅಜೀತತೀರ್ಥಕರ ಪುರಾಣವನ್ನು ಬರೆಯಿಸಿದ್ದು ಒಂದು. ಪೊನ್ನನ ಶಾಂತಿ-ಪುರಾಣದ ಸಹಸ್ರ ಪ್ರತಿಗಳನ್ನು ಮಾಡಿಸಿ, ಉಚಿತವಾಗಿ ಹಂಚಿ ಆತನು ಜನಪ್ರಿಯನಾಗುವಂತೆ ಅವಕಾಶ ಮಾಡಿಕೊಟ್ಟದ್ದು ಇನ್ನೊಂದು. ಮುದ್ರಣ ಕಾಣದ ಯುಗದಲ್ಲಿ ಸಾಹಿತ್ಯ ಪ್ರಚಾರಮಾಡಿ ಕನ್ನಡ ಸಾರಸ್ವತ ಪ್ರಪಂಚಕ್ಕೆ ಎಣಿಯಿಲ್ಲದ ಉಪಕಾರ ಮಾಡಿದಳು, ಅತ್ತಿಮಬ್ಬೆ.

ಅಂದಿನವರಿಗಿಂತ ಇಂದಿನ ನಾವೆಲ್ಲ ಹೆಚ್ಚಿನ ಮಟ್ಟಿಗೆ ಸಾಕ್ಷರತೆ ಪಡೆದಿರಬಹುದು. ಜಾಗತಿಕಜ್ಞಾನವನ್ನು ಬೆಳೆಸಿಕೊಂಡಿರಬಹುದು ; ಬೇರೆ ಹಲವಾರು ದೇಶಗಳೊಡನೆ ಆಚಾರ-ವಿಚಾರಗಳ ವಿನಿಮಯ ಮಾಡಿಕೊಂಡಿರಬಹುದು ಆದರೆ ಅಂದಿನವರ ಲೋಕ ಸಂಗ್ರಹ ವೃತ್ತಿಯ ಒಂದಂಶವಾದರೂ ಉಳಿಸಿಕೊಂಡಿದ್ದೇವೆಯೆ? ಅಂದಿನವರ ಸಾಮಾಜಿಕ ಪ್ರಜ್ಞೆಯನ್ನು ಕೆಲಮಟ್ಟಿಗಾದರೂ ಅರಿತುಕೊಳ್ಳಲು ಯತ್ನಿಸಿದ್ದೇವೆಯೇ? ಯುಗದಿಂದ ಯುಗಕ್ಕೆ ಮೌಲ್ಯಗಳು ಬದಲಾದರೂ ಮಾನವತಾಧರ್ಮವನ್ನು ದೈನಂದಿನ ಜೀವನದಲ್ಲಿ ಹೆಂಗಳೆಯರು ಹೇಗೆ ಮೈಗೂಡಿಸಿಕೊಂಡಿದ್ದರು ಎಂಬುದನ್ನು ಈ ಕೆಲ ಉದಾಹರಣೆಗಳಿಂದ ತಿಳಿದುಕೊಳ್ಳಬಹುದು. ಕಾಲಗರ್ಭದಲ್ಲಿ ಅಡಗಿಕೊಂಡ ಇನ್ನೆಷ್ಟೋ ಇಂತಹ ನಿದರ್ಶನಗಳು ಹೊರಗೆ ಬರಬೇಕಾಗಿದೆ. ಇಂದಿನವರ ಕಣ್ತೆರೆಸಬೇಕಾಗಿದೆ. ●



— ಅನುಸೂಯ ರಾಮರೆಡ್ಡಿ

ಅಜ್ಜಯ್ಯಾ ........ ಅಜ್ಜಯ್ಯಾ........ ಎನ್ನುತ್ತಾ ಕರಿಯ, ಬದುವಿನ ಮೇಲೆ ನಿಂತು ಸುತ್ತಲೂ ಕಣ್ಣು ಹಾಯಿಸಿದಾಗ, ಇದಿರಿನಲ್ಲಿದ್ದ ಹನುಮಪ್ಪನ ಗುಡಿಯ ಮೋಟುಗೋಡೆಗೆ ಒರಗಿ ಕುಳಿತಿದ್ದಾನೆ ಅಜ್ಜಯ್ಯ.

ಓಡಿ ಬಂದವನೆ ಭುಜ ಹಿಡಿದು ಅಲುಗಾಡಿಸುತ್ತಾ "ಏನಾರಾ ಕನಸು ಗಿನಸು ಕಾಣ್ತಿದ್ದ್ಯೋ ಹೆಂಗೆ" ನಗುತ್ತಾ ಅಜ್ಜಯ್ಯನ ಪಕ್ಕದಲ್ಲಿ ಕುಳಿತ.

"ಆಂ....ಊಂ........" ಎಂದ ಅಜ್ಜಯ್ಯ, ಎದುರಿನಲ್ಲಿದ್ದ ಅಡಿಕೆ ಗಿಡಗಳ ಕಡೆ ನೋಡಿ ನಿಟ್ಟುಸಿರುಗರೆದ.

ಓ ಅಡಿಕೆ ಗಿಡ ಒಣಗೋಗ್ತದೇಂತ ದುಃಖಾನಾ! ಏನ್ಮಾಡಾಕಾಗ್ತೈತೆ? ಮಳೆ ಕೈಕೊಡ್ತೆಲ್ಲ ಈವರ್ಷ ಏನೋ. ಇಷ್ಟ್ರಾಗೆ ಮಳೆ ಬರಬೌದು, ಅಲ್ಲಿತನಕ ಹಂಗೂ ಹಿಂಗೂ ಜೀವ ಹಿಡ್ಕಂಡಿದ್ರೆ ಆಯ್ತು"

ಜೀವ ಹಿಡ್ಕಂಡಿದ್ರೆ ಆಯ್ತು ಹುಡುಗನ ಈ ಮಾತಿನಿಂದ ಅಜ್ಜಯ್ಯನ ಹಣೆ ಸುಕ್ಕು ಸ್ವಲ್ಪ ಸಡಲಿ, ಗುಳಿಬಿದ್ದಿದ್ದ ಕಣ್ಣು ಮಿನುಗಿದವು. ಗುಡಿಯ ಹನುಮಪ್ಪನ ಕಡೆಗೊಮ್ಮೆ ಅಡಿಕೆ ಗಿಡಗಳಕಡೆಗೊಮ್ಮೆ ನೋಡಿ ಹೌದೆನ್ನುವಂತ ತಲೆ ಹಾಕಿದ ಆತ.

ಕರಿಯ ಕಂಕುಳಲ್ಲಿಟ್ಟು ಕೊಂಡಿದ್ದ, ಹಳೆ ಬಟ್ಟೆಯ ಗಂಟನ್ನು ಹೊರತೆಗೆದು ಬಿಚ್ಚಿದ. ಅದರಲ್ಲಿ ಅಂಗೈ ಅಗಲದ ಜೋಳದರೊಟ್ಟಿಗಳು, ಉಪ್ಪು, ನಾಲ್ಕು ಮೆಣಸಿನಕಾಯಿ, ರೊಟ್ಟಿಯ ಮೇಲಿರಿಸಿ ಅಜ್ಜಯ್ಯನಿಗೆರಡು ರೊಟ್ಟಿಕೊಟ್ಟು, ತಾನೆರಡನ್ನಿರಿಸಿಕೊಂಡಾಗ

"ನನಗೆ ಬ್ಯಾಡ ನೀನು ತಿನ್ನು" ಅಜ್ಜಯ್ಯ ಹುಡುಗನ ಕಡೆ ಪ್ರೀತಿಯಿಂದ ನೋಡಿದ.

"ಯಾಕೆ ಹಸಿವಿಲ್ಲವಾ?"

"ಹನುಮಪ್ಪನಿಗೆ ಎಡೆಮಾಡೋಕೇಂತ ಒಬ್ಬರು ಹುಗ್ಗಿ ತಂದಿದ್ರು, ನನಗಿಷ್ಟು ಕೊಟ್ಟು ಹೋದ್ರು ತಿಂದಿದ್ದೆ."

"ಅಯ್ಯ..ಯ್ಯ....ಯ್ಯ..... ನನಗೇನು ಗೊತ್ತಿಲ್ಲವಾ! ಜ್ವಾಳದ ಮುದ್ದೆ ಸಿಗದ ಈ ಬರಗಾಲದಾಗ ಇನ್ಯಾರಪ್ಪಾ ಹುಗ್ಗಿ ಎಡೆಮಾಡೋರೂ! ಬರೀ ಸುಳ್ಳು ಇಕಾ ನೀನು ತಿನ್ನಲ್ಲಾಂದ್ರೆ ನಾನೂ ಮುಟ್ಟಾಕಿಲ್ಲ" ಮುಖ ಊದಿಸಿಕೊಂಡು ಕುಳಿತ ಕರಿಯ.

ಅಜ್ಜಯ್ಯ ಒಮ್ಮೆ ಸಣ್ಣಗೆ ನಕ್ಕು ರೊಟ್ಟಿಯನ್ನು ಕೈಗೆತ್ತಿಕೊಂಡ ರೊಟ್ಟಿ ತಿನ್ನುವುದು ಮುಗಿಯುತ್ತಿದ್ದಂತೆ,

ಕರಿಯ ಮುಖ ಇಳಿಬಿಟ್ಟುಕೊಂಡು "ನಾಳಿನಾಗಿಂದ ರೊಟ್ಟಿ ಇಲ್ಲ. ಕೆಲ್ಸಕ್ಕೆ ಬ್ಯಾಡಾಂದ್ರು ಧಣೇರು" ಎಂದ.

"ಬ್ಯಾಡಾಂದರಾ! ಗಾಬರಿಗೊಂಡ ಅಜ್ಜಯ್ಯ ಒಮ್ಮೆಲೇ ಉಸುರಿ, ಅಡಿಕೆಗಿಡಗಳ ಕಡೆ ನೋಡ್ತುತ್ತಾ ಹೇಳಿದ,

"ಮಳೆ ಓಯ್ತು, ಉತ್ತೊದುಬಿತ್ತೋದು ಕೊಯ್ಲು ಕಳೆ ಒಂದೂ ಇಲ್ಲ. ಬದುಕಿಲ್ಲದ ಮೇಲೆ ಇನ್ಯಾಕೆ ಇಟ್ಕಂ ತಾರೆ? ಮುದ್ಕೆಗೆ ದಂಡವಾಗಿ ಆದಕ್ಕೆ ಬ್ಯಾಡಾಂದ್ರೇನೊ?

"ಊಂ .... ಬರ್ತೀನಿ....ಮಣಕ ಎಲ್ಲೋಯ್ತೊ ....... ಉಲ್ಲು ಕಡ್ಡಿ ಕಾಣದೆ ಕಂಗಾಲಾಗೈತೆ ಎಂದವನೇ ಕರಿಯ ಅಲ್ಲಿಂದೆದ್ದು ಹೊರಟ.

ಅಜ್ಜಯ್ಯ ಬಹಳ ಹೋತ್ತು ಕುಳಿತಲ್ಲೇ ಕುಳಿತಿದ್ದ. ಅವನ ದೃಷ್ಟಿಮಾತ್ರ ಒಣಗಲು ಶುರುವಾಗಿದ್ದ ಅಡಿಕೆ ಗಿಡಗಳ ಕಡೆಗೊಮ್ಮೆ ಆಕಾಶದಕಡೆಗೊಮ್ಮೆ ಸುಳಿದಾಡು ತ್ತಿತ್ತು. ಆತನಿಗೀಗ ಅವರತ್ತರ ಮುದಿಪ್ರಾಯ. ನಾಲ್ಕು ವರ್ಷಗಳ ಕೆಳಗೆ ಅವನೂ, ಚಿಕ್ಕ ಇಬ್ಬರು ಸೇರಿ ನೆಲ ವನ್ನು ಅಗೆಮಾಡಿ ಅಡಿಕೆ ಸಸಿ ನೆಟ್ಟಿದ್ದರು. ಅವರಿಗಿದ್ದ ಎರಡು ತುಣುಕು ಹೊಲ, ಮಕ್ಕಳು ಮರಿಯ, ಕಾಯಿಲೆ ಗೇಂತ ಮಾಡಿದ ಸಾಲಕ್ಕೆ ಹೋಗಿ, ಈಗ ಒಂದೆಕರೆ ಮಾತ್ರ ಉಳಿದಿತ್ತು. ಇಷ್ಟಾದರೂ ಹುಟ್ಟಿದ ಮಕ್ಕಳೆಲ್ಲಾ ಹೆತ್ತವರ ಮಡಿಲನ್ನು ಬರಿದುಮಾಡಿ ಹುಡಿಸೇರಿದ್ದವು. ಎಲ್ಲಾರ್ನೂ ಕೊಟ್ಟವನೆ ಕೊಂಡೊಯ್ದ, ಮುಪ್ಪಿನ ಕಾಲಕ್ಕೆ ಸ್ವಲ್ಪ ಆಸರೇನಾದ್ರು ಇರಲೀಂತ, ಅಡಿಕೆ ಗಿಡ ಗಳ್ನ ಬೆಳೆಸಿದ್ದರು. ಗಂಡ ಹೆಂಡತಿ. ಬೆಳಯ್ತಿರೋ ಆ ಗಿಡಗಳು, ಆಗಾಗ್ಗೆ ಅಲ್ಲಿಗೆಬರ್ತಿದ್ದ ಕರಿಯ ಇವರಮಕ್ಕಳು. ಅಜ್ಜಿ ಈಗ ಎಂಟು ವರುಷದ ಕೆಳಗೆ ಚಿಕ್ಕೀನೂ ಸನ್ನಿ ಮುಚ್ಚಿಕೊಂಡು ಕಣ್ಣು ಮುಚ್ಚಿದ್ದಳು. ಮಕ್ಕಳು, ಮಡದಿ ಕೈ ಬಿಟ್ಟರೂ, ಅಡಿಕೆ ಗಿಡಗಳು ಕೈಬಿಡವು ಅನ್ನೋ ನಂಬಿಕೆ ಅಜ್ಜನಿಗೆ. ಕರಿಯ ಹದಿನಾರು ವರ್ಷದ ಪ್ರಾಯದ ಹುಡುಗ. ತಬ್ಬಲಿ ಪಾಪ! ಎಂಟು ವರ್ಷಗಳಿಂದ ಅಜ್ಜಯ್ಯ ನಿಗೆ ಅವನಿಗೆ ನೆಂಟು.

ಸ್ವಲ್ಪ ಹೊತ್ತಿನ ಮೇಲೆ ಅಜ್ಜಯ್ಯ ಮಣ್ಣಿನ ಗಡಿಗೆ ಹಿಡಿದು, ಬಾವಿಯ ಕಡೆ ಹೊರಟ. ಒಂದು ಫರ್ಲಾಂಗ್ ದೂರದಲ್ಲೇ ಇದೆ ಧಣಿಯರ ಬಾವಿ. ಮೊದಲು ಅವರು ಬಾವಿಗೆ ಪಂಪ್‌ಸೆಟ್ ಹಾಕಿಸಿ, ಕಾಲುವೆ ಮೂಲಕ ತಮ್ಮ ತೋಟಕ್ಕೆ ನೀರು ಹಾಯಿಸ್ಕೊಳ್ತಿದ್ರು. ಅಜ್ಜಯ್ಯನೂ ಅವರ ಕಾಲುವೆ ಮೂಲಕಾನೇ ತನ್ನ ಗಿಡ ಗಳಿಗೂ ನೀರು ಸರಬರಾಜು ಮಾಡ್ಕೊಳ್ತಿದ್ದ. ಈಗ ಆರು ತಿಂಗಳಿಂದ ಅಣ್ಣ ತಮ್ಮಂದಿರಲ್ಲಿ ವೈಮನಸ್ಸಾಗಿ, ಪಂಪ್ ಸೆಟ್ ಕಿತ್ತುಹಾಕಿ ದಿಕ್ಕಿಗೊಬ್ಬರಾಗಿದ್ದರು. ಹೀಗಾಗಿ ಅಜ್ಜಯ್ಯ ಆವರ ಬಾವಿ ಆಶ್ರಯ ಪಡೆಯಬೇಕಾಗಿತ್ತು. ಈಗ ಬಾವೀಲೂ ನೀರು ತಳ ಸೇರಿದೆ. ಕಳೆದವರ್ಷ ಮಳೆ ಕಾಣೆಯಾಗಿತ್ತು. ಈ ವರ್ಷ ಇದುವರೆಗೆ ಅದರ ಸುದ್ದೀ ನೆ ಇಲ್ಲ. ತಿನ್ನೋ ಅನ್ನ.... ಕುಡಿಯೋ ನೀರು ಎರ ಡಕ್ಕೂ ಬವಣೆ. ಊರಿನ ಸ್ಥಿತಿ ಹೀಗಿದ್ದಿದ್ದರಿಂದ ಅಜ್ಜಯ್ಯ ಊರಿನೊಳಕ್ಕೆ ಹೋಗದೆ ತನ್ನ ಗಿಡಗಳ ಹತ್ತಿರವೇ ಒಂದು ಗುಡಿಸಲನ್ನು ಹಾಕ್ಕೊಂಡಿದ್ದ.

ಎರಡುಮೂರು ದಿನಗಳಾದವು. ಕರಿಯ ಮತ್ತೆ ಕಾಣಿಸಲೇ ಇಲ್ಲ. ಅವನು ತಂದಿದ್ದ ರೊಟ್ಟಿ ತಿಂದಿದ್ದೆಷ್ಟೋ ಅಷ್ಟು. ಮತ್ತೆ ಅಜ್ಜಯ್ಯನ ಹೊಟ್ಟೆಗೆ ಏನೂ ಬಿದ್ದಿರಲಿಲ್ಲ. ಗಡಿಗೆ ಹಿಡಿದು ಬಾವಿ ಕಡೆ ಹೊರಟಾಗ, ಕಾಲು ನಡುಗು ವುದಕ್ಕೆ ಮೊದಲಾಯಿತು. ಎಲ್ಲಿಲ್ಲದ ಆಯಾಸ, ಏನೇ ಕಷ್ಟ ಆಗಲಿ ಗಿಡಗಳನ್ನ ಉಳಿಸಿಕೊಳ್ಳಬೇಕು, ಎನ್ನುವ ನಿರ್ಧಾರದಿಂದ ಸ್ವಲ್ಪ ಚೈತನ್ಯ ಬಂದಂತಾಯಿತು. ಕಷ್ಟ ಪಟ್ಟುಕೊಂಡು ಬಾವಿಯಲ್ಲಿಳಿದ. ನೀರಿನಜೊತೆಗೆ ಕೆಸರು ತುಂಬಿಕೊಳ್ಳುತ್ತಿತ್ತು. ಒಂದು ಚೂಪಾದ ಕಲ್ಲನ್ನು ತೆಗೆದು, ಕೆಸರನ್ನು ಓರೆಮಾಡಿ ಹೇಗೋ ನೀರನ್ನು ತುಂಬಿ ಸಿದ್ದಾಯಿತು. ಚಿಕ್ಕವನಿದ್ದಾಗ ಮರದ ಮೇಲಿನಿಂದ ಬಿದ್ದು ಎಡಗೈ ಸ್ವಲ್ಪ ಸೊಟ್ಟಾಗಿತ್ತು. ತುಂಬಿದ ಕೊಡ ವನ್ನು ಒಂಟಿ ಕೈಲಿ ಎತ್ತಿತರುವುದೆಂದರೆ, ಭಗೀರಥನ ಪ್ರಯತ್ನವೇ ಆಗಿತ್ತು ಅವನ ಪಾಲಿಗೆ.

ಗಿಡಗಳ ಬಳಿ ಬಂದಾಗ ಗೆದ್ದೆನೆಂಬ ಸಂತೋಷದಿಂದ ಆಯಾಸವೆಲ್ಲಾ ಒಮ್ಮೆಲೇ ಪರಿಹಾರವಾದಂತಾಯಿತು. ಎರಡನೇ ಸಾರ ಕೊಡವನ್ನು ತುಂಬಿ ತರುವ ಹೊತ್ತಿಗೆ, ಅವನ ಶಕ್ತಿಯೆಲ್ಲಾ ಉಡುಗಿ ಹೋಗಿ ಅಲ್ಲಿಯೇ ಕುಸಿದು ಕುಳಿತು ಬಿಟ್ಟ. ಆಯಾಸ ಹಾಗೂ ಹೊಟ್ಟೆ ಹಸಿವಿನಿಂದ ಅವನ ಜೀವ ಹಿಂಡಿ ಹೋಗುತ್ತಿತ್ತು. ಈ ಹೊತ್ತಿನಲ್ಲಿ ಕರಿಯನಾದ್ರು ಇದ್ದಿದ್ದರೆ! ಎಂದುಕೊಳ್ಳತೊಡಗಿದ. ಸ್ವಲ್ಪ ಹೊತ್ತಿನಲ್ಲೇ ಕರಿಯ ಬಂದ. ಬಂದವನೆ,

"ಏನು ಹಂಗೆ ಕುಂತಿ? ಇನ್ನೂ ಗಿಡಗಳ ಆಸೆ ಇಟ್ಕೊಂಡಿದ್ದೀಯಾ? ನಿನಗೆಲ್ಲೋ ಮರಳು. ನಮ್ಮ ಜೀವಾನೆ ಉಳಿಯೋ ಹಂಗಿಲ್ಲ ಈ ಬರಗಾಲ್ದಾಗೆ, ಇನ್ನು ಗಿಡಗಳು ಉಳಿದಾವಾ "? ಎನ್ನುತ್ತಾ ಅಜ್ಜಯ್ಯನನ್ನು ಕೈಹಿಡಿದು ಎಬ್ಬಿಸಿಕೊಂಡು ಬಂದ.

ಗುಡಿಸಲ ಹತ್ತಿರ ಬರುತ್ತಿದ್ದಂತೆ ಅವನು

"ಮೂರು ದಿನಗಳಿಂದ ಏನೂ ಉಂಡಿಲ್ಲ ಹೌದಾ" ಎನ್ನುತ್ತಾ ತಾನು ತಂದಿದ್ದ ಗಂಟನ್ನು ಬಿಚ್ಚಿದ. ಹಿಟ್ಟು .. ಉಪ್ಪು .. ಮೆಣಸಿನಕಾಯಿ .. ಕ ಡ ಲೆ ಪು ರಿ ಇತ್ತು. ಅಜ್ಜಯ್ಯ ಆಸೆ ತುಂಬಿದ ಕಣ್ಣುಗಳಿಂದ ನೋಡುತ್ತಾ

"ಧಣೀರ ಮನೇಲಿ ಕೊಟ್ರಾ ?" ಎಂದ.

ಹುಡುಗನ ಮುಖ ನಿಸ್ತೇಜವಾಯಿತು. ಅವನು ತಲೆ ಅಲ್ಲಾಡಿಸುತ್ತಾ "ಅವತ್ತೇ ಹೇಳಿದ್ನಲ್ಲಾ ಧಣಿಗಳು ಕೆಲ್ಸಕ್ಕೆ ಬ್ಯಾಡಾಂದ್ರೂಂತ."

"ಮತ್ತೆ ಹೆಂಗೆ ಬಂತೊ ಮಗಾ ಇದೆಲ್ಲಾ! "

"ಮಣಕ ಇತ್ತಲ್ಲಾ ನಾಕು ರೂಪಾಯಿಗೆ ಮಾರಿ ಬಿಟ್ಟೆ ಅದನ್ನ"

"ಮಾರಿಬಿಟ್ಯಾ ! ನಾಕು ರೂಪಾಯಿಗೆ ! ಬುದ್ಧಿ ಗೆಟ್ಟವನೆ, ಮನಸು ಹೇಗೆ ಬಂತ್ಲಾ ಸಾಕಿದ ಮೂಕ ಪ್ರಾಣೀನ ಮಾರಾಕೆ"

"ಉಲ್ಲು ನೀರಿಲ್ಲದೆ ಅದು ಸಾಯೋದನ್ನ ನೋಡಾಕಾದೀತಾ, ಓಗಲಿ ಎಲ್ಲಾದ್ರೂ ಯಾರತ್ರಾದ್ರೂ ಬದುಕ್ಲಳ್ಳೀಂತ ಕೊಟ್ಟೆ"

ಮುದುಕ ಅಡಿಕೆ ಗಿಡಗಳ ಕಡೆಗೊಮ್ಮೆ ಗುಡಿ ಹನುಮಪ್ಪನ ಕಡೆಗೊಮ್ಮೆ ನೋಡಿ "ಎಲ್ಲಾ ಭಗವಂತನಾಟ" ಎಂದ.

ಕರಿಯು ಕಡ್ಡಿಪುಳ್ಳೆಗಳನ್ನಾರಿಸಿ ತಂದ. ಅಜ್ಜಯ್ಯ ರೊಟ್ಟಿ ತಟ್ಟಿದ. ಇಬ್ಬರೂ ಕೂಡಿ ರೊಟ್ಟಿ ಕಡಲೆ ಪುರಿಯನ್ನು ತಿಂದು ಮುಗಿಸಿದರು. ಹೊರಗೆ ಬರುವ ಹೊತ್ತಿಗೆ ಮೋಡಗಳು ದಬ್ಬೈಸತೊಡಗಿದ್ದವು. ಒಂದು ಕ್ಷಣದಲ್ಲೇ ಸುತ್ತಲೂ ಕತ್ತಲು ಮುಸುಕಿ ಮುಗಿಲುಗಳು ಘರ್ಜಿಸತೊಡಗಿದವು. ಕೋಲ್ಮಿಂಚು ಹೊಳೆದು ಮುದುಕ ಹುಡುಗರಿಬ್ಬರ ಮುಖಗಳನ್ನು ಬೆಳಗಿಸಿತು.

ದೇವರು ದೊಡ್ಡವನು ಕಣ್ಣುಬಿಟ್ಟ. ಗಿಡಗಳ್ನ ಉಳಿಸಿದ. ಗಂಭೀರನಾಗಿ ತನ್ನಷ್ಟಕ್ಕೇ ಎನ್ನುವಂತೆ ಮಾತಾಡಿಕೊಂಡ ಅಜ್ಜಯ್ಯ.

"ಬದುಕಿಕೊಂಡೆ ಅಜ್ಜಯ್ಯಾ.... ಇನ್ನೇನು ಮಳೆ ಹುಯ್ತದೆ. ಬಾ ಗುಡ್ಲಾಗೆ ಓಗಾನ" ಎಂದು ಕರಿಯು ಅಂದಾಗ,

"ಥತ್.... ಓಗ್ಲಾ ... ಮೊದಲ ಮಳ್ಯಾಗೆ ನೆನೆಯೋದು ಬಿಟ್ಟು ಗುಡ್ಲಾಗೆ ಹೊಕ್ಕೋಬೇಕಂತೆ" ಎಂದವನೇ ಅಜ್ಜಯ್ಯ ದಾಪುಗಾಲು ಹಾಕಿಕೊಂಡು ಅಡಿಕೆ ಗಿಡಗಳ ಕಡೆ ನಡೆದ. ಕರಿಯು ಮೋಡಗಳ ಆರ್ಭಟಕ್ಕೆ ಹೆದರಿ ಗುಡಿಯ ಮೋಟುಗೋಡೆಗೊರಗಿಕೊಂಡು ಕುಳಿತ. ಸ್ವಲ್ಪ ಹೊತ್ತಿನಲ್ಲೇ ಭರರ .. ರ್-ರ್-ರ್ ಎಂದು ಜೋರಾಗಿ ಗಾಳಿ ಬೀಸಲು ಮೊದಲಾಯಿತು. ಒಂದೇ ಸಮನೆ ರಚ್ಚೆ ಹಿಡಿದ ಮಗು, ಇದ್ದಕ್ಕಿದ್ದಂತೆ ಸುಮ್ಮನಾಗಿ ಬಿಡುವಂತೆ. ಗುಡುಗಿನ ಸದ್ದಡಗಿ ಮಿಂಚು ಮಾಯವಾಗಿ ಆಕಾಶ ಬೆಳ್ಳಗಾಯಿತು.

ಅಜ್ಜಯ್ಯನ ಆಶೆ ಬಯಲಾಗಿ, ನಿರಾಶೆಯ ನೋಟ ಮೇಲೆ ಹರಿಯಿತು. ಒಂದೊಂದು ಗಿಡವನ್ನೂ ಮುಟ್ಟಿ ಮುಟ್ಟಿ ಕಣ್ಣೀರಿಟ್ಟ. ಕರಿಯು ಮೆಲ್ಲಗೆ ಅತ್ತ ಸಾಗಿ ಬಂದಾಗ

"ಹನುಮಪ್ಪನಿಗೆ ದಯೆಯಿಲ್ಲ ಮಗಾ" ಎಂದ ಗುಡಿಯ ಕಡೆ ನೋಡುತ್ತಾ

"ಚಿಂತೆ ಯಾಕೆ ಮಾಡ್ತೀಯಾ ಬಿಡು. ಇಷ್ಟ್ರಾಗೆ ಮಳೆ ಬಂದ್ರೂ ಬ ಂ ದೀ ತು, ನಾನಿನ್ನ ಹಟ್ಟೀ ಕಡೆ ಹೋಗ್ತೀನಿ" ಎಂದು ಹೇಳಿ ಕರಿಯು ಹೊರಟು ನಿಂತ. ಅಜ್ಜಯ್ಯ ಮರುದಿನ ಮುಂಜಾನೆ ಸ್ವಲ್ಪ ಬೇಗನೆ ಎದ್ದು ಗಡಿಗೆ ಹಿಡಿದು ಬಾವಿಗಿಳಿದ. ತೆಂಗಿನ ಚಿಪ್ಪನ್ನು ತೆಗೆದುಕೊಂಡು ಹೋಗಿದ್ದುದರಿಂದ, ನೀರು ತುಂಬುವುದು ಅಷ್ಟು ಕಷ್ಟವಾಗಲಿಲ್ಲ. ನಿನ್ನೆ ದಿನ ಹೊಟ್ಟೆ ತುಂಬಾ ತಿಂದಿದ್ದುದರಿಂದ ಸ್ವಲ್ಪ ನೆಮ್ಮದಿಯೆನಿಸಿತ್ತು.

ಇವತ್ತು ಆಯಾಸಾನೆ ಕಾಣಿಸದು. ಎಡಗೈ ಚೆಂದಾಗಿದ್ದಿದ್ರೆ, ಎರಡು ಕೈನಲ್ಲೂ ಕೊಡ ಹಿಡಿದು, ಸರಸರನೆ ಮೆಟ್ಟಲು ಹತ್ತಿಬಿಡ್ತಿದ್ದೆ. ಎಂದುಕೊಳ್ಳುತ್ತಾ ಡೊಂಕಾದ ತನ್ನ ಎಡಗೈ ಕಡೆ ನೋಡಿಕೊಂಡ. ಬಿರಬಿರನೆ ಹತ್ತೋ

ವಾಗ ಕಲ್ಲೊಂದಕ್ಕೆ ತಗುಲಿ, ಗಡಿಗೆ ಒಡೆದು ನೀರೆಲ್ಲಾ ಚೆಲ್ಲಿ ಹೋಗಿಬಿಡಬೇಕೆ !

ಅಯ್ಯೋ ... ... ಹೋಯ್ತಲ್ಲಾ ಎಂದು ಮುದುಕ ಚೀರಿದಾಗ, ನಿಶ್ಚಲವಾದ ವಾತಾವರಣ, ಅವನ ಕೂಗನ್ನು ಮಾರ್ದನಿಸಿತು. ಒಡೆದು ಹರಡಿಕೊಂಡಿದ್ದ ಮಡಕೆ ಚೂರುಗಳನ್ನು ಹಿಡಿದು, ಸಣ್ಣಮಗುವಿನಂತೆ ಬಿಕ್ಕಳಿಸಿದ ಅಜ್ಜಯ್ಯ.

ಗಡಿಗೆ ಹೋಯ್ತು. ನಿಮಗೆ ಹೆಂಗೆ ನೀರುಣಿಸಲೋ ಮಕ್ಕಳ್ರಾ ಎಂದು ಅಡಿಕೆಗಿಡಗಳ ಮುಂದೆ ಕುಳಿತು ಒದ್ದಾಡತೊಡಗಿದ ಗಡಿಗೆಗೆ ಏನ್ಮಾಡಲಿ ಅನ್ನೋ ಯೋಚನೆಯಲ್ಲಿರುವಾಗಲೇ ಕರಿಯ ಬಂದ. ಅವನ ಮುಖ ಸುಟ್ಟ ಬದನೆಕಾಯಿಯಾಗಿ, ಹೊಟ್ಟೆ ಬೆನ್ನಿಗೆ ಅಂಟಿಕೊಂಡು ಹೋಗಿತ್ತು.

ಅವನಿಗಾಗಿ ಮಮ್ಮಲ ಮರುಗುತ್ತಾ ಅಜ್ಜಯ್ಯ ಹೇಳಿದ.

"ಇಲ್ಲಿ ಉಂಡ್ಕೊಡಿದ್ದಪ್ಪೇನಾ ಮಗಾ....ನಿನ್ನ ಮುಕ ನೋಡೋಕಾಗಾಕಿಲ್ಲ, ಮಲಸೀಮೆ ಕಡೆ ಎಲ್ಲಾದ್ರೂ ಒಂಟೋಗೋದೋ

"ನೀನು ಬರೋಹಂಗಿದ್ರೆ ಆ ಮಾತು. ಮಂಗಳೂರು ತಾವ ಸರ್ಕಾರದೋರು ಗಂಜಿಕೊಟ್ಟಾರಂತೆ ಇಲ್ಲಿ ಹಸ್ಕಂಡಿದ್ದು ಏನುಮಾಡ್ತೀ ನಡಿ ಹೋಗಾನ" ಕರಿಯ ಉತ್ಸುಕತೆ ತೋರಿಸಿದ.

ಮೈ ಮುರಿದು ದುಡಿದು ತಿಂದ ಜೀವ....ಬಿಕ್ಸೆಗೆ ಕೈ ಒಡ್ಡೋದು ಹೆಂಗೋ ಮಗಾ" ಹೀಗನ್ನುವಾಗ ಆವೇಶದಿಂದ ಅಜ್ಜಯ್ಯನ ಮುದಿ ಮೈ ನಡುಗ ತೊಡಗಿತು.

"ಇಲ್ಲೇ ಬಿದ್ಕಂಡು ಜೀವಬಿಡಬೇಕೂಂತ ಇದೀಯೇನು ಹಂಗಾರೆ? ಸಕ್ತಿ ಇರೋ ತನಕ ದುಡಿದೆ, ಈಗ್ಲೂ ಹಂಗೇ ದುಡಿಯೋಕಾಗ್ತದಾ" ಹೀಗಂದ ಕರಿಯ ಒಂದೆರಡು ಗಳಿಗೆ ತಡೆದ. ಮತ್ತೆ ಏನನ್ನೋ ನೆನೆಸಿಕೊಂಡವನಂತೆ ಹೇಳತೊಡಗಿದ,

"ಹಂಗಾದ್ರೆ ಹಿಂಗೆ ಮಾಡಾನ. ರಸ್ತೆ ಕೆಲಸ ಸುರುವಾಗ್ತದಂತೆ ಹತ್ತು ಮೈಲಿಯಾಚೆ, ನನ್ನ ಜತೇಲಿ ಬಾ ... ನೀನು ನೆಳ್ಳಾಗೆ ಬಿದ್ಕಂಡಿರು. ನಾನು ದುಡ್ಕಂಡು ಬರ್ತೀನಿ. ಇಬ್ಬರ ಹೊಟ್ಟೇಗೂ ಚಿಂತೆಯಿಲ್ಲ ಏನಂತಿ?

"ಊ....ಹೂಂ...." ತಲೆ ಕೊಡವಿದ ಅಜ್ಜಯ್ಯ ಮತ್ತೆ ಅಡಿಕೆ ಗಿಡಗಳ ಕಡೆ ನೋಡುತ್ತಾ

"ಈ ಗಿಡಗಳನ್ನು ತಬ್ಬಲಿ ಮಾಡಿ ಬರ್ಬೇಕೇನೋ ಮಗಾ...ಜೀವ ಇರೋಗಂಟಾ ಬೊಗಸೇಲಿ ನೀರು ತಂದು ಇವುಗಳ್ನ ದಕ್ಕಿಸ್ಕಂತೀನಿ ಹೊರತಾಗಿ ಬರಲ್ಲ. ನೀನು ಹೋಗು. ರಸ್ತೆ ಕೆಲ್ಸ ಮಾಡಿ, ನನಗೊಂದು ಮಣ್ಣಿನ ಗಡಿಗೆ ತಂದ್ಕೊಡು ಸಾಕು"

"ಹಂಗಾದ್ರೆ ನೀನು ಬರೋಕಿಲ್ಲವಾ.... !" ಕರಿಯ ನಿರಾಸೆಗೊಂಡ. ಅಜ್ಜಯ್ಯ ಏನೂ ಹೇಳಲಿಲ್ಲ. ಅಡಿಕೆ ಗಿಡಗಳ ಕಡೆಗೊಮ್ಮೆ, ಹನುಮಪ್ಪನ ಕಡೆಗೊಮ್ಮೆ ನೋಡುತ್ತಾ ಕುಳಿತ. ಅವನು ಇತ್ತ ತಿರುಗುವ ಹೊತ್ತಿಗೆ ಕರಿಯನಾಗಲೇ ಹೊಲದ ಬದುವನ್ನು ದಾಟಿ, ಬಹಳ ದೂರ ಹೋಗಿದ್ದ. ಕರಿಯಾ .. ಎಂದು ಕೂಗಬೇಕೆಂದುಕೊಂಡ. ಆದರೆ ಮಾತು ನಾಲಿಗೆಯ ತುದಿಯಲ್ಲೇ ಉಳಿಯಿತು.

ಗಡಿಗೆಯ ಚಿಂತೆ ಮತ್ತೆ ಹೊಕ್ಕಿತು, ಜೊತೆಗೆ ಹಸಿವಿನ ಸಂಕಟ ಬೇರೆ! ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ವಿಲವಿಲನೆ ಒದ್ದಾಡಿದ ಅಜ್ಜಯ್ಯ. ಹಾಗೇ ಕಾಲೆಳೆದುಕೊಂಡು ಬಾವಿಯ ಕಡೆ ಹೆಜ್ಜೆ ಹಾಕತೊಡಗಿದ. ಮೇಲೆ ಮೇಲೆ ಸುಡುವ ಬಿಸಿಲು... ಕೆಳಗೆ ಕಾದ ನೆಲ, ಗಿಡಗಳನ್ನು ಹೇಗಾದರೂ ಮಾಡಿ ಉಳಿಸಿಕೊಳ್ಳಬೇಕು ಎನ್ನುವ ಆಶೆ, ಅವನನ್ನು ಬಾವಿ ಗಡ್ಡೆಯ ಮೇಲೆ ತಂದು ನಿಲ್ಲಿಸಿತು. ಅಲ್ಲಿಗೆ ಬಂದಮೇಲೆ, ಕೊಡವಿಲ್ಲದೆ ಯಾಕಾದರೂ ಬಂದೆನೋ ಎಂದುಕೊಳ್ಳುವಂತಾಗಿ, ಸುತ್ತಲೂ ಅಸಹಾಯಕ ನೋಟವನ್ನು ಬೀರಿದ. ಅಲ್ಲೇ ಇದ್ದ ಕಲ್ಲಿನ ರಾಶಿಯ ಬಳಿ ಬಂದು ಹಳೆಯ ಡಬ್ಬ ಬಿದ್ದಿರುವುದನ್ನು ನೋಡಿದಾಗ, ಹೋದ ಜೀವ ಬಂದಂತಾಯಿತು. ಒಂದೇ ಉಸಿರಿಗೆ ಆ ಕಡೆ ನುಗ್ಗಿ ಡಬ್ಬಿಯನ್ನೆತ್ತಿಕೊಂಡ, ಹನುಮಪ್ಪ ದೊಡ್ಡವನು ಕೈ ಬಿಡ್ಲಿಲ್ಲ. ಎಂದುಕೊಳ್ಳುತ್ತಾ, ಗುಡಿಯಕಡೆ ಮುಖ ಮಾಡಿ ಕೈ ಜೋಡಿಸಿದ. ಈಗ ಕಾಲಿಗೆ ಎಲ್ಲಿಲ್ಲದ ಶಕ್ತಿ ಬಂದಂತಾಗಿತ್ತು. ದಡದಡನೆ ಮೆಟ್ಟಲಿಳಿದು ಹೋದ....ಕೆಳಗೆ ನೋಡಿದಾಗ ಅವನ ಎದೆ ಝುಲ್ ಎಂಡಿತು. ನೀರಿನ ಹೆಸರೇ ಇಲ್ಲ! ಈ ಮೂರು ದಿನಗಳಲ್ಲಿ ಪೂರ್ತಿಯಾಗಿ ಒಣಗಿ ಹೋಗಿ, ಕೆಸರೆಲ್ಲಾ ಬಿರುಕು ಬಿಟ್ಟುಕೊಂಡಿತ್ತು.

"ದೇವ್ರೇ....ಹನುಮಪ್ಪಾ ಹಿಂಗ್ಯಾಕೆ ಮೊಡಿದೆ !" ಆವನ ಎದೆಯಾಳದಿಂದ ನೋವಿನ ದನಿಯೊಂದು ಹೊರ ಬಂತು. ಕೈಗಳಿಂದ ಒಣ ಮಣ್ಣನ್ನೇ ಒಗೆಯುತ್ತಾ ಹೋದ. ಎಷ್ಟು ಅಗೆದರೂ ಒಂದು ಹನಿ ನೀರಿಲ್ಲ ! ಆ ಒಣ ಹುಡಿಯನ್ನೇ ತುಂಬಿಕೊಂಡು, ಹುಚ್ಚನಂತೆ ಅಡಿಕೆ ಗಿಡಗಳ ಕಡೆ ಓಡಿದ. ಡಬ್ಬಿಯಲ್ಲಿ ತುಂಬಿ ತಂದಿದ್ದ ಮಣ್ಣನ್ನು, ಒಂದೊಂದು ಗಿಡದ ಬುಡಕ್ಕೂ ಹಾಕುತ್ತಾ ಹೋದ. ಕೊನೇ ಗಿಡಕ್ಕೆ ಹಾಕಿದಮೇಲೆ "ಕಂದಾ....ನಿನ್ನ ಹೆಂಗೆ ಸಾಕಲಿ ಎಂದು ಬುಡವನ್ನು ತಬ್ಬಿಕೊಳ್ಳುತ್ತಿದ್ದಂತೆ, ಒಣಗಿದ ಗಿಡ ಹಾಗೇ ಅವನಮೇಲೆ ವಾಲಿತು. "ಗು....ಡಿ....ಹ....ನು....ಮಪ್ಪಾ ಕೈ ಬಿಟ್ಟೆಯಾ !" ಎಂದೊರಲಿದ. ಅಡಿಕೆ ಗಿಡಗಳ ನೆಳಲಿನಾಸರೆಯ ಆಶೆ ಹುಸಿಯಾಗಿ ಹುಡಿಯಲ್ಲಿ ಹುದುಗಿತ್ತು. ಇದರಿಂದ ತನ್ನ ಜೀವದಾಶೆಯೂ ಹಿಂಗಿ ಹೋಯಿತು. ಬಳಲಿದ ಒಡಲು ನೆಲದಮೇಲೆ ಹೊರಳಿತು. ಭರ್....ರ..ರ್....ರ್ ಬೀಸಿ ಬಂದ ಗಾಳಿಯಲ್ಲಿ ಹಾರಿ ಬಂದ ತರಗೆಲೆಯ ರಾಶಿ ಅಜ್ಜಯ್ಯನ ಒಡಲನ್ನು ತನ್ನ ಮಡಿಲಲ್ಲಿ ಹುದುಗಿಸಿ ಕೊಂಡಿತು.

---



ಬಹು ದಿನಗಳಿಂದ
ಬೀಗ ಜಡಿದ ಮನೆಗೆ
ಯಾರೋ ಬಂದಂತಿದೆ.

ಬಾಗಿಲು ಕಿಟಕಿ ಇನ್ನೂ ತೆರೆದಿಲ್ಲ
ಒಳಗಿರುವವರು ಯಾರೆಂದು
ತಿಳಿವ ಬಯಕೆ ಬಲವಾದಾಗ
ಮನೆಗಂಟಿ ಕೂತೆ.

ಕ್ರಿಕೆಟ್ ಆಟ ಮರೆತೆ
ಸಂಜೆ ಸುಭಾಸ ಚೌಕಿನಲ್ಲಿ
ಗೆಳೆಯನೊಡನೆ ತಿರುಗಿ
ಬಣ್ಣದ ಚಿಟ್ಟೆಗಳಲ್ಲಿ
ಕೆಲವರನ್ನ ಮಾತಾಡಿಸಿ
ಕೆಲವರಿಗೆ ಕೈಬೀಸಿ
ಮತ್ತೆ ಹಲವರಿಗೆ
ಮುಗುಳನಗೆಯ ನೋಟ
ಬೀರಬೇಕೆಂದಿದ್ದೆ.

ಆದರೂ ಈಗ ಈ ಮನೆಗೆ
ಬಂದವರು ಯಾರು ?
ಎಂಬ ಕುತೂಹಲ.

ಗಂಡೋ, ಹೆಣ್ಣೋ,
ಪ್ರಾಯದ್ದೋ, ಪ್ರಾಯ ಸಂದದ್ದೋ
ಯಾರೋ ತಿಳಿದಿಲ್ಲ.

ಬೆಳಗಿಂದ ಸಂಜೆವರೆಗೆ
ರೂಮಲ್ಲೆ ಹತ್ತಾರು ಬಾರಿ
ಶತಪಥ ತಿರುಗಿ ಕಾದೆ
ಕನ್ನಡಿ ಎದುರು ನಿಂತು
ಮೀಸೆ ಹುರಿ ಮಾಡಿ
ನನ್ನಲ್ಲೆ ಮುಸಿ ಮುಸಿ
ನಕ್ಕೆ—

ಈ ನಿರ್ಜನ ಸ್ಥಳಕ್ಕೆ
ಬಂಬಾರದೆ ಒಂದು
ಚೆಲುವಿನ
ಹರೆಯದ
ಹೆಣ್ಣು !

ಈಗ ಮಾತಾಡದಿದ್ದರೂ
ಇನ್ನೆರಡು ದಿನಕ್ಕೆ
ತನ್ನನ್ನ ನೋಡಿಯಾಳು
ಮಂದಹಾಸ ಬೀರಿಯಾಳು
ಯಾವುದಿಲ್ಲದಿದ್ದರೂ ಸರಿ
ದರ್ಶನ ಭಾಗ್ಯವಾದರೂ
ದೊರೆತೀತು
ಎಂದು ಹಿಗ್ಗಿದೆ.

ಕೊನೆಗೊಮ್ಮೆ ಬಾಗಿಲು ತೆರೆದಾಗ
ಕಿಟಕಿಯಿಂದಲೇ ಕಣ್ಣರಳಿಸಿದೆ
ಮತ್ತೆ ಹಾಗೇ ಕಣ್ಮುಚ್ಚಿದೆ.

ಅಚ್ಚ ಕರಿ ಬಣ್ಣ
ಉಬ್ಬು ಹಲ್ಲು
ಬೋಳೆ ಕಣ್ಣು
ಬೊಜ್ಜು ದೇಹ

ಆದರೂ ಹೆಣ್ಣು ಹರೆಯದೆ !

—ರಂಜೂ

ಲಘು ಬರಹ

# ಅತಿಥಿ ದೇವೋ ಭವ

—ಟಿ. ಶಾಂತಿ.

"ಬನ್ನಿ ಬನ್ನಿ. ಬಹಳ ಅಪರೂಪವಾಗಿ ಬಂದ್ಬಿಟ್ರಲ್ಲಾ..? ಏನೀಕಡೆ ಬಂದದ್ದು?" ಆಟೋರಿಕ್ಷಾದಿಂದ ಇಳಿದ ದಂಪತಿಗಳನ್ನು ಸ್ವಾಗತಿಸುತ್ತಲೇ ಪಲುಕಿದಳು ಗುಂಡಮ್ಮ.

"ಯಾರೆ ಅದೂ....? ಅದೂ ಆಟೋರಿಕ್ಷಾದಲ್ಲಿ ಬರೋ ಸಾಹುಕಾರರು."

—ಸುಬ್ಬಣ್ಣ ಕನ್ನಡಕವನ್ನು ಮೂಗಿನ ತುದಿಗೆ ಜಾರಿಸಿ, ಮೇಲ್ಗಣ್ಣಿನಿಂದ ನೋಡುತ್ತಾ ಹೆಂಡತಿಯನ್ನು ಕೇಳಿದ. ತಿಂಗಳ ಕೊನೆಯಲ್ಲಿ ಅತಿಥಿಗಳು ಬಂದರೆ ಇನ್ನು ಹೇಗಿರುತ್ತೆ?

"ನಿಮ್ಮ ಸ್ನೇಹಿತರು ಸೀತಾಪತಿಯವರು ತಮ್ಮ ಪತ್ನೀ ಸಮೇತ ದಯಮಾಡಿಸಿದ್ದಾರೆ ಎದ್ದು ಬಂದು ಅವರನ್ನು ಒಳಕ್ಕೇ ಕರೀರೀ ಅಂದ್ರೇ.."

—ಗೊಗ್ಗರು ಧ್ವನಿಯಲ್ಲಿ, ಮೆಲ್ಲಗೆ ಹೇಳಿದಳು ಗುಂಡಮ್ಮ.

"ಹುಂ ಇವರು ಬರಲಿಲ್ಲಾಂತ ಯಾರು ಅತ್ರು ಹೇಳು.. ಎಲ್ಲಾ ನನ್ ಕರ್ಮ.. ಹುಂ....ಕಷ್ಟ ಬಂದ್ರೆ ಹೇಳಿಕೇಳಿ ಬರತ್ತ್ಯೇ... ನಡಿ"

–ಎಂದು ಬೇಸರದಿಂದ ಹೇಳುತ್ತಲೇ ಹೂರಕ್ಕೆ ತಲೆ ಹಾಕಿದ

"ಓಹೋಹೋ.. ಏನೀ ಕಡೆ ಗಾಳಿ ಬೀಸಿದ್ಹಾಗೆ ಇದೆಯಲ್ಲಾ ಸಂಸಾರ ಸಮೇತ ದಯಮಾಡಿಸ್ಬಿಟ್ರಿ? ಏನೋ ವಿಷೇಶ ಇರಬೇಕು....ಇಲ್ದಿದ್ರೆ ನೀವು ಬರ್ತಿರಾ?"

—ವಿಶಾಲವಾಗಿ ಮೂವತ್ತೆರಡು ಹಲ್ಲುಗಳು ಹೊರಗೆ ಕಾಣಿಸುವಂತೆ ನಕ್ಕು ಹೇಳಿದ.

"ಹಾಗೇನಿಲ್ಲ ಸುಬ್ಬಣ್ಣೋರೆ ನಿಮ್ಮನ್ನ ನೋಡಿ, ಆಗ್ಲೇ ಎರಡುಮೂರು ವರ್ಷವಾಯ್ತು...ಈವತ್ತು ಸ್ವಲ್ಪ ಬಿಡುವಿತ್ತು ನಿಮ್ಮನ್ನೆಲ್ಲಾ ನೋಡ್ಕೊಂಡ್ಹೋಗೋಣಾಂತ ಈ ಕಡೆ ಬಂದೆ...ಮನೇಲೆಲ್ಲಾ ಆರೋಗ್ಯವೇ?

—ಎನ್ನುತ್ತಾ ಪತ್ನೀ ಸಮೇತ ಒಳಬಂದರು ಸೀತಾಪತಿ.

"ಕೂತ್ಕೋಳಿ ಬನ್ನಿ...."

–ಎಂದು ಚಾಪೆಯನ್ನು ಹಾಸಿದಳು ಗುಡಿ–ದಂಪತಿಗಳು ಲಕ್ಷಣವಾಗಿ ಕುಳಿತರು. ಬಾಗಿಲಿಗೊರಗಿ ನಿಂತಳು ಗುಂಡಮ್ಮ. ಸುಬ್ಬಣ್ಣ ಏನೋ ಕೆಲಸ ಇರುವವನಂತೆ ಹಳೆಯ ಪೇಪರುಗಳನ್ನೆಲ್ಲಾ ಬಿಚ್ಚಿ ನೋಡುತ್ತಾ ಕುಳಿತ.

"ಏನ್ ಗುಂಡಮ್ನೋರೆ, ಎಲ್ರೂ ಆರೋಗ್ಯಾನಾ....?"

—ಮಾತಿಗೆ ಪೀಠಿಕೆ ಹಾಕಿದರು ಸೀತಾಪತಿ ಹೆಂಡತಿ.

"ಹುಂ.. ಎಲ್ರೂ ಆರೋಗ್ಯ....ಹೋದ ತಿಂಗಳಿಂದ ಇವರಿಗೆ ತುಂಬ ಎದೆನೋವು ಬರ್ತಿದ್ದು, ಡಾಕ್ಟ್ರ ಹತ್ರ ಇನ್‌ಜಕ್ಷನ್ನು, ಔಷ್ಧಿ ತಗೋರಿದಾರೆ...."

"ಹಾಗೇನು? ಏನ್ ಸುಬ್ಬಣ್ಣೋರೇ ಸಮಾಚಾರ್ವೇ ಗೊತ್ತಿಲ್ವಲ್ಲಾ?"

—ತಮ್ಮ ಅನುತಾಪ ವ್ಯಕ್ತಪಡಿಸಿರು ಸೀತಾಪತಿ.

"ನನಗೆ ಈ ಎದೆನೋವು ಬರೋಕ್ ಮುಖ್ಯ ಕಾರಣಾಂದ್ರೆ ನಂ ತಾಯಿ ಪಾರ್ಶ್ವವಾಯು ಬಂದು ಮಲಗ್ಬಿಟ್ರು... ಅದಕ್ಕೆ ಓಡಾಡಿ ಹೀಗಾದೆ ನೋಡಿ"

—ಸುಬ್ಬಣ್ಣ ಕಾರಣವನ್ನು ತಿಳಿಸಿದರು.

"ಹುಂ ಇವರಿಗೆ ಎದೆನೋವು ಬಂದದ್ದರಿಂದ ನನ್ ದೊಡ್ಮಗ ರಾಮು ಓಡಾಡ್ತಿದ್ದ ಈಗೊಂದು ಇಪ್ಪತ್ತು ದಿನದಿಂದ ಅವನಿಗೆ ನ್ಯೂಮೋನಿಯಾ ತರಹ ಆಗಿ, ಆಸ್ಪತ್ರೇಲಿದಾನೆ"

"ಹೌದು... ಅವನ್ಗೆ ಊಟ-ಉಪಚಾರ ನೋಡ್ಕೊ ಳ್ಳೋಕೇಂತ ಅವನ್ ತಂಗಿ ಊರ್ವಿಳಾನೂ ಅಲ್ಲೆ ಇದ್ಲು ಅವಳಿಗೆ ಅಲ್ಲಿನ ವಾತಾವರಣ ಒಗ್ಗದೆ ಹದಿನೈದು ದಿನ ದಿಂದ ಟೈಫಾಯಡ್ ತರಹ ಆಗಿ ಅವಳ್ನ ಬೌರಿಂಗ್ ಆಸ್ಪತ್ರೆಗೆ ಸೇರ್ಸಿದೀನಿ "

"ಆ ಆಸ್ಪತ್ರೇಗೆ ಹೋಗ್ತಿರೋವಾಗ ನನ್ ಎರಡ್ನೇ ಮಗ ಬಾಲಾಜಿ ಸೈಕಲ್ ಹಾಕ್ಕೊಂಡು ಬಿದ್ಬಿಟ್ಟ ಅವನ್ ಸ್ನೆಕೈಯೆಲ್ಲಾ ತರ್ಸಿ, ಕೆ.ಸಿ.ಹಾಸ್ಪಿಟಲ್‌ಗೆ ಸೇರ್ಸಿ ದೀವಿ..."

"ಇವಳೂ ಎಲ್ಲಾ ಕಡೆ ಅಲೀತಾಳಾ ಚಿಕೋಳ್ನ ನೋಡೋವ್ರು ಇಲ್ದೆ, ಅವಳು ನೆಗಡಿ-ಜ್ವರ ಹಿಡಿದು ಮನೇಲೇ ಮಲಗಿದಾಳೆ. ಬಾಕಿ ಎಲ್ರೂ ಆರೋಗ್ಯ "

"ದೇವ್ರದಯದಿಂದ ಎಲ್ರೂ ಚೆನ್ನಾಗಿ ಆರೋಗ್ಯ ವಾಗೇ ಇದೀವಿ.. ನಿಮ್ಮನೇಲಿ ಎಲ್ರೂ ಆರೋಗ್ಯವೇ ? ಹೇಗಿದೀರಾ ?"

—ಮನೆಯಲ್ಲಿರುವ ಪ್ರತಿಯೊಬ್ಬ ಸದಸ್ಯರ ಆರೋ ಗ್ಯವನ್ನೂ ಗಂಡ-ಹೆಂಡತಿಯರು ವಿವರಿಸಿದ್ದು ಕೇಳಿ, ಬಂದ ಅತಿಥಿಗಳಿಗೆ ಏನು ಮಾಡುವುದೋ ತಿಳಿಯಲಿಲ್ಲ. ಅದರೂ ಗುಂಡಮ್ಮ ಕೇಳಿದ ಪ್ರಶ್ನೆಗೆ ತಲೆಯಾಡಿಸಿ ದರು.

"ಪಾಪ.. ಅವರು ಬಂದು ಕುಳಿತು ಎಷ್ಟೋ ತಾಯ್ತು....ಇನ್ನೂ ನಿಂತೇ ಇದೀಯಲ್ಲಾ ಹೋಗಿ ಒಳಗ್ ನೋಡ್ಬಾರ್ದೇ...."

—ಸುಬ್ಬಣ್ಣ ಹೆಂಡತಿಯ ಮೇಲೆ ರೇಗಿದ.

"ಅದೇನೂ ಬೇಡ ಬಿಡಿ ಸುಬ್ಬಣ್ಣೋರೆ ಮಾತಾ ಡ್ತಿರ್ಲಿ ಬಿಡಿ"

—ಸೀತಾಪತಿ, ದಾಕ್ಷಿಣ್ಯದಿಂದ ಹೇಳಿದರು.

"ಹಾಗಲ್ಲ ಸೀತಾಪತಿ, ನೀವ್ ಯಾಕ್ ನಂ ಮನೇಗ್ ಬರ್‍ತೀರಾ ಹೇಳಿ ? ಅಪರೂಪವಾಗಿ, ಮೂರು ವರ್ಷ ಕಳೆದು ಬಂದಿದೀರಾ ? ನಂ ಶಾಸ್ತ್ರ ಸಹ ಅತಿಥಿ ದೇವೋ ಭವಾಂತ ಹೇಳಿಲ್ವೇ ? ಮುಖ್ಯ ನಿಮ್ಮನ್ನ ನಾವು ಆದರಿಸಬೇಕಾದ್ದು"

"ಅಂತೂ ಗಂಡ-ಹೆಂಡತೀರು ನಮ್ಮನ್ನ ತೃಪ್ತಿ ಪಡಸ್ದೆ ಕಳಿಸೋದಿಲ್ಲಾಂದ್ರೇ "

—ನಗುತ್ತಲೇ ಹೇಳಿದಳು ಸೀತಾಪತಿಯ ಹೆಂಡತಿ. ಇಬ್ಬರೂ ತಲೆದೂಗಿದರು.

ಒಂದು ಲೋಟ ತುಂಬ ಹಬೆಯಾಡುತ್ತಿದ್ದ ಹಾರ್ಲಿಕ್ಸ್ ಹಿಡಿದು ಬಂದು, ಅದನ್ನು ಸುಬ್ಬಣ್ಣನ ಕೈಗೆ ಇಡುತ್ತಾ,

"ನೋಡಿ, ಟೈಂ ಆಗ್ತಿದೆ-ಡಾಕ್ಟ್ರು ಹೇಳಿರೋ ಸಮ ಯಕ್ಕೆ ಹಾರ್ಲಿಕ್ಸ್ ತಗೊಳ್ಳದಿದ್ರೆ ವೈ ಏಕಾದೀತು ... ತಗೋಳಿ ಆರೋಗತ್ತೆ ಬೇಗ ಕುಡದ್ಬಿಡಿ...."

—ಎಂದು ಗುಂಡಮ್ಮ ಗಂಡನನ್ನು ಎಚ್ಚರಿಸಿದಳು.

"ಆಯ್ತು ಅಂದ್ಹಾಗೇ ಇವರಿಗೆ ಬೋರ್ನ ವಿಟಾನೋ, ಓವಲ್ಟೀನೋ ಹಾಕ್ಕೊಡು ... "

"ಚೆನ್ನಾಯ್ತು .. ಅಲ್ಲಾ ಅವ್ರು ಮಡಿಹುಡೀಂತ ಇರೋವ್ರು . ಅವರಿಗ್ಹೋಗಿ ಓವಲ್ಟೀನು, ಬೋರ್ನವಿಟಾ ಹಾಕ್ಕೊಡೂಂತೀರಲ್ಲಾ ಕಾಪಿ ತರ್‍ತೀನಿ ಇರಿ "

"ಈ ಬೇಸ್ಗೇಲಿ ಕಾಪಿ ಕುಡಿದ್ರೆ ಉಷ್ಣ ಹೆಚ್ಚತ್ತೆ ... ಏನ್ಬೇಡ ಹಾಲ್ತಾ ..."

"ಹಾಲೂಂತ ಹೇಳ್ತೀರಲ್ಲಾ .. ಅಲ್ಲಾ ನಂ ಹಾಲ್ನೋನು ಬಿಳಿ ನೀರ್ನ ಹಾಲೂಂತ ಕೊಡ್ತಾನೆ.... ಅದೂ ಪೌಡರ್ ಹಾಲು ಅದನ್ನ ಅಪರೂಪವಾಗಿ ಬಂದಿರೋವರ್ಗೆ ಕೊಡೂಂತ ಹೇಳ್ತೀರಲ್ಲಾ ನಿಮಗೇ ನಾದ್ರೂ ಬುದ್ಧಿ ಇದೆಯೇಂದ್ರೇ... ? ಪಾನ್ಕ-ಗೀನ್ಕ, ಅಥವಾ ಕೋಲ್ಡ್ ಡ್ರಿಂಕ್ಸ್ ತರ್‍ತೀನಿ ಇರಿ –"

"ಲೇ ಗುಂಡೀ ನನಗುಪದೇಶ ಮಾಡ್ತೀಯಲ್ಲಾ.... ನಿನಗೇನಾದ್ರೂ ಬುದ್ಧಿ ಇದೆಯೇನೇ ? ಅಲ್ಲಾ ಸಂಜೆ ಹೊತ್ನಲ್ಲಿ ಅವ್ರು ಪುನಃ ಮನೇಗ್ ಹೋಗ್ಬೇಕು ... ಗಾಳೀಲಿ ಹೋಗೋವಾಗ ನಿನ್ ಕೋಲ್ಡ್ ಡ್ರಿಂಕ್ಸ್‌ನಿಂದ ನಿಜಕ್ಕೂ ಅವ್ರಿಗೆ ಕೋಲ್ಡಾಗಿ, ಟೈಫಾಯ್ಡೋ, ನ್ಯೂಮೋ ನಿಯಾನೋ ಬರಲೀಂತ ಆಸೇನೇನು ಮಾತಾಡ್ದೆ ಮಜ್ಗೆ ಕೊಡು "

"ರೀ ನೀವು ಓದಿರೋದು ದಂಡಕ್ಕೇರಿ ಅಲ್ರೀ ಪೌಡರ್ ಹಾಲ್ನಲ್ಲಿ ಮಜ್ಗೆ ಮಾಡದ್ರೆ ಅದೇನ್ ಕುಡಿಯೋಕ್ ಚೆನ್ನಾಗಿರತ್ತ್ಯೇ ? ಅವರದನ್ನ ಕುಡ್ದು, ಮನೆ ತಲುಪೋ ತನ್ಕ ವಾಂತಿ ಮಾಡ್ಕೊಳ್ಳೇಂತ ನೆನ್ಸೋದು ತುಂಬ ತಪ್ಪು ಅದೇನೂ ಬೇಡ....ಇಬ್ರಿಗೂ ಬಿಸಿ ಬಿಸಿಯಾಗಿ ಎರಡು ಲೋಟ ಬಿಸಿ ನೀರನ್ನ ತಂಪ್ಕೊಡ್ತಿನಿ ಮೈಗೂ ಆರೋಗ್ಯ "

"ಯಾಕೇ, ಬಿಸಿ ನೀರು ಕುಡಿದು ಬಾಯೆಲ್ಲಾ ಹುಣ್ಣು ಮಾಡ್ಕೋಳ್ಳೇಂತ ಪ್ಲಾನ್ ಮಾಡ್ತೀಯಾ....? ನೋಡು, ಕೊಡೋದಿದ್ರೆ, ತಣ್ಣಗಿರೋ, ಶುದ್ಧವಾಗಿರೋ ತಣ್ಣೀರ್ನ ಎರಡು ಲೋಟ ಕೊಡು... ತೃಪ್ತಿಯಾಗಿ ಕುಡೀಲಿ "

"ಅಲ್ರೀ ನಮ್ಮನೇಲಿ ನಲ್ಲಿ ಎಲ್ಲಿದೇಂತೀನಿ ? ಇರೋದು ಭಾವಿ. ಆ ನೀರೋ ಬಾಯಲ್ಹಾಕೋಕ್ಕಾಗದಷ್ಟು ಉಪ್ಪು ರಾಮ ರಾಮಾ ನೆನಸ್ಕೊಂಡ್ರೇನೇ ಬಾಯಾರ್ಕೆ ನಿಂತ್ಹೋಗತ್ತೆ ಪಕ್ಕದ್ಮನೇಲಿ ನಲ್ಲಿ ಇದ್ರೂ ನೀರೆಲ್ಲ ಹಿಡ್ಕೊಂಡು ಬರಬೇಕು...."

"ಹುಂ ಹೋಗ್ಲಿ ಬಿಡು ಪಾಪ, ನಿನ್ಜೊತೆ ಮಾತಾಡೋಕ್ಕೆ ಬಂದಿದಾರೆ....ಮಾತಾಡು."

–ಎಂದು ಹಾರ್ಲಿಕ್ಸನ್ನ ಗುಟಕರಿಸುತ್ತಾ ನುಡಿದ ಸುಬ್ಬಣ್ಣ.

"ಅಲ್ಲಾಂದ್ರೇ, ಅಪರೂಪಕ್ಕೆ ಬಂದಿರೋ ಅತಿಥಿಗಳು ಯಾವ್ದೂ ಬೇಡಾಂತ, ಒಂದನ್ನ ಹೇಳದ್ರೆ, ತಕ್ಷಣ ಅದಕ್ಕೀನ್ನೊಂದು ಹೇಳಿ ಏನು ಬೇಡಾಂತ ಹೇಳ್ಬಿಟ್ರಲ್ಲಾ....ಬಹಳ ಬೇಜಾರಾಗುತ್ತೆ ನಂಗೆ "

"ಹೌದಲ್ಲೇ ಮರ್ತೇಹೊಯ್ತು ನೋಡು ಸೀತಾಪತಿಯೋರೇ. ನೋಡಿ ನಾವು ನಿಮ್ಮನೇಗ್ ಬಂದು ತಿಂದು ಬರ್ತೀವಿ ಆದ್ರೆ ನೀವು ನೂರಾರು ನೆಪ ಹೇಳಿ, ನಾವು ಮಾಡ್ಬೇಕೂಂತಿದ್ದ ಆತಿಥ್ಯಾನ ತಪ್ಪಸ್ಕೊಂಡ್ಬಿಟ್ರಲ್ಲಾ ಅಂತೂ ನೀವು ಎಷ್ಟಾದ್ರೂ ಲಾಯರ್ರು ಲಾ ಪಾಯಿಂಟ್ ಹಾಕೀ ನಮ್ಮನ್ನ ಸೋಲಿಸಿಡ್ತೀರಿ ಹುಂ ...ನಿಮ್ಮನ್ನ ಬಲವಂತ ಮಾಡೋಕ್ಕೆ ನಾನ್ಯಾರು ಹೇಳಿ ?"

-ಎಂದು ಸುಬ್ಬಣ್ಣ ಖಾಲಿ ಲೋಟ ಕೆಳಗಿಡುತ್ತಾ ನುಡಿದ. ಅತಿಥಿ ಸತ್ಕಾರವನ್ನು ಪಡೆದ ಆ ದಂಪತಿಗಳು ಪೆಚ್ಚು ಮೋರೆಯಿಂದ ಒಬ್ಬರನ್ನೊಬ್ಬರು ನೋಡಿದರು.

"ಪಾಪ .... ಹೊತ್ತಾಯ್ತುಂತ ಕಾಣ್ಸತ್ತೆ ಗುಂಡೀ ಎಲಡಿಕೆ ಕೊಡೇ "

—ಸುಬ್ಬಣ್ಣ ಹೆಂಡತಿಯತ್ತ ತಿರುಗಿ ಹೇಳಿದ.

"ಇನ್ನೊಂದು ಸ್ವಲ್ಪ ಹೊತ್ತಿದ್ದರೆ ಚೆನ್ನಾಗಿತ್ತು ಅವರು ಕುದುರೆ ಮೇಲೆ ಬಂದಿದಾರೆ ...ಹೋಗಬೇಕೂಂತ ಅವಸರ ಬೇರೆ ಮಾಡ್ತಿದಾರೆ ಹೋಗ್ತೇವೆಂತ ಹಟ ಹಿಡಿಯೋವರ್ನ ಬೇಡಾಂತ ತಡೆಯೋಕ್ಕೆ ನಮ್ಗ್ ಶಕ್ತಿಯಿಲ್ಲ... ಹಾಗಾದ್ರೆ ಹೋಗ್ಬಿಟ್ಟು ಬರ್ತಿರಾ ಸರಸಮ್ಮಾ .. ಇರಿ ಕುಂಕುಮ ಕೊಡ್ತೀನಿ "

"ಅಲ್ವೆ ಬರೀ ಕುಂಕುಮ ಕೊಡ್ತಿನೀಂತೀಯಲ್ಲಾ ಮತ್ತವರು ನಮ್ಮನೇಗ್ ಬರೋದು ಇನ್ನೈದಾರು ವರ್ಷ. ಎಲಡಿಕೆ ಕೊಟ್ಟು ಕಳ್ಸು "

"ಅಲ್ರೀ, ಅದಕ್ಕೇನು ಸವಕೋ ಬೇಕಾದ್ದು ? ಮನೇಲಿ ವಿಳ್ಳೇದೆಲೆ ದಂಡಿಯಾಗಿದೆ ಸುನ್ನೆ ಬಾಡ್ತಿರೋದ್ನ ಕೊಟ್ರೂ ಆಯ್ತು....ಆದ್ರೆ ನೀವು ಈ ದಿನ ತಂದಿರೋ ಬಾಳೇಹಣ್ಣು ಪಿಚಿಪಿಚೀಂತ ಇದೆ....ನನಗೇ ಕೈ ಇಡೋಕ್ಕೆ ಅಸಹ್ಯ ಇವ್ರು ಪಾಪ, ಅದನ್ನ ಹೇಗ್ ತಗೊಂಡ್ಹೋಗ್ತಾರೆ ಹೇಳಿ ?

"ಮೊನ್ನೆ ಆ ರೂಮ್ನಲ್ಲಿ ಏಳೆಂಟು ತೆಂಗಿನಕಾಯಿ ಇತ್ತಲ್ಲಾ ಅವನ್ನೇ ಕೊಡು."

"ಬಹಳ ಚೆನ್ನಾಗೇ ಹೇಳದ್ರಿ .. ಅಲ್ರೀ, ಮದುವೆ ಮನೆ ಕಾಯಿ ಚೆನ್ನಾಗಿರತ್ತೇಂತ ಯಾವ ಗ್ಯಾರಂಟಿ ? ಒಳಗ್ ಕೊಳತು ಹೋಗಿರ್ಲಿ–ಅದನ್ನ ಎಲೆ-ಅಡಿಕೆ ಕೊಟ್ಟು ಯಾವ ಪಾಪಕ್ಕೆ ಹೋಗ್ಲಿ ಹೇಳಿ....ಬೆಲ್ಲ ಕೊಡ್ಬೋದಾಗಿತ್ತು "

"ಅಯ್ಯೋ ಈ ಹೆಂಗಸ್ರ ಬುದ್ದೀಗೆ ಬಡ್ಕೋಬೇಕು ಅಲ್ಲ ಅಪಾಟೆ ಇರುವೆ ಮುತ್ತಿ, ಗೂಡು ಮಾಡ್ಕೊಂಡು ಕೂತಿವೆ. ಅದನ್ನ ತಗೊಂಡ್ ಹೋಗೋ ವೇಳೆಗೆ ಮೈ-ಕೈನೆಲ್ಲಾ ಕೆರ್ದು, ಊದಸ್ಕೊಂಡ್ ಹೋಗ್ಬೇಕು ನೋಡು, ನನ್ ಅಪರೂಪದ ಸ್ನೇಹಿತ್ರು ಸೀತಾಪತಿ, ಹಾಗೆ ಹೋಗೋದನ್ನ ನೋಡೋಕ್ಕೆ ನನ್ ಮನಸ್ಸೇ ಒಪ್ಪೋಲ್ಲ .."

"ಕಿತ್ಲೆಹಣ್ಣು ಕೊಡೋಣಾಂದ್ರೆ ಬರೀ ಹುಳಿ .. ಬಂದವರಿಗೆ ಹುಳಿ ಕೊಡೋದೇ ? ಸಕ್ರೆ ಕೊಡೋಣಾಂದ್ರೆ, ನಮ್ಮ ರೇಷನ್ ಅಂಗಡೀಲಿನ್ನಾ ಸಕ್ರೇನೇ ಬಂದಿಲ್ಲಾಂತ ಹೇಳ್ತಾನೆ .... ಸರಿ ಈಗ್ ಕುಂಕ್ಮ ಕೊಡ್ತೀನಿ ಸರಸಮ್ಮ. ಮತ್ತೊಂದ್ಸಾರಿ ತಪ್ಪದೆ ಬನ್ನಿ .. ಆಗ ಎಲೆಡಿಕೆ ಕೊಡ್ತೇನೆ ... ಸರೀನಾ .. ?"

"ಪಾಪ, ಗುಂಡಮ್ಮನ ಆ ಮಾತಿಗೆ ಸರಸಮ್ಮ "ಸರಿ" ಎನ್ನದೆ ಮನ್ತೇನು ಹೇಳಾರು ? ಬಂದ ಹದಿನೈದು ನಿಮಿಷದಲ್ಲೇ ಅತಿಥಿಗಳು ಹೊರಟರು. ಅವರನ್ನು ಬಾಗಿಲವರೆಗೆ ಬಿಡಲು ಬಂದಿದ್ದ ಸುಬ್ಬಣ್ಣ ದಂಪತಿಗಳು,

"ಹುಂ .. ಒಂದು ಹತ್ತು ನಿಮಿಷಾನೂ ಕೂತ್ಕೋಳ್ಲಿಲ್ಲಾ .... ಹೋಗ್ಲೀಂದ್ರೇ ನಮ್ಮನೇಲಿ ನೀರನ್ನೂ ಮುಟ್ಲಿಲ್ಲ ಕೊನೇಗ್ ಎ ಲ ಡಿ ಕೆ ಸಹ ತಗೊಳ್ದೆ ಹೋಗ್ತಿದೀರಾ....? ಅಪರೂಪಕ್ಕೆ ಈಗ್ ಬಂದ್ರಿ.... ಇನ್ನು ಐದಾರು ವರ್ಷ ಕಳೆದ ಮೇಲೆ ನಿಮ್ಮ ಭೇಟೀಂತಾನೂ ಹೇಳ್ಬಿಟ್ರಿ ...ನಿಮ್ಮಂತಹ ಸ್ನೇಹಿತರು ಬರ್ತಾರ್ರೇಂತ ನಾವು ಕಾಯ್ತಾನೇ ಇದೀವಿ.. ತುಂಬ ನಿರಾಶೆ ಮಾಡ್ಬಿಟ್ರಿ ನೀವು. ಹೋಗಿದ್ದನ್ನಿ, ದೇವ್ರು ಒಳ್ಳೇದು ಮಾಡ್ಲಿ....ಖ ಂ ಡಿ ತ ಇನ್ನೊಂದ್ಸಾರಿ ಆಟೋದಲ್ಲೇ ಬನ್ನಿ...."

–ಎಂದು ಹಾರ್ದಿಕವಾಗಿ ಬೀಳ್ಕೊಟ್ಟರು ಅತಿಥಿಗಳನ್ನು.

ಅಂತೂ ತಿಂಗಳ ಕೊನೆಯಲ್ಲಿ ತಾವೆಷ್ಟು ಆದರದಿಂದ ಅತಿಥಿ ಸತ್ಕಾರ ಮಾಡುತ್ತೇವೆಂದು ಎಷ್ಟು ಹೇಳಿಕೊಂಡರೂ ಸಾಲದು. ಅವರ ಆತಿಥ್ಯ ಪಡೆಯಲು ಒಮ್ಮೆ ನೀವೇಕೆ ಪ್ರಯತ್ನಿಸಬಾರದು ಹೇಳಿ ?

---

# ಸುಭಾಷಿತಗಳು ನೀಡುವ ಸಂದೇಶ

—ಗೀತಾ ದೇಸಾಯಿ

ಮನುಷ್ಯನ ಮೇಲೆ ಪ್ರಭಾವ ಬೀರುವ ಪುಸ್ತಕಗಳು ಆಯಾ ವ್ಯಕ್ತಿಯ ವಯಸ್ಸು ಹಾಗೂ ಮನೋಧರ್ಮ ವನ್ನವಲಂಬಿಸಿ ಬದಲಾಗುತ್ತ ಹೋಗುವುದು ಸಹಜ. ಬಾಲ್ಯದಲ್ಲಿ ಕಥೆ ಪುಸ್ತಕಗಳು ಪ್ರಿಯವಾಗಿದ್ದರೆ ವಿದ್ಯಾರ್ಥಿ ದೆಸೆಯಲ್ಲಿ ಮಹಾಪುರುಷರ ಜೀವನ ಚರಿತ್ರೆಗಳು, ಬಾಳಿನ ಆದರ್ಶಗಳನ್ನು ಎತ್ತಿ ಹಿಡಿಯುವ ಕಥೆ–ಕಾದಂಬರಿಗಳು ಪರಿಣಾಮ ಬೀರುತ್ತವೆ. ಯೌವನದಲ್ಲಿ ಕಾಲಿರಿಸಿದಾಗ ಪ್ರಣಯ-ಸಾಹಸಭರಿತ, ರೋಮಾಂಚಕಾರಿ ಕಥೆಗಳು ಮನಸೆಳೆದರೆ, ವಿವಾಹಿತರಾದಾಗ ಸಂಸಾರದ ವಿವಿಧ ಸಮಸ್ಯೆಗಳನ್ನು ಚಿತ್ರಿಸುವ ಪುಸ್ತಕಗಳು ಪ್ರಭಾವ ಬೀರುತ್ತವೆ. ಮುಂದೆ ಮೈ–ಮನಗಳೆರಡೂ ಪಕ್ವವಾದಾಗ ನಾವು ಆಧ್ಯಾತ್ಮದತ್ತ ವಾಲುತ್ತೇವೆ. ಆದರೆ ವ್ಯಕ್ತಿಯ ಈ ಎಲ್ಲ ಹಂತಗಳಲ್ಲೂ ಸಂಸ್ಕೃತದ ಸುಭಾಷಿತಗಳು ಪರಿಣಾಮ ಕಾರಿಯಾಗದಿರವು.

'ಕಿರಿದರಲ್ಲಿ ಪಿರಿದರ್ಥ'ವನ್ನು ಹೇಳುವ ಈ ಸುಭಾಷಿತಗಳು ಒಬ್ಬನೇ ಕವಿಯ ರಚನೆಯಲ್ಲ. ಅವುಗಳು ಪುರಾಣ, ನೀತಿಶಾಸ್ತ್ರ, ನಾಟಕ–ಮಹಾಕಾವ್ಯಗಳು, ಪಂಚತಂತ್ರ, ಹಿತೋಪದೇಶ ಮುಂತಾದ ಗ್ರಂಥಗಳಿಂದಾಯ್ದ ಬಿಡಿ ಶ್ಲೋಕಗಳು. ಈ ಶ್ಲೋಕಗಳು ಸುಲಭವಾದ ಭಾಷೆಯಲ್ಲಿ ನಮಗೆ ಜ್ಞಾನ ಮತ್ತು ಮನೋರಂಜನೆಯನ್ನೊದಗಿಸುವದರ ಜೊತೆಗೆ ನೀತಿ–ವ್ಯವಹಾರ ವನ್ನೂ ಬೋಧಿಸುತ್ತವೆ.

ವ್ಯಕ್ತಿತ್ವ ವಿಕಾಸದ ಮೊದಲ ಹಂತ ಆರಂಭವಾಗುವುದು ಶಿಕ್ಷಣದಿಂದ. ವಿದ್ಯೆಯನ್ನು ಗಳಿಸುವದು ಸುಲಭ ಸಾಧ್ಯವಲ್ಲ; ಅದಕ್ಕೆ ನಿರಂತರ ಪರಿಶ್ರಮ ಬೇಕು. ಸುಭಾಷಿತಕಾರನ ಮಾತಿನಲ್ಲೇ ಹೇಳುವದಾದರೆ,

**ಅಲಸಸ್ಯ ಕುತೋ ವಿದ್ಯಾ, ಅವಿದ್ಯಸ್ಯ, ಕುತೋ ಧನಂ**
**ಅಧನಸ್ಯ ಕುತೋ ಮಿತ್ರಂ, ಅಮಿತ್ರಸ್ಯ ಕುತಃ ಸುಖಮ್ ॥**

ಸೋಮಾರಿಯಾದವನಿಗೆ ವಿದ್ಯೆ ಎಲ್ಲಿಯದು ? ವಿದ್ಯೆಯಿಲ್ಲದವನಿಗೆ ಸಂಪತ್ತು ದೊರಕುವುದು ಹೇಗೆ ? ಹಣವಿಲ್ಲದಿದ್ದರೆ ಮಿತ್ರರೂ ಸಿಗುವುದಿಲ್ಲ. ಸ್ನೇಹಿತರಿಲ್ಲದೆ ಜೀವನದಲ್ಲಿ ಸುಖ ಸಿಗುವುದು ಸಾಧ್ಯವಿಲ್ಲ.

ನಮ್ಮ ಬದುಕಿನಲ್ಲಿ ವಿದ್ಯೆ, ಹಣ ಹಾಗೂ ಸ್ನೇಹಿತರು ಪ್ರಧಾನ ಪಾತ್ರ ವಹಿಸುತ್ತಾರೆಂಬುದನ್ನೂ, ಈ ಮೂರೂ ದೊರೆಯಬೇಕಾದರೆ ನಾವು ಆಲಸ್ಯತನ ತೊರೆಯಬೇಕೆಂದೂ ಸುಭಾಷಿತಕಾರ ತಿಳಿಯಾದ ಭಾಷೆಯಲ್ಲಿ ಹೇಳಿದ್ದಾನೆ.

ಸಮಾಜದಲ್ಲಿ ಪ್ರತಿಷ್ಠೆಯ ಸ್ಥಾನ ಲಭಿಸಬೇಕಾದರೆ ವಿದ್ಯೆಯೇ ಮೂಲ ಸಾಧನವಾದುದರಿಂದ ಅದರ ಮಹತಿಯನ್ನು ಸಾರುವ ಅಸಂಖ್ಯ ಸುಭಾಷಿತಗಳಿವೆ.

**ವಿದ್ವತ್ವಂ ಚ ನೃಪತ್ವಂ ಚ ನೈವ ತುಲ್ಯೇ ಕದಾಚನ ।**
**ಸ್ವದೇಶೇ ಪೂಜ್ಯತೆ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೆ ॥**

ಎಂಬ ಸುಭಾಷಿತ ರಾಜನಿಗಿಂತಲೂ ಉಚ್ಚತವಾದ ಪದವಿಯನ್ನು ವಿದ್ವಾಂಸನಿಗೆ ನೀಡಿದ್ದರೆ ಇನ್ನೊಂದು ಸುಭಾಷಿತ–ಸದ್ ವಿದ್ಯಾ ಯದಿ ಕಾ ಚಿಂತಾ ವರಾಕೋದರ ಪೂರಣೇ । ಶುಕೋಽಪ್ಯಶನಮಾಪ್ನೋತಿ ರಾಮ ರಾಮೇಲೆ ಬ್ರುವನ್ ॥ ಒಳ್ಳೆಯ ವಿದ್ಯೆಯಿದ್ದರೆ ಹಾಳು ಹೊಟ್ಟೆಯ ಯೋಚನೆಯೇಕೆ ? ಗಿಳಿಯೂ ಸಹ 'ರಾಮ–ರಾಮ' ಎಂದು ಉಲಿಯುವದರಿಂದ ಆಹಾರ ದೊರಕಿಸಿಕೊಳ್ಳುತ್ತದೆ. ಎಂದು ತುಂಬಾ ಮಾರ್ಮಿಕವಾಗಿ ಹೇಳುತ್ತದೆ.

ವಿದ್ಯೆಯು ಉಳಿದೆಲ್ಲ ಅಲಂಕಾರಗಳಿಗಿಂತಲೂ ಮನುಷ್ಯನಿಗೆ ಹೆಚ್ಚಿನ ಶೋಭೆ ಕೊಡುವಂತಹದು. ನಮಗೆ ಸುಖ ಸಂಪತ್ತು-ಯಶಸ್ಸುಗಳನ್ನು ತಂದುಕೊಡುವಂತಹದು. ವಿದೇಶದಲ್ಲಿದ್ದಾಗ ನಮ್ಮನ್ನು ಕಾಪಾಡುವ ಆಪದ್ ಭಾಂಧವ" ಈ ರೀತಿ ಪ್ರಯೋಜನಕಾರಿಯಾದ ವಿದ್ಯೆಯನ್ನು ತಮ್ಮ ಮಕ್ಕಳಿಗೆ ಕಲಿಸದ ತಂದೆ-ತಾಯಿ ನಿಜವಾಗಿಯೂ ಅವನ ಶತ್ರುಗಳು. 'ಮಾತಾ ಶತ್ರುಃ ಪಿತಾ ವೈರಿ ಯೇನ ಬಾಲೋ ನ ಪಾಠಿತಃ'.

ಪಂಡಿತನಾದರೂ ತಾನು ಸಕಲ ವಿದ್ಯಾ ಪಾರಂಗತನೆಂಬ ಅಹಂಕಾರ ಸಲ್ಲದು. ವಿದ್ಯಾ ವಿನಯೇನ ಶೋಭತೆ. ತುಂಬಿದ ಕೊಡ ತುಳುಕುವುದಿಲ್ಲ ಎಂಬಂತೆ ಸಂಪೂರ್ಣ ಕುಂಭೋ ನ ಕರೋತಿ ಶಬ್ದಮ್... ವಿದ್ವಾನ್ ಕುಲೀನೋ ನ ಕರೋತಿ ಗರ್ವಮ್. ಆದರೆ 'ಗುಣೈರ್ವಿಹೀನಾ ಬಹು ಜಲ್ಪಯಂತಿ 'ಅರ್ಧಮರ್ಧ ಓದಿಕೊಂಡವರೇ ಹೆಚ್ಚು ಬಾಯಿ ಮಾಡುವವರು !

ಓದಿ, ಪಾಂಡಿತ್ಯವನ್ನು ಸಂಪಾದಿಸಿ ಮನ್ನಣೆಗಳಿಸಬೇಕೆಂಬುದೇನೋ ಸರಿ ಆದರೆ ಪುಸ್ತಕಗಳ ರಾಶಿಯನ್ನು ನೋಡಿ, ಜ್ಞಾನಭಂಡಾರದ ಅಗಾಧತೆಯನ್ನು ನೆನೆದು ನಮಗೆ ಒಂದು ಬಗೆಯ ಅಸಹಾಯತೆ ಎನಿಸಬಹುದು. ಆಗ ನಮ್ಮ ಸಮೂಧಾನಕ್ಕೆ ಈ ಸುಭಾಷಿತ ಧಾವಿಸುತ್ತದೆ :

**ಅನಂತಪಾರಂ ಕಿಲ ಶಬ್ದಶಾಸ್ತ್ರಮ್**
**ಸ್ವಲ್ಪ ತಥಾಯುಃ ಬಹವಶ್ಚ ವಿಘ್ನಾಃ ।**
**ಸಾರಂ ತತೋ ಗ್ರಾಹ್ಯಮಪಾಸ್ಯ ಫಲ್ಗು**
**ಹಂಸೋ ಯಥಾ ಕ್ಷೀರಮಿವಾಂಬುಮಧ್ಯಾತ್ ॥**

"ಶಬ್ದ ಶಾಸ್ತ್ರವು ತುದಿ-ಬುಡವಿಲ್ಲದಷ್ಟು ವಿಸ್ತಾರವಾದದ್ದು. ಆದರೆ ನಮ್ಮ ಆಯುಸ್ಸು ಪರಿಮಿತವಾಗಿದ್ದು ಅದರಲ್ಲಿ ವಿಘ್ನಗಳೇ ಹೆಚ್ಚು. ಆದುದರಿಂದ ಹಂಸ ಪಕ್ಷಿಯು ಹಾಲಿನಲ್ಲಿಯ ನೀರನ್ನು ಬೇರ್ಪಡಿಸಿ ಹಾಲನ್ನಷ್ಟೇ ತೆಗೆದುಕೊಳ್ಳುವಂತೆ ನಾವು "ಜ್ಞಾನದ" ತಿರುಳನ್ನಷ್ಟೇ ಗ್ರಹಿಸಿ ಜೊಳ್ಳನ್ನು ಬಿಟ್ಟು ಬಿಡಬೇಕು."

ಬರೀ ಗ್ರಂಥಗಳನ್ನೋದಿ ಕೂಚು ಭಟ್ಟನಂತಾದರೆ ಪ್ರಯೋಜನವಿಲ್ಲ. ಕಲಿತ ವಿದ್ಯೆಯನ್ನು ವ್ಯವಹಾರದಲ್ಲಿ ಉಪಯೋಗಿಸಿಕೊಳ್ಳಬೇಕು. 'ಪುಸ್ತಕಸ್ಥಾತು ಯಾ ವಿದ್ಯಾ ಪರಹಸ್ತಗತಂ ಧನಂ। ಕಾರ್ಯಕಾಲೇ ಸಮುತ್ಪನ್ನೇ ನ ಸಾ ವಿದ್ಯಾ ನ ತದ್ ಧನಮ್॥ ಪುಸ್ತಕದಲ್ಲಿರುವ ಜ್ಞಾನ ವಿದ್ಯೆಯಲ್ಲ. ಪರರ ಸ್ವಾಧೀನವಾದ ಹಣ ಹಣವಲ್ಲ. ಏಕೆಂದರೆ ಅವೆರಡೂ ನಮ್ಮ ಸಮಯಕ್ಕೆ ಒದಗಲಾರವು.

ನಾಲ್ಕಕ್ಷರ ಓದಿದ ಮಾತ್ರಕ್ಕೆ ಬದುಕಿನಲ್ಲಿ ಎಲ್ಲವನ್ನೂ ಸಾಧಿಸಿದಂತಾಯಿತೇ ? ಅದಕ್ಕೆ ಸುಭಾಷಿತ ಕೊಡುವ ಉತ್ತರ ಇದು :

**ಸಾಹಿತ್ಯ ಸಂಗೀತ ಕಲಾವಿಹೀನಃ**
**ಸಾಕ್ಷಾತ್ ಪಶುಃ ಪುಚ್ಛ ವಿಷಾಣ ಹೀನಃ।**
**ತೃಣಂ ನ ಖಾದನ್ನಪಿ ಜೀವಮಾನಃ**
**ತದ್‌ಭಾಗಧೇಯಂ ಪರಮಂ ಪಶೂನಾಮ್ ॥**

"ಸಾಹಿತ್ಯ, ಸಂಗೀತ ಅಥವಾ ಯಾವುದೇ ಲಲಿತ ಕಲೆಗಳನ್ನರಿಯದ ಮನುಷ್ಯ ಕೊಂಬು ಬಾಲಗಳಿಲ್ಲದ ಪಶುವಿದ್ದ ಹಾಗೆ. ಪ್ರಾಣಿಗಿಂತ ಅವನ ಒಂದು ಹೆಚ್ಚುಗಾರಿಕೆಯೆಂದರೆ ಹುಲ್ಲು ತಿನ್ನದೆ ಜೀವಿಸಿರುವುದು! ಅಂತೆಯೇ ಸಾಹಿತ್ಯದಲ್ಲಾಗಲಿ, ಸಂಗೀತ, ನೃತ್ಯ ಮುಂತಾದ ಕಲೆಯಲ್ಲಾಗಲೀ ನಾವು ಪರಿಣಿತರಾಬೇಕು. ಈ ಕಲೆಗಳಲ್ಲಿ ಪರಿಣತಿ ಸಾಧಿಸಿದ ಮೇಲೆ ಸಹೃದಯರ ಮುಂದೆಯೇ ಅವುಗಳನ್ನು ನಿರೂಪಿಸಬೇಕೇ ಹೊರತು ಅರಸಿಕರ ಮುಂದೆ ನಿವೇದಿಸ ಹೊರಟರೆ ಕೋಣನ ಮುಂದೆ ಕಿನ್ನರಿ ಬಾರಿಸಿದ ಹಾಗಾಗುತ್ತದೆಯೆಂದು ಎಚ್ಚರಿಸುತ್ತಾನೆ ಸುಭಾಷಿತಕಾರ: ಅವನು ಬಹ್ಮನಲ್ಲಿ "ನೂರು ದುಃಖಗಳನ್ನು ಒಮ್ಮೆಲೇ ತಂದೊಡ್ಡಿದರೂ ಅವುಗಳನ್ನು ಸಹಿಸುವ ಸಾಮರ್ಥ್ಯ ನನ್ನಲ್ಲಿದೆ. ಆದರೆ ಅರಸಿಕರಲ್ಲಿ ಕವಿತ್ವ ನಿವೇದನೆ ಮಾಡುವಂಥ ದುರ್ಭರ ಪ್ರಸಂಗವನ್ನು ಮಾತ್ರ ಹಣೆಯಲ್ಲಿ ಬರೆಯಬೇಡ !" ಎಂದು ಮೊರೆಯಿಡುತ್ತಾನೆ. ಕೃತಿಯು ಸಾರ್ಥಕಗೊಳ್ಳುವದು ರಸಿಕರು ಅನುಭೋಗಿಸಿದಾಗಲೇ ಅಲ್ಲವೇ? ಇಲ್ಲವಾದರೆ "ಕಟ್ಟಿಯುಮೇನೊ ಮಾಲೆಗಾರನ ಪೂಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ ?"

"ವಿದ್ಯಾ ವಿಹೀನಃ ಪಶುಃ" ಎಂಬುದು ನಿಜವಾದರೂ ಪಶು ಸಮಾನನಾದವನನ್ನು ಪೂಜನೀಯನನ್ನಾಗಿ ಮಾಡುವ ಸಾಮರ್ಥ್ಯ ಹಣನಲ್ಲಿರುವುದರಿಂದ

ಅವನ ಪ್ರಭಾವವನ್ನು ಸುಭಾಷಿತಕಾರರು ಕಡೆಗಣಿಸಿಲ್ಲ. ಮನುಷ್ಯ ಸದ್ಗುಣಗಳ ಖಣಿಯೇ ಆಗಿದ್ದರೂ ಹಣವಿಹೀನನಾಗಿದ್ದರೆ "ದಾರಿದ್ರ್ಯ ದೋಷೋ ಗುಣರಾಶಿ ನಾಶಿ"- ಬಡತನವೆಂಬ ಒಂದೇ ಒಂದು ದೋಷ ಅವನ ಎಲ್ಲ ಗುಣಗಳನ್ನೂ ಮರೆ ಮಾಡುತ್ತದೆ. ದುಡ್ಡೇ ದೊಡ್ಡಪ್ಪನಾದುದರಿಂದ "ಸರ್ವೇ ಗುಣಾಃ ಕಾಂಚನ ಮಾಶ್ರಯಂತೇ." ಅದಕ್ಕಾಗಿ "ಕಣಶಃಕ್ಷಣಶಃಚೈವ ವಿದ್ಯಾಮರ್ಥಂ ಚ ಸಾಧಯೇತ್." ಕಣ-ಕಣವಾಗಿ (ಸ್ವಲ್ಪ-ಸ್ವಲ್ಪವಾಗಿ) ಒಂದು ಕ್ಷಣವೂ ವ್ಯರ್ಥವಾಗದಂತೆ ವಿದ್ಯೆಯನ್ನೂ ಧನವನ್ನೂ ಸಂಪಾದಿಸಬೇಕು. ಹಣವಿಲ್ಲದಿದ್ದರೆ "ತಾಯಿಯು ನಿಂದಿಸುವಳು, ತಂದೆಯು ಆದರಿಸಲಾರ, ಸೋದರನಂತೂ ಮಾತೇ ಆಡುವುದಿಲ್ಲ, ಸೇವಕ ಸಿಟ್ಟಿಗೇಳುತ್ತಾನೆ, ಮಗ ಮಾತು ಕೇಳುವುದಿಲ್ಲ, ಕೈಹಿಡಿದ ಮಡದಿಯೂ ಪ್ರೀತಿಸುವುದಿಲ್ಲ, ಸಾಲ ಬೇಡಬಹುದೆಂಬ ಶಂಕೆಯಿಂದ ಗೆಳೆಯರು ಮುಖ ತಿರುವಿಕೊಂಡು ಹೋಗುತ್ತಾರೆ. "ತಸ್ಮಾತ್ ದ್ರವ್ಯಮುಪಾರ್ಜಯಸ್ವ ಸುಮತೇ ದ್ರವ್ಯೇಣ ಸರ್ವೇ ವಶಾಃ" - ಹೀಗೆ ದುಡ್ಡಿನಿಂದಲೇ ಎಲ್ಲರೂ ವಶರಾಗುವುದರಿಂದ ಕೌಟುಂಬಿಕ ಹಾಗು ಮಾನಸಿಕ ಸ್ವಾಸ್ಥ್ಯ ಪಡೆಯುವುದಕ್ಕಾಗಿ ಹಣವನ್ನು ಗಳಿಸಿರಿ ಎಂದು ಸುಭಾಷಿತಕಾರ ಆದೇಶಿಸುತ್ತಾನೆ.

ಆದರೆ ಕೆಲವರಿಗೆ ಎಷ್ಟು ಪ್ರಯತ್ನಪಟ್ಟರೂ ಲಕ್ಷ್ಮಿ ಪ್ರಸನ್ನಳಾಗುವುದಿಲ್ಲ. ಅಂಥವನಿಗೆ ಸುಭಾಷಿತಕಾರನ "ಮನಸಿ ಚ ಪರಿತುಷ್ಟೇ ಕೋಽರ್ಥವಾನ್ ಕೋ ದರಿದ್ರಃ" "ಸಂತೋಷ ಏವ ಪುರುಷಸ್ಯ ಪರಂ ನಿಧಾನಮ್", ಎಂಬ ನುಡಿಗಳು ಸಾಂತ್ವನ ನೀಡುತ್ತವೆ. ಇದ್ದುದರಲ್ಲಿ ತೃಪ್ತಿಪಡದೆ ದುರಾಶೆಗೆ ಬಲಿಯಾದವನಿಗೆ ದುರವಸ್ಥೆ ತಪ್ಪಿದ್ದಲ್ಲ ಎಂಬುದನ್ನು ಒಂದು ಸುಭಾಷಿತ ಸುಂದರವಾಗಿ ನಿರೂಪಿಸುತ್ತದೆ.

"ಭ್ರಮರವೊಂದು ಅವೇ ಅರಳಿದ ಸುಗಂಧಪೂರಿತ ದುಂಡು ಮಲ್ಲಿಗೆ ಹೂವನ್ನು ಬಿಟ್ಟು ಸೂಜಿ ಮಲ್ಲಿಗೆಯ ಬಳಿ ಹಾರಿ ಹೋಯಿತು. ಅದರ ಮಕರಂದವನ್ನು ಹೀರಿ ತೃಪ್ತಿಯಾಗದೆ ಚಂದನವನಕ್ಕೆ ಹಾರಿತು. ಅಲ್ಲಿಂದ ಕಮಲದ ಬಳಿ ಹೋಯಿತು. ಅಷ್ಟರಲ್ಲಿ ರಾತ್ರಿಯಾಗಿದ್ದರಿಂದ ಕಮಲ ದಳಗಳು ಮುಚ್ಚಿಕೊಂಡವು. ಆಗ ಅದರಲ್ಲಿ ಬಂದಿಯಾದ ಭ್ರಮರ ತನ್ನ ತಿಳಿಗೇಡಿತನಕ್ಕಾಗಿ ಅಳುವುದಕ್ಕಾರಂಭಿಸಿತು." ಹೀಗೆ ಮನುಷ್ಯನಿಗೆ ತೃಪ್ತಿ ಇಲ್ಲದಿದ್ದರೆ ಹಾಸಿಗೀಡಾಗುವುದರಲ್ಲಿ ಸಂದೇಹವಿಲ್ಲ.

ಸುಭಾಷಿತಗಳು ವ್ಯಕ್ತಿತ್ವ ವಿಕಾಸಕ್ಕೆ ಸಹಕಾರಿಯಾಗುವಂತೆಯೇ ಅವುಗಳಲ್ಲಿ ಅಡಗಿರುವ ಅನುಭವದ ಸಾರದಿಂದಾಗಿ ನಮ್ಮ ದೈನಂದಿನ ಜೀವನದಲ್ಲಿ ಸಜ್ಜನರು-ದುರ್ಜನರು, ಮಿತ್ರರು-ಅಮಿತ್ರರು, ನಿಜವಾದ ಸಹಾಯಕರು ಹಾಗು ಮುಖಸ್ತುತಿ ಮಾಡಿ ತಮ್ಮ ಕಾರ್ಯ ಸಾಧಿಸಿಕೊಳ್ಳುವ ಸಮಯ-ಸಾಧಕರು ಇವೇ ಮೊದಲಾದ ಜನರ ಪರೀಕ್ಷೆ ಮಾಡಲು ನೆರವಾಗುತ್ತವೆ. ರವಿಯು ಉದಯಾಸ್ತ ಸಮಯಗಳೆರಡರಲ್ಲೂ ರಕ್ತವರ್ಣವಾಗಿರುವಂತೆ ಮಹಾತ್ಮರು ಉತ್ಕರ್ಷ ಹೊಂದಿದಾಗಲೂ, ಆಪತ್ಕಾಲದಲ್ಲೂ ಒಂದೇ ತೆರನಾಗಿರುತ್ತಾರೆ. ಅವರಿಗೆ ಇವನು ತಮ್ಮವನು ಇವನು ಬೇರೆಯವನು ಎಂಬ ಸಂಕುಚಿತ ಮನೋಭಾವವಿರುವುದಿಲ್ಲ. "ಉದಾರ ಚರಿತಾನಾಂ ವಸುಧೈವ ಕುಟುಂಬಕಮ್"--ಉದಾರ ಹೃದಯಿಗಳಿಗೆ ವಿಶ್ವವೇ ಕುಟುಂಬ. ಅದೇ ದುರ್ಜನರಲ್ಲಿ "ಮಧು ತಿಷ್ಠತಿ ಜಿಹ್ವಾಗ್ರೇ ಹೃದಯೇ ತು ಹಾಲಾಹಲಮ್"-- ನಾಲಿಗೆಯಿಂದೆ ಜೇನು ಸುರಿದರೂ ಹೃದಯದಲ್ಲಿ ವಿಷವೇ ತುಂಬಿಕೊಂಡಿರುವುದು. ಅಂತೆಯೇ--

**ದುರ್ಜನಃ ಪರಿಹರ್ತವ್ಯೋ ವಿದ್ಯಯಾಲಂಕೃತೋಽಪಿ ಸನ್।**
**ಮಣಿನಾ ಭೂಷಿತಃ ಸರ್ಪಃ ಕಿಮಸೌ ನ ಭಯಂಕರಃ॥**

ದುಷ್ಟನು ವಿದ್ಯಾವಂತನಾಗಿದ್ದರೂ ಅವನನ್ನು ದೂರವಿರಿಸುವುದೇ ಒಳ್ಳೆಯದು. ಸರ್ಪವು ರತ್ನದಿಂದ ಶೋಭಿತವಾಗಿದ್ದರೂ ಭಯಂಕರವೇ ಅಲ್ಲವೇ ? ಆದುದರಿಂದ ಸ್ವಭಾವ ಪರೀಕ್ಷೆ ಮಾಡಿ ನಾವು ಗೆಳೆತನ ಮಾಡುವುದು ಉಚಿತ. "ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ" ಎಂಬ ಉಕ್ತಿಯಂತೆ "ಕಾಜಿನ ಮಣಿಯೂ ಚಿನ್ನದ ಜತೆ ಜೋಡಿಸಲ್ಪಟ್ಟಾಗ ಪಚ್ಚೆಯ ಕಾಂತಿಯನ್ನು ಪಡೆಯುವಂತೆ" ಸಾಮಾನ್ಯ ಮನುಷ್ಯನೂ ಸಜ್ಜನರ ಸಂಪರ್ಕದಿಂದ ಪ್ರವೀಣನಾಗುತ್ತಾನೆ. ಬದುಕಿನ ಮರುಳುಗಾಡಿನಲ್ಲಿ ಗೆಳೆಯರು "ಓಯಸಿಸ್" ಇದ್ದ ಹಾಗೆ ಇರುವುದರಿಂದ ಉತ್ತಮರ ಸಹವಾಸ-ಸ್ನೇಹವನ್ನು ನಾವು ಬೆಳೆಸಬೇಕಾದುದು ಅವಶ್ಯ.

ವಿದ್ಯೆ-ಹಣವನ್ನು ಗಳಿಸಿ, ಸಾಮಾಜಿಕ ಮನ್ನಣೆ ದೊರಕಿಸಿ, ಮಡದಿ-ಮಕ್ಕಳೊಂದೊಡಗೂಡಿ ಕೌಟುಂಬಿಕ

ಜೀವನದದ ಸುಖ-ಸಂತೋಷಗಳನ್ನನುಭವಿಸಿದ ಮೇಲೆ ನಮ್ಮ ಮನಸ್ಸು ಅಧ್ಯಾತ್ಮದತ್ತ ಹರಿಯಲಾರಂಭಿಸುತ್ತದೆ. ಆದರೆ ಪರಸ್ಪರ ವಿರೋಧಿಯೆನಿಸುವ, ಗಹನವಾದ, ಜಟಿಲವಾದ ಧಾರ್ಮಿಕ ತತ್ವಗಳು ಸಾಮಾನ್ಯ ಮನುಷ್ಯನನ್ನು ಗೊಂದಲಕ್ಕೀಡು ಮಾಡುತ್ತವೆ. ಅದಕ್ಕೆ ಸುಭಾಷಿತಗಳು ಸುಲಭವಾದ ಉಪಾಯಗಳನ್ನು ಸೂಚಿಸಿವೆ. "ಏಕೋ ದೇವಃ ಕೇಶವೊ ವಾ ಶಿವೊ ವಾ"-ದ್ವೈತ-ಅದ್ವೈತ ಎಂಬ ವಿವಾದದಲ್ಲೇಕೆ ಬೀಳುವಿರಿ ! ಶಿವನನ್ನೊ ವಿಷ್ಣುವನ್ನೋ ಅಂತೂ ಒಬ್ಬ ದೇವರನ್ನು ನಂಬಿರಿ, ಅವನು ನಿಮ್ಮ ಕೈ ಬಿಡಲಾರ. ವೇದಗಳು, ಶ್ರುತಿ, ಸ್ಮತಿ ಮುಂತಾದ ಧಾರ್ಮಿಕ ಗ್ರಂಥಗಳನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವೇ ? ಧರ್ಮದ ತಿರುಳು ಗೂಢನಾಗಿರುವುದರಿಂದ "ಮಹಾಜನೋ ಏನ ಗತಃ ಸ ಪಂಥಾಃ" ಧಾರ್ಮಿಕ ವಿಷಯದಲ್ಲಿ ದೊಡ್ಡವರು ತುಳಿದ ದಾರಿಯನ್ನೇ ಅನುಸರಿಸಿರಿ.

ಅಥವಾ :

**ಕಸ್ಯಚಿತ್ ಕಿಮಪಿ ನೋ ಹರಣೀಯಮ್ ।**
**ಮರ್ಮವಾಕ್ಯಮಪಿ ನೋಚ್ಚರಣೀಯಮ್ ।**
**ಶ್ರೀಪತೇಃ ಪದಯುಗಂ ಸ್ಮರಣೀಯಮ್**
**ಲೀಲಯಾ ಭವಜಲಂ ತರಣೀಯಮ್ ॥**

'ಯಾರದ್ದೂ ಏನನ್ನೂ ಅಪಹರಿಸದೆ' ಇನ್ನೊಬ್ಬರ ಮನಸ್ಸಿಗೆ ನೋವಾಗುವಂಥ ನುಡಿಗಳನ್ನಾಡಿದೆ, ಶ್ರೀಹರಿಯ ಪದಕಮಲಗಳನ್ನು ಭಜಿಸಿ ಲೀಲೆಯಿಂದ ಈ ಸಂಸಾರ ಸಾಗರವನ್ನು ದಾಟಬೇಕು. ಎಂಬುದನ್ನು ಇನ್ನೂ ಸುಲಭವಾದ ಮಾರ್ಗ. ಗೀತೆಯಲ್ಲಿ ಶ್ರೀಕೃಷ್ಣನಾ ಭೋಧಿಸಿದ 'ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೇ ಜಯಾಜಯೇ' ಅಥವಾ 'ದುಃಖೇಷು ಅನುದ್ವಿಗ್ನ ಮನಾಃ ಸುಖೇಷು ವಿಗತಸ್ಪೃಹಃ ಎಂಬಂಥ ಸ್ಥಿತಪ್ರಜ್ಞ ಮನೋವೃತ್ತಿ ಎಲ್ಲರಿಂದ ಸಾಧಿಸಲಾಗುವುದಿಲ್ಲ. ಆದರೆ ಸುಭಾಷಿತಗಳು ಸೂಚಿಸಿರುವ ಈ ಮಾರ್ಗವನ್ನು ಸಾಮಾನ್ಯನೂ ಅನುಸರಿಸಬಹುದಲ್ಲವೇ ?

ಈ ರೀತಿ ಸುಭಾಷಿತಗಳು ಸಾರುವ ಸಂದೇಶ ನಮ್ಮ ಜೀವನದ ಪ್ರತಿಯೊಂದು ರಂಗಲ್ಲೂ ಪ್ರಯೋಜನಕಾರಿಯಾಗಿವೆ. ಅಪಾರವಾದ ಸುಭಾಷಿತ ಸಾಗರದಲ್ಲಿ ಮುಳುಗಿದಾಗ ಪ್ರಾಚೀನ ಕವಿಗಳು ಭಾರತೀಯರಿಗೆ ಬಿಟ್ಟು ಹೋದ ಹೇರಳವಾದ ಅನರ್ಘ್ಯರತ್ನಗಳು ದೊರೆಯುತ್ತವೆ. ಸರ್ವಜ್ಞನ ವಚನಗಳಂತೆ ಸುಭಾಷಿತಗಳ ಭಾಷೆ ಬಹು ತಿಳಿ. ಅಲ್ಲಿ ಶಬ್ಧದ ಆಡಂಬರವಿಲ್ಲ. ಕ್ಲಿಷ್ಟವಾದ ಸಂಧಿ ಸಮಾಸಗಳು, ಅಲಂಕಾರ-ಪ್ರತಿಮೆಗಳಿಲ್ಲ. ಆದರೂ ಅವು ಪಂಡಿತ-ಪಾಮರರನ್ನು ರಂಜಿಸುತ್ತವೆ. ಸಂಸ್ಕೃತ ಬಾರದವರೂ ಸಹ ಅವುಗಳನ್ನು ಸಂಭಾಷಣೆಯಲ್ಲಿ ಬಳಸುವದನ್ನು ನೋಡಿದರೆ ಸುಭಾಷಿತಗಳ ಜನಪ್ರಿಯತೆಯ ಅರ್ಥವಾಗದಿರದು. ಒಬ್ಬ ಸುಭಾಷಿತಕಾರ ಸುಭಾಷಿತಗಳ ಬಗ್ಗೆ ಹೆಮ್ಮೆಯಿಂದ–

**ಸಂಸಾರಕಟು ವೃಕ್ಷಸ್ಯ ದ್ವೇ ಫಲೇ ಹ್ಯಮೃತೋಪಮೇ**
**ಸುಭಾಷಿತರಸಾಸ್ವಾದಃ ಸಂಗತಿಃ ಸುಜನೈಃ ಸಹ ॥**

'ಸಂಸಾರವೆಂಬ ವಿಷವೃಕ್ಷದಲ್ಲಿ ಎರಡೇ ಎರಡು ಅಮೃತ ಸಮಾನವಾದ ಸಿಹಿ ಫಲಗಳಿವೆ ; ಸಜ್ಜನರ ಸಹವಾಸ ಒಂದಾದರೆ ಸುಭಾಷಿತಗಳ ರಸಾಸ್ವಾದ ಮತ್ತೊಂದು ಎಂದು ಹೇಳಿರುವುದು ಅರ್ಥಪೂರ್ಣವಾಗಿದೆ. ಈ ಸುಭಾಷಿತ ರಸವಾದರೂ ಎಂತಹದು ?

**ದ್ರಾಕ್ಷಾ ಮ್ಲಾನಮುಖೀ ಜಾತಾ ಶರ್ಕರಾ ಚೌಶ್ಮತಾಂ ಗತಾ ।**
**ಸುಭಾಷಿತ ರಸಸ್ಯಾಗ್ರೇ ಸುಧಾ ಭೀತಾ ದಿವಂ ಗತಾ ।**

ಸುಭಾಷಿತಗಳ ಸಿಹಿರಸವನ್ನು ಕಂಡು ಅದಕ್ಕೆ ತಾವು ಸಮನಾಗಲಾರೆವೆಂದು ದ್ರಾಕ್ಷಿ ಹಣ್ಣು ಕೆಳಗೆ ಮುಖ ಮಾಡಿದರೆ, ಸಕ್ಕರೆ ಶಿಲೆಯಾಗಿ ಬಿಟ್ಟಿತು. ಅಮೃತವಂತೂ ಭೀತಿಯಿಂದ ಸ್ವರ್ಗಕ್ಕೆ ಪಲಾಯನ ಹೇಳಿಸಿತು !

ಇದು ಅತಿಶಯೋಕ್ತಿಯಲ್ಲವೆಂಬುದು ಸುಭಾಷಿತಗಳನ್ನಭ್ಯಸಿಸಿದವರಿಗೆ ಮನದಟ್ಟಾಗದಿರದು.

---

# ಸಾಹಿತ್ಯ - ಅಕಾಡಮಿ

—ನಿರುಪಮಾ

"ಏನಾದರೂ ಮಾಡಲೇಬೇಕು" ಎಂದು ಟೇಬಲ್ ಮೇಲೆ ಜೋರಾಗಿ ಗುದ್ದಿದ ಸತ್ಯಮೂರ್ತಿ.

ಸದ್ಯ, ಆ ಟೇಬಲ್ ಮೇಲೆ ಏನೂ ಇರಲಿಲ್ಲ. ಆದ್ದರಿಂದ ನನ್ನ ಮೇಲೆ ಯಾವುದೂ ಹಾರಿ ಬೀಳಲಿಲ್ಲ.

"ಹೌದು ಕಣೋ ಏನಾದರೂ ಮಾಡಲೇಬೇಕು." ಎಂದೆ, ನಾನೂ ಸಹ ಅದೇ ಟೇಬಲ್ ಮೇಲೆ ಜೋರಾಗಿ ಗುದ್ದುತ್ತಾ.

ಆ ಟೇಬಲ್ ನನ್ನದೂ ಅಲ್ಲ, ಅವನದೂ ಅಲ್ಲ. ಹೋಟಲಿನವನದು.

"ಏನು ಮಾಡೋಣ ?" ಸೀರಿಯಸ್ಸಾಗಿ ಕೇಳಿದ.

"ನಾವು ಸಂಘಟನೆ ಮಾಡಿ ಚಳುವಳಿ ಹೂಡಬೇಕು" ಎಂದು ಪುನಃ ಟೇಬಲ್ ಮೇಲೆ ಬಲವಾಗಿ ಗುದ್ದುತ್ತಾ ನನ್ನ ಕ್ರಾಂತಿಕಾರಿ ಮನೋಭಾವವನ್ನು ವ್ಯಕ್ತ ಪಡಿಸಿದೆ.

"ಯಾತಕ್ಕೆ ?" ಕ್ಲಾಸಿನಲ್ಲಿ ಲೆಕ್ಚರರ್ ವಿದ್ಯಾರ್ಥಿಯನ್ನು ಪ್ರಶ್ನಿಸುವಂತೆ ಸೀರಿಯಸ್ಸಾಗಿ ಮುಖ ಮಾಡಿ ಕೇಳಿದ ಸತ್ಯ.

ನಾನು ಪೆಚ್ಚಾಗುತ್ತಾ "ನನಗೇನು ಗೊತ್ತು ? ನೀನೇ ಏನೇನೋ ಹೇಳ್ತಿದ್ದೆಯಲ್ಲ, ಅಕಾಡಮಿ........"

"ಹೂಂ, ಹೌದು ಕಣೋ ಅಕಾಡಮೀನ ಸುಟ್ಟು ಹಾಕ್ಬೇಕು."

"ಅಕಾಡಮೀನ ? ಯಾವ ಅಕಾಡಮಿ ?"

"ಅದೇ ಆ ಸಾಹಿತ್ಯ ಅಕಾಡಮೀನ ?"

"ಸಾಧ್ಯವಿಲ್ಲ."

"ಯಾತಕ್ಕಾಗೋಲ್ಲ ? ನಿನ್ನ ಜೇಬ್ನಲ್ಲಿ ಬೆಂಕಿ ಪೆಟ್ಟಿಗೆ ಇಲ್ವೆ "?

"ಇದೆ, ಆದರೆ ಲಕ್ಷಾಂತರ ರೂಪಾಯಿ ಸಿಮೆಂಟ್ ಸುರಿದು ಕಟ್ಟಿರೋ ಆ ಕಟ್ಟಡವನ್ನು ಒಂದು ಬೆಂಕಿ ಪೆಟ್ಟಿಗೆ ಸುಡೋಲ್ಲ ಅದಕ್ಕೇ"

"ಪೇಟೇಲಿ ಪೆಟ್ರೋಲ್ ಸಿಗೋಲ್ವೆ ?"

"ಪೆಟ್ರೋಲ್ ಸಿಗೋದು ಪೇಟೇಲಲ್ಲ. ಬಂಕ್ನಲ್ಲಿ. ಅದು ಈಗ ಲೀಟರಿಗೆ ನಾಲ್ಕು ರೂಪಾಯಿ."

"ತಂದ್ರಾಯ್ತು, ನಿನ್ನ ಜೇಬ್ನಲ್ಲಿ ದುಡ್ಡಿಲ್ವಾ?"

"ನನ್ನ ಜೇಬ್ನಲ್ಲೇ ? ಹಿ ಹಿ ಹಿ....ತಿಂಗಳ ಕೊನೆ ಅಲ್ವಾ ? ಎಲ್ಲೋ ಒಂದೆರಡು ರೂಪಾಯಿ ಇದೆ ಅಷ್ಟೆ."

"ಅಷ್ಟೇನೆ ?" ದೊಡ್ಡ ನಿಟ್ಟುಸಿರು ಬಿಟ್ಟು ಕುರ್ಚಿಗೆ ಒರಗಿ, "ನೀವೆಲ್ಲಾ ಏನು ಉಪಯೋಗ ಇಲ್ಲ ಕಣ್ರೊ, ಹೇಡಿಗಳು ಅಂದ್ರೆ ಪಕ್ಕಾ ಹೇಡಿಗಳು."

"ಹೋಗಲಿ ಬಿಡು, ನಮಗೆ ಹೀರೋ ಶೂರ ನೀನಿದೀಯಲ್ಲಾ, ಮತ್ತೆ ಅಕಾಡಮೀನ ಸುಡೋ ಅಗತ್ಯ ಏನ್ಬಂತು ?"

"ಅದರ ತುಂಬಾ ಮುದುಕರು, ವೈಗಳ್ಳರು ಸೇರಿಕೊಂಡಿದ್ದಾರೆ."

"ಹಾಗಾದ್ರೆ ನಾವು ಇನ್ನೊಂದು ಹುಡುಗರ ಅಕಾಡಮೀನ ಸ್ಥಾಪಿಸಿ ಬಿಡೋಣ" ಎಂದೆ ಅವನಲ್ಲಿ ಉತ್ಸಾಹ ತುಂಬಲು ಯತ್ನಿಸುತ್ತಾ.

"ಅದಕ್ಕೆ ದುಡ್ಡು ಯಾರು ಕೊಡ್ತಾರೆ ?"

"ಅವರಿಗೆ ಯಾರು ಕೊಡ್ತಿದಾರೆ ?"

"ಘನ ಸರ್ಕಾರದ ಕೃಪೆ ಅವರಿಗಿದೆ."

"ನಮಗೂ ಅವರಪ್ಪನ ಕೃಪೆ ಸಿಗುತ್ತೆ ಬಿಡೋ, ಯಾರಾದರೂ ಮಿನಿಸ್ಟರ್‌ಗೆ ಸನ್ಮಾನ ಮಾಡಿ ಒಂದು ಅಭಿನಂದನಾ ಗ್ರಂಥ ಮಾಡಿ ಬಿಡೋಣ ನೋಡ್ಕೋ, ಆಮೇಲೆ ಅಕಾಡಮಿನೂ ನಮ್ದೇ, ಅಕಾಡಮಿ ಬಹುಮಾನಗಳೂ ನಮ್ಮದೇ.''

ಸತ್ಯನಿಗೆ ಉತ್ಸಾಹ ಮೂಡಿತು. ಸಿಗರೇಟ್ ಹಚ್ಚಿ ಹೊಗೆ ಬಿಡುತ್ತ ಸರಿಯಾಗಿ ಕುಳಿತ :

"ಹೌದು ನಮ್ಮ ಅಕಾಡಮೀಲಿ ......."

ನಡುವೆ ನಾನು ಬಾಯಿ ಹಾಕ್ದೆ, "ತರುಣರ ಅಕಾಡಮಿ ಅನ್ನು" "ಹೂಂ ನಮ್ಮ ತರುಣರ ಅಕಾಡಮೀಲಿ ಇದುವರೆಗೆ ಮಾಡ್ದೆ ಇರೋ ಕೆಲಸಗಳನ್ನು ಮಾಡಿ ಬಿಡೋಣ."

"ಹೌದು ಕಣೋ ಹೋದ ವರುಷ ನಾವು ವಿಶೇಷಾಂಕ ಹಾಕಿದೆವಲ್ಲ ಅದಕ್ಕೆ ಆ ಮುದುಕರ ಅಕಾಡಮಿ ಜಾಹಿರಾತು ಕೇಳಿದ್ರೇ ಕೊಡಲಿಲ್ಲ. ಈ ನಮ್ಮ ಹೊಸ ಅಕಾಡಮೀಲಿ ಎಲ್ಲಾ ಸಂಚಿಕೆಗೂ ಜಾಹಿರಾತು ಕೊಡೋ ಹಾಗೆ ಏರ್ಪಾಟು ಮಾಡೋಣ."

"ಥತ್ ನಿನ್ ಚಿಲ್ರೆ ಬುದ್ಧಿ ಎಲ್ಹೋದ್ರು ಬಿಡೋಲ್ಲ. ಸುಡುಗಾಡು ಜಾಹಿರಾತಿಗ್ಯಾಕೆ ಅಳ್ತೀಯ ? ಅದೆಲ್ಲಾ ಸಣ್ಣ ವಿಷಯ, ಈಗ ಈ ಸಾಹಿತ್ಯ ಅಕಾಡಮಿ ಕೊಡ್ತಾ ಇರೋ ಪ್ರೈಜ್‌ಗಳ ಅಪ್ಪನಂಥಾ ಪ್ರೈಜ್ ಕೊಡೋಣ."

"ಅಪ್ಪನಂಥಾದ್ದು ಅಂದರೆ ಜ್ಞಾನಪೀಠ ಪ್ರಶಸ್ತೀನೆ ? ಹಾಗಾದ್ರೆ ನಾನೀಗ್ಲೆ ಒಂದು ಪುಸ್ತಕ ಬರೆಯೋಕೆ ಷುರು ಮಾಡ್ತೇನೆ."

"ನಿನ್ನ ತಲೆ. ಹುಡುಗ್ತುಡಗಾಗಿ ಆಡ್ಬೇಡ, ನಾವೇನು ಜಾಕ್‌ಪಾಟ್ ನಡೆಸ್ತೇವ್ಯೆ? ಅಷ್ಟು ದೊಡ್ಡ ಮೊತ್ತ ಕೊಡೋಕೆ ? ನಾವು ಕೊಡೋ ಹಣ ಅಷ್ಟೊಂದು ಹೆಚ್ಚಾಗಿರಬಾರದು ?"

"ಆಮೇಲೆ ?"

"ಈ ಅಕಾಡಮಿ ಪ್ರಕಟಿಸ್ತಾ ಇರೋ ಪುಸ್ತಕ ಶುದ್ಧ ಬೂಸಲು."

"ಬೂಸಲಾ ?" ಮೆಲ್ಲಗೆ ಹೇಳಿದೆ. "ಸದ್ಯ ಬೂಸಾ ಅನ್ಬೇಡ."

"ಇನ್ನೇನು ಮತ್ತೆ ? ನಾಯಕ ನಾಯಕಿಯರ ವರ್ಣನೆ, ವಿರಹತಾಪ, ಋತುಗಳಂತೆ, ಸೂರ್ಯ ಚಂದ್ರರ ವರ್ಣನೆಯಂತೆ, ಬೆಳದಿಂಗಳಂತೆ. ಇವರಮ್ಮನ ಪಿಂಡ, ಇದರಲ್ಲೇ ಆಯ್ತು ಇವರ ಸಾಹಿತ್ಯ, ಥತ್ ! ಎಲ್ಲಾ ಹತ್ತನೇ ಶತಮಾನದ ಕೊಳಚೆ ಸಾಹಿತ್ಯ ! ಸ್ವಂತಿಕೆ, ಸಂವೇದನೆಯಾಗಲೀ ಬದುಕಿನ ಸಂಕೀರ್ಣತೆ, ಆಳ–ಅಗಲಗಳ ಬಗ್ಗೆ ಕಾಳಜಿಯಾಗಲೀ ಇವರಿಗಿಲ್ಲ. ಮುಖ್ಯವಾಗಿ ಈ ಮುದಿ ಸಾಹಿತಿಗಳಲ್ಲಿ ಪ್ರಾಮಾಣಿಕತೆಯಿಲ್ಲ"

ನಾನು ಹೌ ಹಾರಿದೆ, "ಯಾಕೆ ? ಅವರಲ್ಲಿ ಪ್ರಾಮಾಣಿಕತೆ ಇಲ್ಲವೆ ?"

ಅವನು ನಿರ್ಲಕ್ಷ್ಯವಾಗಿ ತಲೆ ಎಗರಿಸಿದ,

"ಎಲ್ಲಿದೆ ? ಬರೀ ಆದರ್ಶ ಸಾಹಿತ್ಯ, ತಾವು ಹೇಳೋದೊಂದು ಮಾಡೋದೊಂದು. ಶುದ್ಧ ಆತ್ಮವಂಚಕರು, ಇಂತಹ ಪುಸ್ತಕಗಳನ್ನು ರಾಶಿಗಟ್ಟಲೆ ಬರೆದು ಬರೆದು ಜನಗಳ ಹಣವನ್ನ ದೋಚುತ್ತಾ ಇದ್ದಾರೆ"

"ಸರಿ ಹಾಗಾದರೆ ನಾವು ಎಂಥಾ ಪುಸ್ತಕಗಳನ್ನ ಹಾಕೋಣ ?"

"ನಾವು ಯುವಕರು, ಇಂದಿನ ಯುವಜನಾಂಗ, ಈ ಹಳೆಯ ಸಂಪ್ರದಾಕ್ಕೆ ಮೊರೆ ಹೋಗದಂತೆ ಎಚ್ಚರಿಸಿ ಅವರನ್ನು ಕ್ರಿಯಾಶೀಲರನ್ನಾಗಿ ಮಾಡೋ ಅಂತಹ ಪುಸ್ತಕಗಳನ್ನ ಪ್ರಕಟಿಸಿ ರಾಜ್ಯದ ತುಂಬಾ ಪ್ರಚಾರ ಮಾಡೋಣ"

"ಅಂದ್ರೆ....ಬಾಹ್ಯ ಜಗತ್ತಿನ, ಪ್ರಕೃತಿಯಲ್ಲಿ ಅಡಗಿರೋ ಸೌಂದರ್ಯದ ಆರಾಧನೆ ಮಾಡೋದಾಗಲೀ ಅದರ ವರ್ಣನೆ ಮಾಡೋದಾಗಲೀ ಕೂಡದು. ನಮ್ಮ ಮನಸ್ಸಿನಲ್ಲಿ ಹುಟ್ಟೋ ಭಾವನೆಗಳನ್ನ ಅನುಭವಿಸೋ ಅನುಭವಗಳನ್ನು ಅವರ ಮನಸ್ಸಿಗೆ ತುರುಕೋಣ ಜನರಿಗೆ ಅರ್ಥವಾಗದೇ ಇದ್ದರೇ ಅವರಿಗೆ ತಲೆ ಇಲ್ಲ ಅಂತ ಸಾರ್‍ತಾ ನಮ್ಮ ಬುದ್ಧಿವಂತಿಕೇನ ಮೆರೆಸೋಣ, ಒಟ್ಟಿನಲ್ಲಿ ನಮ್ಮಲ್ಲಿರೋ ವಿಕೃತ ಪ್ರಜ್ಞೆಯ ಪ್ರದರ್ಶನ ಎಷ್ಟು ಚೆನ್ನಾಗಿ ಮಾಡಿದರೆ ಅಷ್ಟು ಜಾಣರಾಗ್ತೇವೆ"

"ನಿಂಗಿಷ್ಟೇ ಅರ್ಥವಾಗಿರೋದು.. ಹೋದ ವರ್ಷ ಒಂದು ಪುಸ್ತಕ ಪ್ರಕಟವಾಯ್ತಲ್ಲ....ಬರೆದಿದ್ದು, ಅದರ ಮೇಲೆ ಡಜನ್ ಗಟ್ಟಲೆ ಪ್ರಾಯೋಗಿಕ ವಿಮರ್ಶೆ ನಡೆ

ದದ್ದು ಗೊತ್ತಿಲ್ವಾ? ಅದೂ ವಿಶ್ವವಿದ್ಯಾನಿಲಯದವರಿಂದ "........"

"ಅವರಿಗಿನ್ನೇನು ಕೆಲಸ ? ರಾಜಕೀಯ ನಾಯಕರು ಪಾರ್ಟಿ ಕಟ್ಟಿದ ಹಾಗೆ ಹುಡುಗರ ಗುಂಪು ಕಟ್ಟಿ ಹಾರಾಡೋದು. ನಿಜ ಹೇಳಬೇಕೆಂದರೆ ನಂಗೆ ಆ ಪುಸ್ತಕದಲ್ಲಿ ಒಂದು ಪ್ಯಾರಾನೂ ಅರ್ಥವಾಗಲಿಲ್ಲ. ನೀನು ಹೇಳೋ ಹಾಗೆ ಆ ಪುಸ್ತಕ ಅಷ್ಟು ಚೆನ್ನಾಗಿದ್ದಿದ್ದರೆ ಅದಕ್ಕೆ ಈ ಸಲ ಅಕಾಡಮಿ ಪ್ರೈಸ್ ಬರಬಹುದಾಗಿತ್ತಲ್ಲ. ?"

"ಸರಿ ನಿನಗೇ ಅರ್ಥವಾಗದ್ದು ಇನ್ನೂ ಆ ಮುದಿ ಸಾಹಿತಿಗಳಿಗೆ ಅರ್ಥವಾಗತ್ಯೇ ?"

"ಸದ್ಯ, ಅರ್ಥವಾಗಲಿಲ್ಲ. ಆದ್ದರಿಂದಲೇ ಇನ್ನೂ ಬದುಕಿದಾರೆ ಅಂತ ಕಾಣುತ್ತೆ."

"ನಾವು ಅಂತಹ ಪುಸ್ತಕಗಳನ್ನ ನೂರಾರು ಬರೆದು ಪ್ರಕಟಿಸಬೇಕು."

ಯಾಕೆ ? ಅಂಥಾ ಪುಸ್ತಕಗಳನ್ನ ಈಗಾಗ್ಲೆ.... ಸಾಹಿತಿಗಳು ಪ್ರಕಟಿಸ್ತಾ ಇಲ್ವೆ ?

"ಥತ್! ಅವರದ್ದು ವ್ಯಾಪಾರದ ದೃಷ್ಟಿ. ನಮ್ಮದು ಸಾಹಿತ್ಯ ಸೇವೆ. ಸಾಹಿತ್ಯ ಸೇವೆ ಮಾಡುವಾಗ ಸ್ವಾರ್ಥಕ್ಕೆಡೆ ಇರಬಾರದು"

"ಹೂಂ, ಆದಾಯ್ತು ಇನ್ನೇನು ? ಅಂದಹಾಗೆ ಪಾಪ, ಈ ನಮ್ಮ ಲೇಖಕಿಯರಿಗೆ ಈ ಅಕಾಡಮಿ ಯಾವ ಪ್ರೈಜು ಕೊಡ್ತಾ ಇಲ್ಲ. ಅವರೂ ನಮ್ಮ ಹಾಗೆ ಹೊಟ್ಟೆ ಉರ್ಕ್ಕೋತಿದ್ದಾರೆ. ಅವರಿಗೂ ಕೆಲ ಬಹುಮಾನ ಕೊಟ್ಟು ಬಿಡೋಣ ಏನಂತಿಯಾ ಐಡಿಯಾ ?"

"ನಿನ್ನ ತಲೆ ಇದ್ದ ಹಾಗೇ ಇದೆ. ಅವರಿಗೇನು ಬರುತ್ತೆ ಮಣ್ಣು ?"

"ಮಣ್ಣು? ಮತ್ತೆ ಯಾವ ಪಬ್ಲಿಷರ್ ನೋಡಲಿ ಅವರ ಪುಸ್ತಕಾನೇ ಹಾಕ್ತೀನೀಂತಾನೆ. ಯಾರ ಕೈಲಿ ನೋಡಲಿ ಅವರು ಬರೆದ ಪುಸ್ತಕಾನೇ ಕಾಣ್ಸತ್ತೆ. ಮಣ್ಣಾಗಿದ್ರೇ ಯಾರು ಓದುತ್ತಾ ಇದ್ದರು ?"

ಅವನಿಗೆ ರೇಗಿದ ಹಾಗೆ ಕಾಣುತ್ತೆ.

"ಅವರಿಗೇನು ಬರೆಯೋಕೆ ಬರುತ್ತೋ ? ಹಳಸಲು ಸಾಹಿತ್ಯ" ಮುಖ ಸಿಂಡರಿಸಿ "ಹಾವಿನ ಬಾಲದ್ಹಾಗೆ ಮುದುರಿಕೊಂಡು ಬಿದ್ದಿರೋರು ನಮ್ಮ ಸಮ ಆಗಲಿಕ್ಕೆ ಸಾಧ್ಯವೆ ? ಅವರ ಸಾಹಿತ್ಯದ ತುಂಬ ಬಾಣಂತಿ ಕೋಣೆ ವಾಸನೆ. ಅಡಿಗೆ ಮನೆ ಒಗ್ಗರಣೆ ಅಷ್ಟೆ ಕೈಲಾಗೋದು ಅವರಿಗೆ. ಈ ಅಡಿಗೆ ಮನೆ ಸಾಹಿತ್ಯ ಅಂದರೆ ನಂಗೆ ವಾಕರಿಕೆ ಬರುತ್ತೆ, ಅದನ್ನ ಕತ್ತೆಗಳೂ ತಿನ್ನೋಲ್ಲ"

ನಾನು ಮನಸ್ಸಿನಲ್ಲಿ "ಹೌದು ಸಹಜ. ಇವನು ಅಡಿಗೆ ಮನೆ ಬಿಟ್ಟು ಎಷ್ಟು ವರುಷ ಆಯ್ತು, ಯಾವಾಗಲೂ ಬಾರು, ಹೋಟೆಲ್‌ಗಳಲ್ಲೇ ಕಾಲ ಹಾಕ್ತಾ ಇರೋ ಇವನಿಗೆ ಅಡಿಗೆ ಮನೆ ವಾಸ್ನೆ ಕಂಡ್ರೆ ಆಗದೇ ಇರೋದು ಆಶ್ಚರ್ಯವಲ್ಲ." ಅಂದುಕೊಂಡೆ, ಮೇಲಕ್ಕೆ ಮಾತ್ರ,

"ಹೌದ್ಹೌದು. ಯಾವಾಗಲೂ ನೊಣ ಹೊಡೀತಾಲೆ ಮೂಗಿನ ಸಂಬಳದ ಬಗ್ಗೆ ಬೆತ್ತಲೆ ಹೆಣ್ಣಿನ ಬಗ್ಗೆ ಅಲ್ದೆ ನಿನ್ತಲೇಲಿರೋ ಗಜಿಬಿಜಿನ್ನೆಲ್ಲಾ ಪುಟಗಟ್ಟಲೆ ಬರೆದು ಬರೆದು ಬಿಸಾಕೋ ನಿನ್ನ ಸೃಜನಶೀಲ ಸಾಹಿತ್ಯ ಇಂದು ಯಾರಿಗೆ ಉಪಯೋಗವಾಗ್ತಿದೆಯೋ ? ಹೀಗೆ ಕೇಳಿದೆ ಅಂತ ಕೋಪಿಸ್ಕೋಬೇಡ"

"ಅಯ್ಯೋ ಪೆಚ್ಚೆ! ನಾವು ಬರೆದದ್ದು ಜನರಿಗೆ ಉಪಯೋಗ ವಾಗಲೀಂತಾನೇ ?"

"ಮತ್ತೆ ?"

"ಅವರಿಗೆ ಬೇಕಾಗಿರೊದು ಸಾಹಿತ್ಯ ಅಲ್ಲ ಯಾರಿಗೂ ಗಟ್ಟಿಯಾಗಿ ಹೆಳ್ಬೇಡ ಅವರಿಗೆ ಬೇಕಾಗಿರೋದು ಊಟ ಬಟ್ಟೆ ಅಷ್ಟೇ" "ಅಷ್ಟೇನೆ?"

"ಹೌದು ಅವರ ತಾಪತ್ರಯ ಅವರಿಗೆ ನಮ್ಮ ತಾಪತ್ರಯ ನಮಗೆ ಹೂಂ, ಹೋಗೋಣ ನಡಿ ಹೊತ್ತಾಯ್ತು. ಈ ಸಲ ಬರೋವಾಗ ನಮ್ಮ ಯೋಜನೆಗಳನ್ನ ವಿವರವಾಗಿ ಬರಕೊಂಡು ಮೂರು ಕಾಪಿ ಮಾಡಿ ತೊಗೊಂಡ್ಬಾ" ಎಂದ.

ಇದಾದ ಕೆಲವು ತಿಂಗಳಲ್ಲಿ ನಮ್ಮ ಸತ್ಯಮೂರ್ತಿಯ ಪುಸ್ತಕಕ್ಕೆ ಅಕಾಡಮಿ ಬಹುಮಾನ ಕೊಟ್ಟಾಗ ಏರ್ಪಡಿಸಿದ ಕೂಟಕ್ಕೆ ನಾನೂ ಹೋಗಿದ್ದೆ. ಹೋಗುವಾಗ ತರುಣರ ಹೊಸ ಅಕಾಡಮಿ ಕಟ್ಟುವ ಯೋಜನೆಗಳನ್ನು ಮೂರು ಕಾಪಿ ತೆಗೆದುಕೊಂಡು ಹೋಗಿದ್ದೆ. ಸತ್ಯಮೂರ್ತಿ ಆ ಯೋಜನೆಗಳನ್ನು ಆ ಮುದಿ ವೈಗಳ್ಳರೆ

ಮುಖದ ಮುಂದೆ ಹಿಡಿದು ಆವರು ಕೊಡಲು ಬಂದ ಬಹುಮಾನ ಅವರ ಮುಖಕ್ಕೆ ಎಸೆಯುತ್ತಾನೆಂದು, (ಆದಷ್ಟು ಜನಕ್ಕೆ ಪ್ರಚಾರ ಮಾಡಿದ್ದೆ) ಅದನ್ನು ನೋಡಲು ನನ್ನ ಸ್ನೇಹಿತರೂ ಹಾಜರಿದ್ದರು. ಆದರೇ ನಾವು ಅಲ್ಲಿ ಕಂಡಿದ್ದು–ಸತ್ಯಮೂರ್ತಿ ಅಕಾಡಮಿಯವರಿಗೆ ತಲೆಬಾಗಿ ನಮಸ್ಕಾರ ಮಾಡಿ ಅವರು ಕೊಟ್ಟ ಬಹುಮಾನವನ್ನು ಬಹು ವಿನಯದಿಂದ ಸ್ವೀಕರಿಸಿ ಆ ಹಳಸಲು ಸಾಹಿತಿಗಳ (ಅವನ ಭಾಷೆಯಲ್ಲಿ) ಸಾಲಿನಲ್ಲಿ ರಾರಾಜಿಸುತ್ತ ಗರ್ವದಿಂದ ಸುತ್ತ ನೋಡುತ್ತ ಕುಳಿತಿದ್ದ. ನಮ್ಮವರ ಎದುರಿಗೆ ನನ್ನ ತೇಜೋಭಂಗವಾದಂತಾಗಿ ನಾನು ಹೊರಕ್ಕೆ ಬಂದು ಬರಹೋಗುವವರನ್ನು ನೋಡುತ್ತಿದ್ದೆ. ಹೊಸ ತರುಣರ ಅಕಾಡಮಿ ಕಟ್ಟಲು ತಯಾರಿಸಿದ ಯೋಜನೆಯ ಕಾಪಿಗಳು ನುಸುಳಿ ನನ್ನ ಕೈಯಿಂದ ಜಾರಿಬಿತ್ತು. ಅಲ್ಲೇ ಇದ್ದ ಮೋಟು ಗೋಡೆಯ ಹಿಂದೆ ಹೊರಳಾಡುತ್ತಿದ್ದ ಕತ್ತೆ ಅದನ್ನು ಸ್ವಾಹಾ ಮಾಡಿತು. ಆವನ ಪ್ರಾಮಾಣಿಕ ಸಾಹಿತ್ಯಕ್ಕೆ ಬಹುಮಾನ ನೀಡಿದ ಅಕಾಡಮಿಯ ಪ್ರಾಮಾಣಿಕತೆಯ ಬಗ್ಗೆ ಯೋಚಿಸುತ್ತ ಆ ಮೋಟು ಗೋಡೆಯ ಮೇಲೆ ತಲೆ ಮೇಲೆ ಕೈ ಹೊತ್ತು ಕುಳಿತೆ.

---

# ವಕೀಲಳಾಗಿ ನಾನು

—ಎಸ್. ಪ್ರಮೀಳಾ

ಅಂದು—

ಅದೇ ತಾನೆ ವಕೀಲಿ ವೃತ್ತಿಯಲ್ಲಿ ಮೊದಲು ಕಾಲಿಟ್ಟು ಕೆಂಪು ಕಟ್ಟಡದ ಒಳಗೆ ಇಣುಕಿದಾಗ, ಕಂಡಿದ್ದು ಹಲವಾರು ಅಪರಿಚಿತ ಮುಖಗಳು. ಕೆಲವು ದೃಷ್ಟಿಗಳು ಏಕೀಕೃತವಾಗಿ ನನ್ನನ್ನೇ ಬಕಪಕ್ಷಿಗಳಂತೆ ನೋಡಿದಾಗ ಕುಹಕ ನಗೆ ನಕ್ಕಾಗ, ವ್ಯಂಗ ನುಡಿ ನುಡಿದಾಗ, ಆವುದೋ ಭಯ ಮನವನ್ನಾವರಿಸಿ ಹೆಜ್ಜೆ ಅಲ್ಲಿಯೇ ಹೂತಂತೆ ಭಾಸವಾದರೂ ಇವೆಲ್ಲಾ ಭಾವೀ ಸಹೋದ್ಯೋಗಿಗಳು ನನ್ನಂತಹವರಿಗೆ ಸ್ವಾಗತಿಸುವ ಸಹಜ ಸೌಹಾರ್ದತೆಯ ಲಕ್ಷಣಗಳಿರಬೇಕೆಂದು ಭಾವಿಸಿ, ಕಂಡಿದ್ದ ಕಾಣದಿಂದ್ದ, ಎಲ್ಲಿಯೋ ಇರುವ, ಎಲ್ಲೆಲ್ಲಿಯೂ ಇರುವನೆಂಬ ಭಗವಂತನನ್ನು ಪ್ರಾರ್ಥಿಸಿ ಹಿರಿಯರ ಅಪೇಕ್ಷೆಯಂತೆ ಬಲಗಾಲಿಟ್ಟು ಪ್ರವೇಶಿಸಿದೆ, ವಕೀಲಳಾಗಲ್ಲ, ಕಕ್ಷಿದಾರಳಾಗಿ. ವಕೀಲರಿಗೆ ಕಕ್ಷಿದಾರರ ಕಷ್ಟ ಗೊತ್ತಾಗಬೇಕಾದರೆ, ಅವರ ಕಕ್ಷಿದಾರರಾಗಬೇಕಷ್ಟೆ. ಅಕ್ಕಮಹಾದೇವಿ ಹೇಳಿರುವಂತೆ "ನೊಂದ ನೋವ ನೋಯದವರೆತ್ತ ಬಲ್ಲರು" ಅಂತೆಯೇ ವೃತ್ತಿಯನ್ನು ಸೇರಿದ ಹೊಸ್ತಿಲಲ್ಲೇ ಕಕ್ಷಿಗಾರಳಾಗಿ ಅನುಭವ. ಅದೂ ವಿಧ್ಯಾರ್ಥಿಯ ದೆಸೆಯಲ್ಲಿ ಪರೀಕ್ಷಕರ ಮೇಲೆ ನನ್ನ ಸವಾಲು "ಈ ಪರೀಕ್ಷಕರು ನನ್ನನ್ನು ಪರೀಕ್ಷಿಸಲು ಹಕ್ಕಿಲ್ಲ ಕಾರಣ ಅವರು ನಾನು ತೆಗೆದುಕೊಳ್ಳುತ್ತಿರುವ ಪರೀಕ್ಷೆಯನ್ನು ಓದಿಲ್ಲ–ಹಾಗೂ ಅದರಲ್ಲಿ ಉತ್ತೀರ್ಣರಾಗಿಲ್ಲ ಎಂಬುದು.

ಅಂತೂ ನನ್ನ ಅರ್ಜಿ ಅಂದು ನ್ಯಾಯಪೀಠದ ಮುಂದೆ ವಿಚಾರಣೆಗೆ ಬಂತು. ನನ್ನ ಮೇಧಾವಿ ವಕೀಲರಿಗೆ (Sri S.K. Venkatarangiyengar) ನ್ಯಾಯಾಧೀಶರ ಪ್ರಶ್ನೆ (Somanatha Iyer) ನಿಮ್ಮ ಕಕ್ಷಿದಾರಳ ಅಹವಾಲೇನು ? ವಕೀಲರ ಉತ್ತರ ಅವಳ ಪರೀಕ್ಷರು ಕೇವಲ L.L.B. ಅಂತೆ. ಆದುದರಿಂದ ಆ ಡಿಗ್ರೀಗೆ ಮೇಲ್ಪಟ್ಟ ಪರೀಕ್ಷೆಯನ್ನು ಅಂದರೆ (M.L.) ಡಿಗ್ರೀ ಪರೀಕ್ಷೆಗೆ ಈ ಪ್ರತಿವಾದಿಗಳು ಪರೀಕ್ಷಕರಾದಲು ಅರ್ಹರಲ್ಲನಂತೆ ? ನ್ಯಾಯಾಧೀಶರ ಮರು ಪ್ರಶ್ನೆ— L.L.B. ಎಂದರೇನು ? ವಕೀಲರ ಹಾಸ್ಯ ಭರಿತ ಉತ್ತರ—"Lovely Little Boys My Lords" ನ್ಯಾಯಾಧೀಶರ ಮಾರ್ನುಡಿ—ಅಂದರೆ ನಿಮ್ಮ ಕಕ್ಷಿದಾರಳು L.L.G. ಎಂದೆ ! ! ! ನ್ಯಾಯಾಲಯ ಪೂರ್ತಿ ನಗೆಗಡಲಲ್ಲಿ ಮುಳುಗಿತು. ಅದರ ಅರ್ಥ ನನಗಾಗಲು ಕೆಲಸಮಯ ಹಿಡಿಯಿತು. ಕಕ್ಷಿದಾರಳಾಗಿ ನಾನು ನನ್ನ ಕೇಸಿನಲ್ಲಿ ಸೋಲನ್ನು ಅನುಭವಿಸಿದೆ—ಹಾಗೂ ಕಕ್ಷಿದಾರರ ದುಃಖ ಹೇಗಿರುತ್ತದೆ ಎಂಬುದನ್ನರಿತೆ—ಇದು ನನ್ನ ವೃತ್ತಿಯಲ್ಲಿ ನಾನು ಕಲಿತ ಮೊದಲ ಪಾಠ.

ಸೋಲಲ್ಲಿಯೂ ಗೆಲುವಿದೆ ಎಂಬುದು ಸುಳ್ಳಲ್ಲ. ನಾನು ನನ್ನ ಕೇಸಿನಲ್ಲಿ ಸೋತರೂ, ಪರೀಕ್ಷೆಯಲ್ಲಿ ಅದೇ ಪರೀಕ್ಷಕರ ಕೈಯಲ್ಲಿ ಉತ್ತೀರ್ಣಳಾದೆ, ಅಂದರೆ ನಾನು ಯಾರಲ್ಲಿ ನಂಬಿಕೆಯಿಟ್ಟಿರಲಿಲ್ಲವೋ, ಯಾವ ಪರೀಕ್ಷಕರನ್ನು ಪ್ರತಿ ಕಕ್ಷಿಗಳನ್ನಾಗಿ ಮಾಡಿದ್ದೆನೋ, ಯಾರು ನನ್ನ ದೋಷಾರೋಪಣೆಗಳಿಗೆ ಒಳಗಾಗಿದ್ದರೂ ಅವರೇ ನನ್ನನ್ನು ಉತ್ತೀರ್ಣಗೊಳಿಸಿದರು ಎಂದರೆ, ನನಗೆ ಜೀವನದಲ್ಲಿ ನಂಬಿಕೆಯುಂಟಾಯಿತು. ಆ ವರ್ಷ ಪರೀಕ್ಷೆಯಲ್ಲಿ ಉತ್ತೀರ್ಣಳಾದವಳು ನಾನೊಬ್ಬಳೇ ?

ಒಮ್ಮೆ ಬೆಂಗಳೂರು ಸಿಟಿ ಸಿವಿಲ್ ಜಡ್ಜ್‌ರವರ ಕೋರ್ಟಿನಲ್ಲಿ ಅದೇ ತಾನೆ ಹೊಸ ನ್ಯಾಯಾಧೀಶರೊಬ್ಬರು ಬಂದಿದ್ದರು. ನಾನೂ ನನ್ನ ಕಕ್ಷಿಗಾರರ ಪರ ಕೇಸಿನ ಸಂಬಂಧದಲ್ಲಿ ನ್ಯಾಯಾಲಯಕ್ಕೆ ಹೋದೆ. ದುರದೃಷ್ಟವಶಾತ್-ಅಂದು ಯಾವುದೋ ವಿವಾಹಕ್ಕೆ ಸಂಬಂಧಪಟ್ಟ

ಕೇಸಿನ (Matrimonial Case) ಬಗ್ಗೆ ಕೋರ್ಟಿನ ಅಧಿಕಾರ, ಪಾರ್ಟಿಗಳ ಹೆಸರು ಕೂಗುತ್ತಿದ್ದರು. ನಾನೂ ಒಳಗೆ ಕಾಲಿಟ್ಟೆ-ಹಾಗೂ ವಕೀಲರಿಗೆ ಮೀಸಲಾಗಿರುವ ಸ್ಥಳಕ್ಕೆ ಹೋಗುವಷ್ಟರಲ್ಲಿ, ನ್ಯಾಯಾಧೀಶರು ನನ್ನನ್ನು ನಿರ್ದೇಶಿಸಿ-( ನನ್ನನ್ನು ಕಕ್ಷಿದಾರಳು ಎಂದು ಭಾವಿಸಿ ) ಹೀಗೆ ಬಾಮ್ಮ ಯಾಕೆ ನಿಮ್ಮೆಜಮಾನರ ಹತ್ತಿರ ಹೋಗು ವುದಿಲ್ಲವೆ ? ಮದುವೆ ತಾನೆ ಯಾಕಾದೆ ? ಇತ್ಯಾದಿ ಇತ್ಯಾದಿ ಪ್ರಶ್ನೆಗಳ ಸುರಿಮಳೆಯನ್ನೇ ಹಾಕಿದರು. ನಾನು ವಿಷಯ ಏನೆಂಬುದನ್ನೇ ಅರಿಯದೆ ಕೆಲಕ್ಷಣ ಕಕ್ಕಾಬಿಕ್ಕಿ ಯಾಗಿ (ನಾಟಕದ rehearsal) ನೆನಪಾಗಿ ಮಾತು ಬರದೆ ನಿಂತಾಗ-ಅಲ್ಲಿದ್ದ ಹಿರಿಯ ವಕೀಲರೊಬ್ಬರು, ಧೈರ್ಯ ಮಾಡಿ-ಯುವರ್ ಹಾವರ್-ಇವರು ಅಡ್ವೋಕೇಟರು, ಕಕ್ಷಿದಾರರಲ್ಲ ಎಂದಾಗ-ನ್ಯಾಯಾಧೀಶರ ಮುಖ ಕೆಂಪಾಗಿ ಬೆವರನ್ನರಿಸಿ-What ? ಅನ್ನುವಷ್ಟರಲ್ಲಿ-ನಾನು ನಿಜವಾ ಗಿಯೂ ಕಕ್ಷಿದಾರಳು ಎಂಬ ಭ್ರಮೆ ದೂರವಾಗಿ ವಕೀ ಲರು ಕುಳಿತುಕೊಳ್ಳುವ ಸ್ಥಳಕ್ಕೆ ಧಾವಿಸಿ ಬಂದೆ, ಹಾಗೂ ಅಂದೇ ವಕೀಲರು ಮತ್ತು ಕಕ್ಷಿದಾರರು ಬೇರೆ ಎಂದು ನ್ಯಾಯಾಧೀಶರು ಹಾಗು ಕಕ್ಷಿದಾರರು ತಿಳಿಸುವಂಥ ಉಡುಪನ್ನು ಧರಿಸಲು ಅಂದರೆ ಕರೀ ಕೋಟನ್ನು ಹಾಕಲು ನಿರ್ಧರಿಸಿದೆ. (ವಿ.ಸೂ. ಮಹಿಳಾ ವಕೀಲರು ಕಪ್ಪು ಕೋಟನ್ನು ಹಾಕಬೇಕೆಂದು ಕರ್ನಾಟಕ ರಾಜ್ಯದಲ್ಲಿ ಯಾವ ನಿರ್ಭಂಧ ಅಥವಾ ನಿಯಮಗಳಿಲ್ಲ, ಆದರೆ ಹೈ ಕೋರ್ಟಿನಲ್ಲಿ ಕಪ್ಪು ಗೌನ್ ಹಾಕಬೇಕಾದ್ದು ಅನಿ ವಾರ್ಯ.)

ಅದೇ ಸಮಯದಲ್ಲಿ ಒಂದುದಿನ ತುಂತುರು ಮಳೆ ಬೀಳುತ್ತಿತ್ತು. ಹೈ ಕೋರ್ಟಿನಲ್ಲಿ ಡಾಕ್ಟರುಗಳ ಸರ್ವಿಸ್ ರಿಟ್ ನ್ಯಾಯಪೀಠದ ಮುಂದೆ ಬಂದಿತ್ತು. ಸಾಕಷ್ಟು ತಯಾರಿ ನಡೆಸಿ ಹವಾಮಾನದ ಪ್ರಯುಕ್ತ ಹಸುರು ಬಣ್ಣದ ಉಲ್ಲನ್ ಸ್ವೆಟರೊಂದನ್ನು ಧರಿಸಿ, ಅದರ ಮೇಲೆ ನಮ್ಮ ದಿನನಿತ್ಯದ ಕಪ್ಪುಗೌನ್ ಹಾಕಿ ಕೋರ್ಟಿನಲ್ಲಿ ಕುಳಿತಿದ್ದೆ. ಅದೇಕೋ ಅಂದು ನ್ಯಾಯಾಧೀಶರು ಹಲವಾರು ಬಾರಿ ನನ್ನತ್ತ ನೋಡು ತ್ತಿದ್ದುದು ನನ್ನ ಗಮನಕ್ಕೆ ಬಂದರೂ ಸುಮ್ಮನೆ ಕುಳಿತಿದ್ದೆ. ನನ್ನ ಸರದಿ ಬಂದಾಗ ಎದ್ದು ನನ್ನ ವಾದ ವನ್ನು ಮುಂದಿಡಲು ಪ್ರಯತ್ನಿಸುವಷ್ಟರಲ್ಲೇ—ದುಗುಡ ತುಂಬಿದ ಮುಖದಿಂದ ನ್ಯಾಯಾಧೀಶರು ನನ್ನ ವಾದ ಮಾಡಲು ಬಿಡದೆ "ಹೀಗೆ ಕೋರ್ಟಿಗೆ ಜೀಬ್ರಾಗಳ ತರಹ ಬಂದರೆ ನಾವು ವಾದ ಮಾಡೋಕೆ ಬಿಡುವುದಿಲ್ಲ ಏನಮ್ಮ ನ್ಯಾಯಾಧೀಶರುಗಳು ಮನುಷ್ಯರೆ, ಅವರು ವಾದ ವಿವಾದಗಳನ್ನು ಕೇಳುವಾಗ—ಅವರ ದೃಷ್ಟಿ ಪಲ್ಲಟ (divert) ಆಗಬಾರದು. ಹೀಗೆ ನೀವು ಚಿತ್ರ ವಿಚಿತ್ರ ಉಡುಪುಗಳನ್ನು ಹಾಕೊಂಡು ಬಂದರೆ ಹೇಗೆ—ಎಂದಾಗ ನನ್ನ ಕಕ್ಷಿದಾರರ ಮುಂದೆಯೇ ಈ ಪ್ರವರ ಬಂದಾಗ ನನ್ನ ಸ್ಥಿತಿ—ಭೂಮಿ ಬಾಯ್ಬಿಡಬಾರದೇ ಎಂದಾದರೂ —ನ್ಯಾಯಯಾಧೀಶರ ವೃತ್ತಿಗೌರವವನ್ನು ವಾಕ್ಯದ ಆಳವನ್ನೂ ಅಗಲವನ್ನೂ ಗಮನಿಸಿ, ಅವರ ಕಾಪಾಡುವ ಹೊಣೆಹೊತ್ತ ಉದ್ದೇಶವನ್ನೂ ಜೀವನಪರ್ಯಂತ ವೃತ್ತಿ ಯಲ್ಲಿ ಅಳವಡಿಸಿಕೊಳ್ಳುವೆ ಎಂದು ಪ್ರತಿಜ್ಞೆ ಮಾಡಿ— ಅಂದಿನಿಂದ ನ್ಯಾಯಾಲಯದಲ್ಲಿ ಕಪ್ಪು ಕೋಟಿನ ವಿನಹ ಮತ್ಯಾವ ಬಣ್ಣದ ಉಡುಪಿಗೂ ಮಹತ್ವವಿಟ್ಟಿಲ್ಲ. ಇದು ನನ್ನ ವೃತ್ತಿಯಲ್ಲಿ ಎರಡನೇ ಪಾಠ.

ಒಂದು ಬಾರಿ ಹೆಂಡತಿಯನ್ನು ಬಿಟ್ಟ ತಪ್ಪಿಗಾಗಿ ಗಂಡನಿಂದ ಜೀವನಾಂಶ ಕೊಡಿಸಿ ಎಂದು ಮೊರೆಯಿಟ್ಟು ಹೆಣ್ಣಿನ ಪರವಾಗಿ ಹೈಕೋರ್ಟಿನಲ್ಲಿ ನನ್ನ ಕಕ್ಷಿದಾರಳ ಪರವಾಗಿ ವಾದ ಮುಂದಿಟ್ಟಾಗ—ನಿನ್ನ ಕಕ್ಷಿದಾರಳು ಗಂಡನಿಂದ ಬೇರೆ ಏಕಿರುತ್ತಾಳೆ—ಜೀವನಾಂಶ ಏಕೆ ಬೇಡುತ್ತಾಳೆ— ಕಾರಣ ಏನು ಎಂಬ ಹಲವಾರು ಪ್ರಶ್ನೆ ಗಳು ಮೇಲಿನಿಂದ ಸುರಿಮಳೆಯಾದಾಗ—ನಿಧಾನವಾಗಿ ನಾನು "ಗಂಡ ಹೊಡೆಯುತ್ತಾನೆ, ಹಿಂಸೆ ಕೊಡುತ್ತಾನೆ" ಇತ್ಯಾದಿ (Physical Cruelty my Lord) ಎಂದಾಗ —ನ್ಯಾಯಾಧೀಶರು, Oh! It is Cruelty or Pleasure—! You are not married—You don't understand ಎಂದು ಹೇಳಿ — ಕೊನೆಗೂ ಅರ್ಜಿಯನ್ನು ಮುಂದೆ ವಾದ ಬೆಳೆಸಲಿಚ್ಛಿಸದೆ ಸ್ವೀಕರಿಸಿ ದರು. ಮನುಷ್ಯನ ಸುಖ ದುಃಖ ಅವನು ನೋಡುವ ದೃಷ್ಟಿಯನ್ನವಲಂಬಿಸುತ್ತದೆ ಎಂಬುದಕ್ಕೆ ಇದು ಒಂದು ದೃಷ್ಟಾಂತ— ಹಾಗೂ ನಾವು ತಿಳಿಯದಿರುವ ಹಲವಾರು ವಿಷಯಗಳಿರುತ್ತವೆ ಎಂಬುದಕ್ಕೆ ನಿದರ್ಶನ.

ಅದಾವುದೋ ಕೇಸಿನ ಗುಂಗಿನಲ್ಲಿ ಹಲವಾರು ಪುಸ್ತಕಗಳ ಮಧ್ಯೆ ಒಂದು ಸಂಜೆ ನನ್ನ ಕಚೇರಿಯಲ್ಲಿ 9 ಗಂಟೆಯ ಸುಮಾರಿನಲ್ಲಿ ಏಕಾಂಗಿಯಾಗಿ ಮಗ್ನಳಾಗಿದ್ದ ನನಗೆ ಯಾವುದೋ ಮದ್ಯದ ವಾಸನೆ ಬಂದಂತಾ

ಶಾಗಿ ಕತ್ತೆತ್ತಿ ನೋಡಿದಾಗ—ಕಣ್ಣಿಗೆ ಬಿದ್ದದ್ದು, ನನ್ನ ಟೇಬಲ್ ಮುಂದಿರುವ ಕುರ್ಚಿಗಳ ಮೇಲೆ ಕೈಯಲ್ಲಿ ಚಾಕುವನ್ನಿಟ್ಟುಕೊಂಡು ತಿರುಗಿಸುತ್ತಾ ಕುಳಿತಿದ್ದ ವ್ಯಕ್ತಿ ಹಾಗೂ ಅವನ ಜೊತೆಗಾರನೊಬ್ಬ. ತಲೆ ಕೆದರಿತ್ತು. ಅವರಿಬ್ಬರ ಕಣ್ಣು ಕೆಂಪಾಗಿತ್ತು. ತೂರಾಡುತ್ತಿದ್ದ ದೇಹ. ಪರಿಸ್ಥಿತಿಯ ಅರಿವಾಗಿ ಯಾರನ್ನಾದರೂ ಕರೆಯೋಣ ಎಂದು ಮನಸ್ಸಿನ ಭಯವನ್ನು ಹೊರಗೆ ತೋರದೆ ಸಮಯಕ್ಕೆ ತಕ್ಕ ಸಂಮಯವನ್ನನುಸರಿಸಿ —ಪ್ರಶ್ನಿಸಿದೆ— "ಏನಪ್ಪ ಏಕೆ ಬಂದಿದ್ದೀರಿ ? ನಿಮಗೇನಾದರೂ ತೊಂದರೆಯಾಗಿದೆಯೋ—" ಮಾತು ಮುಗಿಸುವ ಮುನ್ನ ಸಿಡಿಲಿನಂತೆ ಉತ್ತರ ಬಂತು— "ಏನು ಕಾಣತಾ ಇದೆಯೇ ಕೈಯಲ್ಲಿ ಏನಿದೆ ಅಂತ. —ನಾಳೆ ಆ ಕೇಸನಲ್ಲೇನಾದರೂ ಬಂದಿದ್ದೇ ಆದ್ರೆ—ಕೋರ್ಟಿನಲ್ಲೇನಾದ್ರೂ ಕಾಲಿಟ್ಟದ್ದೇ ಆದ್ರೆ" ಅಂತಹೇಳಿ ಕೈಯಲ್ಲಿದ್ದ ಚಾಕುವನ್ನು ಇರಿಯುವಂತೆ ಮಾಡಿ—ತೋರಿಸಿದಾಗ, ನನ್ನ ಕಾಲು ನಡುಗಲು ಶುರಾವಾಗಿತ್ತು. ನಾಲಿಗೆ ಒಣಗಿತ್ತು. ಮಾತು ತಡವರಿಸುತ್ತಿತ್ತು. ಆದರೂ ಅವರಿಗೆ, "ಅಷ್ಟೇ ತಾನೇ—ನಾನು ಬರೋಲ್ಲ. ನನಗೆ ನನ್ನ ಕಕ್ಷಿದಾರರು ಇಷ್ಟು ಕೆಟ್ಟವರು ಅಂತ ಗೊತ್ತಿರಲಿಲ್ಲ. ಅವರು ನಮ್ಮ ಆಫೀಸಿಗೆ ಬರದ ಹಾಗೆ ಮಾಡಿತೀನಿ" ಎಂದು ಹೇಳಿದಾಗ, ಕುಡಿತದ ಅಮಲಿದ್ದರೂ ಆಗಂತುಕರು ಸಮಾಧಾನಂಂದರಂತೆ ಕಂಡರು. ಹಾಗೂ ನನ್ನನ್ನು ಮತ್ತೋಮ್ಮೆ ಎಚ್ಚರಿಸಿ ಅಲ್ಲಿಂದ ಕಾಲ್ತೆಗದರು. ಅವರು ಹೋಗಿ ಹತ್ತು ನಿಮಿಷಗಳಾದರೂ ನನಗೆ ಆಫೀಸ್ ಬಿಟ್ಟು ಕೆಳಗೆ ಬರಲು ಭಯಾವಾಗಿ ತಕ್ಷಣ ನನ್ನ ತಂದೆಯ ಮನೆಯವರಿಗೆ ಫೋನ್ ಮಾಡಿ ಅವರು ಬಂದ ನಂತರ ಮನೆ ಸೇರಿದೆ. ಹಾಗೂ ಈ ವಿಷಯದಲ್ಲಿ ಕಂಪ್ಲೆಂಟ್ ಕೊಡಬೇಕೆ, ಬೇಡವೆ, ನಾನು ಮಾರನೆಯ ದಿವಸ ಕೋರ್ಟಿನಲ್ಲಿ ಹೆದರಿಸಿದ್ದ ಆ ಕೇಸಿನಲ್ಲಿ ಹಾಜರಾಗಬೇಕೆ ಬೇಡಿವೇ ಎಂಬ ಜಿಜ್ಞಾಸೆಯಲ್ಲಿದ್ದಾಗ, ಈ ವಿಷಯದಲ್ಲಿ ಅಂದಿದ್ದ ದಿವಂಗತ ಮುಖ್ಯ ನ್ಯಾಯಧೀಶರಲ್ಲಿ ಹೋಗಿ ವಿಷಯವನ್ನು ನಿವೇದಿಸಿದಾಗ ಅವರು ನನಗೆ, ಈ ವಿಷಯದಲ್ಲಿ ಕಂಪ್ಲೇಂಟ್ ಕೊಟ್ಟು ಅನವಶ್ಯಕ ಪಬ್ಲಿಸಿಟಿಗೆ ಆಸ್ಪದ ಕೊಡಬೇಡ. ನಿನ್ನ ಜೀವಕ್ಕೆ ಭಯವಿಲ್ಲದಂತೆ ಸೂಕ್ತವಾದ ಏರ್ಪಾಡನ್ನು ಮಾಡೋಣ ಎಂದು ಹೇಳಿ ಅಂದೇ ಪೋಲಿಸರ ರಕ್ಷಣೆ ಕೊಡಿಸಿದರು. ಹಾಗೂ ನನ್ನನ್ನು "ನೀನು ಯಥಾ ಪ್ರಕಾರ ಏನೂ ಆಗದವಳಂತೆ ಕೋರ್ಟಿನಲ್ಲಿ ಹಾಜರಾಗಮ್ಮ. ಇಲ್ಲದಿದ್ದರೆ ಜನ ಇವರನ್ನು ಹೆದರಿಸಿದರೆ ಕೋರ್ಟಿನಲ್ಲಿ ಹಾಜರಾಗುವುದಿಲ್ಲ ಎಂದು ಭಾವಿಸಿಯಾರು ಎಂದು ಸಮಯೋಚಿತ ಅಭಯೋಕ್ತಿ ನೀಡಿದರು. ಇಂದೇನಾದರೂ, ನನ್ನಲ್ಲಿ ಆತ್ಮಸ್ಥೈರ್ಯ, ಆತ್ಮ ವಿಶ್ವಾಸ ಇರುವುದದೇ ಆದರೆ ಅದು ದಿವಂಗತ ಮುಖ್ಯ ನ್ಯಾಯಾಧೀಶರಾದ ಶ್ರೀ ಹೊಂಬೇಗೌಡರಿಗೆ ಸಲ್ಲಬೇಕು."

ಇಂತಹ ಸಿಹಿ ಕಹಿ ಪ್ರಸಂಗಗಳೂ ನಮ್ಮ ವೃತ್ತಿಯಲ್ಲಿ ಹಲವಾರು ನಮ್ಮ ಜೀವನದಲ್ಲಿ ನಾವು ಕಾಣುವುದು, ಭಿನ್ನ ಜನಾಂಗ. ಕಳ್ಳತನ, ಮೋಸ, ಭ್ರಷ್ಟಾಚಾರಕ್ಕೆ ಸಿಕ್ಕಿ ನರಳಿ ಅಳುವವರು ಒಂದು ಕಡೆಯಾದರೇ, ಕೊಲೆ ದರೋಡೆ, ಯನ್ನು ವೃತ್ತಿಯನ್ನಾಗಿಸಿಕೊಂಡಿರುವವರು ಒಂದು ಕಡೆ. ಭಾಷೆ ವಿವಿಧ. ಸಂಸ್ಕೃತಿ ವಿಭನ್ನ. ನಡೆನುಡಿಗೆ ತಾರತಮ್ಯಗಳಿಲ್ಲದ, ವೈವಿಧ್ಯಮಯ ಕಕ್ಷಿಗಾರರ ನಡುವೆ ನಮ್ಮ ಜೀವನ. ಆದರೂ ಸತ್ಯಕೆಕ್ಕೆ ಜಯ ವಕೀಲ ವೃತ್ತಿಯೇ ಸಮ್ಮ ಕಾಯಕ. ನ್ಯಾಯಾಲಯವೇ ನಮ್ಮ ದೇವಾಲಯ.

---

ಅಹಂ ರುದ್ರೇ ಭಿರ್ವಸುಭ್ಧಿಶ್ಚ ರಾಮ್ಯಹ
ಮಾದಿತ್ಯೈರುತೆ ವಿಶ್ವೇದೇವಃ
ಅಹಂ ಮಿತ್ರಾ ವರುಣೋ ಭಾಭಿಭರ್ಮಹ
ಮಿಂದ್ರಾಗ್ನೀ ಅಹಮುಶ್ವಿ ನೋಭಾ ॥
—'ವಾಕ್' (ಋಗ್ವೇದ, ದಶಮಮಂಡಲಿ)




ಅಂಧ ಶ್ರದ್ಧೆಯ ಹಳಸು ಹಾಡಿಗೆ
ನನ್ನ ಶ್ರುತಿಗಿಟ್ಟು
ಅಪಸ್ವರವ ಒದರುವ ಬಾಯ್ಗೆ ಬೆಣೆ ಬಡಿಯಲು
ಬಿಡು ನನ್ನ........ಬಿಟ್ಟು ಬಿಡು.
ಹರಿಯ ಹದಗೊಳ್ಳುವ ಮುನ್ನ
ಕಿವಿಯ ಲಜ್ಜೆ ಕತೆಗಳ ಕೊರೆದು
ಪಲ್ಲಟಿಸುತ್ತಿರುವ ಮೌಲ್ಯಗಳತ್ತ
ಬಿಚ್ಚದಂತೆ ಎವೆಯ
ನಿಷ್ಠೆ – ನೇಮದ ಉರಿಕಾಡಿಗೆಯ ತೀಡಿ
ಎಚ್ಚರದಿ ಕಾಯುವವರ ಬಗ್ಗು ಬಡಿಯಲು
ಬಿಡು ನನ್ನ........ಬಿಟ್ಟುಬಿಡು
ಸವೆದು ಕಿಲುಬು ಹತ್ತಿದ ಮೌಲ್ಯಗಳನ್ನೆ
ಮೆಚ್ಚಿ ಒಳಕಿಸೆಯಲ್ಲಿಟ್ಟು
ಕಾಣಲು ಸಂಕೀರ್ಣತೆಯ
ಹೌಹಾರಿ ಮೂಗುಮುರಿದು

ಸಂಪ್ರದಾಯದ ಕರಾಳಕೂಪಕ್ಕೆ
ರಪ್ಪನೊಗೆದು ನಿರಾಳದಲ್ಲಿ
ನಿಟ್ಟುಸಿರು ಬಿಡುವವರ ಹುಡಿಗಟ್ಟಲು
ಡುಬಿ ನನ್ನ........ಬಿಟ್ಟುಬಿಡು
ಬಿಮ್ಮನೆ ಬಿಗಿದು ಸುತ್ತಿರುವ
ಬಿಚ್ಚದಾ ಗೋಜುಗಂಟುಗಳ
ಕಟಕಟನೆ ಕಡಿದು
ಕಟ್ಟಳೆಗಳ ಕಾಷ್ಟಗಳಿಗೆ
ಕಿಚ್ಚನ್ನಿಟ್ಟು ಧಗ್ಗನೆ ಉರಿಸಿ
ನನ್ನತನವ ನುಂಗಿ ನೊಣೆಯಲು
ಹವಣಿಸುವ ಗಿಡಗ— ಕಣ್ಣಿಗೆ
ಕವಣೆಕಲ್ಲು ಬೀರಲು
ಬಿಡು ನನ್ನ........ಬಿಟ್ಟುಬಿಡು

—ಜಾನಕಿಕೃಷ್ಣ

(ಆಕಾಶವಾಣಿ ಕೃಪೆಯಿಂದ)

# ಸ್ತ್ರೀಯರು ಮತ್ತು ಬ್ಯಾಂಕಿಂಗ್

—ಸುಶೀಲಾ ಪಡಿಯಾರ್

ಬ್ಯಾಂಕಿಂಗ್ ಮತ್ತು ಮಹಿಳೆಯರು — ಎಂಬುದಾಗಿ ಒಂದು ವಿಷಯವನ್ನು ಆಲೋಚಿಸಿ ಕೊಟ್ಟಿರುವಾಗ ಇವೆರಡು ಅಂಶಗಳಿಗೂ ಏನು ವಿಶೇಷ ಸಂಬಂಧವಿದೆ ಎಂಬ ಪ್ರಶ್ನೆ ಹೇಳುವುದು ಸಹಜ. ಬಹುಶಃ ನಮ್ಮ ದೇಶ ಭಾರತದಲ್ಲಿ ಇತರ ಅನೇಕ ವಿಷಯಗಳಲ್ಲಿರುವಂತೆಯೇ ಬ್ಯಾಂಕಿಂಗ್ ವಿಷಯದಲ್ಲೂ ಮಹಿಳೆಯರು ತುಂಬಾ ಹಿಂದೆ ಬಿದ್ದಿರುವರೆಂಬುದೇನಾದರೂ ಈ ವಿಷಯವನ್ನು ಆಯ್ಕೆ ಮಾಡುವುದರ ಹಿನ್ನೆಲೆಯಲ್ಲಿದ್ದೀತು. ಹಿಂದೆ ಬಿದ್ದಿರುವುದೇನೋ ನಿಜವೇ ಇರಬೇಕು. ಏಕೆಂದರೆ ಇವತ್ತಿಗೂ ಕೂಡ ಅತ್ಯಧಿಕ ಸಂಖ್ಯೆಯ ಸ್ತ್ರೀಯರಿಗೆ ಕೇವಲ ಒಂದು ಚೆಕ್ಕನ್ನು ಯಾವುದಾದರೂ ಬ್ಯಾಂಕಿನಲ್ಲಿ ಕ್ಯಾಶ್ ಮಾಡಿಕೊಳ್ಳುವ ವಿಧಾನವೇ ತಿಳಿದಿಲ್ಲವೆನಿಸುತ್ತದೆ. ಬ್ಯಾಂಕುಗಳು ನಡೆಸುವ ಇನ್ನೂ ಇತರ ಮತ್ತು ಸರಳವಲ್ಲದ ಕಾರ್ಯ ವಿಧಾನಗಳ ವಿಷಯದಲ್ಲಿ ಮಹಿಳೆಯರ ತಿಳಿವಳಿಕೆ ಎಷ್ಟರಮಟ್ಟಿನದು ಎನ್ನುವುದು ಪ್ರಶ್ನೆಯಾಗಿಯೇ ಉಳಿಯುತ್ತದೆ.

ಈಗಿನ ಸಂದರ್ಭಗಳಲ್ಲೂ ಕೂಡ ಬ್ಯಾಂಕುಗಳ ಅಗತ್ಯವನ್ನು ಪ್ರಶ್ನಿಸುವವರೂ ಸಹ ಅಪರೂಪವಾದರೂ ಅಲ್ಲಲ್ಲಿ, ಅದರಲ್ಲೂ ವಿಶೇಷವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಇನ್ನೂ ಕಾಣಬರುತ್ತಾರೆ. ಬ್ಯಾಂಕುಗಳ ಅಸ್ತಿತ್ವದ ಹಿಂದಿರುವ ಸೈದ್ಧಾಂತಿಕ ಸಮರ್ಥನೆಯನ್ನು ಅಂತಹವರು, ಸಂಪೂರ್ಣವಾಗಿ ಮನಗಾಣುವುದು ಅತ್ಯವಶ್ಯಕ. ಅಧಿಕ ಅಭಿವೃದ್ಧಿ ಸಾಧಿಸಿರುವ ಪಾಶ್ಚಾತ್ಯ ರಾಷ್ಟ್ರಗಳಲ್ಲೇ ಬ್ಯಾಂಕಿಂಗ್ ಸೌಲಭ್ಯಗಳ ಅನಿವಾರ್ಯತೆ ಅಂತಿರುವಾಗ, ಇನ್ನೂ ವಿಕಸನ ಪ್ರಯತ್ನದಲ್ಲಿರುವ ಭಾರತದಂತಹ ದೇಶಗಳಲ್ಲಿ ಈ ವ್ಯವಸ್ಥೆ ರಾಷ್ಟ್ರ ಜೀವನದ ಜೀವಾಳವೇ ಆಗಿದೆ. ಅದರ ಪ್ರಾಮುಖ್ಯವನ್ನು ಉತ್ಪ್ರೇಕ್ಷೆ ಮಾಡುವಂತೆಯೇ ಇಲ್ಲ.

ಆಧುನಿಕ ಜೀವನದ ಜಟಿಲ ವ್ಯವಹಾರಗಳಲ್ಲಿ, ಹಣದ ನಿರ್ವಹಣೆಯಲ್ಲಿ ಬ್ಯಾಂಕುಗಳದ್ದು ಪ್ರಮುಖ ಪಾತ್ರ. ಬ್ಯಾಂಕಿಂಗ್ ಅಂದರೆ ಸಮಾಜದಲ್ಲಿರುವ ಉಳಿತಾಯವನ್ನು ಶೇಖರಿಸಿ, ಆ ಹಣವನ್ನು ಸಾಲ ರೂಪವಾಗಿ ಇತರರಿಗೆ ಕೊಟ್ಟು, ಫಲಪ್ರದವಾದ, ದೇಶದ ಅಭಿವೃದ್ಧಿಗೆ ಸಹಾಯವಾಗುವಂಥ ಕಾರ್ಯಗಳನ್ನು ಮಾಡಿಸುವುದರಲ್ಲಿ ಸಹಭಾಗಿಯಾಗುವುದು. ಈ ರೀತಿ ಠೇವಣಿಗಳಾಗಿ ಹಣವನ್ನು ಸಂಗ್ರಹಿಸಿ, ಅದನ್ನು ಅಭಿವೃದ್ಧಿ ಪಥದಲ್ಲಿರುವ ದೇಶದಲ್ಲಿ ಸಾಮಾಜಿಕ ಉನ್ನತಿಕಾರಕವಾದ ಕಾರ್ಯಗಳಿಗೆ ಒದಗಿಸುವ ಉದ್ದೇಶವುಳ್ಳ ಬ್ಯಾಂಕುಗಳಿಗೂ ಮಹಿಳೆಯರಿಗೂ ಅತಿ ನಿಕಟ ಸಂಬಂಧವಿದೆಯೆಂದೇ ನನ್ನ ಭಾವನೆ. ಮಹಿಳೆಯರ ಸ್ವಭಾವದಲ್ಲಿ ಸಹಜವಾಗಿರುವ ಹಿತಕರ ಸ್ವಾರ್ಥ ಭಾವನೆಯೇ ಸಮಾಜದಲ್ಲಿ ಕುಟುಂಬ ವ್ಯವಸ್ಥೆಯ ಅಡಿಗಲ್ಲೆಂದು ಅನೇಕರು ಭಾವಿಸಿದ್ದಾರೆ. ತನ್ನ ಪತಿ, ತನ್ನ ಮಕ್ಕಳು, ತನ್ನ ಮನೆ—ಎಂಬ ಭಾವನೆ ಹೆಂಗಸಿನಲ್ಲಿ ಪ್ರಬಲವಾಗಿಯೇ ಇರುತ್ತದೆ. ಮಗುವಿನ ಆರೋಗ್ಯ, ಅದರ ವಿದ್ಯಾಭ್ಯಾಸ, ಮಕ್ಕಳ ಮದುವೆ, ಕುಟುಂಬಕ್ಕೆಲ್ಲ ಒಂದು ಮನೆ ಮುಂತಾಗಿ ಹಂಬಲ ಹೆಚ್ಚಾಗಿರುವವಳು ಹೆಂಗಸೇ. ಹೀಗಾಗಿ ಸಂಸಾರ ರಥದ ಮುನ್ನಡೆಯಲ್ಲಿ ದುಂದುಗಾರಿಕೆಯನ್ನು

ತಡೆಯುವವರು ಹೆಚ್ಚಾಗಿ ಹೆಂಗಸರೇ, ಇದು ಸಹಜ. ಏಕೆಂದರೆ ಹೆಚ್ಚು ಹೊರಗೆ ಓಡಾಡದೆ ಇರುವ ಮಹಿಳೆಯರಿಗೆ ಆಕರ್ಷಣೆ, ಆಮಿಷಗಳ ಸೆಳೆತ ಕಡಿಮೆ. ಇದರ ಜೊತೆಗೆ ಅವರು ದೇಶದ ಪ್ರಗತಿಯ ಉದ್ದೇಶ ಪೂರ್ಣತೆಯನ್ನು ಈಗ ಸೇರಿಸಿಕೊಳ್ಳಬೇಕು. ಅಂದರೆ ಆದಷ್ಟು ಅಧಿಕ ಪ್ರಮಾಣದಲ್ಲಿ ಉಳಿತಾಯ ಸಾಧಿಸುವುದು ಅವರ ಕರ್ತವ್ಯ. ಇದು ಅವರಿಗೇ ಸಾಧ್ಯ.

### ಸಾಮಾಜಿಕ ಹೊಣೆ :

ಒಂದು ರೀತಿಯಾಗಿ ಹೇಳುವುದಾದರೆ ಎಲ್ಲ ಹಿಂದುವರ್ಗಗಳಲ್ಲೂ ಹೆಚ್ಚು ಹಿಂದುಳಿದವರು ಹೆಂಗಸರಾಗಿದ್ದಾರೆ. ಕೃಷಿ ಕ್ಷೇತ್ರದಲ್ಲೂ ಕೂಡಾ ನಾಟಿ ಹಾಕುವವರು ಹೆಂಗಸರು, ಕಾಳೊಕ್ಕುವವರು ಹೆಂಗಸರು, ಹಳ್ಳಿಯಲ್ಲಿ ಉಳಿತಾಯ ಮಾಡುವವರು ಹೆಚ್ಚಿನವರು ಹೆಂಗಸರೇ ಆಗಿರುತ್ತಾರೆ. ಆದರೆ ಅವರ ಉಳಿತಾಯದ ರೂಪವು ಬೇರೆಯೇ ಆಗಿರುತ್ತದೆ. ಮಡಕೆ, ಡಬ್ಬಿಗಳಲ್ಲಿ ಶೇಖರಿಸಿಡುತ್ತಾರೆ. ಅವರಿಗೆ ಉಳಿತಾಯದ ಮಹತ್ವ ತಿಳಿದಿದೆ. ಆದರೆ ಅದನ್ನು ತನಗೂ ಪರರಿಗೂ ಉಪಯೋಗವಾಗುವ ಹಾಗೆ ಯಾವ ರೂಪದಲ್ಲಿ ತೊಡಗಿಸಬೇಕೆಂಬ ತಿಳಿವು ಅವರಲ್ಲಿಲ್ಲ. ಡೆಲ್ಲಿ ಹತ್ತಿರದ ಒಂದು ಹಳ್ಳಿಯಲ್ಲಿ ಬ್ಯಾಂಕಿನ ಒಂದು ಶಾಖೆ ಪ್ರಾರಂಭವಾದಾಗ ಹಲವಾರು ಹೆಂಗಸರು ಮಣ್ಣಿನ ಮಡಕೆಗಳಲ್ಲಿ ಅವರು ಉಳಿಸಿದ ಹಣವನ್ನು ಹೊತ್ತುಕೊಂಡು ತಂದು ಎಕೌಂಟು ತೆರೆಯಲು ಸಾಲು ಸಾಲಾಗಿ ನಿಂತಿದ್ದರಂತೆ. ಉಳಿತಾಯ ಸಾಸಿವೆ ಡಬ್ಬಿಯಲ್ಲೇ ಉಳಿದರೆ ದೇಶಕ್ಕೆ ನಷ್ಟವೆಂಬುದು ಮಹಿಳೆಯರು ತಿಳಿಯಬೇಕು.

### ವಿದೇಶದಲ್ಲಿ :

ಈಚೆಗೆ ನಾನು ವಿದೇಶ ಯಾತ್ರೆ ಮಾಡಿದಾಗ ಒಂದು ವಿಶೇಷವನ್ನು ಕಂಡೆ. ಹೆಂಗಸರು ಎಲ್ಲಿದ್ದರೂ ಅಲಂಕಾರ ಪ್ರಿಯರೇ, ಆದರೆ ಅಲ್ಲಿನ ಜನರು ನಮಗಿಂತ ಎಷ್ಟೋಪಾಲು ಹಣವಂತರಾದರೂ ಸಹ, ಮಹಿಳೆಯರು ಅಲ್ಲಿ ಚಿನ್ನ–ವಜ್ರಗಳ ಆಭರಣಗಳಿಗಾಗಿ ಹಣ ಸುರಿಯುವುದಿಲ್ಲ. ಅಂತಹ ಅಪಾರ ವೆಚ್ಚದ ಜವಾಹಿರಗಳನ್ನು ಬಳಸುವವರು ಅತಿ ಮೇಲಂತಸ್ತಿನ ಅತಿ ಕಡಿಮೆ ಸಂಖ್ಯೆಯ ಹೆಂಗಸರು ಮಾತ್ರವೆಂದು ನನಗೆ ತಿಳಿಯಿತು. ಮಧ್ಯವರ್ಗದವರೆಲ್ಲ ಹೆಚ್ಚು ಬೆಲೆಯಿಲ್ಲದ ಸರಳ ಸುಂದರ ವಸ್ತುಗಳಿಂದಲೇ ಅಲಂಕರಿಸಿಕೊಳ್ಳುತ್ತಾರೆ. ಈ ಬಗ್ಗೆ ನಮ್ಮಲ್ಲಿ ಆಚರಣೆ ಬಂದರೆ ತುಂಬಾ ಒಳಿತಾಗುತ್ತದೆ. ಅಭಿವೃದ್ಧಿ ಯೋಜನೆಗಳಿಗೆ ಅಗತ್ಯವಾದ ವಿದೇಶೀ ವಿನಿಮಯಕ್ಕಾಗಿ ದೇಶಕ್ಕೆ ಚಿನ್ನವನ್ನು ಉಳಿಸಿಕೊಟ್ಟಂತಾಗುತ್ತದೆ. ದಿನನಿತ್ಯದ ಬದುಕಿನಲ್ಲೂ ಹೆಚ್ಚು ವೆಚ್ಚದ ಆಡಂಬರ ತಪ್ಪಿ ಸೌಖ್ಯ ಇಮ್ಮಡಿಯಾಗುತ್ತದೆ. ಹೊಟ್ಟೆ–ಬಟ್ಟೆ ಕಟ್ಟಿ ಕಿರೀಟವಿಟ್ಟುಕೊಂಡರೆ ಭಾಗ್ಯವೇನು ? ಭಾರತದಲ್ಲಿ ಕೈಗಾರಿಕೆಗಳ ಪ್ರಗತಿ, ಜೀವನಾವಶ್ಯಕ ವಸ್ತುಗಳ ಉತ್ಪಾದನೆ, ಕಡೆಗೆ ಆಹಾರ ಧಾನ್ಯಗಳ ಬೆಳೆಯೂ ಲಕ್ಷ್ಯಪೂರ್ಣವಾಗಿ ಅಧಿಕಗೊಳ್ಳಬೇಕಾಗಿರುವ ಈ ಸಮಯದಲ್ಲಿ ಮಹಿಳೆಯರಿಂದ ಉಳಿತಾಯ ಸಾಧನೆಯ ಪ್ರಾಮುಖ್ಯ, ಅಗತ್ಯಗಳನ್ನು ಯಾರೂ ಅಲ್ಲಗಳೆಯುವಂತಿಲ್ಲ. ದೇಶದ ಜನಸಂಖ್ಯೆಯಲ್ಲಿ ಅರ್ಧದಷ್ಟು ಮಹಿಳೆಯರಿರುವಾಗ ಇದರಿಂದ ರಾಷ್ಟ್ರ ಪ್ರಗತಿಗಾಗುವ ನೆರವು ಅಷ್ಟಿಷ್ಟಲ್ಲ.

ಇದನ್ನು ಮನಗಂಡು ದೇಶದ ಪ್ರಗತಿಯಲ್ಲಿ ಮಹಿಳೆಯರ ಪಾತ್ರ ಹಿರಿಯದೆಂಬುದನ್ನು ಬಹಳ ಹಿಂದೆಯೇ ತಿಳಿದ ಕೆಲವು ಬ್ಯಾಂಕುಗಳು ಮಹಿಳಾ ಶಾಖೆಗಳನ್ನು ತೆರೆದಿವೆ. ಇದರ ಅರ್ಥ ಇಲ್ಲಿಗೆ ಮಹಿಳೆಯರು ಮಾತ್ರವೇ ಬರಬೇಕೆಂದಲ್ಲ. ಗ್ರಾಹಕರು ಯಾರೇ ಬರಬಹುದು. ಮಹಿಳೆಯರು ಸ್ವಭಾವ ಸಹಜವಾಗಿ ಸಂಕೋಚ ಪ್ರವೃತ್ತಿಯವರು. ಅನೇಕರು ಬ್ಯಾಂಕುಗಳ ಭವ್ಯಕಟ್ಟಡವನ್ನು ನೋಡಿಯೇ ಬೆವತವರೂ ಇರುತ್ತಾರೆ. ಅಂತಿರುವಲ್ಲಿ ಹತ್ತಾರು ಜನರು ಸೇರಿರುವ ಇಲ್ಲಿ ಸಂಸಾರ ತಾಪತ್ರಯಗಳನ್ನು ನಿಸ್ಸಂಕೋಚವಾಗಿ ಮಾತನಾಡಿಕೊಳ್ಳುವವರು ಬಹಳ ವಿರಳ. ಈ ಚಳಿಯನ್ನು ಹೋಗಲಾಡಿಸುವುದು ನಮ್ಮ ಇನ್ನೊಂದು ಉದ್ದೇಶ. ಇತರ ಶಾಖೆಗಳು ಮಾಡುವ ಕೆಲಸಗಳಿಗಿಂತ ಹೆಚ್ಚಾಗಿ ಮಹಿಳಾ ಶಾಖೆಗಳು ಮಾಡುವ ಕೆಲಸವೆಂದರೆ, ತಿಳುವಳಿಕೆಯಿಲ್ಲದ ಮಹಿಳೆಯರಲ್ಲೂ ಬ್ಯಾಂಕಿಂಗ್ ಪ್ರಸಾರ ಮಾಡುವುದು. ಎಷ್ಟೋ ಜನ ಸ್ತ್ರೀಯರಿಗೆ ಒಂದು ಚೆಕ್ ಬರೆಯಲು ಬರುತ್ತಿಲ್ಲ, ಒಂದು ಚೆಕ್ ನಗದು ಮಾಡಲು ಬರುತ್ತಿಲ್ಲ, ಇದಕ್ಕೆ ಕಾರಣ ಅವರಲ್ಲಿ ತಿಳುವಳಿಕೆಯಿಲ್ಲದಿರುವುದೊಂದಾದರೆ ಅದನ್ನ ಮಾಡಿಕೊಳ್ಳುವಂಥ ಎದೆಗಾರಿಕೆ ಇಲ್ಲದಿರುವುದು

ಇನ್ನೊಂದು. ತಮ್ಮ ಸಮಸ್ಯೆಗಳನ್ನು ಸರಿಯಾಗಿ ತಿಳಿಸಿ, ಅದಕ್ಕೆ ತಕ್ಕಂಥ ಪರಿಹಾರ ಇಲ್ಲವೇ ಆರ್ಥಿಕ ಸಹಾಯವನ್ನು ಹಿಂಜರಿಯದೆ ಕೇಳುವಷ್ಟು ಆತ್ಮವಿಶ್ವಾಸ ಅವರಲ್ಲಿಲ್ಲ. ಈ ಆತ್ಮ ವಿಶ್ವಾಸವನ್ನು, ಈ ಧೈರ್ಯವನ್ನು, ಈ ತಿಳಿವನ್ನು ಅವರಲ್ಲಿ ಹುಟ್ಟಿಸುವುದಕ್ಕೆ ಈ ಮಹಿಳಾ ಶಾಖೆಗಳ ಒಳಗುಟ್ಟು ಇಷ್ಟು ಮಾತ್ರವಲ್ಲ, ಮಹಿಳೆಯರಿಗೆ ಉದ್ಯೋಗ ಕಲ್ಪಿಸಿಕೊಡುವುದು ಇದರ ಇನ್ನೊಂದು ಗುರಿ ಸಂಸಾರದಲ್ಲಿ ದುಡಿಯುವ ಗಂಡುಗಳಿಲ್ಲದಂತಹವರಿಗೆ, ಎಳೆ ಪ್ರಾಯದಲ್ಲೇ ಗಂಡನನ್ನು ಕಳೆದುಕೊಂಡವರಿಗೆ ಈ ಶಾಖೆಗಳಲ್ಲ ಉದ್ಯೋಗವನ್ನು ಕೊಟ್ಟು ಅವರ ಕಷ್ಟದಲ್ಲಿ ಸಹಭಾಗಿಯಾಗಿದೆ.

## ಮಹಿಳಾ ಉದ್ಯೋಗಿಗಳು :

ಈ ಶೇಷ ಶಾಖೆಗಳೇ ಅಲ್ಲದೆ ಸಾಮಾನ್ಯವಾಗಿ ಎಲ್ಲ ಬ್ಯಾಂಕುಗಳಲ್ಲೂ ಮಹಿಳೆಯರು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಉದ್ಯೋಗಸ್ಥರಾಗುತ್ತಿವುದು ಈಚೆಗೆ ಕಂಡುಬರುತ್ತದೆ. ಹುದ್ದೆಗಳಿಗಾಗಿ ನಡೆಸಲಾಗುವ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗುವ ಹೆಣ್ಣುಮಕ್ಕಳ ಸಂಖ್ಯೆ ಗಣನೀಯವಾಗಿದೆ. ಇದು ಇನ್ನೂ ಅಧಿಕಗೊಂಡು ಉದ್ಯೋಗ ದೊರಕಿಸಿಕೊಳ್ಳುವ ಸ್ತ್ರೀಯರು ಗ್ರಾಮಾಂತರ ಪ್ರದೇಶಗಳಿಗೂ ಹೋಗಿ ಕೆಲಸ ಮಾಡಲು ಸಿದ್ಧರಾಗಿವುದು ಅಪೇಕ್ಷಣೀಯ. ಬ್ಯಾಂಕಿಂಗ್ ಆಧುನಿಕ ವಿಧಾನಗಳ ಅಧ್ಯಯನಕ್ಕಾಗಿ ನಾನು ಈಚೆಗೆ ಹಲವು ತಿಂಗಳುಗಳ ಕಾಲ ಅಮೇರಿಕ ಸಂಯುಕ್ತ ಸಂಸ್ಥಾನ ಮತ್ತು ಇಂಗ್ಲೆಂಡಿನಲ್ಲಿ ಪ್ರವಾಸ ಮಾಡಿದಾಗ ಅಲ್ಲಿನ ಬ್ಯಾಂಕುಗಳಲ್ಲಿ ಎಲ್ಲ ಮಟ್ಟಗಳಲ್ಲೂ ಮಹಿಳೆಯರು ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿರುವುದನ್ನು ಕಂಡೆ. ಬ್ಯಾಂಕುಗಳನ್ನ ಹೆಚ್ಚು ಪ್ರಚಾರ ಪಡಿಸುವುದರಿಂದ ಒದಗುವ ಆರ್ಥಿಕ ನೆರವನ್ನೂ ಪರಿಣತಿಯ ಸೇವೆಯನೂ ಪೂರ್ಣವಾಗಿ ಬಳಸಿಕೊಂಡು ಮಹಿಳೆಯರು ಹೆಚ್ಚು ಹೆಚ್ಚಾಗಿ ವಿವಿಧ ರೀತಿಯ ಸ್ವಂತ ಉದ್ಯೋಗ ಯೋಜನೆಗಳಲ್ಲಿ ತೊಡಗುವುದು ರಾಷ್ಟ್ರದ ಆರೋಗ್ಯಕರ ಬೆಳವಣಿಗೆಯ ದೃಷ್ಟಿಯಿಂದ ಅಗತ್ಯ ಮತ್ತು ಅನಿವಾರ್ಯ. ಆಗ ಮಾತ್ರ ಭಾರತದ ಆರ್ಥಿಕ ಪ್ರಗತಿಯೂ ಕೆಲ ಪಾಶ್ಚಾತ್ಯ ದೇಶಗಳಲ್ಲಿನಂತೆ ತ್ರಿವಿಕ್ರಮ ಸ್ವರೂಪ ಪಡೆದೀತು.

ಸ್ವಂತ ಉದ್ಯೋಗಗಳ ಕ್ಷೇತ್ರದಲ್ಲಿ ಮಹಿಳೆಯರದೂ ಒಂದು ಭಾಗವಿದೆಯೆಂಬುದನ್ನು ಅವರು ತಿಳಿಯಬೇಕು. ಪಾಶ್ಚಾತ್ಯ ದೇಶಗಳಲ್ಲಂತೂ ಮಹಿಳೆಯರು ಕೈ ಹಚ್ಚದ ಕೆಲಸವೇ ಇಲ್ಲವೆಂಬಂತಾಗಿದೆ. ಮಹಿಳೆಯರು ಯಂತ್ರ ಪರಿಣಿತರಾದ ಮೆಕ್ಯಾನಿಕಲ್ ಇಂಜಿನಿಯರುಗಳಾಗಿರುವುದೂ ಉಂಟು. ಬಸ್, ಟ್ರಕ್, ಟ್ಯಾಕ್ಸಿಗಳ ಚಾಲಕರಾಗಿಯೂ ಮಹಿಳೆಯರಿದ್ದಾರೆ. ಅದು ಅವರ ವೃತ್ತಿಯೇ ಆಗಿದೆ. ನಮ್ಮಲ್ಲಿ ಅಷ್ಟರ ಮಟ್ಟಿನ ಸ್ಥಿತಿ ಈಗಂತೂ ಸಾಧ್ಯವಿಲ್ಲವೆನಿಸಿದರೂ ಮಹಿಳೆಯೇ ಮುಂದೆ ಬಂದು ಸ್ವಂತವಾಗಿ ನಿರ್ವಹಿಸಬಹುದಾದ ಹಲವು ಬಗೆಯ ಹಲವಾರು ವೃತ್ತಿ ವೈವಿಧ್ಯಗಳೂ ಈಗಲೂ ಇವೆ. ಹೆಚ್ಚು ಹೆಚ್ಚಾಗಿ ಮಹಿಳೆಯರು ಆ ಪ್ರಾವಿಣ್ಯಗಳನ್ನು ಮೈಗೂಡಿಸಕೊಂಡು ಬ್ಯಾಂಕುಗಳು ಉದ್ಯಮಾರಂಭಕ್ಕಾಗಿ ನೀಡುವ ಸಾಲ ಮತ್ತಿತರ ಸೌಲಭ್ಯಗಳನ್ನು ಬಳಸಿಕೊಂಡು ಮುಂದೆ ಬರುವ ಆಲೋಚನೆ ಮಾಡಬೇಕು. ಎಷ್ಟೆಷ್ಟೋ ಮಹಿಳೆಯರು ಕಸೂತಿ ಕೆಲಸ, ಕಲಾತ್ಮಕ ಆಟದ ಸಾಮಾನುಗಳ ತಯಾರಿಕೆ, ಸ್ವೆಟರು ಮುಂತಾದುವುಗಳ ಹೆಣಿಗೆ, ಚಾಪೆ ಬುಟ್ಟಿಗಳ ತಯಾರಿ, ಮುಂತಾದ ನಿಪುಣತೆ ಪಡೆದಿದ್ದಾರೆ. ಇನ್ನೂ ಸಹಸ್ರ ಸಂಖ್ಯೆಗಳಲ್ಲಿ ಮಹಿಳೆಯರು ಕುಶಲತೆ ಕಲಿಯಬಲ್ಲರು. ಟೈಪ್‌ರೈಟಿಂಗ್ ಅಥವಾ ಹೊಲಿಗೆ ಅಂಗಡಿ ಇಡಬಹುದು; ಮಕ್ಕಳನ್ನು ನೋಡಿಕೊಳ್ಳುವ ಕೇಂದ್ರಗಳನ್ನು ಅಗತ್ಯ ಪರಿಕರಗಳೊಡನೆ ಪ್ರಾರಂಭಿಸಬಹುದು. ಇನ್ನೂ ನೂರೆಂಟು ರೀತಿಗಳಿವೆ. ಕುಶಲ ಕಲೆಗಳಲ್ಲಿ ನುರಿತವರು ಮಹಿಳೆಯರು ; ಕಸೂತಿ, ಚಿತ್ರಕಲೆ ಸಂಗೀತ ಮುಂತಾದ ಹಲವಾರು ಕಲೆಗಳಲ್ಲಿ ಅವರು ಸಿದ್ಧಹಸ್ತರು. ಆದರೂ ಇಂದು ಗಂಡಸರೇ ಈ ಎಲ್ಲ ಕ್ಷೇತ್ರಗಳಲ್ಲಿ ಹೆಸರು ಗಳಿಸುವಂತಾಗಿದೆ. ಇದಕ್ಕೆ ಕಾರಣ ಸ್ತ್ರೀಯರು ಮುಂದೆ ಬರದೆ ತಮ್ಮ ಯೋಗ್ಯತೆಯನ್ನು ಮರೆಯುತ್ತಿರುವುದೇ ಎನ್ನಿಸುತ್ತದೆ. ಈ ವಿಧಗಳಲ್ಲಿ ವಿಶಿಷ್ಟ ಸಿದ್ಧಿಯಿರುವ ಮಹಿಳೆ ಬ್ಯಾಂಕಿನಲ್ಲೋ ಇನ್ನೆಲ್ಲೋ, ನೌಕರಿಗೆ ಬೇಡಿ ಅಲೆಯದೆ ಉದ್ಯಮ ತೆರೆದರೆ ಆದಾಯವೂ ಹೆಚ್ಚಿ, ಕಲಿತ ವಿದ್ಯೆಗೂ ಭೂಷಣವಾಗುವುದು. ಹೆಚ್ಚು ಹೆಚ್ಚು ವಿದ್ಯಾವತಿಯರಾಗುತ್ತಿರುವ ತಿಳಿವಳಿಕಸ್ಥರಾಗು ನಮ್ಮ ಯುವತಿಯರು ಬ್ಯಾಂಕುಗಳಿಂದ ನೆರವು ಪಡೆದು ಈ ರೀತಿಯಲ್ಲೂ ಮುನ್ನುಗ್ಗಿ ಸ್ವಂತಶಕ್ತಿ ಮತ್ತು ಸಾಮಾ

ಜಿಕ ಅಂತಸ್ತನ್ನು ಪಡೆಯುವುದು. ವಿಹಿತ ವಿದ್ಯೆ, ಕಲೆಗಳನ್ನು ಕಲಿಯಲೂ ಸಹ ಅವರು ಬ್ಯಾಂಕುಗಳ ನೆರವು ಪಡೆಯಬಹುದು.

ಜಾಗತಿಕ ಮಹಿಳಾ ಸಮುದಾಯ ಇನ್ನೂ ಹಿಂದೆ ಬಿದ್ದಿದೆಯೆಂಬುದಾಗಿಯೋ ಅದರ ಸುಧಾರಣೆ ಮುನ್ನಡೆಗಾಗಿ, ಈ ವರ್ಷವನ್ನು ಮಹಿಳಾ ಸಂವತ್ಸರವೆಂಬುದಾಗಿ ಪ್ರಪಂಚದಾದ್ಯಂತ ಆಚರಿಸಲು ವಿಶ್ವಸಂಸ್ಥೆ ಪ್ರೇರಿಪಿಸಿದೆ. ಈ ವರ್ಷದಲ್ಲಾದರೂ ಭಾರತದ ಪ್ರತಿ ಮಹಿಳೆಯೂ ದೇಶ ಕಲ್ಯಾಣಕ್ಕಾಗಿ ತನ್ನ ಅಲ್ಪ ಸೇವೆಯನ್ನು ಸಲ್ಲಿಸಿ ಮುನ್ನುಗ್ಗಲಾಗುವಂತೆ ನಾವೆಲ್ಲ ಆಶಿಸಬೇಕು. ಬೆಂಬಲಿಸಬೇಕು.

---

# ನಾನು ಹಂಚಿಹೋಗಿದ್ದೇನೆ

ನಾನು.... ನಾನು ಹಂಚಿಹೋಗಿದ್ದೇನೆ
ಹರಿದು ಹಂಚಿಹೋಗಿದ್ದೇನೆ-ನನ್ನತನವೇ ಇಲ್ಲದಂತೆ

ತಂದೆ ತಾಯಿಯವರ ಮಗಳಾಗಿ ಅವರ ಮಗಳೆಂದು
ಅತ್ತೆ ಮಾವದಿಂದರ ಸೊಸೆಯಾಗಿ ಇವರ ಸೊಸೆಯೆಂದು
ಪತಿಯ ಹೆಸರಿನಲ್ಲಿ–ಅವರ ಪತ್ನಿಯೆಂದು–ಸತಿಯಾಗಿ ಹಂಚಿಹೋಗಿದ್ದೇನೆ.

ತಮ್ಮ ತಂಗಿಯವರಿಗೆ ಹಿರಿಯಕ್ಕ ನಾನಾಗಿ
ಅಕ್ಕಂದಿರು ಅಣ್ಣಂದಿರ ಅಕ್ಕರೆಯ ತಂಗಿಯಾಗಿ
ಚಿಕ್ಕ ದೊಡ್ಡವರ ಅತ್ತಿಗೆ–ನಾದಿನಿಯೇ ನಾನಾಗಿ–ಹಂಚಿಹೋಗಿದ್ದೇನೆ.

ಮುದ್ದು ಮಕ್ಕಳ ಮಮತೆಯ ತಾಯಿಯಾಗಿ
ಸಣ್ಣ ಪುಟ್ಟ ಮಕ್ಕಳ ಚಿಕ್ಕಮ್ಮ ದೊಡ್ಡಮ್ಮನಾಗಿ
ಒಲುಮೆಯ ಗೆಳತಿಯರ ನಲುಮೆಯ ಗೆಳತಿಯಾಗಿ
ಅಕ್ಕ ಪಕ್ಕದ ಮನೆಯವರ ಪಕ್ಕದ ಮನೆಯವಳೇ ನಾನಾಗಿ ಹಂಚಿಹೋಗಿದ್ದೇನೆ.

ಅವರೆಲ್ಲರೊಡನೆ ನನ್ನ ಬಂಧ–ಅವರಿವರ ನಡುವೆ ಸಂಬಂಧ
ಅವರಲ್ಲಿರುವ ನನ್ನವಂಶ–ನನ್ನಲ್ಲಿರುವ ಅವರ ಅಂಶ
ನನ್ನ ತನವನ್ನೇ ಕಳೆದುಕೊಂಡು–ನಾನು ಹಂಚಿಹೋಗಿದ್ದೇನೆ.

ಎಲ್ಲರಲ್ಲಿ ನಾನು–ನನ್ನಲ್ಲಿ ಅವರೆಲ್ಲ ಆಗಿ
ನನ್ನತನವನ್ನೇ ಕಳದುಕೊಂಡು–ನಾನು ನಾನೇ ಆಗದೆ
ನನ್ನ ತನದ ಪ್ರತ್ಯೇಕತೆಯೇ ಇಲ್ಲದಂತೆ–ಹಂಚಿಹೋಗಿದ್ದೇನೆ

—"ಕುಲಶೇಖರ"

ಸಣ್ಣ ಕತೆ

# ಹೆಣ್ಣು - ಗಂಡು

—ಶಾಂತಾದೇವಿ ಕಣವಿ

ಕೋಣೆಯಲ್ಲಿ ಮಬ್ಬುಗತ್ತಲೆ ಕವಿಯುತ್ತಿದ್ದಾಗ ಮನೋಹರನಿಗೆ ಎಚ್ಚರವಾಯಿತು. ಆದರೂ ಹಾಸಿಗೆಯಲ್ಲಿ ಅತ್ತಿತ್ತ ಹೊರಳಾಡುತ್ತ ಇದ್ದ. ತುಸು ಹೊತ್ತಿಗೆ ಮುಂಚಿನ ಸುಖದ ಅಮಲಿಸಲ್ಲೇ ಇನ್ನೂ ಮುಳುಗಿ ಮೈಮರೆತಿದ್ದ. ಜೊಂಪು ಹತ್ತಿ ಎಚ್ಚರವಾಗಿದ್ದರಿಂದ ಮೈಯ ದಣಿವೂ ತಣಿದಿತ್ತು. ಎಷ್ಟೋ ತಿಂಗಳುಗಳೂ ಕಳೆದ ಮೇಲೆ ದೊರೆತ ಸುಖದಿಂದ, ಬೇಸರಗೊಂಡಿದ್ದ ಮನಸ್ಸು ಅರಳಿತ್ತು. ಹೆಣ್ಣಿನ ನುಣುಪು ದೇಹದ ಬೆಚ್ಚನೆಯ ಸ್ಪರ್ಶ ಇನ್ನಷ್ಟು, ಮತ್ತಷ್ಟು ಬೇಕೆನಿಸುತ್ತಿತ್ತು ಮನಕ್ಕೆ ಕಡಿವಾಣ ಹಾಕಲು ಯತ್ನಿಸದೆ ಮಗ್ಗುಲಿಗೆ ಕೈ ಚಾಚಿದ ಮತ್ತೊಮ್ಮೆ ಆ ಪುಷ್ಟ ದೇಹವನ್ನು ಅವಚಿಕೊಳ್ಳಲು ಆದರೆ ಅಲ್ಲೆಲ್ಲಿದ್ದಳು ಆ ಹೆಣ್ಣು ? ಬರಿದಾದ, ಆದರೆ ಕೆಲ ಹೊತ್ತಿನ ಹಿಂದೆ ಅಲ್ಲಿ ಹೆಣ್ಣೊಬ್ಬಳು ಮಲಗಿದ್ದಳು ಎನ್ನುವ ಗುರುತು ಬಿಟ್ಟು ಹೋದ ಸ್ಥಳವನ್ನೇ ಮೃದುವಾಗಿ ಕೈಯಾಡಿಸುತ್ತ, ಪೂರ್ತಿ ಎಚ್ಚರಗೊಂಡು ಕಣ್ಣು ತೆರೆದ.

ನಾಗಿ ಎಲ್ಲಿ ಹೋದಳು ? ಯಾವಾಗ ಹೋದಳು ಎಂದು ಹೋಚಿಸುತ್ತ ಅವಳನ್ನು ಅದೇ ಕೋಣೆಯಲ್ಲಿ ಹುಡುಕುವಂತೆ ಅತ್ತಿತ್ತ ನೋಡಿದ. ಆದರೆ ಅಲ್ಲಿ ಕಣ್ಣು ಅಗಲಿಸಿ ನೋಡಿದರೂ ಏನೂ ಕಾಣದಷ್ಟು ಕತ್ತಲು ಆವರಿಸಿತ್ತು. ಮತ್ತೆ ಕಣ್ಣು ಮುಚ್ಚಿದ. ನಡೆದದ್ದೆಲ್ಲ ನಿಜವೆ ? ಅಲ್ಲ ಕನಸೇ ? ಛೇ ಕನಸಂತೂ ಅಲ್ಲ. ತನಗಾದ ತೃಪ್ತಿ, ಸಂತೋಷಗಳೇ ಹೇಳುತ್ತವೆ. ನಡೆದದ್ದೆಲ್ಲ. ನಿಜವೇ ಎಂದು. ಆದರೆ ಇದು ಹೇಗೆ ನಡೆಯಿತು ಎಂದು ಯೋಚಿಸಿ ತಲೆಕೆಡಿಸಿಕೊಳ್ಳಲು ಮನ ಒಪ್ಪಲಿಲ್ಲ. ಬದಲು ಮಕ್ಕಳು ಪೆಪ್ಪರಮೆಂಟು ಬಾಯಿಂದ ಹೊರಗೆ ತೆಗೆದು, ತೆಗೆದು ಮತ್ತೆ ಚೀಪುವಂತೆ ನಡೆದ ಘಟನೆಯನ್ನೇ ಮತ್ತೆ ಚಿತ್ರಿಸಿಕೊಂಡ.

ದಿನವೂ ಬರುವಂತೆ ಆಫೀಸಿನಿಂದ ಆರು ಗಂಟೆಗೆ ಮನೆಗೆ ಬಂದೆ. ಕೆಲಸದ ನಾಗಿ ಬಂದು ಬಾಗಿಲು ತೆರೆದಳು. ಏನು ಕೆಲಸ ಮಾಡುತ್ತಿದ್ದಳೋ ಹಾಗೆಯೇ ದಡದಡ ಬಂದದ್ದರಿಂದ ಅವಳ ಸೆರಗು ಸರಿದಿತ್ತು. ಆದ್ದರಿಂದ ಅವಳ ಪುಷ್ಟಎದೆಯೇ ನನ್ನನ್ನು ಮೊದಲು ಸ್ವಾಗತಿಸಿತು. ನಾನು ಕೈ ಕಾಲು ತೊಳೆದು ಕೋಣೆಗೆ ಬರುವಷ್ಟರಲ್ಲಿ ಚಹಾ ತಂದು ಕೊಟ್ಟಳು. ಅಲ್ಲಿ ಅವಳ ಕೋಮಲ ಕೈಯ ಸ್ಪರ್ಶ ನನ್ನನ್ನು ಕರೆಯಿತು. ಅವಳು ಅನ್ನ ಸಾರು ಮಾಡಿ ಇಳಿಸಿ, ಹಾಲು ಕಾಸಿ ಹಿತ್ತಲು ಬಾಗಿಲು ಹಾಕಿ ನನ್ನ ಹಾಸಿಗೆ ಸರಿಪಡಲು ಕೋಣೆಗೆ ಬಂದಳು. ಎರಡೂ ಕೈಯೆತ್ತಿ ಬೆಡ್‌ಸಿಟ್ ಚಟ ಚಟ ಝಾಡಿಸಿದಾಗ ಅವಳ ಅಂಗಾಂಗ ಪ್ರದರ್ಶನ ನನ್ನೊಳಗಿನ ಗಂಡನ್ನು ಬಡಿದೆಬ್ಬಿಸಿತು. ಅವಳು ಬಗ್ಗಿ ಹಾಸಿಗೆಯ ಮೇಲೆ ಕೈಯಾಡಿಸುತ್ತ ಸುಕ್ಕುಗಳನ್ನು ನೀಟಾಗಿ ಮಾಡುವ ಭಂಗಿ ನನ್ನನ್ನು ಆಹ್ವಾನಿಸಿತು. ಅಲ್ಲಿಗೆ ಆರೆಂಟು ತಿಂಗಳಿಂದ ಹಿಡಿದಿಟ್ಟದ್ದ ನನ್ನ ಸಮಯದ ಆಣೆಕಟ್ಟು ಒಡೆಯಿತು. ಪ್ರವಾಹದಲ್ಲಿ ನಾವಿಬ್ಬರೂ ತೇಲಿ ಹೋದೆವು.

ಬಾಯಲ್ಲಿಯ ಪೆಪ್ಪರಮೆಂಟು ಕರಗಿತ್ತು. ತಿಂದ ಸಿಹಿ ನಾಲಿಗೆಯ ಮೇಲೆ ಇನ್ನೂ ಉಳಿದಿತ್ತು. ಮನೋಹರ ಎದ್ದು ಲೈಟು ಹಾಕಿ ಹೊರಗೆ ಬಂದ. ಹೊರಬಾಗಿಲು ಮುಂದೆ ಮಾಡಿತ್ತು. ಗಾಳಿಗೆ ಹೊರಗೆ ಬರಬೇಕೆಂದು ಅನ್ನಿಸಿದರೂ ಧೈರ್ಯವಾಗದೆ ತನ್ನ ಗುಟ್ಟನ್ನು ಒಳಗೇ ಬಚ್ಚಿಟ್ಟುಕೊಳ್ಳುವವನಂತೆ ಬಾಗಿಲಿಗೆ ಭದ್ರವಾಗಿ ಚಿಲಕ ಹಾಕಿ ಅಡಿಗೆ ಮನೆಗೆ ಬಂದ. ತಟ್ಟೆ ಇಟ್ಟುಕೊಂಡು, ಎಲ್ಲ

ವನ್ನೂ ನೀಡಿಕೊಂಡು ಗಬ ಗಬನೆ ಉಣ್ಣತೊಡಗಿದ. ಆಗಲೂ ತನಗೆ ಹೀಗೆಯೇ ತುಂಬ ಹಸಿವಾಗಿತ್ತು. ಬಹಳ ದಿನಗಳಿಂದ ಉಪವಾಸ ವಿದ್ದವನಂತೆ ನಾಗಿಯನ್ನು ತಿಕ್ಕಿ ಮುಕ್ಕಿದ್ದ. ತನ್ನಂತೆಯೇ ನಾಗಿಗೂ ಹಸಿವಾಗಿರಬಹುದು ಅದಕ್ಕೇ ಅಷ್ಟೊಂದು ತೃಪ್ತಿಯಾಗಿ ಹೊಟ್ಟೆ ತುಂಬಾ ಊಟ ಮಾಡಿದೆವಲ್ಲ ಇಬ್ಬರೂ, ಎಂದು ಮನಸ್ಸಿನಲ್ಲೇ ನಕ್ಕ. ಅನ್ನದ ಪಾತ್ರೆ ಖಾಲಿಯಾಗಿತ್ತು. ಕಣ್ಣು ಎಳೆದು ಬರುತ್ತಿತ್ತು. ಹಾಲು ಕುಡಿದು ಬಂದು ಹಾಸಿಗೆಗೆ ಹೊರಳಿದ.

ಮರುದಿನ ಮುಂಜಾನೆ ನಾಗಿ ಬಾಗಿಲು ಬಡಿದಳು. ಬಾಗಿಲು ತೆಗೆದು ಪ್ರತಿಕ್ರಿಯೆ ಏನೆಂದು ತಿಳಿಯಲು ಅವಳ ಮುಖವನ್ನೇ ದಿಟ್ಟಿಸಿದ. ಆದರೆ ನೆಲ ನೋಡುತ್ತಿದ್ದ ಅವಳ ಕಣ್ಣುಗಳು ಅಡ್ಡ ಗೋಡೆಯಾಗಿದ್ದವು. ಒಳಗೆ ಬಂದು ದಿನದಂತೆ ಎಲ್ಲ ಕೆಲಸವನ್ನೂ ಮಾಡಿ, ಏನೂ ನಡೆಯದವರಂತೆ "ಬಾಗಿಲು ಹಾಕ್ಕೊಳ್ರಿ ಹೋಗ್ತೀನಿ" ಎಂದಳು. ಹತ್ತು-ಹದಿನೈದು ದಿನ ಕಳೆದ ಮೇಲೆ ಮನೋಹರನಿಗೆ ಮತ್ತೆ ಹಸಿವೆಯಾಯಿತು. ಅಂದು ತಾನೇ ನಾಗಿಯನ್ನು ಕೋಣೆಗೆ ಕರೆದ. ನಾಗಿ ಹೊರಟಾಗ ಹತ್ತು ರೂಪಾಯಿ ನೋಟು ಅವಳ ಮುಂದೆ ಹಿಡಿದು, "ಏನಲೆ ತೊಗೋ" ಎಂದ. ಆಗ ಮೊದಲ ಬಾರಿ ಅವಳು ಕತ್ತೆತ್ತಿ ಅವನ ಮುಖ ನೋಡಿದಳು.

"ಸಾಯೇಬ್ರ, ನಾ ನಿಮ್ಮ ಮನೀ ಕೆಲಸಾ ಮಾಡಿದ್ದಕ್ಕ ಪಗಾರಾ ಕೊಡ್ತೀರಿ ಇದ್ಯಾಕ ?"

"ನನ್ನ ಸಂತೋಷಕ್ಕ, ನಾಗೀ ನಾ ಕರೆದಾಗ ಬಂದಿ ಹೇಳಿದಾಂಗ ಕೇಳಿದಿ ಅದಕ್ಕ."

"ನಿಮ್ಮಂಗ ನನಗೂ ಸಂತೋಸ ಆಸೇತಿ ಸಾಯೇಬ್ರ. ಇದಕ್ಕೆ ನನಗೆ ರೊಕ್ಕ ಬ್ಯಾಡಾ, ನಾ ಮೈ ಮಾರಿಕೊಳ್ಳಾಕ ಬಂದಿಲ್ಲಾ."

ಮನೋಹರ ತಟ್ಟನೆ ಅವಳ ಭುಜ ಹಿಡಿದು ಕಿವಿಯಲ್ಲಿ ಪಿಸುಗುಟ್ಟಿದ. "ನಾಗೀ ಬಾಯಾರು ಹೋಗಿ ಭಾಳ ದಿನಾ ಆಗಿತ್ತು, ನಾ ಹಸದಿದ್ದೆ ......"

"ನನ್ನ ಗಂಡ ಸತ್ತು ಎರ್ಡು ವರಸ ಆಗಿತ್ರೀ ನಾನೂ........"

ನಾಗಿ ಹೋದ ಮೇಲೆ ಮನೋಹರ ಅಲ್ಲೇ ಕುರ್ಚಿಯಲ್ಲಿ ಎರಡು ತಾಸು ಕುಕ್ಕರಬಡಿದಿದ್ದ. ಅವಳು ಹೋಗುವಾಗ ಆಡಿದ ಮಾತು ಅವನ ಕಿವಿಯಲ್ಲಿ ಇನ್ನೂ ಧ್ವನಿಸುತ್ತಿತ್ತು. ನಾಗಿ ಗಂಡ ಸತ್ತಾಕೆ, ಎರಡು ಮಕ್ಕಳೂ ಆದಾವ ಎಂದು ಸುಶೀ ಹೇಳಿದ್ದಳು. ನಾಗಿ ನಮ್ಮ ಮನೆ ಕೆಲಸಕ್ಕೆ ಬಂದ ನಾಲ್ಕಾರು ತಿಂಗಳಿಗೇ ಸುಶೀ ಹಡೀಲಿಕ್ಕೆ ತವರ್ಮನಿಗೆ ಹೋದಳು. ನಾ ಆಕೀಗೆ ಹೇಳಿದ್ದೆ,

"ನಾ ಒಬ್ಬಾಂವ ಇರತೀನಿ. ಅಪ್ಪ ಹಾಸಿಗಿ ಹಿಡಿದಾರ. ಅವ್ವಗ ಅವರ್ನ ಬಿಟ್ಟು ಬರೂದು ಆಗೂದಿಲ್ಲಾ ಹಳ್ಳಿಯಿಂದ. ನಾ ಹೋಟೇಲ್ಲಿನ್ಯಾಗ ಊಟ ಮಾಡತೀನಿ. ಕೆಲಸದಾಕಿನ್ನ ಬಿಡಿಸಿ ಬಿಡು."

"ನನಗ ಈಗ ಏಳು ತಿಂಗಳು. ನಾನು ಹಡದು ಬರಬೇಕಾದರೆ ಇನ್ನೂ ಏಳು ತಿಂಗಳು ಆಗ್ತದ. ಹೋಟೆಲ್ಲಿನ ಹೊಲಸು ಊಟಾ ಮಾಡಬ್ಯಾಡರಿ. ನಾನು ನಾಗೀಗೆ ಹೇಳತೀನಿ, ಆಕಿ ಅನ್ನಾ-ಸಾರು ಮಾಡ್ತಾಳ. ಹಾಲು ಕಾಸಿ, ಕಸಾ-ಮುಸುರಿ ಮಾಡಾಳ. ನಿಮಗ ಬೇಕೆಂದರ ಚಪಾತಿನೂ ಮಾಡ್ತಾಳ. ಮನ್ಯಾಗ ಊಟಾ ಮಾಡರಿ. ಆಕೀಗೆ ಇನ್ನ ಐದು ರೂಪಾಯಿ ಹೆಚ್ಚಿಗಿ ಕೊಟ್ಟರಾತು."

"ನಾ ಅನ್ನಾ ಮಾಡಿಕೋತೀನಿ. ಹ್ಯಾಗೂ ಮಗ್ಗುಲ ಮನೀ ಹುಡುಗೂರು ಅಡಿಗಿ ಮಾಡಸ್ತಾರಲ್ಲಾ, ಅಲ್ಲಿಂದ ಸಾರು ತರ್ತೀನಿ; ಸುಮ್ಮನ ನಾಗೀನ್ನ ಬಿಡಿಸಿ ಬಿಡು."

"ಪಾಪ, ಬಡವಿ ಒಳ್ಳೇಕಿ ಅದಾಳ. ಕೈ, ಬಾಯಿ ಸುದ್ದ ಅದ. ಕೂಸಿನ್ನ ಕರಕೊಂಡ ಬಂದ ಮ್ಯಾಲೆ ಕಾಳಜಿಲೆ ಕೆಲಸಾ ಮಾಡತಾಳ ನನಗೆಲ್ಲಾ ಗೊತ್ತದ. ಮಗ್ಗುಲ ಮನೀ ಬಟ್ಲರ ಮಾಡಿದ ಸಾರು ಉಣಬ್ಯಾಡ್ರಿ, ನಾಗೀನs ಅಡಿಗಿ ಮಾಡ್ಲಿ. ನಿಮಗೇನ ಬೇಕ ಎಲ್ಲಾ ಹೇಳಿ ಮಾಡಿಸಿಕೊಳ್ರಿ." ತಾನು ಬೇಡವೆಂದಿದ್ದರೂ ಸುಶೀಲ ಅವಳನ್ನು ಗಂಟು ಹಾಕಿ ಹೋಗಿದ್ದಳು ಮುಗ್ಧೆ ! ಈಗ ತಾನು ಬಸರು, ಮುಂದ ಬಾಣಂತಿ. ತನ್ನ ಆರೈಕಿಯೊಳಗ, ತನ್ನ ಕೂಸಿನ್ನ ಜೋಪಾನ ಮಾಡೂದರಾಗ ತನ್ನ ಗಂಡಗ ಇಷ್ಟೊಂದು ಹಸಿವಿ ಆಗಬಹುದು ಅನ್ನೂ ಕಲ್ಪನಾನs ಆಕೀಗೆ ಬಂದಿರಲಿಕ್ಕಿಲ್ಲಾ. ಕ್ರಿಶ್ಚನ್ ಬಟ್ಲರ್ ಮಾಡಿದ ಸಾರು ಉಂಡರ ನಾನು ಕುಲಗೆಡತೀನಿ ಅಂತ

ಹೆದರಿದಾಕಿ ನಾಗೀ ಸಂಗದೊಳಗ ನಾ ಕುಲಗೆಡಬಹುದು ಅನ್ನೂ ವಿಚಾರನ ಮಾಡಲಿಲ್ಲ, ಪಾಽಪ.

ಹಂ, ನಾ ಈಗ ಕುಲಗೆಟ್ಟಂಗ ಹೆಂಗ ಆತು, ನಾಗೀ ಸಂಬಂಧದಿಂದ ನಾ ಕುಲಗೆಡೂಕಿಂತ ಮೊದಲಽ ನಮ್ಮಪ್ಪ ಕುಲಗೆಟ್ಟಾನಲ್ಲ ಹುಸೇನಬೀನ್ನ ಇಟಕೊಂಡು. ನಾ ಹಳ್ಳಿಯೊಳಗ ಸಾಲೀಗೆ ಹೋಗೂಮುಂದ ಫಾತಿಮಾ ಬಂದ ಕೂಡಲೆ ಹುಡುಗರು ನನಗ ಚ್ಯಾಷ್ಟಿ ಮಾಡತಿದ್ದರು. "ನಿನ್ನ ತಂಗಿ ಬಂದ್ಲ ನೋಡೋ" ಅಂತ. ನನಗ ಮೊದಲ ಮೊದಲ ಅಳೂಹಾಂಗ ಆಗತೀತ್ತು. ಅಪ್ಪಗ ಕೇಳತಿದ್ದೆ "ಹಾಂಗ ಯಾಕ ಅಂತಾರ? ಅಂತ, ಆಕೀ ಕಣ್ಣು ಒರಸಿಕೊಂಡು "ನೀ ಇನ್ನೂ ಸಂಣ್ಣಾವ ಇದ್ದೀಯಪಾ ನಿನಗ ತಿಳಿಯುದಿಲ್ಲಾ" ಅಂತಿದ್ಲು, ದೊಡ್ಡಾಂವ ಆದಂಗ ನನಗೂ ತಿಳೀಲಿಕ್ಕೆ ಹತ್ತೀತು, ಅಪ್ಪನ ಮ್ಯಾಲೆ ಸಿಟ್ಟು ಬರತಿತ್ತು. ಅವ್ವನ್ನ ನೋಡಿ ಪಾಪ ಅನಸತಿತ್ತು, ಹಾಂಗ ನೋಡಿದರ ಅಪ್ಪ ಅವ್ವಗ ಏನೂ ಕಡಿಮಿ ಮಾಡಿದ್ದಿಲ್ಲಾ. ಸೀರಿ, ವಸ್ತ್ರ, ಆಳು-ಕಾಳು, ಮನೀಯೊಳಗಿನ ಕಾರಭಾರ ಎಲ್ಲಾ ಅವ್ವಂದ. ನಾ ಇನ್ನೂ ದೊಡ್ಡಾಂವ ಆದಂಗ ಅಪ್ಪನ ದೌರ್ಬಲ್ಯ ಗೊತ್ತಾಗಲಿಕ್ಕೆ ಹತ್ತೀತು. ಅವನ ಬುಗ್ಗೆ ಸಿಟ್ಟು ಕಡಿಮಿ ಆಗಿ ಕನಿಕರ ಅನಸತಿತ್ತು. ಫಾತಿಮಾ ದಾರೀಯೊಳಗ ಭೆಟ್ಟಿ ಆದರ ನಾನಽ ಮುಂದಾಗಿ ಮಾತಾಡಿಸತಿದ್ದೆ. ಸಮಾಜದೊಳಗ ಆಕೀ ಸ್ಥಾನ ಏನು ಅನ್ನೂ ಕಲ್ಪನಾ ಬಂದಿತ್ತು. ಕಾಲೇಜ ಸೂಟಿ ಬಿಟ್ಟ ನಾ ಊರಿಗೆ ಬರೂಮುಂದ ತಂಗೀ ಜೋಡಿ ಆಕಿಗೂ ಸೀರಿ ತರತಿದ್ದೆ. ಅವನ್ನ ನೋಡಿ ಅಪ್ಪ ಹಿಗ್ಗತಿದ್ದರು. ಅವರ ಕಣ್ಣೊಳಗ ಬೆಳಕ ಮೂಡತಿತ್ತು. ಹುಸೇನಬಿ ಸಾಯೂಮುಂದ ಆಕೀಗೆ ಮಾತು ಕೊಟ್ಟಾಂಗ ಅಪ್ಪ ಒಂದ ಹೊಲ ಮಾರಿ ಫಾತಿಮಾನ್ನ ಲಗ್ನಾ ಮಾಡಿ ಕೊಟ್ಟರು.

ಅಪ್ಪ, ಹುಸೇನಬೀ ಸಂಬಂಧ ಅಂದರ ಹೀಂಗಿತ್ತು ಆದರ ನಂದು, ನಾಗೀದು ಇಂಥಾ ಸಂಬಂಧನಽ ಅಲ್ಲಾ ಸಾಯೋ ತನಕ ಆಕೀನ್ನ ಇಟಕೊಂಡ ಹ್ಯಾಂಗ ಸಾಗಿಸಲಿ? ಒಂದ ಸಂಸಾರ ಸಾಕೂದಽ ನನಗ ಒಜ್ಜೆ ಆದಾಗ ಇನ್ನೊಂದಕ್ಕ ಏನ ಮಾಡಲಿ? ಸುಶೀ ಹತ್ತರ ಇದ್ದಾಗ ನನಗ ನಾಗಿಯಾದರೂ ಯಾಕಬೇಕು? ನನ್ನ ಸುಶೀನಽ ಸಾಕು. ಈಗ ಏನೋ ಬ್ಯಾಸರಾಗಿತ್ತು, ಇಬ್ಬರಿಗೂ ಹಸಿವಾಗಿತ್ತು ಉಂಡಿವಿ ಅತು. ಒಟ್ಟಿನ ಮ್ಯಾಲೆ ಸುಶೀಗೆ ನಾ ಮೋಸಾ ಮಾಡಿದಂಗಾತು.

"ನಾ ಅರೆ ಏನ ಮಾಡ್ಲಿ, ನಾ ಏನೂ ಮುದ್ದಾಂ ಮಾಡಲಿಲ್ಲ, ಕೈ ಮಿಕ್ಕಿ ಆತು."

"ಮೊದಲನೇ ಸಾರೆ ಕೈ ಮಿಕ್ಕಿ ಆದರ, ಎರಡನೇ ಸಾರೆ ನೀನಽ ಮುದ್ದಾಂ ಆಕಿನ್ನ ಕರದಿ."

"ಹೌದು, ಆದರ ಆಗ ನನಗ ಇದು ತಪ್ಪು ಅನಿಸಲೇ ಇಲ್ಲಾ, ನಾ ಗಂಡಸ ಇದ್ದೇನಿ, ಬೇಕಾದ್ದು ಮಾಡಬಲ್ಲೆ ಅನ್ನಿಸ್ತು. ಮತ್ತ ಆ ಹೊತ್ತಿನ್ಯಾಗ ತಪ್ಪು ಒಪ್ಪು ಒಂದೂ ನೆನಪಿಗೆ ಬರೋದಿಲ್ಲ"

"ಬೇಕಾದ್ದ ಮಾಡಬಲ್ಲೆ ಅನಲಿಕ್ಕೆ ಎಲ್ಲಾ ಸ್ವಾತಂತ್ರ್ಯ ನಿನಗಽ ಕೊಟ್ಟಾರೇನು? ನಿನ್ನಾಂಗ ನಿನ್ನ ಸುಶೀನೂ ಮಾಡಿದರ?"

"ಛೀ ಎಂಥಾ ಮಾತ ಆಡ್ತೀರಿ. ಆಕೆ ಹಂಗ ಯಾಕ ಮಾಡತಾಳ? ನನಗ ದ್ರೋಹ ಮಾಡತಾಳೇನೂ?"

"ಯಾಕ? ಆಕೇ ಮನುಷ್ಯಾಳ ಅಲ್ಲೇನು? ನಿನ್ನಂಗ ಆಕೆಗೂ ಹಸಿವಿ ಆಗೂದಿಲ್ಲೇನು? ನೀನು ಇಲ್ಲದಾಗ ಆಕೇನೂ ಹಾಂಗಽ ಮಾಡಿದರ ನೀ ಸುಮ್ಮನ ಇರತೀಯೇನು?"

"ಏನ್ರಿ ಏನ ಮಾತಾಡತೀರಿ. ನಾ ಅಂದರ ಏನಂತ ತಿಳಕೊಂಡೀರಿ. ಅಂಥಾ ಹಾದರಗಿತ್ತೀನ್ನ ಒದ್ದ ಹೊರಗ ಹಾಕತೇನಿ ಒದ್ದು. ಗಂಡಸ ಅದೀನಿ ನಾನು"

"ಹೌದಪಾ ಗಂಡಸ ಅದೀ ನೀನು. ನಿನ್ನ ಜೀವನದಾಗ ಗಂಡಿಗೊಂದು, ಹೆಣ್ಣಿಗೊಂದು ಕಾಯ್ದೆ ಅದಽ ಏನು? ನೀ ಹ್ಯಾಂಗ ಸ್ವತಂತ್ರ ಅದೀ ಹಾಂಗಽ ಆಕೀಗೂ ಎಲ್ಲಾ ಸ್ವಾತಂತ್ರ್ಯ ಅದ. ಹೆಂಗಸರಿಗೆ ಸಮಾನ ಸ್ವಾತಂತ್ರ್ಯ, ಹಕ್ಕು ಬಾಧ್ಯತೆಗಳು ಬೇಕಽ ಬೇಕು ಅಂತ ನೀನಽ ಕಾಲೇಜದಾಗ ಕುಣಕುಣದು ಭಾಷಣ ಮಾಡತ್ತಿದ್ದೆಲ್ಲಾ ಮರತೀ ಏನು? ಏನಂತಿ ಹೇಳು? ನೀ ಮಾಡಿದಾಂಗ ಆಕೀ ಮಾಡಿದರ ಒದ್ದ ಹೊರಗ ಹಾಕತೀ. ಈಗ ನೀ ಮಾಡಿದ ತಪ್ಪಿಗೆ ಆಕೀ ನಿನ್ನ ಒದ್ದರಽ ...?

ಒದೆಸಿಕೊಂಡವನಂತೆ ಮನೋಹರ ಚಟ್ಟನೆ ಕುರ್ಚಿ ಬಿಟ್ಟಿದ್ದ. ಕೈ ಗಡಿಯಾರ ನೋಡಿಕೊಂಡ. ಹೆಂಡಿತಿಯ ಊರಿಗೆ ಹೋಗುವ ಬಸ್ಸು ಹಿಡಿಯಲು ಹೊರಟೇ ಬಿಟ್ಟ.

o o o o

ಜ್ವರದಿಂದ ಬಳಲಿದ್ದ ರವಿಗೆ ಆಗ ತಾನೆ ನಿದ್ರೆ ಹತ್ತಿತ್ತು. ನಾಲ್ಕಾರು ದಿನಗಳಿಂದ ಜ್ವರ ತುಂಬಾ ಇತ್ತು. ಆಮೇಲೆ ಗೊಬ್ಬರ ಎದ್ದವು. ಎಂಟು ತಿಂಗಳ ಮಗು ಹಿಂಡಿದ ಕಬ್ಬಿನ ಸಿಪ್ಪೆಯಂತಾಗಿದ್ದ. ಹಗಲೂ ರಾತ್ರಿ ಅಳುತ್ತಿದ್ದ. ಮನೆಯ ಕೆಲಸ ಮಗನ ಕಾಯಿಲೆ ಎಲ್ಲದ ರಿಂದ ಸುಶೀ ಬಹಳ ಆಯಾಸಗೊಂಡಿದ್ದಳು. ಮನೋಹರ ಎರಡು ದಿನ ರಜ ತೆಗೆದುಕೊಂಡು ಮಗನ ಉಪಚಾರ ಮಾಡಿದ. ಮನೆಗೆಲಸದಲ್ಲಿ ಹೆಂಡತಿಗೆ ಸಹಾಯ ಮಾಡಿದ. ಸುಶೀ ತುಂಬಾ ಆಯಾಸಗೊಂಡು ಊಟ ಮಾಡದೆ ಮಲಗಿದಾಗ ಹಾಲು ಕುಡಿಯಲು ಕೊಟ್ಟ, ಹಣೆಗೆ ಅಮೃತಾಂಜನ ತಿಕ್ಕಿದ. ಹಣೆಯ ಮೇಲಾಡುತ್ತಿದ್ದ ಅವನ ನೀಳ ಬೆರಳುಗಳು ತನ್ನ ಕೆನ್ನೆಗೆ ಇಳಿದಾವೆ ಎನ್ನುವ ಆಸೆ ಸುಶೀಯ ಮನದಲ್ಲಿ ಮೂಡಿತ್ತು. ಅದನ್ನು ಅರಿಯದ ಮನೋಹರ ಹೆಂಡತಿಗೆ ನಿದ್ದೆ ಬಂದಿದೆ ಎಂದು ತಿಳಿದು ಅವಳ ಮೈತುಂಬ ರಗ್ಗು ಹೊದಿಸಿ ಹೊರಗಿನ ತನ್ನ ಕೋಣೆಗೆ ಮಲಗಲು ಹೊರಟುಹೋದ. ಲೈಟು ಆರಿಸಿ ಮಲಗಿದ, ಸಪ್ಪಳವು ಕೇಳಿಸಿತು ಸುಶೀಗೆ.

ಗಂಡ ಎದ್ದು ಹೋದುದಕ್ಕೆ ಅಸಮಾಧಾನ, ಇನ್ನಷ್ಟ ಹೊತ್ತು ತನ್ನ ಹತ್ತಿರ ಕುಳಿತಿರಬೇಕಾಗಿತ್ತು ಎನ್ನುವ ಆಸೆ ಸುಶೀಗೆ. ತನ್ನ ಯೋಚನೆ ತನಗೆ ನಗು ತಂದಿತು. ಮನೋಹರ ಯಾಕೆ ತನ್ನನ್ನು ಓಲೈಸಬೇಕು, ಏನೋ ಕರ್ತವ್ಯ ಅಂತ ತಿಳಿದು ತಲೆನೋವಿಗೆ ಅಮೃತಾಂಜನ ತೀಡಿದ. ಹೋಗಿ ಬಿಟ್ಟ. ಇಲ್ಲಿ ಕುಳಿತರೆ ಅವನಿಗೆ ಸಿಗುವ ಸುಖವಾದರೂ ಏನು ? ಹೆರಿಗೆಯಾಗಿ ಬಂದು ಎಂಟು ತಿಂಗಳು ಕಳೆದರೂ ತನ್ನ ಮೈ ಮುಟ್ಟಿಗೊಟ್ಟಿರಲಿಲ್ಲ ತಾನು. ಇಷ್ಟು ದಿನಗಳಲ್ಲಿ ಎಷ್ಟೋ ಸಲ ಹತ್ತಿರ ಬಂದಿದ್ದ. ಬೇಡಿದ್ದ. ಅಂಗಲಾಚಿದ್ದ ಆದರೂ ನಾಗಿಯನ್ನು ಅಪ್ಪಿದ ಆ ಕೈಗಳನ್ನು ಮುಟ್ಟಲು ಮನಸ್ಸು ಮಾಡಿರಲಿಲ್ಲ ತಾನು. ಅವನ ಬೇಡಿಕೆಯನ್ನು ನಿರಾಕರಿಸಿ ದೂರ ಸರಿಸಿದ್ದಳು. ಅತ್ತು, ಕರೆದು ರಂಬಾಟ ಮಾಡಿದ್ದಳು. ನಿಮಗೆ ನಾಚಿಕೆಯಾಗುವುದಿಲ್ಲವೇ ಮನಸ್ಸ ಹಿಡಿತದಲ್ಲಿಟ್ಟುಕೊಳ್ಳಲು ತಿಳಿಯಯಲಿಲ್ಲವೇ ಎಂದು ಛೀಮಾರಿ ಮಾಡಿದ್ದಳು. ಎಲ್ಲದಕ್ಕೂ ಅವನದೊಂದೇ ಉತ್ತರ "ಏನೋ ಮನಸ್ಸು ದಾರಿ ತಪ್ಪಿತು. ಇನ್ನೊಮ್ಮೆ ಹಾಗೆ ಆಗುವುದಿಲ್ಲ. ಮರೆತು ಬಿಡು"

ಒಮ್ಮೆ ತಮ್ಮಿಬ್ಬರ ಜಗಳ ದೀರ್ಘಕ್ಕೆ ಹೋದಾಗ ಮನೋಹರ ಸಿಟ್ಟಿನಿಂದ ಕೂಗಾಡಿದ್ದ "ಎಷ್ಟ ದಿನಾ ಹಿಂಗs ಕಾಡಸ್ತೀ. ಭಾಳ ಹಟಮಾರಿ ಇದ್ದೀ ನೀನು. ಆದರೆ ಈ ಹಟಾನ ನಿನ್ನ ಬಾಳೆ ಹಾಳುಮಾಡಿತು. ನನಗೇನು ನೀ ಇಲ್ಲದ್ದರೆ ಮತ್ತೆ ನಾಗೀ ಹತ್ತರ ಹೋಗತೇನಿ."

ತಾನೂ ಅಷ್ಟೇ ಆಕ್ರೋಶದಿಂದ ಅರಚಿದ್ದಳು, "ಹೋಗ್ರಿ ಹಾಳ ಬಾವಿ ಬೀಳ್ರಿ. ನಂದೇನು ಹೋಗ್ತದ. ನಾಕ ಮಂದ್ಯಾಗ ನಿಮ್ಮ ಮರ್ಯಾದಿ ಏನ ಉಳೀತದ ? ಕೆಲಸದಾಕೀನ್ನ ಇಟ್ಟುಕೊಂಡು ಮೆರೀರಿ" ಎರಡು ದಿನ ಇಬ್ಬರೂ ಮಾತನಾಡರಲಿಲ್ಲ. ಮನೆ ಮೂಕವಾಗಿತ್ತು. ರವಿಯ ಅಳುವೊಂದನ್ನು ಬಿಟ್ಟರೆ, ಮತ್ತೆ ರವಿಗಾಗಿ, ಮನೆಯ ಕೆಲಸಕ್ಕಾಗಿ ಮಾತು ಮುಂದುವರೆದವು. ಮನೋಹರ ತನ್ನ ಮಾತಿನಂತೆ ನಡೆದುಕೊಂಡಿಲ್ಲವೆನ್ನುವ ಬಂಡಧೈರ್ಯವಿದ್ದರೂ ಮನಸ್ಸು ಒಳಗೊಳಗೆ ಅಳುಕುತ್ತಿತ್ತು. ಎಲ್ಲಿ ಅಂದಂತೆ ಮಾಡುತ್ತಾರೋ ಎಂದು ಹೆದರಿ ಎದೆ ಪುಕ ಪುಕ ಎನ್ನುತ್ತಿತ್ತು. ಆಗೆಲ್ಲ ಅವ್ವನ ಮಾತು ನೆನಪಾಗುತ್ತಿದ್ದವು.

- "ಏನೋ ಆಸೇಕ ಬಿದ್ದು ಆಗಿರಬೇಕು ಬಿಡು. ಇನ್ನ ಮುಂದ ಹಿಂಗ ಆಗದಂಗ ನೋಡಿಕೋ. ಸಡಲು ಬಿಡಬ್ಯಾಡಾ."

"ಏನವಾ ಆಸೇ ಅಂತ. ಅಷ್ಟೂ ತಿಳಿಯಾದಿಲ್ಲೇನು. ಕಲಿತವರಾಗಿ? ಹೀಂಗ ಹೆಂಡತಿಗೆ ದ್ರೋಹಾ ಮಾಡಬಾರದು ಅನ್ನೂ ಎಚ್ಚರ ಇರೂದಿಲ್ಲೇನು ಮೈಮ್ಯಾಲೆ? ಇಂಥವರ ಕೂಡ ಬಾಳೇ ಮಾಡಂತ ಹೇಳತಿಯಲ್ಲಾ. ಅವರಷ್ಟು ಸ್ವಾತಂತ್ರ್ಯ ಹಕ್ಕು ಎಲ್ಲಾ ನನಗೂ ಅದಾವಾ ಈ ಕಾಲದಾಗ ಗೊತ್ತಿಲ್ಲೇನು ?" ತಾನೂ ತಿರುಗಿ ವಾದಿಸಿದ್ದಳು ಏರುಧ್ವನಿಯಲ್ಲಿ ಅವ್ವನ ಮಾತಿನ ಧೋರಣೆ ಸರಿಬರದೆ ತಮ್ಮಿಂದ ತಪ್ಪಾತು ಅನ್ನೂದು ತಾವs ಸ್ವತಾ ಬಂದಹೇಳಿದ್ರಲ್ಲಾ. ಇಷ್ಟು ಪ್ರಾಮಾಣಿಕತನಾದರೆ ಎಷ್ಟು ಮಂದಗಿ ಇರ್ತದ ಎನ್ನುವ ಧ್ವನಿ ಸುಶೀಯನ್ನು ಒಳಗೇ ಮೀಟಿತು.

"ಗೊತ್ತದs ಸುಶೀ. ನೀವು ಶ್ಯಾಣ್ಯಾರು, ಕಲಿತವರು. ನಮ್ಹಂಗ ದಡ್ಡರು ಅಲ್ಲಾ, ನಿಮ್ಮ ಹಕ್ಕು ಸ್ವಾತಂತ್ರ್ಯ ಎಲ್ಲಾ ಕಾಗದದಾಗ ಅದಾವ. ಅದು

ನಿನಗ ಗೊತ್ತಿಲ್ಲs ಹುಚ್ಚಿ ಅದೀ ನೀನು ಹುಚ್ಚಿ. ಅಂವಾ ಗಂಡಸ ಅದಾನ. ಏನ ಮಾಡಿದರೂ ನಡೀತದ ನಿನಗ ಹಾಂಗ ಮಾಡಾಕ ಆದೀತೇನು ?" ಅವ್ವನ ಪ್ರಶ್ನೆ ನೇರ ವಾಗಿತ್ತು. ಅದಕ್ಕೆ ಉತ್ತರ ಕೊಡಲು ತಿಳಿಯದೆ ಕಕ್ಕಾ ವಿಕ್ಕಿಯಾಗಿದ್ದೆ ತಾನೂ, ಗಂಡ ಮಾಡಿದ ಹಾಗೆ ತಾನು ಮಾಡುವದು ಸಾಧ್ಯವೇ ಎನ್ನುವ ಪ್ರಶ್ನೆ ಆಗಾಗ ಥುತ್ತೆಂದು ಎದುರಾಗುತ್ತದೆ. ಗಂಡನ ಮನೆಗೆ ಹೋಗು ವುದಿಲ್ಲವೆಂದು ತಾನು ಹಟ ಹಿಡಿದಾಗ ಅವ್ವ ಹೇಳಿ ದ್ದೇನು ? "ಸುಶೀ ನೀ ಇನ್ನೂ ಸಣ್ಣಾಕಿ ಇದ್ದೀ ಯವ್ವಾ, ನಿನಗ ತಿಳಿಯೂದಿಲ್ಲಾ. ನಾ ಹೇಳಿದಂಗ ಕೇಳು, ಗಂಡನ ಮ್ಯಾಲಿನ ಸಿಟ್ಟಲೆ ಹಿಂಗ ಹಾರ್ಯಾಡ್ತಿ, ಬಾಣಂತಿ ಮೈ ಆರಿಕೋತ ಬಂದಾಂಗ ನಿನಗ ಗಂಡನ ಹತ್ತರ ಇರಬೇಕು ಅನ್ನೂ ಆಸೇ ಆಗ್ತದ. ಹರೇದಾಕಿ, ಎಷ್ಟು ದಿವಸ ಗಂಡನ್ನ ಬಿಟ್ಟು ಇರತೀ, ದೇವರು ಗಂಡಸ ರನ್ನ ಯಾವ ಮಣ್ಣೀಲೆ ಮಾಡಿದಾ ಅದs ಮಣ್ಣೀಲೆ ನಮ್ಮನ್ನೂ ಮಾಡ್ಯಾನ. ಅವರಿಗಿರೂ ಬಯಕಿ, ಆಸೆ ಎಲ್ಲಾ ನಮಗೂ ಇರತಾವ. ಅದೆಲ್ಲಾ ನಿನಗ ಮುಂದ ಅರ್ಥ ಆಗ್ತದ. ನೀ ಗಂಡನ ಮನೀಗೆ ಹೋಗೂದs ಛೊಲೋ. ಹಟಾ, ಜಗಳಾ ಏನ ಮಾಡೂದು ಅವನ ಜೋಡಿನ ಮಾಡು. ಇಲ್ಲಿದ್ದು ಮಾಡಬ್ಯಾಡಾ."

ಅವ್ವ ಅಂದಂತೆ ತಾನೂ ಇದುವರೆಗೆ ತನ್ನ ಹಟ ಮುಂದುವರಿಸುತ್ತಲೇ ಬಂದಿದ್ದಳು. ಗಂಡನ ಉಪಚಾರಕ್ಕೆ, ಪ್ರೀತಿಯ ಮಾತಿಗೆ ಆಗಾಗ ಮನಸ್ಸಿನಲ್ಲಿ ಮಾರ್ದವತೆ ಮೂಡುತ್ತಿದ್ದರೂ ಅದನ್ನು ಹಿಂದೆ ಒತ್ತುತ್ತಿದ್ದಳು. ಆದರೆ ಈಗೀಗ ಆ ಮಾರ್ದವತೆ ಹಿಂದೆ ಉಳಿಯದೆ ಎದ್ದೆದ್ದು ಪುಟಿದು ಬರುವಂತೆ ತೋರುತ್ತಿದೆ. ನನ್ನ ಮನಸ್ಸು ಮೆತ್ತ ಗಾಗುತ್ತ ನಡೆದಂತೆ ಮನೋಹರ ಹೆಚ್ಚೆಚ್ಚು ನಿರ್ಲಿಪ್ತನಾ ಗುತ್ತ ನಡೆದಿದ್ದಾನೆ. ಅವನು ತನ್ನ ಆಸೆಯನ್ನು ಬಿಟ್ಟಂತೆ ಕಾಣುತ್ತದೆ. ಏನಾದರೂ ಓದುವದು, ಮಗನನ್ನು ಆಡಿ ಸುವುದು, ಆಫೀಸು, ಮತ್ತೆ ಮನೆ, ಊಟ, ನಿದ್ದೆ ಹೀಗೆ ದಿನ ಕಳೆಯುತ್ತಿದ್ದಾನೆ. ಭಾನುವಾರ ಒಮ್ಮೊಮ್ಮೆ ಸಿನಿ ಮಾಕ್ಕೆ, ಗೆಳೆಯರ ಮನೆಗಳಿಗೆ ಕರೆದೊಯ್ಯುತ್ತಾನೆ. ಎಲ್ಲೂ ಯಾರ ಇದಿರು ನಮ್ಮ ಸಂಸಾರದ ಬಿರುಕು ಹೊರ ಬಿದ್ದಿಲ್ಲ. ನನಗೆ ಅಷ್ಟೇ ಸಮಾಧಾನ, ಸಮಾಧಾನ ವೆಂದರೂ ನಿಶ್ಚಿಂತೆಯಾಗಿಲ್ಲ. ಅವನ ಜೊತೆ ಒಂಟಿ ಯಾಗಿ ಹೆಚ್ಚು ಹೊತ್ತು ಕಳೆಯಲು ಹೆದರಿಕೆ ನನಗೆ. ಸಿನಿಮಾ, ಕಥೆ-ಕಾದಂಬರಿಗಳಲ್ಲಿಯ ಪ್ರಣಯ ಸನ್ನಿವೇಶ ಗಳು ಮನಸ್ಸಿನ ಶಾಂತಿಯನ್ನೂ ಕೆಡಿಸುತ್ತಿವೆ. ನನ್ನ ಬಗ್ಗೆ ನನಗೇ ನಂಬಿಕೆಯಿಲ್ಲದಂತಾಗಿದೆ. ಸಿನಿಮಾದದಲ್ಲಿ ಕುಳಿತಾಗ, ರಿಕ್ಷಾದಲ್ಲಿ ಬರುವಾಗ ಅವನ ಮೈ ತಾಕದಂತೆ ಎಚ್ಚರಿಕೆಯಿಂದ ಕುಳಿತಿರುತ್ತೇನೆ. ಆದರೂ ಮಗುವನ್ನು ಕೊಡುವಾಗ, ತೆಗೆದುಕೊಳ್ಳುವಾಗ, ಮನೆಯ ಕೆಲಸದಲ್ಲಿ ದ್ದಾಗ ತಿಳಿದೋ ತಿಳಿಯದೆಯೋ ಅವನನ್ನು ತಾಕಿದಾಗ ರೋಮಾಂಚನಗೊಳ್ಳುತ್ತೇನೆ. ಆಗ ಅವನ ಮುಖ ನೋಡುವ ಧೈರ್ಯವೂ ಇರುವುದಿಲ್ಲ. ಸರಸರ ಅಲ್ಲಿಂದ ಹೋಗಿ ಬಿಡುತ್ತೇನೆ. ಅವನು ಹೊರಗೆ ಹೋದಾಗ ಅವರ ಕೋಣೆಗೆ ಹೋಗಿ ಹಾಸಿಗೆ ಸರಿ ಮಾಡಲು ಹೋದರೆ ತನಗೇ ತಿಳಿಯದಂತೆ ಕೈ ಮೃದುವಾಗಿ ಹಾಸಿ ಗೆಯ ಮೇಲಾಡುತ್ತದೆ. ಅವನ ಕ್ರಾಪಿನ ಪರಿಮಳ ಸೂಸುವ ದಿಂಬನ್ನು ಮೂಡಿಸುತ್ತೇನೆ. ಹಾಗೆಯೇ ದಿಂಬು ಅವಚಿ ಮಲಗಿ ಬಿಟ್ಟಿರುತ್ತೇನೆ.

ಮೊನ್ನೆಯಂತೂ ಅವನ ಶರ್ಟು ಅಗಸನಿಗೆ ಹಾಕಲು ತೆಗೆದುಕೊಂಡವಳು ಅದನ್ನೇ ಮೂಸುತ್ತಾ, ಸವರುತ್ತಾ ನಿಂತು ಬಿಟ್ಟಿದ್ದೆ. ಮನೋಹರ ತಟ್ಟನೆ ಒಳಗೆ ಬಂದ. ನನಗೆ ತುಂಬಾ ನಾಚಿಕೆಯಾಗಿ, ಕೆಂಪಾಗಿ, ಉಸಿರು ಬಿಡುತ್ತಾ ಹೊರಗೆ ಓಡಿ ಬಂದು ಬಿಟ್ಟಿದ್ದೆ. ಇತ್ತೀಚಿಗೆ ಸರಿಯಾಗಿ ನಿದ್ದೆಯೂ ಬರುವುದಿಲ್ಲ. ಹಾಸಿಗೆ ಯಲ್ಲಿ ಹೊರಳಾಡುತ್ತ ಇದ್ದಾಗ "ಯಾಕ ನಿದ್ದಿ ಬಂದಿಲ್ಲೇನು ?" ಎಂದು ಅವನು ಕೇಳಿದಾಗ ಹಟದಿಂದ, ಗಟ್ಟಿ ಯಾಗಿ ಕಣ್ಣು ಮುಚ್ಚಿಕೊಂಡು, ಬಂದ್ರಾ ?" ಎನ್ನು ತ್ತೇನೆ. ನಿದ್ದೆ ಬಾರದಾಗ ನಮ್ಮ ಪ್ರಥಮ ರಾತ್ರಿ ನೆನಪು ಮಾಡಿಕೊಳ್ಳುವ ಉಪಾಯವನ್ನು ನನ್ನ ವಿಚಿತ್ರ ಮನಸ್ಸು ಈಗ ಕಂಡುಕೊಂಡಿದೆ. ಅವನು ಅಪ್ಪಿದ್ದು, ತಾನು ನಾಚಿದ್ದು, ಬೆವರಿದ್ದು ಎಲ್ಲಾ ನೆನಪು ಮಾಡಿ ಕೊಳ್ಳುತ್ತಿರುವಾಗಲೇ ನಿದ್ದೆ ಹತ್ತಿಬಿಟ್ಟಿರುತ್ತಿತ್ತು. ಆದರೆ ಈಗೀಗ ಆ ಉಪಾಯದಿಂದ ಹೆಚ್ಚು ಕಾತುರಗೊಳ್ಳುತ್ತಿ ದ್ದೇನೆ. ಆ ಅಪ್ಪುಗೆ, ಚುಂಬನ ಬೇಕೇ ಬೇಕು ಎಂದು ಮೈ ಮುಲು ಮುಲುಗುಟ್ಟುತ್ತದೆ. ದಿನವೂ ರಾತ್ರಿ ಜಾಗರಣೆಯೇ ಆಗುತ್ತಾ ನಡೆದಿದೆ. ಒಂದೊಂದು ಸಲ ಕಣ್ಣು ಬಿಟ್ಟುಕೊಂಡು ಅವನ ಕೋಣೆಯತ್ತ ನೋಡು

ತ್ತಿದ್ದಾಗ ಅವನು ಎದ್ದು ಬಂದು ಮಂಚದ ಮೇಲೆ ಕುಳಿತ ಹಾಗೆ ಅನ್ನಿಸಿ, ಅವನನ್ನು ದೂರಸರಿಸಲೋ ಅಪ್ಪಿಕೊಳ್ಳಲೋ ಕೈ ಚಾಚಿದಾಗ ಅಲ್ಲಿ ಯಾರೂ ಇರುವುದಿಲ್ಲ. ಎಲ್ಲ ನನ್ನ ಭ್ರಮೆ.

ದಿನ ದಿನಕ್ಕೆ ಹುಚ್ಚಿಯಂತಾಗುತ್ತಿದ್ದೇನೆ. ನನ್ನ ಬುದ್ಧಿ ನನ್ನ ಸ್ವಾಧೀನದಲ್ಲುಳಿಯದಂತಾಗಿದೆ. ಮನಸ್ಸು ತೀರಾ ಹೀನ ಸ್ಥಿತಿಗಿಳಿಯುತ್ತಿದೆ. ಕೆಲವು ದಿನಗಳಿಂದ ರವಿಯನ್ನು ನೋಡಲು ದಿನವೂ ಡಾ॥ ಪ್ರಕಾಶ್ ಬರುತ್ತಿದ್ದರು. ಹೆಚ್ಚಾಗಿ ರವಿಯ ಹತ್ತಿರ ತಾನೇ ಇರುತ್ತಿದ್ದವಳು, ಅವರು ಅವನನ್ನು ಪರೀಕ್ಷಿಸುತ್ತಿದ್ದಾಗ, ಅವರ ಮಿರಿಮಿರಿ ಮಿಂಚುವ ಸುಗಂಧಿತ ಕ್ರಾಪು, ಸುಪುಷ್ಟ ದೇಹ ನನ್ನನ್ನು ಸೆಳೆಯುತ್ತಿತ್ತು. ಅವರು ಹತ್ತಿರ ಬಂದು ಬಗ್ಗಿ ರವಿಯ ಎದೆಯ ಮೇಲೆ ಸ್ಟೆತೋ ಆಡಿಸುತ್ತಿದ್ದಾಗಂತೂ ಆ ಸಾಮೀಪ್ಯದಿಂದ ರೋಮಾಂಚಿತಳಾಗಿದ್ದ ತಾನು ಉಸಿರು ಬಿಗಿ ಹಿಡಿದು ಕುಳಿತಿರುತ್ತಿದ್ದೆ. ಎರಡು-ಮೂರು ದಿನಗಳಲ್ಲೇ ಆ ನೋಟದಿಂದ, ಆಟದಿಂದ ನಾನು ಸೋತು ಹೋಗಿದ್ದೆ. ಹತ್ತಿರ ರವಿ, ಮನೋಹರ ಇಲ್ಲದಿದ್ದರೆ ಏನು ಮಾಡುತ್ತಿದ್ದೆನೋ ತಿಳಿಯದಾಗಿತ್ತು. ನನ್ನ ಮನಸ್ಸಿನಲ್ಲಿ ಹೀಗೆ ಹೊಯ್ದಾಟ, ತಿಕ್ಕಾಟ, ಹೋರಾಟ ನಡೆಸಿದಾಗ ಅವರು ಏಕೆ ಮತ್ತು ಹೇಗೆ ನಾಗಿಯನ್ನು ಅಪ್ಪಿದರೆನ್ನುವುದು ಅರ್ಥವಾಗುತ್ತಿದೆ ನನಗೆ. ಅದಕ್ಕೆ ಕಲ್ಪಿತ ವೈರಿಯ ಜೊತೆ ಯುದ್ಧ ಮಾಡುವುದನ್ನು ಬಿಟ್ಟು, ಸೋಲು ಒಪ್ಪಿಕೊಳ್ಳಬೇಕೆಂದಿದ್ದೇನೆ. ಕೇವಲ ಅವರ ಬೆರಳಿನ ಸ್ಪರ್ಶದಿಂದಲೇ ಓಡಿಹೋದ ತಲೆ ನೋವಿನಂತೆ ಅವರ ಸಂಗದಲ್ಲಿ ನನ್ನ ಮೈನೋವು, ಮನದ ನೋವು ಮಾಯವಾಗಲಾರವೇ? ಅದೇಕೆ ಮಾಯವಾಗುವುದಿಲ್ಲ? ಅವ್ವ ಹೇಳಿದಂತೆ ನಾನೂ ಅದೇ ಮಣ್ಣಿನಿಂದ ಮಾಡಲ್ಪಟ್ಟಿದ್ದೇನೆ.

ಸುಶೀ ಹಾಸಿಗೆಯಿಂದ ಎದ್ದು ನಿರಾತಂಕವಾಗಿ ನಿದ್ದೆ ಮಾಡುತ್ತಿದ್ದ ರವಿಗೆ ಸರಿಯಾಗಿ ಹೊದಿಸಿ, ಗಂಡನ ಕೋಣೆಯ ಹತ್ತಿರ ಹೋದಳು. ಬಾಗಿಲು ತೆರೆದೇ ಇತ್ತು. ಕತ್ತಲಲ್ಲೂ ಮನೋಹರನಲ್ಲಿ ಬೆಳಕು ಕಂಡಳು.

---



—ಎಸ್. ಮಂಗಳಾ ಸತ್ಯನ್

ಪ್ರಕಾಶ ಮಾಡುತ್ತಿದ್ದ ಪ್ರಶ್ನೆಗಳಲ್ಲಿ ಯಾವ ದೋಷವೂ ಇರಲಿಲ್ಲವಾದರೂ ಅವನ ಪ್ರಶ್ನೆಗಳು ಸುಧೀಂದ್ರನಿಗೆ ಬೇಸರವನ್ನುಂಟು ಮಾಡಿದ್ದಂತೆ ಪ್ರಕಾಶನಿಗೂ ತಂದೆಯ ವರ್ತನೆ ಅಷ್ಟೇ ಬೇಸರವನ್ನುಂಟುಮಾಡಿತ್ತು.

ಏಕೆ ಹೀಗೆ ? ತಾನು ಕೇಳುವ ಪ್ರಶ್ನೆಯಲ್ಲಿ ತಪ್ಪಾದರೂ ಏನಿದೆ ? ನಾನೇನು ತೊಟ್ಟಿಲ ಕೂಸೆ ? ಕಾಲೇಜಿನಲ್ಲಿ ಓದುತ್ತಿರುವ ಹದಿನೆಂಟರ ಯುವಕ. ತನ್ನ ಸಹಪಾಠಿಗಳೆಷ್ಟು ಮಂದಿ ತನ್ನನ್ನು ಈ ಪ್ರಶ್ನೆ ಮಾಡಿಲ್ಲ ? ತನಗೆ ತಿಳಿಯದೇಯಿರುವುದರಿಂದಲ್ಲವೇ ತಂದೆಯವರಲ್ಲಿ ತಾನು ಕೇಳುತ್ತಿರುವುದು ? ಆ ಪ್ರಶ್ನೆ ಕಿವಿಗೆ ಬಿದ್ದೊಡನೆ ಅವರೇಕೆ ವ್ಯಗ್ರರಾಗುತ್ತಾರೆ ? ಅದಕ್ಕೆ ಕೊಡಬೇಕಾದ ಉತ್ತರ ಅಷ್ಟು ಭೀಕರವೇ ? ಅಥವಾ ಬೇಸರವೇ ? ಅದು ಏನೇ ಇರಲಿ-ತಂದೆಯವರ ಕೋಪಕ್ಕೆ ಒಳಗಾಗಿ ಮುಂದೆ ತಾನು ಏನನ್ನೇ ಎದುರಿಸಬೇಕಾಗಿ ಬಂದರೂ ಸರಿ ಇಂದು ಅವರಿಂದ ಆ ಪ್ರಶ್ನೆಗೆ ಉತ್ತರ ಹೊಂದುವ ತನಕ ಒಂದು ತೊಟ್ಟು ನೀರನ್ನೂ ಸೇವಿಸ ಕೂಡದು.

ಅದೇ ಅಚಲ ನಿರ್ಧಾರದಿಂದ ತಂದೆಯಲ್ಲಿ ಹಿಂದಿನ ಹಳೆಯ ಪಲ್ಲವಿಯನ್ನೇ ಹಾಡಿ ಕೇಳಿದಾಗ ಸುಧೀಂದ್ರನಿಂದ ದೊರೆತ ಉತ್ತರ ಪ್ರಕಾಶನನ್ನು ಸಂಧಿಗ್ಧಕ್ಕೊಳಗು ಮಾಡಿತು. ಅವನ ಪ್ರಶ್ನೆ ಕಿವಿಗೆ ಬಿದ್ದೊಡನೆ ಮಗನೆಂಬ ವಾತ್ಸಲ್ಯದಿಂದಲೂ ಬರಿದಾದ ಹೃದಯದಲ್ಲಿ ಆವೇಶಹ ಕಿಚ್ಚಿದ್ದಿತು. ಪ್ರಕಾಶನ ಎರಡೂ ಕೆನ್ನೆಗಳ ಮೇಲೂ ರಪರಪನೆ ರಾಚಿ ಏರಿಟ್ಟ ಉಸಿರಿನಲ್ಲಿ ಒದರಿದ.

"ಪ್ರಕಾಶ್ ಈ ವತ್ತಿಗೇ ಕೊನೆ. ಈ ನಿನ್ನ ತಂದೆ ಯಾವರೂ ನಿನ್ನೊಂದಿಗೆ ಇರಬೇಕು ಅನ್ನೋ ಆಸೆ ನಿನಗಿದ್ದರೆ ಇನ್ನು ಎಂದೂ ಈ ಪ್ರಶ್ನೇನ ಮಾಡಕೂಡದು."

---

**ತನ್ನ ಬಾಳ ಪುಸ್ತಕಕ್ಕೆ ಹೊಸದಾಗಿ ಬಂದ ರಕ್ಷಾಕವಚ ಹರಿದುಹೋದ ಹಳೆಯ ಕವಚವನ್ನು ದೂರ ತಳ್ಳಿಹಾಕಿತೆಂದು ತಾನು ತಿಳಿದದ್ದೇ ಆದು ಗಾಳಿಗೆ ಬೀಸಿ ಮತ್ತೆ ತನ್ನತ್ತಲೇ ಬರಬೇಕೆ ?**

---

ತಂದೆಯ ಉತ್ತರಕ್ಕೆ ಅವಾಕ್ಕಾದ ಪ್ರಕಾಶ ಸುಧೀಂದ್ರನ ಎದೆ ಗೊರಗಿ ಬಿಕ್ಕತೊಡಗಿದ—

"ಇಲ್ಲ ಅಪ್ಪಾ ಹಾಗೆ ಮಾತ್ರ ಮಾಡಬೇಡಿ. ನಾನು ಇನ್ನು ಎಂದೂ ಆ ಪ್ರಶ್ನೆ ಕೇಳೋದಿಲ್ಲ."

ಮಗನನ್ನು ಯಾವರೀತಿ ಸ್ವಾಂತ್ವನ ಪಡಿಸಬೇಕೆಂಬುದೇ ಸುಧೀಂದ್ರನಿಗೆ ತಿಳಿಯದಾಯಿತು. ಅವನ

ಕಣ್ಗಳಿಂದ ಪ್ರಕಾಶನ ಶಿರದ ಮೇಲೆ ಎರಡು ತೊಟ್ಟು ಕಂಬನಿ ಉರುಳಿದುವಷ್ಟೇ.

೦ ೦ ೦ ೦

ತಂದೆಯ ಕಣ್ಣಿಗೆ ಕಣ್ಣಾಗಿ ಬೆಳೆದ ಚಿತ್ರಾ ಕಂಟ್ರಾಕ್ಟರ್ ಜನಾರ್ಧನರಾಯರಿಗೆ ಅಕ್ಕರೆಯ ಒಬ್ಬಳೇ ಮಗಳು. ಎಂತಹವರನ್ನೂ ಆಕರ್ಶಿಸುವಂತಹ ಸುಂದರ ವದನ. ಒಮ್ಮೆ ನೋಡಿದರೆ ಮತ್ತೆ, ಮತ್ತೆ ನೋಡಬೇಕೆನಿಸುವ ಅಂಗಸೌಷ್ಟವ. ಚಿತ್ರಾ ಸೌಂದರ್ಯಕ್ಕೆ ಪ್ರತಿ ನಾಮಧೇಯವಾಗಿದ್ದಳು. ಕಾಲೇಜಿನಲ್ಲಿ ಅವಳನ್ನು ಕೆಣಕಿ ಕಾಡಲು ಹೋಗಿ ಸೋತ ಯುವಕರು ಕೆಲವರಾದರೆ ಅವಳಿಂದಲೇ ಏನು ಜನಾರ್ಧನರಾಯರಿಂದಲೂ ಮುಖಕ್ಕೆ ನೀರೆರಿಚಿಸಿಕೊಂಡವರೂ ಅನೇಕರಿದ್ದರು.

ರೂಪು, ವಿದ್ಯೆ, ಅಂತಸ್ತು ಯಾವೊಂದಕ್ಕೂ ವಿಚಲಳಾಗದಿದ್ದ ಚಿತ್ರಾ ತನ್ನನ್ನು ಪ್ರೀತಿಸುತ್ತಿದ್ದಾಳೆಂದು ತಿಳಿದಾಗ ಕೃಷ್ಣಸಿಂಹ ನಂಬದಾದ. ವಿದ್ಯಾಭ್ಯಾಸಕ್ಕಾಗಿ ಹಳ್ಳಿಯಿಂದ ಪಟ್ಟಣಕ್ಕೆ ಬಂದಿದ್ದ ಕೃಷ್ಣಸಿಂಹ ಅವರಿವರ ಮನೆಯಲ್ಲಿ ವಾರದ ಊಟ ಮಾಡಿಕೊಂಡು ವಿದ್ಯಾರ್ಜನೆ ಮಾಡುತ್ತಿದ್ದ ಬಡ ವಿದ್ಯಾರ್ಥಿ. ಕಾಲೇಜಿನಲ್ಲಿ ವಿದ್ಯಾರ್ಜನೆ ಗಮನ ಒಂದನ್ನು ಬಿಟ್ಟರೆ ಬೇರೆ ಯಾರ ಯಾವ ಗೊಡವೆಗೂ ಹೋಗದಿದ್ದ ಅವನ ಮನದಲ್ಲೂ ಚಿತ್ರಾ ಕೆಟ್ಟ ನಡವಳಿಕೆಯ ದಿಟ್ಟ ಹೆಣ್ಣೆಂಬುದಾಗಿಯೇ ರೂಪಿತಗೊಂಡಿದ್ದಳು. ಈ ಹೆಣ್ಣಿನ ಸಹವಾಸ ತನ್ನಂತಹ ಬಡವ ಸಿಗಲ್ಲವೆಂದು ಕೃಷ್ಣಸಿಂಹ ಚಿತ್ರಾಳ ಪ್ರೇಮ ಪತ್ರಗಳಿಗೆ ಉತ್ತರವನ್ನೇ ನೀಡದಾದ. ತನ್ನ ಬೇಡಿಕೆ, ಕೇಳಿಕೆಯ ಪತ್ರಗಳೆಲ್ಲಕ್ಕೂ ಅವನ ಉತ್ತರ ಮೌನವೇ ಆದಾಗ ಚಿತ್ರಾ ಅದೊಂದು ದಿನ ನೇರ ಕೃಷ್ಣಸಿಂಹನ ಕೋಣೆಗೆ ಬಂದಳು. ಮೃದುವಾದ ಬಾಗಿಲು ಬಡಿತಕ್ಕೆ ಅಗುಣಿ ತೆರೆದ ಕೃಷ್ಣಸಿಂಹ ಚಿತ್ರಾಳನ್ನು ಕಂಡೊಡನೆ ಅಧೀರನಾದ ಅವಳ ಆ ಆಗಮನ ತನಗೆ ಅನಿರೀಕ್ಷಿತದಷ್ಟೇ ಅಪ್ರಿಯವೂ ಆಯಿತೆಂಬುದನ್ನು ಅವನ ಮುಖ ಅವಳಿಗೆ. ವ್ಯಕ್ತಪಡಿಸಿತು. ಅವನ ಆಹ್ವಾನಕ್ಕಾಗಿ ಕಾಯದೆ ತಾನಂತೆ ಒಳ ಬಂದು ಬಾಗಿಲು ಮುಚ್ಚಿದಳು. ಅವಳ ದಿಟ್ಟತನದ ವರ್ತನೆಗೆ ಅಧೀರನಾಗಿದ್ದ ಕೃಷ್ಣಸಿಂಹನಲ್ಲಿ ಆಕ್ರೋಶವನ್ನುಂಟು ಮಾಡಿತು. ಉದ್ವೇಗದಿಂದ ಉಸುರಿದ–

"ಬಾಗಿಲು ಏಕೆ ಹಾಕ್ತಾ ಇದ್ದೀ, ಬಾಗಿಲು ತೆಗೀ ಚಿತ್ರಾ" ಚಿತ್ರಾ ಶಾಂತಳಾಗಿಯೇ ಕೇಳಿದಳು–

"ಏಕೆ ಹೆದರಿ ಬಿಟ್ರಾ ?"

"ಹೆದರಿಕೆ ಏಕೆ ? ಕೋಪ ಬರ್ತಾ ಇದೆ."

"ಅಂತಹ ತಪ್ಪಿನ ಕೆಲಸ ನಾನು ಏನು ಮಾಡಿದ್ದೀನಿ ?"

"ನೀನು ಈಗ ನಡೆದುಕೊಳ್ತಾ ಇರೋದು ತಪ್ಪಲ್ಲದೆ ಸರಿಯಾದ ಮಾರ್ಗ ಅಂತ ತಿಳಿದಿದ್ದೀಯೇನು ?"

"ಹಾಗಾದರೆ ನಿಮ್ಮ ದೃಷ್ಟಿಯಲ್ಲಿ ಪ್ರೀತಿಸುವ ಅಧಿಕಾರ ಹೆಣ್ಣಿಗೆ ಇಲ್ಲ ಅಂತಲೇನು ?"

"ಹೌದು ಬೇರೊಂದು ಮನೆಯ ಬೆಳಕಾಗಿ ಹೋಗುವ ಹೆಣ್ಣಿಗೆ ಪ್ರೀತಿಯ ಅಧಿಕಾರ ಇಲ್ಲವೇ ಇಲ್ಲ"

ತನ್ನಲ್ಲೇ ಯೋಚಿಸಿಕೊಂಡ ಚಿತ್ರಾ ನೀಡುಸುಯ್ದು ನುಡಿದಳು–

"ತಾನು ಪ್ರೀತಿಸಿದವರನ್ನೇ ಕೈ ಹಿಡಿದು ಅವರ ಮನೆಯ ಬೆಳಕಾಗಿಯೇ ಹೋಗಬೇಕೆಂಬ ನಿರ್ಧಾರದಿಂದಲೇ ಹೆಣ್ಣು ಪ್ರೀತಿಸಿದರೆ ಅದರಲ್ಲಿ ತಪ್ಪೇನಿದೆ ?"

ಅವಳ ಪ್ರಶ್ನೆಗೆ ನಿರುತ್ತರನಾದ ಕೃಷ್ಣಸಿಂಹ ಚವಲಂಬವಾಡಿಸದೆ ಚಿತ್ರಾಳನ್ನೇ ದಿಟ್ಟಿಸತೊಡಗಿದ. ಹನಿ ತುಂಬಿದ ಕಣ್ಗಳಿಂದ ಅವನ ಮುಖವನ್ನೇ ನೋಡುತ್ತಿದ್ದ ಚಿತ್ರಾ ಒಮ್ಮೆಲೆ ಅವನ ಎರಡೂ ಕಾಲ್ಗಳನ್ನು ತನ್ನ ಕೈಗಳಿಂದ ಬಳಸಿ ಬಿಕ್ಕ ತೊಡಗಿದಳು.

"ನಾನು ಎಲ್ಲಾ ನಿರ್ಧಾರ ಮಾಡಿಯೇ ಮನಃಪೂರ್ತಿಯಾಗಿ ಪ್ರೀತಿಸ್ತಾ ಇದ್ದೀನಿ. ನನ್ನ ಪ್ರೀತಿನ ಅಲ್ಲಗಳೆಯ ಬೇಡಿ." ತನ್ನ ಕಿವಿಗಳನ್ನು ತಾನೇ ನಂಬದಾದ ಕೃಷ್ಣಸಿಂಹ ಚಿತ್ರಾಳ ತೋಳುಗಳನ್ನು ಹಿಡಿದು ಎಬ್ಬಿಸಿ ಅವಳ ಕಣ್ಣೊಳಗೆ ತನ್ನ ಕಣ್ಗಳನ್ನು ತೂರಿ ಕೇಳಿದ–

"ಚಿತ್ರಾ ನಾನು ತುಂಬಾ ಬಡವ ನನಗೂ-ನಿನಗೂ ಸರಿಯಾದ ಜೋಡಿ ಅಲ್ಲ." ಆ ಮಾತು ಅಪ್ರಿಯವೆಂಬಂತೆ ಚಿತ್ರಾ ಅವನ ಬಾಯ ಮೇಲೆ ತನ್ನ ನೀಳ ಬೆರಳುಗಳನ್ನು ಅಡ್ಡ ಹಿಡಿದು ನುಡಿದಳು–

"ಹಾಗನ್ನಬೇಡಿ, ನಿಮ್ಮ ನಯ ವಿನಯಗಳೇ ನನ್ನನ್ನ ನಿಮ್ಮ ಬಂದಿಯಾಗಿಸಿರೋದು."

ನೀನು ತಿಳಿದಿರೋದು ತಪ್ಪು. ನಾನು ನೋಡೋದಿಕ್ಕೆ ಎಷ್ಟು ನಯ ವಿನಯ ಉಳ್ಳವನೋ ಅಷ್ಟೇ ಕೆಟ್ಟ ಸ್ವಭಾವದವನು."

"ಅದು ಪುರುಷ ಲಕ್ಷಣ, ಆದರೆ ಆ ಸ್ವಭಾವದಿಂದ ಇನ್ನೊಬ್ಬರಿಗೆ ಕೆಡಕು ಮಾಡದಿದ್ದರೆ ಸರಿ."

"ಚಿತ್ರಾ ನೀನು ನನ್ನ ಕೈ ಹಿಡಿಯೋದಿಕ್ಕೆ ನಿಮ್ಮ ತಂದೆ ಅಡ್ಡಪಡಿಸೋದಿಲ್ಲವೇನು ?"

"ನಮ್ಮ ತಂದೆ ತಮ್ಮ ಮಗಳ ಸುಖ ಸಂತೋಷಕ್ಕೆ ಎಂದಿಗೂ ಅಡ್ಡ ಬರೋರಲ್ಲ. ಒಂದು ವೇಳೆ ಅವರು ಹಾಗೇನಾದರೂ ಅಡ್ಡಿ ಬಂದದ್ದೇ ಆದರೆ ತಂದೆ ಅನ್ನೋ ಪ್ರೀತೀನೂ ತೊರೆದು ಅವರಿಂದ ದೂರವಾಗಿ ನಾನು ನಿಮ್ಮೊಂದಿಗೆ ಬರೋದಕ್ಕೆ ಸಿದ್ಧ."

ಪ್ರೀತಿಯ ಬೆಲೆಯನ್ನು ಕಟ್ಟಲು ಅಸಾಧ್ಯವಾದಂತಹ ಅವಳ ಮಾತುಗಳು ಕೃಷ್ಣಸಿಂಹನ ಹೃದಯದಲ್ಲಿ ಚಿತ್ರಾಳ ಬಗೆಗೆ ಮೂಡಿದ್ದ ಪ್ರೀತಿಯನ್ನು ಇಮ್ಮಡಿಸಿದವು.

ಎಲ್ಲರ ಕಣ್ಣು ಮುಚ್ಚಾಲೆಯಲ್ಲಿ ಪ್ರೇಮಿಗಳು ಒಮ್ಮೊಮ್ಮೆ ಸಂಧಿಸುತ್ತಿದ್ದರಾದರೂ ಚಿತ್ರಾ ಹೆಣ್ಣುತನದ ಎಚ್ಚರಿಕೆಯಲ್ಲಿ ಎಂದೂ ಅವಿವೇಕಿಯಾಗಿರಲಿಲ್ಲ.

ಅದೊಂದು ದಿನ ತನಗೆ ಅನಿರೀಕ್ಷಿತವೆಂಬಂತೆ ಬಂದ ಅತಿಥಿಗಳಿಗೆ ತಂದೆ ನಡೆಸಿದ ಆದರ, ಉಪಚಾರಗಳು, ಅವರ ಎದುರಿನಲ್ಲಿ ತನ್ನ ಹೊಗಳಿಕೆ ಹೆಚ್ಚುಗಾರಿಕೆಗಳೆಲ್ಲವೂ ಚಿತ್ರಾಳ ಮನದಲ್ಲಿ ಸಂದೇಹವನ್ನುತ್ಪತ್ತಿ ಮಾಡಿದವು. ಬಂದಿದ್ದವರು ಹೊರಟು ಹೋದ ಒಡನೆ ಅವರು ಯಾರೆಂಬ ಬಗೆಗೆ ತಂದೆ ವಿಷಯವನ್ನು ವ್ಯಕ್ತಪಡಿಸಿದಾಗ ಚಿತ್ರಾ ತನ್ನ ಸಂದೇಹ ಸುಳ್ಳಾಗಲಿಲ್ಲವೆಂದುಕೊಂಡಳು. ಇನ್ನು ತನ್ನ ಕೃಷ್ಣಸಿಂಹನ ವಿಚಾರವನ್ನು ತಂದೆಯವರ ಅವಗಾಹನೆಗೆ ತರದಿದ್ದರೆ ಆಘಾತವಾಗಬಹುದೆಂದು ಅರಿತ ಚಿತ್ರಾ ತಂದೆಯ ಸಮ್ಮುಖದಲ್ಲಿ ವಿಷಯವನ್ನು ನಿಸ್ಸಂಕೋಚವಾಗಿ ಮುಂದಿಟ್ಟಳು. ವಿಷಯ ತಿಳಿದು ರೊಚ್ಚಿಗೆದ್ದ ಜನಾರ್ಧನರಾಯರು ವಿನಯವಾದ ಮಾತುಗಳಿಂದ ಹೇಳಿದರು. ಬೆದರಿಕೆ ಹಾಕಿದರು. ಚಿತ್ರಾಳ ನಿರ್ಧಾರದ ಮುಂದೆ ಎಲ್ಲವೂ ನಿರರ್ಥಕವಾಯಿತು.

ಅನಾಥ ಬಡ ಹುಡುಗ ಕೃಷ್ಣಸಿಂಹನಿಗೆ ಮಗಳನ್ನು ಕೊಡುವುದು ಸಮಾಜದಲ್ಲಿ ತಮ್ಮ ಗೌರವ ಅಂತಸ್ತಿಗೆ ಕುಂದೆಂದು ತಿಳಿದ ಜನಾರ್ಧನರಾಯರಿಗೆ ಪ್ರೇಮಿಗಳ ಪ್ರೀತಿ ಗೌಣವಾಯಿತು. ಕೃಷ್ಣಸಿಂಹನಿಗೇ ಕೊಟ್ಟು ಮದುವೆ ಮಾಡುವುದಾಗಿ ಮಗಳೊಂದಿಗೆ ಸವಿಯಾದ ಮಾತುಗಳನ್ನಾಡಿದ ಜನಾರ್ಧನರಾಯರು ಈ ಮೊದಲೇ ತಾವು ಏರ್ಪಾಡುಮಾಡಿಕೊಂಡಿದ್ದಂತೆ ಕೃಷ್ಣಸಿಂಹನನ್ನು ಗುಪ್ತವಾಗಿ ಬಂಧನದಲ್ಲಿಟ್ಟು ಸುಧೀಂದ್ರನೊಂದಿಗೆ ಚಿತ್ರಾಳ ವಿವಾಹವನ್ನು ನೆರವೇರಿಸಿಬಿಟ್ಟರು. ತನ್ನ ನಿರ್ಧಾರವನ್ನು ವಿಧಿ ಬುಡಮೇಲು ಮಾಡಿತೆಂದು ತಿಳಿದಾಗ ಚಿತ್ರಾ ಕಣ್ಣೀರ ಧಾರೆ ಹರಿಸಿದಳು. ಕೃಷ್ಣಸಿಂಹನನ್ನು ಮರೆಯುವುದು ಚಿತ್ರಾಳಿಗೆ ಕಷ್ಟವಾಗಿದ್ದಂತೆ ಅವಳನ್ನು ಒಲಿಸಿಕೊಳ್ಳುವುದು ಸುಧೀಂದ್ರನಿಗೂ ಅಷ್ಟೇ ಕಷ್ಟ ಸಾಧ್ಯವಾಗಿತ್ತು.

ಚಿತ್ರಾ ತನ್ನ ಕೊರಳೊಳಗಿನ ಮಾಂಗಲ್ಯವನ್ನೇ ನೋಡಿಕೊಂಡಳು.

"ಹೌದು, ವೇದ ಪೂರ್ವಕವಾಗಿ ಅಗ್ನಿಸಾಕ್ಷಿಯಾಗಿ ಸಭಿಕರ ಸಮ್ಮುಖದಲ್ಲಿ ತಾನು ಸುಧೀಂದ್ರನ ಮಡದಿ. ಕೃಷ್ಣಸಿಂಹ ತನ್ನ ಹೃದಯದಲ್ಲಿ ಮಾತ್ರ, ಶಾಸ್ತ್ರ ಧರ್ಮಗಳ ನೀತಿಯನ್ನು ಬಿಟ್ಟು ಹೋಗುವುದು ಸರಿಯಲ್ಲ. ಈಗ ಕೃಷ್ಣಸಿಂಹನ ಚಿತ್ರಾಳಲ್ಲ, ಸುಧೀಂದ್ರನ ಧರ್ಮಪತ್ನಿ".

ಗಂಭೀರವಾಗಿ ಚಿಂತಿಸಿದ ಚಿತ್ರಾ ಕಳೆದುಹೋದುದನ್ನು ಕನಸೆಂದು ತಿಳಿದಳು. ದಿನಗಳುರುಳಿದಂತೆ ಕೃಷ್ಣಸಿಂಹ ಅವಳ ಹೃತ್ಪಟಳದಿಂದ ದೂರವಾಗುತ್ತಿದ್ದಂತೆ ತನ್ನನ್ನು ಅಪಾರವಾಗಿ ಪ್ರೀತಿಸುತ್ತಿದ್ದ ಸುಧೀಂದ್ರನೇ ಚಿತ್ರಾಳ ಹೃದಯದಲ್ಲಿ ತುಂಬಿಕೊಂಡ. ವಿಧಿಯ ತೀರ್ಮಾನ ಇದೇ ಎಂದು ತಿಳಿದಿದ್ದರೆ ತಾನು ಕೃಷ್ಣಸಿಂಹನನ್ನು ಪ್ರೀತಿಸುತ್ತಲೇ ಇರಲಿಲ್ಲವೆಂದು ಕಳೆದುದಕ್ಕೆ ಒಮ್ಮೊಮ್ಮೆ ಕಣ್ಣೀರಿಡುತ್ತಿದ್ದಳು. ಸುಧೀಂದ್ರನ ಅಪಾರವಾದ ಪ್ರೀತಿಯ ಮುಂದೆ ತಾನು ಅಪರಾಧಿಯೇನೋ ಎಂಬ ಮನದ ಅಳುಕಿನಿಂದ ವ್ಯಥಿತಳಾಗುತ್ತಿದ್ದ ಚಿತ್ರಾ ಕೃಷ್ಣಸಿಂಹನಿಗೆ ತನ್ನ ಮನಸ್ಸು ಮಾತ್ರ ಅರ್ಪಿತವಾಗಿತ್ತಲ್ಲದೆ ತನ್ನ ದೇಹ ಸುಧೀಂದ್ರನಿಗೆ ಮೀಸಲಳಿದುದಾಗಲಿಲ್ಲವೆಂಬ ಸಮಾಧಾನವನ್ನು ತಾನೇ ತಂದುಕೊಳ್ಳುತ್ತಿದ್ದಳು.

o o o o

ಚಿತ್ರಾ ಸುಧೀಂದ್ರನ ಮೋಹದ ಮಡದಿಯಾಗಿ ಎರಡು ವರ್ಷಗಳುರುಳಿದ್ದವು. ಅವರಿಬ್ಬರ ಸುಖಮಯ ದಾಂಪತ್ಯ ಜೀವನದ ಫಲವಾಗಿ ಪ್ರಕಾಶನ ಜನನವಾಗಿತ್ತು.

ಆರು ತಿಂಗಳ ಕೂಸು ಪ್ರಕಾಶನನ್ನು ತೊಟ್ಟಿಲದಲ್ಲಿ ತೂಗಿ ಮಲಗಿಸಿ ಕಾಫಿಯ ತಯಾರಿಕೆಯಲ್ಲಿದ್ದ ಚಿತ್ರಾ ಯಾರೋ ಗೆಳೆಯನೊಬ್ಬನೊಂದಿಗೆ ಸುಧೀಂದ್ರ ಬಂದಿರುವನೆಂಬುದನ್ನು ಅವನ ಮಾತಿನಿಂದಲೇ ತಿಳಿದಳು. ಬಂದಿರುವವರು ಯಾರೆಂದು ತಿಳಿಯುವ ಕುತೂಹಲದಿಂದ ಮಾಡುತ್ತಿದ್ದ ಕೆಲಸವನ್ನು ಅಷ್ಟಕ್ಕೇ ಬಿಟ್ಟು ಹಜಾರಕ್ಕೆ ಬಂದಳು. ಸುಧೀಂದ್ರನ ಒಂದಿಗಿದ್ದ ವ್ಯಕ್ತಿಯನ್ನು ಕಂಡೊಡನೆ ಅವಳಿಗೆ ಸುತ್ತಲೂ ಕಪ್ಪಿಟ್ಟಂತಾಯಿತು. ಪ್ರತಿಯೊಂದೊಂದು ವಸ್ತುವೂ ಗರಗರನೆ ತಿರುಗುತ್ತಿರುವಂತೆ ಭಾಸವಾಯಿತು. ಇಡೀ ಮೈ ಬೆವರಿಟ್ಟಿತು. ತನ್ನ ಅಧೀರತೆಯ ಅರಿವು ಕೊಡಲಿಚ್ಛಿಸದ ಚಿತ್ರಾ ಹಾಗೆಯೇ ಸಾವರಿಸಿಕೊಂಡು ಒಳಹೋಗಲೆತ್ನಿಸಿದಳು. ಅಷ್ಟರಲ್ಲೇ ಸುಧೀಂದ್ರ ಅವಳ ನಿರ್ಗಮನವನ್ನು ತಡೆಯುವಂತೆ ಕೂಗಿದ—

"ಚಿತ್ರಾ ಬಾ ಇಲ್ಲಿ"

ಚಿತ್ರಾ ಮಂತ್ರ ಮುಗ್ಧಳಂತೆ ಅವನತ್ತ ತಿರುಗಿದಳು. ಸುಧೀಂದ್ರ ತನ್ನ ಒಂದಿಗಿದ್ದ ವ್ಯಕ್ತಿಯ ಪರಿಚಯ ಮಾಡಿಕೊಡುತ್ತಾ ಹೇಳಿದ—

"ಚಿತ್ರಾ, ಇವರು ನಮ್ಮ ಊರಿನವರೇ, ಈಗ ನಮ್ಮ ಆಫೀಸ್‌ಗೆ ಬಂದಿದ್ದಾರೆ, ಹೆಸರು ಕೃಷ್ಣಸಿಂಹ ಅಂತ"

ಎಂದೋ ತನಗೆ ಚಿರಪರಿಚಯವಿರುವ ವ್ಯಕ್ತಿಯ ಇದಿರಿನಲ್ಲಿ ಚಿತ್ರಾ ಇಂದು ಅಪರಿಚಿತಳಂತೆ ನಟಿಸಬೇಕಾಯಿತು. ಯಾವ ಭಾವನೆಯನ್ನೂ ವ್ಯಕ್ತಪಡಿಸದೆ ಚಿತ್ರಾ ತನಗೆ ವಂದಿಸಿದಾಗ ಅವಳ ಮುಖದಲ್ಲಿ ಕಾತುರ, ಸಂತಸಗಳಾವುದೂ ಇರದಿದ್ದುದು ಕೃಷ್ಣಸಿಂಹನಿಗೆ ಅರಿವಾಗದಿರಲಿಲ್ಲ. ತನ್ನ ವಂದನೆಗೆ ಪ್ರತಿ ವಂದನೆ ಹೇಳಿದ ಅವನ ನೋಟದಲ್ಲಿ ಚಿತ್ರಾಳಿಗೆ ಭೀಕರತೆಯೇ ಕಂಡುಬಂದಿತು. ಅವನಲ್ಲಿದ್ದ ಯಾವ ಗುಣಕ್ಕಾಗಿ ಮೆಚ್ಚಿ ಅಂದು ತಾನಂತೆ ಮರುಳಾಗಿದ್ದಳೋ ಆ ಸರಳತನವೇ ಇಂದು ಅವಳಿಗೆ ಕಂಡುಬರಲಿಲ್ಲ.

"ನಾನು ನೋಡೋದಕ್ಕೆ ಎಷ್ಟೆ ವಿನಯವಾಗಿ ಕಾಣಿಸ್ತೀನೋ ಅಷ್ಟೇ ನನ್ನದು ಕೆಚ್ಚೆದೆ ಚಿತ್ರಾ"

ಎಂದು ಅವನಾಡಿದ್ದ ಮಾತು ಅವಳ ಕಿವಿಯಲ್ಲಿ ಮೊರೆತ ಮಾಡಿತು. ಏಕೋ ಅವಳ ಗುಂಡಿಗೆ ಬಡಿದುಕೊಳ್ಳತೊಡಗಿತು. ಹೆಚ್ಚು ಹೊತ್ತು ಅಲ್ಲಿ ನಿಲ್ಲುವ ಮನಸ್ಸಾಗಲಿಲ್ಲ. ಮೆಲ್ಲನೆ ಅಲ್ಲಿಂದ ಕಾಲ್ತೆಗೆದುಬಿಟ್ಟಳು.

"ಯಾವುದನ್ನು ತಾನು ಕನಸು ಮಾತ್ರವೆಂದು ತಿಳಿದು ಮರೆತಿದ್ದೆನೋ ಅದನ್ನು ನೆನಪು ಮಾಡಿಕೊಟ್ಟು ತನ್ನ ಬದುಕಿಗೆ ಬಿರುಗಾಳಿ ಎಬ್ಬಿಸಲು ಬಂದನೇ ಕೃಷ್ಣಸಿಂಹ? ತನ್ನ ಬಾಳ ಪುಸ್ತಕಕ್ಕೆ ಹೊಸದಾಗಿ ಬಂದ ರಕ್ಷಾಕವಚ ಹರಿದುಹೋದ ಹಳೆಯ ಕವಚವನ್ನು ದೂರ ತಳ್ಳಿ ಹಾಕಿತೆಂದು ತಾನು ತಿಳಿದರೆ ಅದು ಗಾಳಿಗೆ ಬೀಸಿ ಮತ್ತೆ ತನ್ನತ್ತಲೇ ಬರಬೇಕೆ?"

ಯೋಚನೆಯ ಸುಳಿಗೆ ಸಿಕ್ಕಿದ ಚಿತ್ರಾ ಅಡಿಗೆ ಕೋಣೆಯಿಂದ ಹೊರಬರಲೇ ಇಲ್ಲ. ಒಳ ಬಂದ ಸುಧೀಂದ್ರ ಅವಳನ್ನು ವಾಸ್ತವಿಕತೆಗೆ ತರುತ್ತಾ ಕೂಗಿದ.

"ಚಿತ್ರಾ ಇದೇನು ಹೀಗೆ ಕೂತುಬಿಟ್ಟೆ ?"

"ಆ... ಸುಮ್ನೆ ...... ಅಷ್ಟೆ ...... ಅವರು ಹೊರಟು ಹೋದರಾ?"

"ಇಲ್ಲ, ಇದ್ದಾರೆ ಕಾಫಿ ತಂದುಕೊಡು ಚಿತ್ರಾ"

ಸುಳ್ಳಿನ ಮೊರೆಹೊಕ್ಕ ನಾಲಿಗೆ ತಡಬಡಿಸಿತು:

"ನನಗೆ... ಏಕೋ ತಲೆ ನೋವ್ತಾ .. ಇದೆ ನೀವೆ ತೆಗೆದುಕೊಂಡು ಹೋಗಿ"

ಅವಳನ್ನು ಒತ್ತಾಯ ಪಡಿಸಲಿಚ್ಛಿಸದ ಸುಧೀಂದ್ರ ತಾನೇ ಎರಡು ಲೋಟಾಗಳಿಗೆ ಕಾಫಿಯನ್ನು ಸುರುವಿಕೊಂಡು ತೆಗೆದುಕೊಂಡು ಹೋದ. ತನ್ನ ಮುಂದೆ ಬಂದ ಕಾಫಿಯ ಲೋಟವನ್ನು ಕೈಗೆತ್ತಿಕೊಂಡ ಕೃಷ್ಣಸಿಂಹ ಅದನ್ನು ಅಲ್ಲೇ ಟೀಪಾಯ್‌ದ ಮೇಲೆ ಕಾಫಿಯೂ ತುಳುಕುವಂತೆ ಟೊಕ್ಕನೆ ಕುಕ್ಕಿ ನುಡಿದ—

"ಇಲ್ಲ ಸುಧೀಂದ್ರ ನಾನು ಕುಡಿಯೋದಿಲ್ಲ."

"ಏಕಪ್ಪ ಕಾಫೀ ಯಾವಾಗನಿಂದ ಬಿಟ್ಟೆ ?"

"ಯಾವಾಗಿನಿಂದಲೂ ಅಲ್ಲ. ಇಲ್ಲಿ ಅಷ್ಟೇ."

—ಎಂದು ಹೊರಡಲನುವಾಗ ತೊಡಗಿದ. ಅವನ ಮಾತಿನಲ್ಲಿ ಮುಖದಲ್ಲಿ ಅಸಮಾಧಾನ ಆಕ್ರೋಶಗಳು ಹೊರ ಹೊಮ್ಮುತ್ತಿದ್ದವು. ಅವನ ವರ್ತನೆ ಸುಧೀಂದ್ರನಿಗೆ ವಿಚಿತ್ರವಾಗಿ ತೋರಿತು. ಅವನನ್ನು ತಡೆಯುತ್ತಾ ನುಡಿದ—

"ಏಕೆ ಸಿಂಹ ಹೊರಟು ಬಿಟ್ಟಿ ? ರಾತ್ರಿ ಊಟ ಇಲ್ಲೇ ತೀರಿಸಿಕೊಂಡು ಹೋದರಾಯಿತು ಇರು."

"ಇಲ್ಲ ಸುಧೀಂದ್ರ ನಾನು ಹೋಗಲೇ ಬೇಕು. ದಯವಿಟ್ಟು ಒಂದು ಐದು ನಿಮಿಷ ನನ್ನೊಂದಿಗೆ ನೀನೂ ಬರ್ತೀಯಾ ?"

"ಅಗತ್ಯವಾಗಿ"—

ಎಂದು ಸುಧೀಂದ್ರ ಅವನೊಂದಿಗೆ ತಾನೂ ಹೊರ ಬಿದ್ದ. ಅವನ ಕರೆಯಲ್ಲಿ ಆವುದೋ ಉದ್ದೇಶವಿರುವುದು ಸುಧೀಂದ್ರನ ತಿಳಿವಿಗೆ ಬಾರದಿರಲಿಲ್ಲ. ಕೆಲವು ದೂರ ಮೌನವಾಗಿಯೇ ಸಾಗಿತ್ತು. ತನ್ನನ್ನು ಕರೆದುದೇಕೆಂದು ಸುಧೀಂದ್ರ ಕೇಳಲಿಲ್ಲವಾದರೂ ಕೃಷ್ಣಸಿಂಹನೇ ಮೌನ ಒಡೆದ.

"ನಾನು ಏತಕ್ಕೆ ನಿನ್ನನ್ನು ಕರೆದೆ ಅನ್ನೋದು ನಿನಗೆ ಗೊತ್ತೇ ಸುಧೀಂದ್ರ ?"

ಸುಧೀಂದ್ರ ಬೇಸರದಿಂದಲೇ ನುಡಿದ–

"ಅದು ಗೊತ್ತಿಲ್ಲ. ಅದರೂ ನಿನ್ನ ಮಾತು. ನಿನ್ನ ವರ್ತನೆ ಎಲ್ಲಾ ವಿಚಿತ್ರವಾಗಿದೆ ಸಿಂಹ"

"ಇರಬಹುದು. ಅಂದಹಾಗೆ ನಾನು ಬಂದಿದ್ದು ನಿನ್ನ ಹೆಂಡತಿಗೆ ಇಷ್ಟ ಆಗಲಿಲ್ಲ ಅಂತ ಕಾಣುತ್ತೆ ಅಲ್ವಾ ?"—

ಎಂದು ಕೃಷ್ಣ ಸಿಂಹ ಸುಧೀಂದ್ರನ ಮುಖ ನೋಡಿದ.

"ಚೆನ್ನಾಗಿ ಹೇಳ್ತಾ ಇದ್ದೀ, ಅವಳು ಏಕೆ ಬೇಜಾರು ಮಾಡಿಕೊಳ್ತಾಳೇ ? ಒಂದುವೇಳೆ ಅವಳು ಏನೋ ತೊಂದರೆಯಿಂದ ಬೇಜಾರು ಮಾಡಿಕೊಂಡರೂ ಅದಕ್ಕಾಗಿ ನೀನು ಹೀಗೆ ಒರಟುತನದಿಂದ ಬರ ಬೇಕಾದ ಅವಶ್ಯಕತೆ ಇರಲಿಲ್ಲ. ಎಷ್ಟೇ ಆದರೂ ನೀನು ನನ್ನ ಸ್ನೇಹಿತ."

"ನನ್ನ ಸ್ನೇಹಿತ ಅಂತ ನಿನ್ನ ಮನೆಗೆ ಬಂದೆನೆ ಹೊರತು ನೀನು ಚಿತ್ರಾಳ ಗಂಡ ಅಂತ ಗೊತ್ತಿದ್ದರೆ ನಾನು ಬರ್‍ತಾ ಇರಲಿಲ್ಲ."

ಸುಧೀಂದ್ರ ಕುತೂಹಲದಿಂದ ಕೇಳಿದ—

"ಹಾಗಾದರೆ ಚಿತ್ರಾ ನಿನಗೆ ಗೊತ್ತೇನು ?"

"ಬರೀ ಗೊತ್ತೇನು ? ಅವಳು ಎಂಥಾ ಹೆಣ್ಣು ಅನ್ನೋದನ್ನ ಅನುಭವಿಸಿ ತಿಳಿದಿದ್ದೀನಿ."

"ಸಿಂಹ ಏನು ಮಾತು ಹೇಳ್ತಾ ಇದ್ದೀಯ ನೀನು ?"

"ಹೌದು ಸುಧೀಂದ್ರ ನಾನು ಹೇಳೋದರಿಂದ ನಿನಗೆ ನಂಬಿಕೆ ಬರೋದಿಲ್ಲ. ನನ್ನ ಜೊತೆ ನನ್ನ ರೂಮಿಗೆ ಬಾ"

ಎಂದವನೇ ಸುಧೀಂದ್ರನನ್ನು ಒಂದಿಗೆ ಕರೆದು ಕೊಂಡುಹೋದ. ಅವನು ಚಿತ್ರಾ ಮೊದಲು ತನಗೆ ಬರೆ ದಿದ್ದ ಪ್ರೇಮ ಪತ್ರಗಳೆಲ್ಲವನ್ನೂ ತೋರಿಸಿ ಚಿತ್ರಾ ನಡತೆ ಗೆಟ್ಟ ಮೋಸಗಾರ ಹೆಣ್ಣೆಂದೇ ವರ್ಣಿಸಿದ. ಅವನ ಮಾತುಗಳೆಲ್ಲವೂ ಸುಧೀಂದ್ರನ ಮನದಲ್ಲಿ ಚಿತ್ರಾ ಒಬ್ಬಳು ನೀತಿಗೆಟ್ಟ ಹೆಣ್ಣೆಂಬುದಾಗಿಯೇ ಅಚ್ಚೊತ್ತಿದವು.

ಸುಧೀಂದ್ರ ಒಬ್ಬನೇ ಮನೆಗೆ ಬಂದಾಗ ಚಿತ್ರಾಳಿಗೆ ಎಷ್ಟೋ ಸಮಾಧಾನವಾಗಿತ್ತು. ಆದರೆ ಅವಳೆದುರಿನಲ್ಲಿ ಅವನ ವರ್ತನೆ ಮೌನವೇ ಆಗಿತ್ತು. ಅವಳಂತೆ ಆಡಿಸಿದ ಮಾತುಗಳನ್ನು ಹೂಂ, ಉಹೂಂನಲ್ಲಿ ಮುಕ್ತಾಯ ಮಾಡಿ ಬಿಡುತ್ತಿದ್ದ. ಊಟಕ್ಕೆ ಸಿದ್ಧ ಪಡಿಸಿ ಚಿತ್ರಾ ಕರೆ ದಾಗ,

"ನನಗೆ ಸೇರೋದಿಲ್ಲ. ನನ್ನನ್ನ ಬಲಾತ್ಕರಿಸ ಬೇಡ"

ಎಂದು ನಿಷ್ಠೂರವಾಗಿಯೇ ಹೇಳಿ ತಪ್ಪಿಸಿಕೊಂಡ. ತನಗೆ ಸೇರಿದಷ್ಟನ್ನು ತಿಂದು ಮಲಗಲು ಬಂದ ಚಿತ್ರಾ ಕೋಣೆಯೊಳಗೆ ತಮ್ಮಿಬ್ಬರ ಹಾಸಿಗೆಯಲ್ಲಿ ಮಾರ್ಪಾಟಾ ಗಿರುವುದನ್ನು ಕಂಡು ಅವಕ್ಕಾದಳು.

"ಇದೇಕೆ ಹಿಗೆ ?"

ಎನ್ನುತ್ತಾ ಚಿತ್ರಾ ದೂರವಾಗಿದ್ದ ಹಾಸಿಗೆಗಳನ್ನು ಒಂದುಗೂಡಿಸ ಹೋದಾಗ ಯಾವ ಮಾತನ್ನೂ ಆಡದೆ ಸುಧೀಂದ್ರ ತನ್ನದೊಂದು ಹಾಸಿಗೆಯೊಡನೆ ಹಜಾರಕ್ಕೆ ಬಂದುಬಿಟ್ಟ. ಅವನ ವರ್ತನೆಗೆ ಚಿತ್ರಾ ಅಧೀರಳಾದಳು. ಹನಿ ತುಂಬಿದ ಕಣ್ಗಳಿಂದ ಕೇಳಿದಳು —

"ಏಕೆ ನನ್ನ ಮೇಲೆ ಬೇಜಾರಾಯಿತಾ?"

"ನನ್ನನ್ನು ಏನೂ ಕೇಳಬೇಡ, ದಯವಿಟ್ಟು ನನ್ನ ಪಾಡಿಗೆ ನಾನು ಇರೋದಿಕ್ಕೆ ಬಿಟ್ಟುಬಿಡು"

ಎಂದವನೇ ಸುಧೀಂದ್ರ ಮತ್ತೆ ಮಾತಿಗೆ ಅವಕಾಶ ಕೊಡದಂತೆ ಮುಸುಕು ಬೀರಿ ಮಲಗಿದ. ಒಮ್ಮಿಂದೊ ಮ್ಮೆಲೇ ಸುಧೀಂದ್ರ ಈ ರೀತಿ ಬದಲಾಗಿರುವುದರಲ್ಲಿ ಕೃಷ್ಣ

ಸಿಂಹ ತನ್ನ ಕೈವಾಡ ತೋರಿಸಲೇಬೇಕೆಂಬುದು ಚಿತ್ರಾಳಿಗೆ ಅರಿವಾಗದಿರಲಿಲ್ಲ. ಈಗ ತಾನು ಯಾವ ರೀತಿ ಸುಧೀಂದ್ರನನ್ನು ಹೇಳಿ ಕೇಳಿ ಮಾಡಬೇಕೆಂಬುದೇ ಅವಳಿಗೆ ತಿಳಿಯಲಿಲ್ಲ.

ಬೆಳಗ್ಗೆ ಚಿತ್ರಾಳಿಂದ ತಯಾರಾದ ಕಾಫೀ ಸುಧೀಂದ್ರನ ನಾಲಿಗೆಯನ್ನು ಸೋಕದಾಯಿತು. ಅವಳು ಸ್ನಾನ ಮಾಡಿ ಬರುವಷ್ಟರಲ್ಲಿ ಸುಧೀಂದ್ರ ಕಛೇರಿಗೆ ಹೊರಟು ಹೋಗಿದ್ದ. ಚಿತ್ರಾಳ ಕಣ್ಣುಗಳು ಕೋಡಿಯಿಕ್ಕಿದವು. ಹನಿ ತುಂಬಿ ಮಸುಕಾಗಿದ್ದ ಕಣ್ಣುಗಳನ್ನು ಟೀಪಾಯ್‌ದ ಮೇಲಿದ್ದ ಪುಟ್ಟ ಪತ್ರ ತನ್ನತ್ತ ಆಕರ್ಷಿಸಿತು. ಸೆರಗಿನಿಂದ ಕಂಬನಿಯನ್ನು ಒತ್ತಿಕೊಂಡು ಪತ್ರದ ಮೇಲೆ ಕಣ್ಣುಗಳನ್ನು ಹರಿಬಿಟ್ಟಳು.

"ನಿನ್ನ ವಿಷಯವೆಲ್ಲಾ ನನಗೆ ತಿಳಿಯಿತು, ಇನ್ನು ನನಗೆ ನಿನ್ನ ಅವಶ್ಯಕತೆ ಇಲ್ಲ. ನಾನು ಬದುಕಿರಬೇಕೆಂಬ ಆಸೆ ನಿನಗಿದ್ದರೆ ಈ ಸಂಜೆ ನಾನು ಮನೆಗೆ ಬರುವಷ್ಟರಲ್ಲಿ ಈ ಮನೆ ಬಿಟ್ಟು ಹೊರಟುಹೋಗು"

ಅಕ್ಕರೆಯ ಗಂಡ, ಮುದ್ದಿನ ಮಗು ತನ್ನ ಸಂತಸಮಯ ಸಂಸಾರವನ್ನು ನೋಡಿ ವಿಧಿ ಸೈರಿಸದಾಯಿತೇ ಎಂದು ಚಿತ್ರಾ ಬಿಕ್ಕಿ ಬಿಕ್ಕಿ ಅತ್ತಳು. ಅವಳನ್ನು ಸಮಾಧಾನಗೊಳಿಸುವವರು ಅಲ್ಲಿ ಯಾರೂ ಇರಲಿಲ್ಲ. ಸುಧೀಂದ್ರ ಮನೆಗೆ ಬಂದಾಗ ಮಗುವಿನ ಆಕ್ರಂದನ ಒಂದೇ ಅವನ ಕಿವಿಗೆ ಬಿದ್ದುದ್ದು. ಮಗುವನ್ನು ಎತ್ತಿಕೊಂಡ ಅವನು ಚಿತ್ರಾಳ ಇರುವಿಕೆಯನ್ನು ತಿಳಿಯುವಂತೆ ಸುತ್ತಲೂ ನೋಡಿದ. ಅವನು ಪತ್ರ ಇರಿಸಿಹೋಗಿದ್ದ ಜಾಗದಲ್ಲೇ ಮತ್ತೊಂದು ಪತ್ರ ಅವನಿಗಾಗಿ ಕಾದಿತ್ತು. ಕುತೂಹಲದಿಂದ ಕೈಗೆತ್ತಿಕೊಂಡ.

"ನಾನು ಎಡವಿದವಳು ನಿಜ, ಆದರೆ ಶೀಲಗೆಟ್ಟವಳಲ್ಲ. ನಮ್ಮ ತಂದೆ ಮಾಡಿದ ಮೋಸಕ್ಕೆ ಕೃಷ್ಣಸಿಂಹ ನನ್ನ ಮೇಲೆ ಹಗೆ ತೀರಿಸಿಕೊಂಡ, ಆಗಲಿ ನಿಮ್ಮ ಅಣತಿಯಂತೆ ನಾನು ಹೋಗುತ್ತಿದ್ದೇನೆ. ನಿಮ್ಮ ವಾತ್ಸಲ್ಯದಲ್ಲಿ ಬೆಳೆಯುವ ನನ್ನ ಮಗು ನನ್ನಲ್ಲಿ ಪವಿತ್ರತೆಯನ್ನು ಕಂಡು ತಾಯಿ ಎಂದು ಸ್ವೀಕರಿಸಿದರೆ ಸಾಕು, ಅದಕ್ಕಾಗಿ ಜಗತ್ತಿನ ಯಾವ ಮೂಲೆಯಲ್ಲಾದರೂ ಬದುಕಿರುವೆ.

ಇತಿ, ಎಂದೆಂದೂ ನಿಮ್ಮವಳೇ ಆದ
ಚಿತ್ರಾ

ನಿನ್ನಂತಹ ಕುಲಟೆ ತಾಯೀನ ಯಾವ ಮಗನೂ ತಾಯಿ ಎಂದು ಒಡ್ಡಲಾರ ಎಂದುಕೊಳ್ಳುತ್ತಾ ಸುಧೀಂದ್ರ ಚಿತ್ರಾಳ ಮೇಲಿನ ಬೇಸರವನ್ನೆಲ್ಲಾ ಆ ಪತ್ರದ ಮೇಲೆ ತೀರಿಸುವಂತೆ ಅದನ್ನು ಮುದುಡಿ ಬಿಸುಟ.

ತನ್ನ ಸಂಸಾರದ ಬಗೆಗೆ ಸಮಾಜದಲ್ಲಿದ್ದ ಪ್ರಶ್ನೆಗೆ ಉತ್ತರಿಸಲಾರದವನಾದ ಸುಧೀಂದ್ರ ಆ ಊರನ್ನೇ ಬಿಟ್ಟು ಬೇರೊಂದು ಊರಿಗೆ ಬಂದು ಸಿಮೆಂಟಿನ ವ್ಯಾಪಾರ ಕೈಗೊಂಡ.

ಹಗಲು ರಾತ್ರಿಯ ವ್ಯೂಹದಲ್ಲಿ ಪ್ರಕಾಶ ಬೆಳೆದು ದೊಡ್ಡವನಾದಂತೆ ಎಷ್ಟೋ ಮಾರ್ಪಾಟುಗಳನ್ನು ಹೊಂದಿದ ಸುಧೀಂದ್ರ ಯೌವ್ವನದ ಚಾಪಲ್ಯದಲ್ಲಿ ಅಡ್ಡದಾರಿ ಹಿಡಿದ. ತನ್ನ ತಾಯಿ ಯಾರೆಂದು ಬೃಹದಾಕಾರವಾಗಿ ಪ್ರಕಾಶನಲ್ಲಿ ಏಳುತ್ತಿದ್ದ ಪ್ರಶ್ನೆ ಸುಧೀಂದ್ರನಿಗೆ ವಿಷದಷ್ಟು ಕಹಿಯಾಗುತ್ತಿತ್ತು. ಇನ್ನು ಮುಂದೆಂದೂ ಆ ಪ್ರಶ್ನೆ ಕೇಳುವುದಿಲ್ಲವೆಂದು ಪ್ರಕಾಶ ನಿರ್ಧಾರವಾಗಿ ಹೇಳಿದ ಮೇಲೆ ಸುಧೀಂದ್ರನಿಗೆ ನೆಮ್ಮದಿ ದೊರೆತಂತಾಗಿತ್ತು.

ವಿಸ್ಕಿ ತುಂಬಿದ ಲೋಟವನ್ನು ತುಟಿಯ ಸನಿಹಕ್ಕೆ ತೆಗೆದುಕೊಂಡು ಹೋದಾಗ ಸುಧೀಂದ್ರನ ಕಣ್ಣುಗಳು ಅರೆನಗ್ನಾವಸ್ಥೆಯಲ್ಲಿ ನರ್ತಿಸುತ್ತಿದ್ದ ಹೆಣ್ಣಿನ ಮೇಲೆ ಅಚಲವಾಗಿ ನಿಂತವು. ಎವೆಯಾಡಿಸದೆ ದಿಟ್ಟಿಸಿದ.

"ಹೌದು ಚಿತ್ರಾ ಇವಳು. ಅವಳೇ ತನ್ನ ಕೈ ಹಿಡಿದಿದ್ದ ಚಿತ್ರಾ, ನಿಜ ಕೃಷ್ಣಸಿಂಹ ಹೇಳಿದಂತೆ ಇವಳೆಷ್ಟು ನೀತಿ ಬಾಹಿರಳು"

ಯೋಚಿಸುತ್ತಲೇ ಮನೆ ತಲುಪಿದ ಸುಧೀಂದ್ರನಿಗೆ ಮಲಗಿ ನಿದ್ರಿಸುತ್ತಿದ್ದ ಮಗನ ಮುಖದಲ್ಲಿ ಅದೇ ಪ್ರಶ್ನೆಯ ತೊಳಲಿಕೆ ಕಂಡುಬಂದಿತು. ತಾನು ಕಣ್ಣಾರೆ ನೋಡಿ ಬಂದುದನ್ನು ಹೇಳಿ ನಿನ್ನ ತಾಯಿ ಕ್ಯಾಬರೆ ಹುಡುಗಿ ಎಂದು ಹೇಳಿಬಿಡಬೇಕೆನಿಸಿತು. ಆದರೆ ಮೈ ಮರೆತು ಮಲಗಿದ್ದ ಮಗನನ್ನು ಎಬ್ಬಿಸುವ ಮನಸ್ಸಾಗಲಿಲ್ಲ.

ಎಂದೂ ರಾತ್ರಿಯ ಊಟ ತೀರಿದೊಡನೆ ತನ್ನನ್ನು ಮನೆಯ ಒಳಗೆ ಬಿಟ್ಟು ಮುಂಬಾಲಿಗೆ ಬೀಗವಿಕ್ಕಿಕೊಂಡು ಹೋಗುತ್ತಿದ್ದ ತಂದೆ ಇಂದು ತನ್ನನ್ನೂ ಒಂದಿಗೆ ಕರೆದುಕೊಂಡು ಹೋಗಲಿಚ್ಛಿಸಿದಾಗ ಪ್ರಕಾಶ ನಿಜಕ್ಕೂ ಚಕಿತನಾದ. ಖಚಿತಪಡಿಸಿಕೊಳ್ಳಲು ಕೇಳಿದ.

"ನಿಮ್ಮ ಜೊತೆ ನನ್ನನ್ನೂ ಬಾ ಅಂದಿರ"

"ಹೌದು ಬೇಗ ಹೊರಡು ಪ್ರಕಾಶ್"

ಅಪ್ಪಾ ಈ ಹೊತ್ತಿನಲ್ಲಿ ನಾನೇಕೆ? ನಾನು ಬರೋದಿಲ್ಲ"

"ನಿನ್ನ ತಾಯಿ ಯಾರು ಅನ್ನೋದನ್ನ ತಿಳಿದು ಕೊಳ್ಳೋ ಆಸೆ ಇದ್ದರೆ ಬಾ"

"ಹಾಗಾದರೆ ಬರ್‍ತೀನಪ್ಪಾ"

ಎಂದವನೇ ಪ್ರಕಾಶ ಸಂತಸದಿಂದ ಹೊರಟ.

ನಿತ್ಯ ರಾತ್ರಿಯು ಹೊತ್ತು ತಂದೆ ಮನೆಯಿಂದ ಹೊರಗೆ ಹೋಗುತ್ತಿದ್ದುದು ತಾಯಿಯ ಶೋಧನೆ ಗಾಗಿಯೇ ? ಅಥವ ಇರುವಲ್ಲಿಗೆ ? ಹೀಗೆ ಆಕೆ ತಮ್ಮಿಂದ ದೂರವಿರುವ ಕಾರಣವಾದರೂ ಏನು? ಯೋಚಿಸುತ್ತಲೇ ನಡೆದ.

ಒಂದು ಕೈನಲ್ಲಿ ವಿಸ್ಕಿಯ ಲೋಟ ಮತ್ತೊಂದು ಕೈನಲ್ಲಿ ಹೊಗೆಯಾಡುತ್ತಿರುವ ಸಿಗಾರ್ ಹಿಡಿದಿದ್ದ ಜನರು ಒಂದೊಂದು ಮೇಜಿನ ಸುತ್ತ ಹತ್ತಾರು ಜನ ಕಾಮುಕರ ಸಮೂಹಗಳು. ಅವರೆಲ್ಲರ ಮುಂದೆ ಅರೆನಗ್ನಾವಸ್ಥೆಯ ಲಜ್ಜೆಗೆಟ್ಟ ಹೆಣ್ಣಿನ ಕುಣಿತ.

ಇಂತಹ ಹೇಸಿಗೆಯ ಸ್ಥಳದಲ್ಲಿರುವಳೆ ನನ್ನ ತಾಯಿ? ಪ್ರಕಾಶ ಕಸಿವಿಸಿಗೊಂಡ. ಸುತ್ತೆಡೆಗೂ ನೋಡುತ್ತಿದ್ದ ಅವನ ಹೆಗಲು ತಟ್ಟಿ ಹೇಳಿದ ಸುಧೀಂದ್ರ,

"ಪ್ರಕಾಶ್, ಅಲ್ಲಿ ಡ್ಯಾನ್ಸ್ ಮಾಡ್ತಿದ್ದಾಳೆ ನೋಡು ಅವಳೇ ನಿನ್ನ ತಾಯಿ"

ಪ್ರಕಾಶನಿಗೆ ತಂದೆಯ ಮಾತು ನಂಬಲಸಾಧ್ಯ ವಾಗಿತ್ತು.

ಏನಪ್ಪಾ ನೀವು ಹೇಳ್ತಾ ಇರೋದು ಆ ಕ್ಯಾಬರೆ ನರ್ತಕಿ ನನ್ನ ತಾಯೀನೆ ?"

ಹೌದೆಂಬಂತೆ ಕತ್ತಾಡಿಸಿದ ಸುಧೀಂದ್ರ ನಿನ್ನ ಮಗ ಕೂಡ ನಿನ್ನನ್ನ ತಾಯಿ ಅಂತ ಒಪ್ಪೊದಿಕ್ಕೆ ಇಷ್ಟಪಡೋ ದಿಲ್ಲ ಎಂದು ಚಿತ್ರಾಳಿಗೆ ಹೇಳಿ ಬಿಡಬೇಕು ಮಾಲೀಕರಲ್ಲಿ ಕೇಳಿದ-

"ಆ ಕ್ಯಾಬರೆ ನರ್ತಕಿಯನ್ನು ಸಂಧಿಸೋದಿಕ್ಕೆ ಅವ ಕಾಶ ಮಾಡಿ ಕೊಡ್ತೀರಾ ?''

-ಆತನಿತ್ತ ಉತ್ತರ ಅನಿರೀಕ್ಷಿತ್ತು.

"ಆಕೀನ ಸಂಧಿಸೋದೇನು ಮಾತನಾಡಿಸೋದು ಅಷ್ಟು ಸುಲಭವಲ್ಲ"

"ಅವಳ ಬೆಲೆ ಎಷ್ಟೇ ಇರಲಿ ನಾನು ಕೊಡೋದಿಕ್ಕೆ ಸಿದ್ಧ."

"ಆಕೆ ಹಣದ ಬೆಲೆ ಏರಿಕೆ ಹೆಣ್ಣಲ್ಲ, ಆಕೆ ಒಬ್ಬ ಪತಿವ್ರತೆ ಅಂದರೆ ತಪ್ಪಾಗೋದಿಲ್ಲ."

"ಏನಂದ್ರಿ, ಲಜ್ಜೆ ಗೆಟ್ಟ ನರ್ತಕಿಯಾಗಿರೋ ಹೆಣ್ಣು ಪತಿರ್ವತೆಯೇ ?"

"ಏಕಾಗಬಾರದು ? ಬಿರಿದ ದಾಳಿಂಬೆಯ ಹಣ್ಣು ನೋಡಿದವರ ಕಣ್ಣುಗಳನ್ನು ಆಕರ್ಷಿಸಬಹುದೇ ಹೊರತು ನಾಲಿಗೆ ಸೋಂಕಿ ಮೀಸಲು ಅಳಿದ ಎಂಜಲಾಗಿರೋದಿಲ್ಲ ವಲ್ಲಾ ?"

ಆತನ ಮಾತುಗಳನ್ನು ಕೇಳಿ ಸುಧೀಂದ್ರನ ಬಾಯಿ ಯಿಂದ ಮಾತೇ ಹೊರಡದಾಯಿತು.

"ಹುಂ ಬಾ ಪ್ರಕಾಶ್."

-ಎಂದು ಅನ್ಯಮನಸ್ಕನಾಗಿ ಮಗನೊಂದಿಗೆ ಹೊರ ಬಿದ್ದ. ಹಾದಿಯಲ್ಲಿ ಪ್ರಕಾಶ ಕೇಳಿದ,

"ಅಪ್ಪಾ ಯಾವ ಕಾರಣದಿಂದ ಅಮ್ಮ ನಮ್ಮಿಂದ ಬೇರೆ ಇದ್ದಾಳಪ್ಪಾ ?"

ಈಗಾಗಲೇ ಚಿತ್ರಾಳ ಪವಿತ್ರತೆಯ ಅರಿವು ತಿಳಿ ದಿದ್ದ ಸುಧೀಂದ್ರನೊಂದ ಸ್ವರದಲ್ಲಿ ನುಡಿದ–

"ನಿಮ್ಮ ತಾಯಿ ನನ್ನ ಕೈಹಿಡಿಯೋದಿಕ್ಕೆ ಮುಂಚೆ ಅವಳ ಮನಸ್ಸು ಒಮ್ಮೆ ಎಡವಿ ಹೋಗಿತ್ತಂತೆ. ಅವಳ ಮನಸ್ಸು ಎಡವಿತ್ತೇ ಹೊರತು ಅವಳ ಶೀಲ ಕೆಟ್ಟಿರಲಿಲ್ಲಪ್ಪಾ, ಆದರೆ ಇದೊಂದನ್ನೂ ಯೋಚನೆ ಮಾಡದ ನಾನು ಹೇಳಿಕೆಯ ಮಾತಿಗೆ ಕಿವಿಗೊಟ್ಟು ಹಾಲಿನಂತಿದ್ದ ನನ್ನ ಸಂಸಾರಕ್ಕೆ ಹಾಲಾಹಲ ತಂದುಕೊಂಡೆ. ನಿನ್ನ ತಾಯಿಯ ಪವಿತ್ರತೆ ಎಂತಹುದು ಅನ್ನೋದು ಈಗ ನನಗೆ ಅರ್ಥವಾಯ್ತು. ವಿಷದ ಕಡಲಿನಲ್ಲಿ ಮುಳುಗಿದ್ದರೂ ಅವಳ ದೇಹ ಅಮೃತ ಮಯವಾಗಿದೆ. ಅವಳೊಂದಿಗೆ ಮಾತನಾಡೋ ಶಕ್ತಿ ನಾಲಿಗೆಯಲ್ಲಿ ಇಲ್ಲಪ್ಪಾ, ಪ್ರಕಾಶ್ ಹೇಗಾದರೂ ಸರಿ ನೀನೇ ಹೋಗಿ ಅವಳನ್ನ ಕರೆದುಕೊಂಡು ಬಾಪ್ಪ."

ತಂದೆಯ ಮಾತಿನಂತೆ ಪ್ರಕಾಶ ಮಾರನೆಯ ಸಂಜೆ ತಾನೊಬ್ಬನೇ ಅದೇ ಹೊಟಲಿನತ್ತ ಹೆಜ್ಜೆ ಹಾಕಿದ. ಆಗ ಹೋಟಲಿನ ಪರಿಸ್ಥಿತಿ ಶಾಂತವಾಗಿತ್ತು. ಕಳೆದ ದಿವಸ ತನ್ನೊಂದಿಗೆ ಮಾತನಾಡಿದ್ದ ಮುಖ್ಯಸ್ಥರಲ್ಲಿ ಕೇಳಿದ-

"ಸಾರ್ ನಾನು ಆಕೇನ ನೋಡಲೇ ಬೇಕು ದಯವಿಟ್ಟು ಅವಕಾಶ ಮಾಡಿಕೊಡಿ."

"ಆಕೇನ ಕಾಣೋದು ಗಗನ ಕುಸುಮ."

"ಹಾಗನ್ನ ಬೇಡಿ ಸಾರ್."

ಆತ ಇನ್ನೂ ಪ್ರಾಯದ ಹೊಸ್ತಿಲ ಒಳಗೊಂದು ಕಾಲಿರಿಸಿದ್ದ ಪ್ರಕಾಶನನ್ನೇ ನೋಡಿದರು.

"ಏನಪ್ಪಾ ಈ ಮಾತು ಕೇಳೋದಿಕ್ಕೆ ನಿನಗೆ ನಾಚಿಕೆ ಆಗೋದಿಲ್ವೇ ?"

"ನಾಚಿಕೆ ಏಕೆ ಸಾರ್ ?"

"ನಿನ್ನ ವಯಸ್ಸಿನ ಪರಿಜ್ಞಾನಾನೂ ಇಲ್ಲದೆ ನಡೆದುಕೊಳ್ತಾ ಇದ್ದೀಯಲ್ಲಾ ಅಂತ ನನಗೆ ಬೇಸರವಾಗ್ತಾ ಇದೆ."

ಅವರ ಮಾತು ಕೇಳಿ ಪ್ರಕಾಶನ ನರನರಗಳಲ್ಲೂ ಆವೇಶದ ನೆತ್ತರು ಚಿಮ್ಮಿತು.

"ಸಾರ್, ಏನು ಮಾತು ಆಡ್ತಾ ಇದ್ದೀರ ? ಆಕೆ ನನ್ನ ಹಡೆದ ತಾಯಿ, ಹೋಗಿ ದಯವಿಟ್ಟು ಆ ತಾಯಿಗೆ ಹೇಳಿ-ನಿಮ್ಮ ಮಗೆ ಪ್ರಕಾಶ ನಿಮ್ಮನ್ನ ನೋಡಬೇಕು ಅಂತ ಹಠ ಮಾಡಿ ನಿಂತಿದ್ದಾನೆ ಅಂತೆ."

"ಹೌದೇನಪ್ಪಾ, ಇರು, ಇರು"

—ಎಂದವರೇ ಅವರು ದಾಪುಕಾಲಿಕ್ಕಿ ನಡೆದರು. ಮತ್ತೆ ಒಂದೈದು ನಿಮಿಷಗಳಲ್ಲೇ ಹಿಂದಿರುಗಿ ಬಂದ ಆತ ಒಬ್ಬ ಸಹಚರನೊಂದಿಗೆ ಪ್ರಕಾಶನನ್ನು ಕಳುಹಿಸಿದ. ಕೋಣೆಯ ಬಾಗಿಲಿಗೆ ಕಾಲಿಟ್ಟಂತೆಯೇ ಮೈತುಂಬ ಸೀರೆಯುಟ್ಟು ಹಸನ್ಮುಖಿಯಾಗಿ ದೇವತೆಯಂತೆ ನಿಂತಿದ್ದ ತಾಯಿಯನ್ನು ಕಂಡೊಡನೆ ಪ್ರಕಾಶನ ಹೃದಯ ತುಂಬಿ ಬಂತು. ಹೃದಯಾಂತರಾಳದಲ್ಲಿ ಹುದುಗಿಕೊಂಡಿದ್ದ ವಾತ್ಸಲ್ಯದ ಕೂಗನ್ನು ನಾಲಿಗೆ ಹೊರಕ್ಕೆ ಹಾಕಿತು.

"ಅಮ್ಮಾ ."

ಆ ಅಕ್ಕರೆಯ ಕೂಗಿಗೆ ಚಿತ್ರಾಳ ಹೃದಯ ತುಂಬಿ ಬಂತು ಈಗಾಗಲೇ ಮಾಲೀಕರಿಂದ ಪ್ರಕಾಶ-ಸುಧೀಂದ್ರರ ಮಾತೆಲ್ಲವನ್ನೂ ಕೇಳಿ ತಿಳಿದುಕೊಡಿದ್ದ ಚಿತ್ರಾ ಪ್ರಕಾಶನನ್ನು ತನ್ನೆದೆಗೆ ಆನಿಸಿಕೊಂಡಳು.

"ನಾನೇ ನಿನ್ನ ತಾಯಿ ಅಂತ ನಿನಗೆ ಯಾರಪ್ಪಾ ಹೇಳಿದವರು ?"

"ನಿನ್ನೆಯ ದಿವಸ ಅಪ್ಪಾನೇ ನಿನ್ನನ್ನ ತೋರಿಸಿ ಹೇಳಿದರಮ್ಮ."

—ಚಿತ್ರಾ "ಓಹ್" ಎಂದು ನಿಡು ಸುಯ್ದಳು.

"ಅಮ್ಮಾ, ಅಪ್ಪಾನೇ ಹೇಳಿದ್ದಾರೆ ನೀನೂ ನನ್ನ ಜೊತೆ ಬಾಮ್ಮ."

"ಇಲ್ಲ ಪ್ರಕಾಶ್ ಅದು ಸಾದ್ಯವಿಲ್ಲ.''

"ಅಂತಹ ತಂದೆ ಜೊತೆ ಇರೋದಕ್ಕಿಂತ ನಿನ್ನಂತಹ ತಾಯಿ ಒಂದಿಗಿದ್ದರೇ ಬಂದುಕಿನಲ್ಲಿ ಪವಿತ್ರತೇನ ಕಂಡುಕೊಳ್ಳಬಹುದು. ನಾನೂ ನಿನ್ನ ಜೊತೇಗೇ ಬಂದು ಬಿಡ್ತೀನಮ್ಮ."

"ಬೇಡಪ್ಪ ಹಾಗೆ ಮಾತ್ರ ಮಾಡಬೇಡ. ಅರ್ಥ ಮಾಡಿಕೊಂಡವರಿಗೆ ಮಾತ್ರ ನಾನು ಪವಿತ್ರೆ, ಆದರೆ ಎಲ್ಲರ ದೃಷ್ಟಿಯಲ್ಲಿ ನಾನೊಬ್ಬ ಕ್ಯಾಬರೆ ನರ್ತಕಿ, ಕುಲಟೆ, ಇದರಿಂದ ನಿನ್ನ ಭವಿಷ್ಯವೂ ಹಾಳಾಗಬಹುದು."

"ಈಗ ಅಪ್ಪನಿಗೂ ಅರ್ಥವಾಗಿದೆ ನಮ್ಮ ಜೊತೆಗೇ ಬಂದು ಇದ್ದು ಬಿಡಮ್ಮ.''

-- ಚಿತ್ರಾ ಒಂದು ಕ್ಷಣ ಮೌನದಿಂದಿದ್ದ,

"ನಾಳೆಯವರೆಗೂ ಅವಕಾಶ ಕೊಡು."

- ಎಂದು ಹೇಳಿ ಮಗನಿಗೆ ಜೇನು ಬೆರೆತ ಹಾಲನ್ನು ಒಂದು ಲೋಟದಲ್ಲಿ ಕೊಟ್ಟು ಬೀಳ್ಕೊಟ್ಟಳು.

ಅತ್ಯುತ್ಸಾಹದಿಂದ ಮಾರನೆಯಂದು ಪ್ರ ಕಾ ಶ ಹೋಟಲಿಗೆ ಬಂದಾಗ ಚಿತ್ರಾ ಅಲ್ಲಿಂದ ಚದುರಿಬಿಟ್ಟಿದ್ದಳು. ದೊಡ್ಡ ದೊಡ್ಡ ಹೋಟಲುಗಳಲ್ಲೆಲ್ಲಾ ವಿಚಾರಿಸಿದ. ಅವನ ತಾಯಿ ಎಲ್ಲೂ ಕಂಡು ಬರಲೇ ಇಲ್ಲ.

ಎರಡು ದಿನಗಳ ನಂತರ ವೃತ್ತಾಂತ ಪತ್ರಿಕೆಯಲ್ಲಿ "ಹೆಸರಾಂತ ಕ್ಯಾಬರೆ ನೃತ್ಯಗಾತಿ ಚಿತ್ರಾಳ ಆತ್ಮಹತ್ಯೆ" ಎಂಬ ಶಿರೋನಾಮೆಯನ್ನು ಕಂಡಾಗ ಪ್ರಕಾಶ ಅಧೀರನಾದ. ತಂದೆಗೆ ತಿಳಿಸಲು ಮನೆಗೆ ಓಡೋಡಿ ಬಂದ.

ಅವನ ವಿಳಾಸಕ್ಕೆ ಮನೆಯಲ್ಲಿ ಅವನಿಗಾಗಿ ಒಂದು ಲಕೋಟೆ ಬಿದ್ದಿತ್ತು. ಕಾತುರದಿಂದ ಕೈಗೆತ್ತಿಕೊಂಡ.

"ಮಗು ಪ್ರಕಾಶ್, ಯಾವ ಗುರಿಯಲ್ಲಿ ನಾನು ಬದುಕಿದ್ದೇನೋ ಅದು ಪೂರ್ಣವಾಯಿತು. ನನ್ನ ಮಗ ನನ್ನನ್ನು ಪವಿತ್ರಳೆಂದು ಒಪ್ಪಿದರೆ ನನಗಷ್ಟೇ ಸಾಕು. ನನ್ನಿಂದ ನಿನ್ನ ಭವಿಷ್ಯ ಹಾಳಾಗಬಾರದು. ನಿನ್ನ ಬದುಕು ಸುಖಮಯವಾಗಿರಲಿ ನಿನ್ನನ್ನಗಲಿ ಬಹುದೂರ ಹೋಗುತ್ತಿರುವೆ.

ಇತಿ ನಿನ್ನ ನಿರ್ಭಾಗ್ಯ ತಾಯಿ
ಚಿತ್ರಾ.

ಓದು ಓದುತ್ತಾ ಪ್ರಕಾಶ ಆ ಪತ್ರವನ್ನು ಎದೆಗವುಚಿಕೊಂಡು ಗಳಗಳನೆ ಅತ್ತ. ಅವನ ಕಣ್ಣುಗಳಿಂದ ಇಳಿದ ಧಾರಾಕಾರವಾದ ಕಂಬನಿ ಚಿತ್ರಾಳ ಬರಹವನ್ನು ಕಲೆಸಿಬಿಟ್ಟಿತು.

---

ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ ಮಾ ಮೃತ್ಯಂಗಮಯ

ಮೈತ್ರೇಯಿ (ಉಪನಿಷತ್ತು)

(ಓ ಸತ್ಯ ಸ್ವರೂಪನೆ ! ನನ್ನನ್ನು ಅಸತ್ಯದಿಂದ ಕಾಪಾಡಿ ಸತ್ಯ ಸ್ವರೂಪವನ್ನು ಪ್ರಸಾದಿಸು. ಓ ಜ್ಞಾನ ಸ್ವರೂಪನೆ ನನ್ನನ್ನು ಮೋಹಾಂಧಕಾರದಿಂದ ತಪ್ಪಿಸಿ ಜ್ಞಾನ ಪ್ರಕಾಶದೆಡೆಗೆ ಒಯ್ಯಿ. ಹೇ ದಯಾನಂದ ಸ್ವರೂಪನೆ ! ಮೃತ್ಯುವಿನಿಂದ ತಪ್ಪಿಸಿ ನನ್ನನ್ನು ಅಮೃತತ್ವದೆಡೆಗೆ ಒಯ್ಯಿ.)

ಗೋ ಪಯಂತಿ ಯೇ ಪ್ರಭೇ ಸ್ಸಾಂ
ಕುಪಿತಾಂ ದಾಸಾ ಇವ ಪ್ರಸಾದ ಮಂತಿ
ತಾ ಏವ ಮಹಿಲಾನಾಂ ಪ್ರಿಯಾಃ
ಶೇಷಾ ಸ್ವಾಮಿನ ಏವ ವರಾತಾಃ

ಮಾಧವಿ (ಪ್ರಾಕೃತ ಕವಯಿತ್ರಿ)

(ಪ್ರಿಯೆ ಕೋಪಿಸಿಕೊಂಡಾಗ ದಾಸನಂತೆ ಬೇಡಿಕೊಳ್ಳುವವನು ಪ್ರಿಯನು. ನಿರಂಕುಶನಾಗಿ ತನ್ನ ಯಜಮಾನಿಕೆ ನಡೆಸಿಕೊಳ್ಳುವವನು ಯಜಮಾನ.)

# ಮಹಿಳಾ ಸಾಹಿತ್ಯದ ಮಿತಿ

—ಬಿ. ಎಸ್. ವೆಂಕಟಲಕ್ಷ್ಮಿ

ಅಂತರರಾಷ್ಟ್ರೀಯ ಮಹಿಳಾ ವರ್ಷ! ಮಹಿಳೆ ಹಕ್ಕುಗಳಿಗಾಗಿ ಹೊಡೆದಾಡುವುದೇ ಅಲ್ಲ, ತನ್ನ ಸಾಧನೆಯ 'ಸಿಂಹಾವಲೋಕನ' ಮಾಡಬೇಕಾದ ಸಂದರ್ಭ. "ಹಕ್ಕು, ಹಕ್ಕು" ಎಂದು ಹಾತೊರೆದು ಹಾರಾಡುತ್ತ, ಸೂಜಿಗಾತ್ರದ ಸಾಧನೆಯನ್ನು ಆನೆಗಾತ್ರವನ್ನಾಗಿಸಿ ಸುಖಿಸುತ್ತ, ವಸ್ತುಸ್ಥಿತಿಯನ್ನು ಬದಿಗಿರಿಸಿ, ಭ್ರಮೆಲೋಕದಲ್ಲೇ ತೇಲಾಡಿದರೆ, ಅದು ಬರೀ ಆತ್ಮಪ್ರಶಂಸೆಯಾಗುತ್ತದೆ, ಆತ್ಮ ವಿಶ್ವಾಸದ "ಬ್ಯಾಕಿಂಗ್" ಇಲ್ಲದ ಬರಿಯ "ಅಸಂಶನ್" ಆಗುತ್ತದೆ.

ಇದು ಪುರುಷ ಪ್ರಾಧಾನ್ಯ ಪ್ರಪಂಚ, ತಾನವನ ಸ್ವತ್ತು-ಕೈಗೊಂಬೆ, ಅವನ ಕಿರಿಚಾಟದ ಮಧ್ಯೆ ತನ್ನ ಧ್ವನಿ ಕ್ಷೀಣ-ಗೌಣ ಹೀಗೆಲ್ಲ ಹಲಬುತ್ತಲೇ, ಸ್ತ್ರೀ ಇಂದು ಕಾಲಿರಿಸಿರುವುದು ಹಲವಾರು ಕ್ಷೇತ್ರಗಳಲ್ಲಿ. ಮಹಿಳೆಗೆ ಸಂಕೋಚ ಸಹಜ; ಮೇಲಾಗಿ ದೇಹ ದೌರ್ಬಲ್ಯ ಬೇರೆ. ಪುರುಷನನ್ನು ಮೆಟ್ಟಿ ನಿಲ್ಲುವ ಶಕ್ತಿಯಿಲ್ಲದ ಅವಳನ್ನು ಕೈಹಿಡಿದು ಮೇಲಕ್ಕೆತ್ತುವುದು, ಮಾನವೀಯತೆ; ನಾಗರೀಕತೆಯ ಹೆಗ್ಗುರುತು; ನಿಜ. ಆದರೆ ಅವಳು ನೆಟ್ಟಗೆ ನಿಂತ ಮೇಲೂ, ಸಮಾಜ ಅವಳನ್ನು ಅವಳ ಬಾಳ್ವೆಯುದ್ದಕ್ಕೂ ನಡಿಸಬೇಕೆಂದು ಅವಳು ಅಪೇಕ್ಷಿಸಿದರೆ ಅದು ಅನ್ಯಾಯವಲ್ಲವೇ ? ಅವಳ 'ಒರಿಜಿನಾಲಿಟಿ'ಗೆ ಯಾವ ಅವಕಾಶವೂ ದೊರೆಯದೆ, ಪ್ರಶಂಸೆಗಳಿಂದ ಅವಳು ಪೂಜಿಸಲ್ಪಡುತ್ತಲೇ ಹೋದರೆ, ಅವಳು ತನಗಿತ್ತ 'ರಿಯಾಯಿತಿ'ಗಳ ಸಿಕ್ಕುಗಳಲ್ಲೇ ಸಿಕ್ಕಿ ಹಾಕಿಕೊಂಡು ನರಳುವಂತಾಗುವುದಿಲ್ಲವೇ ?

ನನಗನ್ನಿಸುತ್ತದೆ, ಇಂದಿನ ಸ್ತ್ರೀ ತಾನಾಗಿಯೇ ಆಗುಮಾಡಿಕೊಂಡ ಇಂತಹ ಹೆಗ್ಗಳಿಕೆ-ರಿಯಾಯಿತಿಗಳ ಚಕ್ರವ್ಯೂಹದ ಮಧ್ಯೆ ಬಂಧಿತಳಾಗಿ 'ತನ್ನತನ'ವನ್ನೇ ಕ್ರಮೇಣ ಕಳೆದುಕೊಳ್ಳುತ್ತಿದ್ದಾಳೆಂದು. ಕಣ್ಣಿಗೆ 'ಕಪಟ' ಕಟ್ಟಿಕೊಂಡ ಕುದುರೆಯಂತೆ ಪುರುಷ ನಡೆದೂ ನಡೆದೂ ಸವೆದು ಹೋದ ದಾರಿಯಲ್ಲಿ ಯಾಂತ್ರಿಕವಾಗಿ ಸಾಗಿ ಹೋಗುತ್ತಿದ್ದಾಳೆಂದು.

ಇಂತಹ ತೀರ್ಮಾನಕ್ಕೆ ಬರಲು ನನಗೆ ಇತ್ತೀಚೆಗೆ ಒದಗಿ ಬಂದದ್ದು ಒಂದು 'ಸಾಹಿತ್ಯಕ ಸಂದರ್ಭ'. ಪುರುಷನ ಕೈಹಿಡಿದು ನಡೆಯುತ್ತಲೇ ಹೋದರೂ, ತಾನೇನು ಅವನ ಹಿಂದೆ ಹೋಗುತ್ತಿಲ್ಲ, ಅವನ ಜೊತೆಯೇ ನಡೆಯುತ್ತಿದ್ದೇನಷ್ಟೆ ಎಂಬ ಆತ್ಮಪ್ರತಿಷ್ಠೆಯಿಂದ, ಅವನು ಪ್ರವೇಶಿಸಿದ ಕೋರ್ಟು-ಕಚೇರಿ, ಸ್ಕೂಲು-ಕಾಲೇಜು, ವಿಮಾನಯಾನ-ರಕ್ಷಣಾಪಡೆ ಇವೆಲ್ಲಕ್ಕೂ ತಾನೂ ನುಗ್ಗಿ, ಹಲವೊಮ್ಮೆ ತಾನೂ ಅವನಂತೆಯೇ ಕಾಣಬೇಕೆಂದು ಅಪೇಕ್ಷಿಸಿ, ವಸ್ತ್ರ-ವರ್ತನೆಯಲ್ಲೂ ಅವನನ್ನೇ ಅನುಕರಿಸಿ, "ಸಾಹಿತ್ಯದಲ್ಲೂ ಒಂದು ಕೈ ನೋಡಿಯೇ ಬಿಡೋಣ" ಅಂತ ಬರವಣಿಗೆ ಆಯಾಮವನ್ನು ಪ್ರವೇಶಿಸಿರುವ ಮಹಿಳೆ ಎಷ್ಟರ ಮಟ್ಟಿಗೆ ಸಾರ್ಥಕತೆ ಪಡೆದಿದ್ದಾಳೆ ಎಂಬುದನ್ನು ತಿಳಿಯುವ ಕುತೂಹಲವಾಯ್ತು. ಸಹಜವಾಗಿಯೇ ನಾನಾಯ್ದುಕೊಂಡದ್ದು ಕನ್ನಡ ಸಾಹಿತ್ಯ ಕ್ಷೇತ್ರ. ಸರಿ, ಪ್ರಾರಂಭವಾಯ್ತು ಪುಸ್ತಕ ಭಂಡಾರಗಳ ಮೇಲೆ ಧಾಳಿ, ಮೊದಲು ನನ್ನ ಕಾಲ್ಗಳು ನಿಂತಿದ್ದು, ಕಾದಂಬರಿಗಳ ಕಪಾಟುಗಳ ಮುಂದೆ, ಸ್ತ್ರೀ ರಚಿತ ಪುಸ್ತಕ ಕೈ ಹತ್ತಬೇಕಾದರೆ ಸಾಕಷ್ಟು ತಡಕಾಡಬೇಕೇನೋ ಎಂದು ಅಳುಕುತ್ತಲೇ ಶೆಲ್ಫುಗಳಲ್ಲಿ ಕೈಯಾಡಿಸಿದ ನನಗೆ ಆಶ್ಚರ್ಯವಾಯ್ತು. ಅವರು ಬರೆದ ಪುಸ್ತಕಗಳು, ಹೊರೆ ಹೊರೆಯಾಗಿ ಹೇರಿರುವುದನ್ನು ಕಂಡಾಗ. ಪ್ರಾರಂಭವಾಯ್ತು ಪುಸ್ತಕಗಳ ಮಂಥನ. ಮೊದಲು ಕಾದಂಬರಿ, ನಂತರ

ಸಣ್ಣಕತೆ, ಅನಂತರ ಕಾವ್ಯ, ಮತ್ತೆ ನಾಟಕ, ಪ್ರಬಂಧ, ವಿಮರ್ಶೆ, ಪ್ರವಾಸ, ಶಿಶು ಸಾಹಿತ್ಯ—ಹೀಗೆ ಎಲ್ಲ ಪುಸ್ತಕಗಳೂ ನನ್ನ ದೃಷ್ಟಿಗೆ ಸಿಲುಕಿಹೋದವು. ಮೊದಲನೆಯ ಪುಸ್ತಕದ ಕಥಾವಸ್ತು ಕೃತಿ ಚೌರ್ಯವೇನೋ ಅನ್ನಿಸಿತು. ಎರಡನೆಯದರ ವ್ಯಾಕರಣ ಎದೆ ನಡುಗಿಸಿತು; ಮೂರನೆಯದರ ಶೈಲಿ ತಲೆಶೂಲೆ ತಂದಿತು; ನಾಲ್ಕನೆಯದರ ಭಾಷೆ ಬೇಸರ ಬರಿಸಿತು. ಆದರೂ ಹಿಡಿದ ಪಟ್ಟು ಬಿಡುವುದು ಸ್ತ್ರೀಯ ಜಾಯಮಾನವಲ್ಲವಲ್ಲ! ಮುಂದೇ ಮುಂದುವರೆಯಿತು ನನ್ನ ಸಾಹಿತ್ಯಾಭ್ಯಾಸ, ಸಾಧಾರಣ ಮುನ್ನೂರು ಪುಸ್ತಕಗಳವರೆಗೆ, ಕೊನೆಗೂ ನನ್ನ ಮೆಚ್ಚಿಗೆ ಗೆಳಿಸಿದ್ದು ಮೂವತ್ತೋ, ನಲವತ್ತೋ; ಮಿಕ್ಕವೆಲ್ಲ ಮೂಲೆ ಗುಂಪಾಗಲು ಮಾತ್ರ ಲಾಯಕ್ಕು ಅನ್ನಿಸಿತು.

ಹೀಗೆಂದ ಮಾತ್ರಕ್ಕೆ ಪುರುಷರು ಬರೆದ ಪುಸ್ತಕಗಳೆಲ್ಲ ಉತ್ತಮ, ಸ್ತ್ರೀ ಬರೆದದ್ದೆಲ್ಲ ಕಳಪೆ ಎಂಬುದು ನನ್ನ ಅಭಿಪ್ರಾಯವಲ್ಲ, ಪುರುಷರ ಪುಸ್ತಕಗಳ ಗುಣಾವಗುಣಗಳ ವಿಶ್ಲೇಷಣೆ ಪ್ರತ್ಯೇಕ ವಿಷಯ. ಆ ಕಾರ್ಯ ಬೇರೆಯವರಿಗೆ ಬಿಟ್ಟು, ಅತಿಯಾದ ಉತ್ಸಾಹದಿಂದ ಸಾಹಿತ್ಯ ಕ್ಷೇತ್ರ ಪ್ರವೇಶಿಸಿಯೂ ಸ್ತ್ರೀಗೇಕಿಂಥಾ ಸೋಲು ಎನ್ನುವುದನ್ನು ತಿಳಿಸುವುದಷ್ಟೇ ನನ್ನ ಈ ಲೇಖನದ ಉದ್ದೇಶ. ಈ ಕೆಳಗೆ ಕಾಣಿಸಿರುವ ಟೀಕೆಗಳಿಂದ ಸ್ತ್ರೀ ಸಾಹಿತಿಗಳು ಸೆಟೆದು ನಿಂತರೆ, ನಾಲ್ಕು ಗೋಡೆಗಳ ಮಧ್ಯದಲ್ಲೇ ಇದ್ದುಕೊಂಡು ಮಕ್ಕಳನ್ನು ಸಾಕಿ ಸಲಹುತ್ತ, ಗಂಡನ ಯೋಗಕ್ಷೇಮವನ್ನು ಗಮನಿಸುತ್ತ ಇರುವ ತಾನು ಇಷ್ಟು ಬರೆದಿರುವುದೂ ಹೆಚ್ಚೇ ಎಂದು ತನ್ನನ್ನು ತಾನೇ ಹೆಗ್ಗಳಿಸಿಕೊಳ್ಳುತ್ತ ಉದ್ರೇಕಗೊಂಡರೆ, ಅದು ಅವರ ದೃಷ್ಟಿಯ ಅಪಮೌಲ್ಯ ಅಷ್ಟೆ. ಏಕೆಂದರೆ, ಇಂದು ಯಾವ ಸ್ತ್ರೀ ಸಾಹಿತಿಗೂ (ಅವರಿಂದಲೇ ಸಂಗ್ರಹಿಸಲಾದ ಅಂಕಿ ಅಂಶಗಳ ಪ್ರಕಾರ) ಅಂತಹ ಸೀಮಿತ ಆಯಾಮವಿಲ್ಲ. ಅಂತಹ ಸಂಕುಚಿತ ಪರಿಸರ ಅವಳಿಗೆ ಒದಗಿದೆ ಎಂದು ಒಪ್ಪಿಕೊಂಡರೂ, ಸಾಹಿತ್ಯ ಕ್ಷೇತ್ರದಲ್ಲಿ ಸ್ತ್ರೀ ಪುರುಷರೆಂಬ ಸಂಕುಚಿತಾರ್ಥಕ್ಕೆ ಎಡೆಯಿಲ್ಲದಿರುವುದರಿಂದ ಸೈಜತೆ ವಾಸ್ತವಿಕತೆಯಿಂದ ಕೂಡಿದ ಕೃತಿಯನ್ನು ಅವಳು ರಚಿಸಲು ಅಶಕ್ಯಳಾದರೆ, ಅವಳು ತನ್ನ 'ಬರವಣಿಗೆ ಚಪಲ'ಕ್ಕೆ ತಡೆಹಾಕಬೇಕಲ್ಲದೆ, ಕಷ್ಟ ಕಟ್ಟಿಕೊಂಡು ಪುಟ ತುಂಬಿಸುತ್ತಾ ಜನಪ್ರಿಯಳಾಗಲೇಬೇಕೆಂಬ ನಿಯಮವೇನಿಲ್ಲ.

ತ್ರಿವೇಣಿಯವರಿಗೆ ಸಾಹಿತ್ಯದಲ್ಲಿ ಒದಗಿದ ಯಶಸ್ಸನ್ನು ಕಂಡು ಪ್ರೇರಿತರಾಗಿಯೋ, ಇಂದಿರ, ವಾಣಿ ಇವರ ಕಾದಂಬರಿಗಳ ಜನಪ್ರಿಯತೆಯನ್ನು ಕಂಡು ಮೋಹಗೊಂಡೋ, ಅನುಪಮಾ ಅವರ ಅಧಿಕಾರಯುತ ಪುಸ್ತಕಗಳಿಂದ ಪ್ರಭಾವಿತರಾಗಿಯೋ, ಪಾರ್ವತಿ, ಪದ್ಮ, ಸರಿತಾ, ನೀಳಾದೇವಿ ಇವರನ್ನು ಅನುಕರಿಸುವ ಈರ್ಷೆಯಿಂದಲೋ ಅಥವಾ ಬರವಣಿಗೆ, ಕಾಲಕ್ಷೇಪ ಹೊಗಳಿಕೆಯ ಸುಲಭ ಸಾಧನವೆಂಬ ಅಭಿಪ್ರಾಯದಿಂದಲೋ ಕೇವಲ ಕೆಲವೇ ವರ್ಷಗಳ ಹಿಂದೆ ಬೆರಳೆಣಿಕೆಗೆ ಸಿಗುವಷ್ಟು ಸಂಖ್ಯೆಯಲ್ಲಿದ್ದ ಸ್ತ್ರೀ ಸಾಹಿತಿಗಳ ಸಮೂಹ ಇಂದು ಆಕ್ರಮಿಸಿಕೊಂಡಿರುವ ಸ್ಥಳ ಬಹು ವಿಶಾಲ. ವಸ್ತುಸ್ಥಿತಿ ಹೀಗಿದ್ದು ತನ್ನ ಸಾಹಿತ್ಯಕ್ಕೆ ಪ್ರಾತಿನಿಧ್ಯ ದೊರೆತಿಲ್ಲ; ತನ್ನ ಪುಸ್ತಕಗಳಿಗೆ ಮನ್ನಣೆಯಿಲ್ಲ ಮುಂತಾದ ಗೊಡ್ಡು ನೆಪಗಳನ್ನು ಅವರು ಮುಂದೂಡಿದರೆ, ಅವರಿನ್ನೂ ಕಲ್ಪನಾ ಲೋಕದಲ್ಲೇ ವಿಹರಿಸುತ್ತಿದ್ದಾರೆ ಎಂದು ನಿರ್ಣಯಕ್ಕೆ ಬರಬೇಕಾಗುತ್ತದಷ್ಟೆ.

ಮೊದಲು ಕಾದಂಬರಿಗಳತ್ತ ಕಣ್ಣು ಹಾಯಿಸೋಣ. ಮಹಿಳೆಯರ ಬಹುಪಾಲು ಕಾದಂಬರಿಗಳನ್ನೋದಿದಾಗ ನನ್ನಲ್ಲಿ ಮೂಡಿದ ಅನುಮಾನ ಇವರಲ್ಲನೇಕರು ಬಹುಶಃ ಸಿನಿಮಾ ನೋಡಿ ಕಾದಂಬರಿ ಬರೆಯುತ್ತಾರೆ, ಇಲ್ಲವೆ ಸಿನಿಮಾಗಾಗಿಯೇ ಕಾದಂಬರಿ ಬರೆಯುತ್ತಾರೆ ಎಂಬುದು, ಕೇವಲ ಕಥಾವಸ್ತುವನ್ನು ಮೆಚ್ಚಿಯೇ ಆಯ್ದ ಕೆಲವು ಕಾದಂಬರಿಗಳನ್ನು ಬಿಟ್ಟರೆ, ಮಹಿಳೆಯರ ಕಾದಂಬರಿಗಳಲ್ಲಿ ಚಿತ್ರಪ್ರೇಮಿಗಳಿಗೆ ಬೇಕಾದ ಸಿನಿಮೀಯತೆ, ಭಾವೋದ್ರೇಕ, ಲೆಕ್ಕಚಾರವಾಗಿ ಹಣೆಯಲ್ಪಟ್ಟ ಪ್ರಸಂಗಗಳು ಇವೆಲ್ಲ ದೊರೆಯುತ್ತವೆಂದು ಕೆಲವು ನಿರ್ದೇಶಕರು ಇವರಲ್ಲಿ ಹಲವರ ಕಾದಂಬರಿಗಳನ್ನು ಚಿತ್ರಿಕರಿಸಿರುವುದನ್ನು ಕಂಡು ಉತ್ತೇಜಿತರಾಗಿಯೋ ಏನೋ ಇಂದಿನ ಅನೇಕ ಲೇಖಕಿಯರಿಗೆ ಸಿನಿಮಾಕ್ಕೆ ಸೂಕ್ತವಾದ ಕಾದಂಬರಿಯನ್ನು ಹೆಣೆಯುವ ಚಟ. ಪಾತ್ರ ಪರಿಪೋಷಣೆಗೆ ಅಗತ್ಯವಾದ ಅನುಭವವನ್ನು ಗಳಿಸಿಕೊಳ್ಳದೆಯೆ ಸನ್ನಿವೇಶಗಳ ಸೃಷ್ಟಿಗೆ ಅವಶ್ಯವಾದ ಆಳವಾದ ಅಭ್ಯಾಸದಲ್ಲಿ ತೊಡಗದೆಯೇ, ಬೆಳೆಯುತ್ತಿರುವ ಜೀವಂತ ಭಾಷೆಯತ್ತ ಯಾವ ಗಮನವನ್ನು ಹರಿಸದೆಯೇ ಇವರು ಬರೆದ ಪುಟಗಟ್ಟಲೆ ಸಾಹಿತ್ಯ, ಪ್ರಕಾಶಕರಿಂದ ಬಹು ಸುಲಭವಾಗಿ

ಸ್ವೀಕಾರವಾಗಿದ್ದರೂ 'ಓದಬೇಕೆಂದೇ ಓದುವ' ಹಲವು ಓದುಗರನ್ನು ಗಳಿಸಿಕೊಂಡಿದೆಯಾದರೂ, ವಿಮರ್ಶೆಯ ಒರೆಗಲ್ಲಿಗೆ ಹಚ್ಚಿದಾಗ, ಅವು ಅಪಕ್ವ-ಅಪ್ರಬುದ್ಧ ಕೃತಿಗಳಾಗಿ ಕಾಣುತ್ತವೆ ಎಂದು ಹೇಳದೆ ವಿಧಿಯಿಲ್ಲ.

ತಾವು ಕಂಡ ಅನುಭವಿಸದ ಘಟನೆಗಳನ್ನು, ತಮ್ಮ ಕಲ್ಪನೆಯ ಮೂಸೆಯಲ್ಲಿ ಹಿಡಿದಿಟ್ಟು, ಸಾಹಿತ್ಯವನ್ನು 'ಬೆಳೆಸುವ' ಅಥವಾ ಓದುಗರ ಅಭಿಪ್ರಾಯವನ್ನು 'ರೂಪಿಸುವ' ಪ್ರಯತ್ನ ಇವರೆಲ್ಲರ ಪುಸ್ತಕಗಳಲ್ಲಿ. ಕೆಲವರಿಗೆ ಕನ್ನಡ ಭಾಷೆಯೇ ತಿಳಿಯದು; ಮತ್ತನೇಕರಿಗೆ ಪದಗಳ ಜೋಡಣೆಯೇ ಗೊತ್ತಿಲ್ಲ. ಸಾಧಾರಣವಾಗಿ ಎಲ್ಲರಿಗೂ ಕಾದಂಬರಿಗೆ ಹೇಗೆ ಅಂತ್ಯ ಕಾಣಿಸಬೇಕೆಂಬುದೇ ಸಮಸ್ಯೆ. ಕಾದಂಬರಿಯಲ್ಲಿ ಸಾಹಿತ್ಯದ ಅರ್ಥದಲ್ಲಿ "ತಂತ್ರ"ವನ್ನು ಬಳಸಿಕೊಳ್ಳದಿದ್ದರೂ, "ಕ್ರಿಯೆ"ಗೆ ಯಾವ ಮಹತ್ವವನ್ನು ನೀಡದಿದ್ದರೂ, ಎಲ್ಲೆಲ್ಲೂ ಇವರು ಅಳವಡಿಸಿಕೊಳ್ಳುವುದು ಸುಲಭೀಕರಣ "ತಂತ್ರ". ಅನಾಮತ್ತಾಗಿ ಯಾವುದೋ ಒಂದು ಆ ನಾಟಕ ಆಕಸ್ಮಿಕವನ್ನು ಎಳೆದು ತಂದು, "ಭುಗಿಲೆಂದು'' ತಮ್ಮ ಮನದಲ್ಲಿ ಇದ್ದ ಭಾವನೆಗಳಿಗೆ ಹೇಗೋ ಒಂದು ಆಕಾರ ಕೊಟ್ಟು ಕಾದಂಬರಿಯನ್ನು ಥಟ್ಟೆಂದು ಕೊನೆಗಾಣಿಸುವುದೇ ಇವರ ಪ್ರಮುಖ "ಕ್ರಿಯೆ''. ಎಲ್ಲೆಲ್ಲೂ ಹೆಣ್ಣಿನ ಅತಿಯಾದ ಒಳ್ಳೆತನ, ತ್ಯಾಗ, ಗಂಡಿನ ನೀಚತನ, ಅಪ್ರಮಾಣಿಕತೆ ಇವುಗಳ ಮಹಾಪೂರ ಇವನ್ನು ಪುಷ್ಟೀಕರಿಸಲು ಕೃತಕ ಸನ್ನಿವೇಶಗಳ ಸೃಷ್ಟಿ-ಮದುವೆ-ಮುಂಜಿ, ವರದಕ್ಷಿಣೆ-ಊಟೋಪಚಾರ ಇವಕ್ಕೆ ಎಲ್ಲಿಲ್ಲದ ಮಹತ್ವ, ಪ್ರತಿ ಕಾದಂಬರಿಯಲ್ಲೂ ಕನಿಷ್ಠಪಕ್ಷ ಒಂದಾದರೂ ಮದುವೆ, ಒನ್ನೆ ಯಾವರೂ ಹೆಣ್ಣು-ಗಂಡುಗಳ ಮಿಲನ.

ಸಣ್ಣಕತೆ ಕ್ಷೇತ್ರಕ್ಕೂ ಇಂತಹುದೇ ಟೀಕೆಗಳು ಅನ್ವಯ. ಒಂದಿಬ್ಬರನ್ನು ಬಿಟ್ಟರೆ, ನೂತನ ಕಥಾ ರಚನೆ ಕೌಶಲ, ಪರಿಸರಕ್ಕೆ ಅನುಗುಣವಾಗಿ ಸ್ಪಂದಿಸುವ ವಸ್ತು ಇವರಿಗೊಗ್ಗದ ವಿಷಯ. ಸ್ವಾತಂತ್ರ್ಯ ಗಳಿಕೆಯ ಪ್ರಾರಂಭದ ದಿನಗಳಲ್ಲಿ ಕಥಾರಚನೆಯಲ್ಲಿ ತೊಡಗಿದ ಹಲವು ಲೇಖಕಿಯರ ಕಲೆಗಾರಿಕೆಯಾಗಲಿ ಅಥವಾ ವ್ಯಕ್ತಿಯ ಆಂತರಿಕ ಹೋರಾಟಗಳ ಕಡೆಗೆ ವಿಶೇಷ ಗಮನವಿತ್ತು. ಮನಃಶಾಸ್ತ್ರಜ್ಞರಂತೆ, ಸೂಕ್ಷ್ಮಾತಿಸೂಕ್ಷ್ಮವಾಗಿ, ಶಾಸ್ತ್ರಗಳ ಒಳತೋಟಿಯನ್ನು ಪದರುಪದರಾಗಿ ಬಿಡಿಸಿ ನೋಡುವ ನವೋದಯ ಕಾಲದ ಕೇವಲ ಕೆಲವೇ ಬರಹಗಾರ್ತಿಯರ ಕತೆಗಳಾಗಲಿ ಇವರ ದೃಷ್ಟಿಯಿಂದ ದೂರ; "ಗೋಡೆ, ಪಾಯಖಾನೆ" ಎಂದೆಲ್ಲ ಉಪಯೋಗಿಸುವ ಅಶ್ಲೀಲ ನವ್ಯ ಬರವಣಿಗೆಯನ್ನು ಕಂಡರೆ ನನಗಾಗದಪ್ಪ" ಎಂಬುದು ಪ್ರಮುಖ ಕಾದಂಬರಿಗಾರ್ತಿಯೊಬ್ಬರ ಹಂಬಲ. ಸಾಮಾನ್ಯವಾಗಿ ನವೋದಯ ಕಾಲದ ಸಾಹಿತ್ಯದ ಬಗ್ಗೆ ಬಹುಮಂದಿ ಲೇಖಕಿಯರಿಂದ ಬರುವುದು ಇಂತಹುದೇ ಒಂದು ಪ್ರತಿಕ್ರಿಯೆ. ಇದರಿಂದಲೇ ಅರ್ಥವಾಗುತ್ತದೆ ಅವರ "ಅಭಿಪ್ರಾಯ" ಇನ್ನೂ ಯಾವ ಶತಮಾನಕ್ಕೆ ಕಚ್ಚಿಕೊಂಡಿದೆಯೆಂದು.

ಮಹಿಳೆಯರ ಕಾವ್ಯದ ಬಗ್ಗೆ ಚರ್ಚಿಸುವಾಗ ಇತ್ತೀಚಿನ ಪ್ರಸಂಗವೊಂದರ ನೆನಪನ್ನು ನನ್ನ ಮನಸ್ಸಿನಿಂದ ಅಳಿಸುವುದು ಕಷ್ಟ. ಲೇಖಕಿಯೊಬ್ಬರ ಮನೆಯಲ್ಲಿ "ಕೂಟ" ವೊಂದನ್ನೇರ್ಪಡಿಸುವ ಸನ್ನಾಹ. "ಕೂಟದ ಮಧ್ಯೆ ಚರ್ಚೆಗೆ ಬರುವ ವಿಷಯವ್ಯಾವುದು?" ಎಂಬ ಪ್ರಶ್ನೆಗೆ ಅತಿಥೇಯರಾಗಲಿದ್ದವರಿಂದ ಬಂದ ಸೂಚನೆ, "ಕಾವ್ಯ" ಎಂಬುದು. ಥೂ .... ಥೂ .... ಕಾವ್ಯಗೀವ್ಯ ಬೇಡಪ್ಪ, ಬೇಜಾರು", ಇದು ಮತ್ತೊಬ್ಬ ಜನಪ್ರಿಯ ಲೇಖಕಿಯಿಂದ ಥಟ್ಟನೆ ಬಂದ ಪ್ರತಿಕ್ರಿಯೆ, ಇದು ಇವರೊಬ್ಬರಂದದ್ದೇ ಅಲ್ಲ, ಮಹಿಳಾ ಲೇಖಕಿಯರೆಲ್ಲರೂ ಸೇರಿದ್ದ ಆ ಸಭೆಯಲ್ಲಿ ಯಶಸ್ವಿಯಾಗಿ ಚಾಲಕಿಯಾದ ಅಭಿಪ್ರಾಯ. ಈ ಒಂದು ಪ್ರತಿಕ್ರಿಯೆಯೇ, ಇಂದು ಹೊಸ ಆಯೋಗವನ್ನು ಪಡೆಯುತ್ತಿರುವ ಪ್ರಮುಖ ಸಾಹಿತ್ಯ ಪ್ರಕಾಶವಾದ "ಕಾವ್ಯ"ದ ಬಗ್ಗೆ ಮಹಿಳಾ ಸಾಹಿತಿಗಳಿಗೆಷ್ಟರ ಮಟ್ಟಿನ ಒಲವಿದೆ ಎಂಬುದನ್ನು ತಿಳಿಸುವ "ದಿಗ್ಸೂಚಿ". ಕಾವ್ಯ ರಚನೆಯಲ್ಲಿ ಕೈ-ಹಾಕುವ ಸಾಹಸ ಮಾಡಿರುವ ಮಹಿಳೆಯನೇಕರೂ ಮಡಿವಂತರೇ, "ಮಹಾಕಾವ್ಯ''ವೊಂದನ್ನು ಬರೆದಿರುವ ಮಹಿಳೆಯಿಂದ ಹಿಡಿದು, ಅನೇಕ ಸಮಕಾಲೀನ ಕವಯಿತ್ರಿಯರು ಆಯ್ದುಕೊಂಡಿರುವುದು ಸಧ್ಯ ಸವೆದ ವಸ್ತುಗಳೆನಿಸಿರುವ ಪೌರಾಣಿಕ ಕತೆಗಳು, ದೈವೀಕ ಹಿರಿಮೆಯನ್ನು ಸೂಸುವ ಪ್ರಸಂಗಗಳು ಹಾಗೂ ಈಗಾಗಲೇ ಸಾಕಷ್ಟು ವ್ಯವಸಾಯ ಮಾಡಲ್ಪಟ್ಟಿರುವ ಸಹವಾಸ ವಿಷಯಗಳು, ಚೆಲುವು-ಒಲವು, ನಿಸರ್ಗ-ನೋಟ ಇವು ಕೆಲವು ಲೇಖಕಿಯರ ಹರಿತಕ್ಕೆ ಮಾತ್ರ ಸಿಕ್ಕಿರುವ ವಿಷಯಗಳು.

ನಾಟಕ ರಚನೆ, ಸಾಮಾನ್ಯವಾಗಿ ಲೇಖಕಿಯರ ಗಮನದಿಂದ ಹೊರತು, ಪ್ರಕಟವಾದ ಕೆಲವು ನಾಟಕಗಳ ವಸ್ತುವೂ ಧಾರ್ಮಿಕ ವಿಷಯವೇ ಆಗಿದ್ದು ಉಳಿದ ಕೆಲವೇ ಕೆಲವುಗಳ ವಿಷಯ ಸಾಮಾಜಿಕ-ಚಾರಿತ್ರಿಕ, ಈ ನಾಟಕಗಳೂ ಕೇವಲ ನಾಟಕ ರಚನೆಯ ಹಂಬಲ ಪೂರೈಕೆಗೆ ಮಾತ್ರ ಬರೆದಂತಹವಲ್ಲದೆ, ಯಾವ ಮಹತ್ಸಾಧನೆಗಾಗಿಯೂ ಅಲ್ಲ. ಮಿಕ್ಕವು ಸಭಿಕರನ್ನು ನಗಿಸುವುದೇ ಉದ್ದೇಶವನ್ನಾಗಿ ಹೊಂದಿರುವಂತಹವು. ರಂಗಪ್ರಜ್ಞೆ, ನಾಟಕಕ್ಕೆ ಅಗತ್ಯವಾದ ಸುಗಮ-ಲಲಿತ ಭಾಷೆ ಇವುಗಳ ಕೊರತೆ ಎದ್ದು ಕಾಣುವಂತಹವು.

ನಗೆಬರಹ-ಜೀವನ ಚರಿತ್ರೆ, ಪ್ರವಾಸ ಸಾಹಿತ್ಯ, ಪ್ರಬಂಧ-ವಿಮರ್ಶೆ, ವಿಚಾರ–ಶಾಸ್ತ್ರ ಸಾಹಿತ್ಯ ಈ ಕ್ಷೇತ್ರಗಳಲ್ಲಿ ತೃಪ್ತಿ ಬಹಳ ಕಡಿಮೆ. ಶಿಶು ಸಾಹಿತ್ಯಕ್ಕೆ ಸಂದಿರುವ ಸೇವೆ ಮಾತ್ರ ಸ್ವಲ್ಪ ಆಶಾದಾಯಕ, ಅದೂ ಮಕ್ಕಳ ಪುಸ್ತಕಗಳನ್ನು ಹೊರತಂದ ಒಂದೆರಡು ಸಂಸ್ಥೆಗಳು ಲೇಖಕಿಯರಿಗೆ ಅವಕಾಶ ನೀಡಿರುವುದರಿಂದ ಮಾತ್ರ.

ಇದೆಲ್ಲ ಓದಿದಾಗ ಹೊಳೆಯುವ ಅಂಶ–ಮಹಿಳಾ ಸಾಹಿತಿಗಳು ಇನ್ನೂ ತಮ್ಮ ನಿಜ ರೂಪು ಕಂಡುಕೊಳ್ಳಬೇಕಾಗಿದೆ ಎಂಬುದು. ಪ್ರಾಚೀನ ಸಾಹಿತ್ಯ ಖನಿಯಲ್ಲಿ ಒಬ್ಬಳು ಅಕ್ಕಮಹಾದೇವಿಯಾಗಿ ಹೋಗಿರಬಹುದು, ಒಬ್ಬಳು ಕಂತಿ ಕಾಣಿಸಿಕೊಂಡಿರಬಹುದು; ಒಬ್ಬಳು ಹೊನ್ನಮ್ಮ ಹೆಸರು ಮಾಡಿರಬಹುದು. ಸಮಕಾಲೀನ ಸಾಹಿತ್ಯದಲ್ಲೂ ಅಲ್ಲೊಬ್ಬರು, ಇಲ್ಲೊಬ್ಬರು ಆಸೆ ಹುಟ್ಟಿಸಿರಬಹುದು. ಆದರೆ ಈ ಹೆಸರುಗಳ ಸುತ್ತ ಗಸ್ತು ಹೊಡೆಯುವ ಸಂಭ್ರಮದಲ್ಲಿ ಐದಾರು ವರ್ಷಗಳಲ್ಲಿ ಐವತ್ತಕ್ಕೂ ಹೆಚ್ಚು ಕಾದಂಬರಿಗಳನ್ನು ಬರೆದು, ಒಂದು ಪುಸ್ತಕದ ವಸ್ತುವನ್ನೇ ಮತ್ತೊಂದಕ್ಕೆ ಯಾಂತ್ರಿಕವಾಗಿ ಅಳವಡಿಸಿಕೊಂಡಿರುವಂತಹ ಲೇಖಕಿಯರು. ಮೂಲ ಕೃತಿಯ ಶೀರ್ಷಿಕೆಯನ್ನಾಗಲಿ ಅಥವಾ ಮೂಲ ಲೇಖಕಿಯ ಹೆಸರನ್ನಾಗಲಿ ಉಸುರಿಸದೆಯೇ ಅವರ ವಸ್ತುವನ್ನು ಅಕ್ಷರಶಃ ಭಟ್ಟಿ ಇಳಿಸಿ ಕೇಂದ್ರ ಅಕಾಡಮಿ ಪ್ರಶಸ್ತಿ ವಿಜೇತರಾಗಿರುವಂತಹವರೂ ನಮ್ಮ ಮಧ್ಯದಲ್ಲಿದ್ದಾರೆ ಎಂಬ ಸತ್ಯವನ್ನು ಮಹಿಳಾ ಸಾಹಿತಿಗಳು ಮರೆಯಬಾರದು, ಸಾಹಿತ್ಯವನ್ನು "ವ್ಯವಹಾರ"ವನ್ನಾಗಿ ಕುದುರಿಸಿಕೊಳ್ಳಬಾರದು.

ಲೇಖಕನೇ ಆಗಲಿ ಅಥವಾ ಲೇಖಕಿಯೇ ಆಗಲಿ ಬೆಳೆಯಬೇಕಾದರೆ, ಸಾಹಿತ್ಯದ ಅಶೋತ್ತರಗಳನ್ನು ಮುಟ್ಟಬೇಕಾದರೆ ಪ್ರಶಂಸೆಗಳಷ್ಟೇ ಅಲ್ಲ, ಟೀಕೆಗಳಿಗೂ ಆಹ್ವಾನವೀಯಬೇಕು. ವಿಮರ್ಶಕರೊಬ್ಬರು ಸ್ತ್ರೀಯರ ಪುಸ್ತಕಗಳಲ್ಲಿ ಅಡಗಿರುವ ದೋಷಗಳನ್ನು ಎತ್ತಿಹಿಡಿದಾಗ ಟೀಕೆ-ಟಿಪ್ಪಣಿಗಳನ್ನು ಬರೆದಾಗ, ಸಮಾಧಾನ ಚಿತ್ತದಿಂದ ಅವುಗಳ ಹಿಂದಿರುವ ನಿಜಾಂಶವನ್ನು ಗುರುತಿಸದೆ, ಅವರು ದೋಷಗಳನ್ನು ಬೇಕೆಂದೇ ದುರ್ಬೀನಿನ ಕಣ್ಣುಗಳಿಂದ ನೋಡುತ್ತಿದ್ದಾರೆ ಎಂದು ಕೂಗಾಡಿದರೆ, ಲೇಖಕಿಯರು ತಮ್ಮ ಭವಿಷ್ಯತ್ತಿನ ಬಾಗಿಲನ್ನು ತಾನೇ ಮುಚ್ಚಿಕೊಂಡಂತಾಗುತ್ತದೆ ಅಷ್ಟೆ. ಕನ್ನಡ ಲೇಖಕಿಯರು ಇನ್ನೂ ಮುಂದಾದರೂ ಈ ಬಗ್ಗೆ ಸಕ್ರಿಯವಾಗಿ ಯೋಚಿಸಲಿ.

---

## 'ಕಂಡದ್ದು'

ನಿಲುವುಗನ್ನಡಿ ಮುಂದೆ
ನಿಂತು,
ನೋಡಿಕೊಳ್ಳಬೇಕೆನಿಸಿದಾಗ
ಕಂಡ ಬಿಂಬ ಅಚ್ಚರಿಗೊಳಿಸಿತ್ತು.
ಅರೆ ! ಇದಾವ ರೂಪ ?
ತೆರೆ ಸರಿದು, ದೃಶ್ಯ ಮುಗಿದು
ಮಂಗಳ ಹಾಡಿದಾಗ
ಮನ ಮುದಗೊಂಡಿತ್ತು.
ಆದರೂ ಮೂಲೆಯಲ್ಲೊಂದು ಸಣ್ಣ ಕೀಟ
ಕೊರೆದು....ಕೊರೆದು....
ನಿಲುವು ನಿನ್ನದಲ್ಲ,
ಎಲ್ಲ ಬೂಟಾಟಿಕೆ ! ಅಂದಾಗ
ಕೂದಲು ನಿಮಿರಿ, ಬೆಚ್ಚಿದಂತಾಗಿ,
ತಲೆ ತಿರುಗಿಸಿ, ಕತ್ತೆತ್ತಿದಾಗ....,
ತ್ರಿಪದಿಯ ಸಾಲ ಕಂಡು
ಬೆಂಡಾದ ಹೃದಯ ಹಿಗ್ಗಿ,
ಹೆಜ್ಜೇನ ಸವಿದು,
ಸೆನಪೆಲ್ಲ ಮೂರ್ತೀಭವಿಸಿದಾಗ
ಕಂಡಚಿತ್ರ ನಿನ್ನದು ;
ಓ ಸರ್ವಜ್ಞ !
ಇಲ್ಲೊಮ್ಮೆ ಅಲ್ಲೊಮ್ಮೆ ಮಿನುಗುವ
ಚುಕ್ಕೆ ನಡುವೆ,
ಧ್ರುವವಾದ ನೀನು !
ಸತ್ವಹೀರಿ, ಪುಷ್ಪವಾಗಿ,
ಅಲ್ಲಿಲ್ಲ, ಮುಗ್ಗರಿಸದೆ
ಬೆಳೆಯಬೇಕಲ್ಲ, ನಾವು ;
ಅದಕೆ ನೋಡು,
ಹಸನಾಗುವ ರೀತಿ ಹೇಳು.

—ಎಸ್. ಪಿ. ಪೂರ್ಣಿಮಾ.

## ಪಲಾಯನ

ಕಚಕಚನೆ ಕಚ್ಚಿ ತಿಂದದ್ದನ್ನು
ನುಂಗಲಾರದ್ದಕ್ಕೆ, ನುಂಗಿದ್ದನ್ನು
ಅರಗಿಸಲಾರದ್ದಕ್ಕೆ ಕಕ್ಕುತ್ತಾ ಓಟಕಿತ್ತಿತು
ಅಂಟಿದ ಕೆಸರು ಜಿಗುಟಾಗಿ ಕಾಲು
ತಡೆದಾಗ ಒದರುತ್ತ,
ಯಾರಾದರೂ ನೋಡಿದರೆ
ಎಂದಂಜಿ
ನಡೆದ ಹಾದಿಗೆ ಮುಳ್ಳು-ಮುಚ್ಚುತ್ತ,
ಕಣ್ಣ ಕತ್ತಲಿನ ಮುಸುಕು ಹರಡಿತು
ಜತೆಯಲ್ಲಿದ್ದ ನೆರಳ ಮೈನೆಕ್ಕುತ್ತ
ಭೂತ ಕಂಡಾಗಲೆಲ್ಲ ಬೊಗಳುತ್ತ
ಹೊಟ್ಟೆ ಕೆರೆಯಿತು
ಕಾಲು ತೊಡರುವ ಮೂಳೆಗಳಿಗೆಲ್ಲ
ಕುರುಡು ನೋಟವೆಸೆಯುತ್ತ
ಕರಗಿಹೋಗುವ ಮೋಂಬತ್ತಿ ತ್ಯಾಗಕ್ಕೆ
ನಿರ್ಲಿಪ್ತತೆಯ ಸೋಗು ಹಾಕಿತು
ಹೊರಟಿತು-ಪಶ್ಚಿಮಾಭಿಮುಖ.

—ಎಸ್. ವಿ. ಭಾಗ್ಯಲಕ್ಷ್ಮಿ.

# ಮುಖಚಿತ್ರ - ಮುನ್ನುಡಿ

—ಎನ್. ಪಂಕಜ

ಈ ಮುಖಚಿತ್ರ, ಮುನ್ನುಡಿ, ಎರಡೂ ಕಾದಂಬರಿಯ ಮುಖ್ಯ ಅಂಶಗಳು–ಕೈ ಕಾಲು ಇದ್ದಹಾಗೆ! ಅವೆರಡೂ ಇಲ್ಲದೆ ತರಬಹುದೂನ್ನಿ! ಆದರೆ ಕಾದಂಬರಿ ಶೋಭಿಸೋಲ್ಲ. "ನಿನ್ನ ಕಾದಂಬರಿಗೆ ಎಂಥಾ ಮುಖ ಚಿತ್ರಾನ ಹಾಕಿದಾರೆ? ಮುನ್ನುಡೀನ ಯಾರು ಬರೆದಿದ್ದಾರೆ, ಅಥವಾ ಏನಂತ ಬರೆದಿದ್ದೀಯಾ?" ಈ ಪ್ರಶ್ನೆಗಳನ್ನೇ ನಮ್ಮ ಸಾಹಿತ್ಯ ಬಂಧುಗಳು - ಅಷ್ಟೇಕೆ ಎಲ್ಲರೂ ಮೊದಲು ಕೇಳೋದು. ಬೇಕಾದರೆ ಒಂದಿನ ಪುಸ್ತಕದ ಅಂಗಡಿಗೆ ಹೋಗಿ ನೋಡಿ, ಕಾದಂಬರಿಗಳನ್ನು ಕೈಗೆ ಎತ್ತಿಕೊಂಡ ತಕ್ಷಣ ಗಿರಾಕಿಗಳು ಇವೆರಡನ್ನೇ ನೋಡೋದು. ಮುಖಚಿತ್ರ ಮನಸ್ಸು ಸೆಳೆಯೋಕೋ, ಒಳಗಡೆ ಕಣ್ಣಾಡಿಸ್ತಾರೆ. ಮುನ್ನುಡಿಯು ಮುದ್ದಾಗಿದ್ದರೆ ಅಲ್ಲಿಗೆ ಆ ಗಿರಾಕಿಗಳು ಆ ಪುಸ್ತಕ ಸಮೇತ ಕೌಂಟರ್ ಬಳಿ ಬರೋದು ಖಂಡಿತ!

ಈ ಒಂದು ಗುಟ್ಟನ್ನ ಅರಿತೇ, ಕಾದಂಬರಿಯ ಸನ್ನಿವೇಶವನ್ನ ಚಿತ್ರಕ್ಕಾಗಿ ಕಲೆಗಾರನಿಗೆ ಒಪ್ಪಿಸೋದಾಗ ನಾವು ಒಳ್ಳೇ ರಸವತ್ತಾದ ಭಾಗವನ್ನೇ ಆರಿಸಿಕೊಡ್ತೀವಿ. ಆ ರಸವನ್ನ ಅವನು ಪೂರ್ತಿ ಉಳಿಸಿಕೊಂಡು ಬಳಸಿದ್ದಾನೋ ಇಲ್ಲವೋ ಅನ್ನೋದನ್ನ ಖಾತ್ರಿ ಮಾಡಿಕೊಳ್ಳೋದಿಕ್ಕೆ ಆಗಾಗ ಅವನ ಸ್ಟೂಡಿಯೋಗೆ ಪಾದಯಾತ್ರೆ!

ಮೊನ್ನೆ, ನನ್ನ ಕಾದಂಬರಿಯೊಂದರ ಮುಖಚಿತ್ರ ಆದಾಗ ಸ್ವಲ್ಪ ಹಾಸ್ಯವೇ ನಡೀತು. ಕಥಾನಾಯಕಿ ಒಳ್ಳೇ ದಿಗಿಲಿನಿಂದ ಓಡಿ ಬರ್ತಾ ಇರೋಹಾಗೆ ಮಾಡಬೇಕಿತ್ತು. ಆದರೆ, ಹಾಗೆ ಮಾಡಿದರೆ ಆಕೆಯ ಸೌಂದರ್ಯ ಎಲ್ಲಿ ಕೆಟ್ಟುಹೋಗುತ್ತೋ ಎಂತಲೋ ಏನೋ (ಕಥೆಯಲ್ಲಿ ಆಕೆಯನ್ನ ತುಂಬಾ ರೂಪವತಿ ಅಂತ ಹಾಕಿದೆಯಲ್ಲಾ!) ಆತ ಪಾಪ, ಅವಳ ಕಣ್ಣುಗಳನ್ನು ಭೀತಿಯ ಮಡುಗಳನ್ನಾಗಿ ಮಾಡಿರಲಿಲ್ಲ, ನಾವು ಎಷ್ಟು ಹೇಳಿದರೂ ಬಡಪೆಟ್ಟಿಗೆ ಬದಲಾಯಿಸಲು ಒಪ್ಪಲಿಲ್ಲ! "ಕಥೆ ಪಾಯಿಂಟ್ ಹೋಗ್ಬಿಡುತ್ತೆ ಸ್ವಾಮಿ, ಆಮೇಲೆ ಯಜಮಾನರು ನಮ್ಮನ್ನ ದಬಾಯಿಸ್ತಾರೆ" ಎಂದು! ಕೊನೆಗೆ ಆ ಕಾದಂಬರಿಯ ಕಥೇನ ಪೂರ್ತಿ ಹೇಳಿ ಆತನನ್ನು ಒಪ್ಪಿಸಬೇಕಾಯ್ತು.

"ಕಾದಂಬರೀಲಿ ಕಥಾನಾಯಕಿ ತುಂಬಾ ಫ್ಯಾಶನಬಲ್ ಅಂತ ಬಂದಿದೆ, ಸೀನಲ್ಲಿ ತಂದಿರೋದು ಸಾಲದು" ನಮ್ಮ ಯಜಮಾನರು ಅಂದರು.

"ಯಾಕೆ, ಪೋನಿಟೈಲ್ ಕಟ್ಕೊಂಡಿದ್ದಾಳೆ, ಕಿವೀಲಿ ಕಡಗ ಜೋಲಾಡ್ತಿದೆ! ಇನ್ನೇನು ಬೇಕು?" ಆತ ಹುಬ್ಬೇರಿಸಿದ.

ಹೌದು, ಆತ ಹೇಳೋದು ನಿಜ! ಹಾಗಾದರೆ, ಎಲ್ಲಿ ಏನು ಮಿಸ್ ಆಗಿದೆ?

ನಮ್ಮ ಯಜಮಾನರು ಜೇಬಿನಿಂದ ಚಾಳೀಶ್ವರದ ಕನ್ನಡಕಾನ ತೆಗೆದು ಮೂಗಿನ ಮೇಲೇರಿಸಿ, ನಿರುಕಿಸಿ ನೋಡಿದರು, ಒಳ್ಳೇ ವಜ್ರ ಪರಿಕ್ಷಿಸೋ ಹಾಗೆ!

ತಿಳೀಲಿಲ್ಲ ಅವರಿಗೂ! ನನ್ನತ್ತ ತಿರುಗಿದಾಗ "ಹೇಳಲೆ?" ಎಂದು ಉಸುರಿದೆ.

"ಏನು?"

"ಈಕೆಗೆ ಸ್ಲೀವ್‌ಲೆಸ್ ರವಿಕೇನ ಹಾಕಿಲ್ಲ, ಅದಕ್ಕೆ ಹೀಗೆ ಒಳ್ಳೇ ಮಡಿಯಮ್ಮನ ಹಾಗೆ ಕಾಣ್ತಿರೋದು! ಈ ಜರಿ ಅಂಚಿನ ಧರ್ಮಾವಾರದ ಸೀರೆ ಬದಲು, ಅಂಚು ಸೆರಗಿಲ್ಲದ ಫಾರಿನ್ ನೈಲಾನ್ ಸೀರೇನ ಉಡಿಸಬೇಕು.

"ಭೇಷ್" ಇಬ್ಬರೂ ಚಪ್ಪಾಳೆ ತಟ್ಟಿದರು,

"ಹೈಹೀಲ್ಡ್ ಷೂಸನ್ನು ಹಾಕಲೇ ?" ಚಿತ್ರಗಾರ ತನ್ನ ಕಲ್ಪನಾ ಶಕ್ತಿಯನ್ನೂ ಪ್ರದರ್ಶಿಸಿದ.

"ಬೇಡ ಪಾಪ, ಓಡಿ ಹೋಗ್ತಿದ್ದಾಳೆ, ಕೆಳಗೆ ಬಿದ್ದು ಗಿದ್ದುಬಿಟ್ಟರೆ? ಆ ಅಜಂತಾ ಹೇರ್ ಸ್ಟೈಲ್ ಎಲ್ಲಾ ಕೆದರಿಹೋಗುತ್ತೆ" ನಮ್ಮ ಯಜಮಾನರು ಅನುತಾಪದಿಂದ ವಿರೋಧಿಸಿದರು. "ಕೈಯಲ್ಲೊಂದು ಹ್ಯಾಂಡ್‌ಬ್ಯಾಗ್ ಕೊಡಿ"

"ಓಡಿ ಹೋಗುವಾಗ ?" ಆತ ವಿಸ್ಮಯದಿಂದ ಕೇಳಿದ.

"ಊ, ಹ್ಯಾಂಡ್‌ಬ್ಯಾಗ್ ಇಲ್ಲದೇನೆ ಓಡಿ ಹೋಗೊದು ? ಅದೇ ಈಗಿನ ಕಾಲದ ಮಹಿಳೆಯರ ಮಹಿಳೆಯರ ಜೀವಾಳ. ಹಿಂದಿನ ಕಾಲದ ಮಡಿಪೆಟ್ಟಿಗೆ ಇದ್ದಹಂಗೆ. ಒಳ್ಳೆ ದೊಡ್ಡ ವಿಮಾನಿನಾಕಾರದೋ, ಮೊಸಳೆಯಾಕಾರದೋ, ಇಲ್ಲ ಗೊರಿಲ್ಲಾ ಆಕಾರದ್ದೋ ಹ್ಯಾಂಡ್‌ಬ್ಯಾಗ್‌ನ ಆಕೆಯ ಕೈಲಿಡಿ. ಮುಖಚಿತ್ರಕ್ಕೆ ಮತ್ತಷ್ಟು ಕಳೆ ಏರುತ್ತೆ" ತಿಳಿಸಿದ ನಮ್ಮ ಯಜಮಾನರ ಗಂಟಲ ಹಿಂದೆಯೇ ನನ್ನದನ್ನು ಸೇರಿಸಿ ಕೇಳಿದೆ.

"ಅದು ಸರಿ ಎಲ್ಲಾ ಬಿಟ್ಟು ಈ ಹಳೇ ಕಾರನ್ನೇ ಇಲ್ಲಿ ನಿಲ್ಲಿಸೋದು! ಈ ಕಥಾನಾಯಕಿ, ಕಥಾನಾಯಕ ಇಬ್ಬರೂ ಮಾಡ್ರನ್ ಅಂತ ನಿಮಗೆ ಚೆನ್ನಾಗಿ ಗೊತ್ತುಂಟು, ಅಂಥಾದ್ದರಲ್ಲಿ ಇಂಥಾ ಹಳೇ ಮಾಡಲನ್ನ ಅವರು ಕಣ್ಣೆತ್ತಿ ನೋಡೋದುಂಟೆ? ಮೇಲಾಗಿ ಅವರಿಬ್ಬರೂ ಆಗರ್ಭ ಶ್ರೀಮಂತರು ಫಾರಿನ್‌ಗೆಲ್ಲಾ ಹೋಗಿ ಬಂದವರು."

"ನಿಜ" ಕಲೆಗಾರ ಒಪ್ಪಿಕೊಂಡ "ಎಂಬ್ಯಾಸಡರ್ ಕಾರಲ್ಲೋ ಇಲ್ಲಾ ಫಿಯೇಟ್ ಕಾರಲ್ಲೋ" ಸೀರಿಯಸ್ ಆಗಿ ಕೇಳಿದ.

"ಫಾರಿನ್ ಕಾರನ್ನ ಹಾಕಿಬಿಡಿ" ನಮ್ಮ ಯಜಮಾನರು ಸಲಹೆ ಮಾಡಿದರು, ಉತ್ಸಾಹದಿಂದ.

ಇದೀಗ ಸೊಗಸಾದ ಯೋಚನೆ! ತನಗೆ ಯಾರೋ ಫಾರಿನ್ ಕಾರನ್ನ ದಾನ ಮಾಡಿರೋ ಹಾಗೆ ಅವನು ಹಿಗ್ಗಿದ.

ಕೊನೆಯದಾಗಿ ಕಥಾನಾಯಕನ ಚಿತ್ರ - ಕಥೆಯ ಉದ್ದಕ್ಕೂ ನೀಲಿಸೂಟು, ಆರೆಂಜ್‌ಸೂಟು, ಕರಿಸೂಟು ಎಂದೆಲ್ಲಾ ಬಂದಿತ್ತು. ಇಲ್ಲಿ ನೋಡಿದರೆ ಬಿಳಿಯ ಪ್ಯಾಂಟು ಬಿಳಿಯ ಷರಟು! ಉಹು-ಉಂಟೇ, ತಕ್ಷಣ ಅಲ್ಲೇ ನಮ್ಮ ಕಣ್ಣೆದುರಿಗೆ ಆ ನಮ್ಮ ಕಥಾನಾಯಕನಿಗೆ ಒಳ್ಳೇ ನೀಲಿ ಉಲ್ಲನ್ ಸೂಟನ್ನು ಹಾಕಿಸಿ ಕೈ ಮುಗಿದು ಹೊರ ಬಂದೆವು.

ಇನ್ನು ಮುನ್ನುಡಿ : ಒಳ್ಳೇ ಪ್ರಸಿದ್ಧ ಸಾಹಿತಿಗಳಿಗೆ ಬಿಡುವಿಲ್ಲ ಓದಿ ಮುನ್ನುಡಿ ಬರೆಯೋದಿಕ್ಕೆ. ಕಿರಿಯ ಸಾಹಿತಿಗಳ ಕೈಲಿ ಬರೆಸೋದಕ್ಕೆ ನಮ್ಮ ಮನಸ್ಸು ಒಪ್ಪಲ್ಲ ಹೀಗಾಗಿ ಅದೊಂದು ಬೇಟೆಯಾಟ !

ನಾವೇ ನಾಲ್ಕು ಸಾಲು ಬರೆದಾಗ—

ಕಾದಂಬರಿ ಅಚ್ಚಾಗುವುದು ನಿಧಾನವಾದಾಗ (ಸಾಧಾರಣವಾಗಿ ನಿಧಾನವೇ ! ಗಜಗರ್ಭ) ಪ್ರಕಾಶಕರು ತಪ್ಪನ್ನ ಮುದ್ರಣಕಾರನ ಮೇಲೆ ಹೊರೆಸುವುದು, ಮುದ್ರಣಕಾರ ಕಂಪೋಸರ್ ಮೇಲೆ ಮೆಲ್ಲಗೆ ಜಾರಿಸುವುದು, ಕಂಪೋಸರ್ ಪ್ರೂಫ್ ಕರೆಕ್ಟರ್ ಮೇಲೆ ತಪ್ಪನ್ನೇರಿಸುವುದು ಸಾಮಾನ್ಯ (ಬೇಗ ಬೇಗ ಪ್ರೂಫನ್ನ ತಿದ್ದಿ ತರಲಿಲ್ಲ ಎಂದು) ಈ ಎಲ್ಲಾ ಜಂಜಾಟದ ನಡುವೆ ಕಾದಂಬರಿ ಹೊರಬರುವುದು ನಿಧಾನವೇ. ಅದರೆ, ನಾವು ಮುನ್ನುಡಿಯನ್ನ ಬರೆಯೋವಾಗ ಮಾತ್ರ "ಇಷ್ಟು ಬೇಗ ಕಾದಂಬರಿಯನ್ನ ಹೊರತಂದುದಕ್ಕೆ ಪ್ರಕಾಶಕರಿಗೆ ವಂದನೆಗಳು, ಇಷ್ಟು ಶೀಘ್ರವಾಗಿ ಅಚ್ಚು ಹಾಕಿದ್ದಕ್ಕೆ ಮುದ್ರಣಕಾರರಿಗೆ ವಂದನೆಗಳು. ಇಷ್ಟು ಚೆನ್ನಾಗಿ ಸ್ವಲ್ಪವೂ ತಪ್ಪಿಲ್ಲದಂತೆ ಪ್ರೂಫ್ ತಿದ್ದಿದ ...... ರವರಿಗೆ ವಂದನೆಗಳು (ಪ್ರೂಫ್ ಬರೀ ತಪ್ಪಿದ್ದರೂ) ಇತ್ಯಾದಿ.

ಮರೆತಿದ್ದೆ! ಇಷ್ಟು ಮುದ್ದಾಗಿ ಮುಖಚಿತ್ರ ಬರೆದು ಕೊಟ್ಟ ..........ರವರಿಗೆ ಅನೇಕ ವಂದನೆಗಳು ?

---



# ನಮ್ಮ ನೃತ್ಯ ಪಥವನ್ನು ಹಿಂತಿರುಗಿ ನೋಡಿದಾಗ...

—ಚಂದ್ರಭಾಗಾದೇವಿ

ನೃತ್ಯ ದಂಪತಿಗಳಾದ ನಮ್ಮ ಜೀವನರಥಕ್ಕಿರುವ ಎರಡು ಚಕ್ರಗಳಲ್ಲಿ ಒಂದು ಸಂಸಾರ—ಇನ್ನೊಂದು ಕಲೆ—ಜೀವನ ಪಥದಲ್ಲಿ ಈ ಎರಡೂ ಚಕ್ರಗಳು ಕಹಿ-ಸಿಹಿಗಳನ್ನು ಅನುಭವಿಸಿವೆ. ಕೆಲವು ಘಟನೆಗಳಂತೂ ಮಾಯುವಂತಿಲ್ಲ. ಅವುಗಳಲ್ಲಿ ಕೆಲವನ್ನು ಜ್ಞಾಪಿಸ ಬಲ್ಲೆ—ಅಂದು ಈ ಘಟನೆಗಳು ಸ್ವಾರಸ್ಯವಾಗಿರಲಿಲ್ಲ—ಆದರೆ ಇಂದು ಅವನ್ನೇ ಹಿಂತಿರುಗಿ ನೋಡಿದಾಗ ತುಂಬಾ ಸ್ವಾರಸ್ಯಕರವಾಗಿ ಕಾಣುತ್ತಿವೆ. ಕೇಳಬಯಸುವಿರಾ ?

............ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಧರ್ಮಸ್ಥಳ ಕ್ಷೇತ್ರದಲ್ಲಿ ಆ ಸಮಯ ಧರ್ಮ ಸಮ್ಮೇಳನ. ನಮಗೆ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ನೃತ್ಯ ಪ್ರದರ್ಶನ ನೀಡಲು ಆಹ್ವಾನವಿತ್ತು. ನಾವು ಸುಮಾರು 15 ಜನ ವಿದ್ಯಾರ್ಥಿಗಳನ್ನೂ, 6 ಜನ ಸಂಗೀತಗಾರರನ್ನೂ, ರಂಗಸ್ಥಳದ ಸಲಕರಣೆಗೆ ಬೇಕಾದ ವಸ್ತು ವಿಷಯಗಳನ್ನೂ, ಅವನ್ನು ಜೋಡಿಸಲುಬೇಕಾದ ಜನರನ್ನೂ ಕೂಡಿಸಿಕೊಂಡು ಒಂದು Special ಬಸ್ ಏರ್ಪಡಿಸಿ, ದಿನವೆಲ್ಲ ಪ್ರಯಾಣ ಮಾಡಿ, ಸೂರ್ಯಾಸ್ತಮಯದ ಸಮಯಕ್ಕೆ ಕ್ಷೇತ್ರವನ್ನು ಸೇರಿದೆವು. Community Bathroomನಲ್ಲಿ ಸ್ನಾನ ಮಾಡಿ ಶ್ರೀ ದೇವರ ದರ್ಶನ ಪಡೆದೆವು. ಮರುದಿನ ಸಾಯಂಕಾಲ ಆರೂವರೆ ಗಂಟೆಯಿಂದ ಎಂಟೂವರೆ ಗಂಟೆಯವರಿಗೆ ಶ್ರೀ ಚೌಡಯ್ಯನವರ ಪಿಟೀಲು ಇತ್ಯಾದಿ ಕಾರ್ಯಕ್ರಮ—ಆಮೇಲೆ 9 ಗಂಟೆಗೆ ನಮ್ಮ ನೃತ್ಯ ಪ್ರದರ್ಶನ ಎಂದು ತಿಳಿಸಿದ್ದರು. ಅಂತೆಯೇ ನಾವು $6\frac{1}{2}$ ಗಂಟೆಯಿಂದ 15 ಕಲಾವಿದರಿಗೆ ಬಣ್ಣ, ಉಡುಪು-ತೊಡವು ಆಭರಣಗಳಿಂದ ಸಿದ್ಧಪಡಿಸುವಾಗ $8\frac{1}{2}$ ಗಂಟೆಯಾಯಿತು. ಆದರೆ $8\frac{1}{2}$ ಗಂಟೆಗೂ ಅಂದಿನ ಮುಖ್ಯ ಅತಿಥಿಗಳ ಆಗಮನವಿಲ್ಲ! ಅವರಿಲ್ಲದೆ ಕಾರ್ಯಕ್ರಮ ಆರಂಭವಾಗಕೂಡದೆಂಬ ಹಠ ವ್ಯವಸ್ಥಾಪಕರಿಗೆ ! ಸಂಗೀತಗಾರರೇನೋ ಆಕಳಿಸುತ್ತಾ ಹೊತ್ತು ಕಳೆದರು. ನೃತ್ಯ ಕಲಾವಿದರು ಆಭರಣಗಳನ್ನು ಕಟ್ಟಿಕೊಂಡು ಆರಾಮವಾಗಿ ಕುಳಿತುಕೊಳ್ಳಲೂ ಇಲ್ಲ—ಓಡಿಯಾಡಲೂ ಸಾಧ್ಯವಿಲ್ಲ. ಬಾಜುಬಂದ, ಸೊಂಟಕ್ಕೆ ಕಟ್ಟಿದ ಒಡ್ಯಾಣ ಇವುಗಳಿಂದ ಅತಿ ಬಾಧೆಯಾಯಿತು. ರಕ್ತಕಟ್ಟಿ ಒಂದೊಂದು ಆಭರಣವೂ ಒಂದೊಂದು ಮಣ ಭಾರವೆನಿಸಿತು ! ಉಡುಪನ್ನು ಬಿಚ್ಚುವ ಹಾಗೂ ಇಲ್ಲ, ಇಟ್ಟುಕೊಳ್ಳುವ ಹಾಗೂ ಇಲ್ಲ ! ನಮ್ಮ ಪಂಗಡದ ಚಿಕ್ಕ ಮಕ್ಕಳಂತೂ ನಾವು ಏರ್ಪಡಿಸಿದ ಬಸ್ ಹತ್ತಿ, ಅಲ್ಲಿನ ಆಸನಗಳಲ್ಲೇ ತೂಕಡಿಸಿ, ತೂಕಡಿಸಿ ನಿಶ್ಚಿಂತೆಯಿಂದ ಅಲ್ಲೇ ನಿದ್ದೆ ಹೋದರು ! ಅಂತೂ, ಅಂದಿನ ಮುಖ್ಯ ಅತಿಥಿಗಳು ಮೂರು ಗಂಟೆ ತಡವಾಗಿ ರಾತ್ರಿ

9½ ಗಂಟೆಗೆ ಆಗಮಿಸಿದರು ! ! 10 ಗಂಟೆಗೆ ಸಂಗೀತ ಕಾರ್ಯಕ್ರಮ ಆರಂಭವಾಗಿ 12–30 ಗಂಟೆಯ ವರೆಗೆ ನಡೆಯಿತು. ನಮ್ಮ ನೃತ್ಯ ಕಾರ್ಯಕ್ರಮಕ್ಕೆ ಸಿದ್ಧವಾಗಲು ಮಕ್ಕಳನ್ನು ಎಬ್ಬಿಸುವಾಗ ಅವರ ಮುಖದ ಬಣ್ಣವೆಲ್ಲ ಯದ್ವಾತದ್ವಾ ! ಕಣ್ಣು ಕಪ್ಪು ಗಲ್ಲಕ್ಕೆಲ್ಲ ಬಂದು ರಾಕ್ಷಸ ವೇಷದಂತೆ ಕಾಣುತ್ತಿದ್ದರು ! ಹಳೇ ಬಣ್ಣವನ್ನೆಲ್ಲ ಅಳಿಸಿ ಪುನಃ ಬಣ್ಣ ಲೇಪನವಾಯಿತು. ಇತರ ಉಡುಪು, ಆಭರಣಗಳ ಸಂಭ್ರಮವಾಗಿ ನಾವು ನೃತ್ಯರಂಗಕ್ಕೆ ಕಾರ್ಯಕ್ರಮಕ್ಕೆ ಸಿದ್ಧವಾಗುವಾಗ ಮಧ್ಯರಾತ್ರಿ ಕಳೆದು ಒಂದು ಗಂಟೆಯ ಸಮಯ ! ಸಭೆಯಯಲ್ಲಿ ಜನರೇನೋ ಕಿಕ್ಕಿರಿದಿದ್ದರು. 6–30 ಗಂಟೆಯಿಂದ ಸಭಿಕರು ಬಂದು ಹೋಗಿ ತಮ್ಮ ಸ್ಥಳಗಳನ್ನು ಕಾದಿರಿಸಿಕೊಂಡಿದ್ದರು. ಆದರೆ ಅವರಲ್ಲಿ ಅನೇಕರು ನಿದ್ದೆ ಹೋಗಿದ್ದರು — ಇನ್ನಿತರರು ತೂಕಡಿಸುತ್ತಿದ್ದರು — ಮತ್ತಿತರರು ಗಾಢನಿದ್ದೆಯಿಂದ ಆಗ ತಾನೇ ಎಚ್ಚತ್ತು ಕಾರ್ಯಕ್ರಮ ನೋಡಲು ಸಿದ್ಧರಾಗಿದ್ದರು. ಇನ್ನೂ ಕೆಲವರು ಒಂದು ನಿದ್ದೆ ಕಳೆದು ಆಕಳಿಸುತ್ತಾ ಸ್ವಪ್ನ ಲೋಕದಿಂದ ಕಲಾ ಪ್ರಪಂಚಕ್ಕೆ ಬರಲು ಏಳುತ್ತಿದ್ದರಷ್ಟೇ... ಅಂತೂ ಕಾರ್ಯಕ್ರಮ ಆರಂಭವಾಯಿತು. ನಾವು 'ವಿರಾಮ'ವನ್ನು ಕೊಟ್ಟಿಲ್ಲ— ಅಂದರೆ 6–30 ಗಂಟೆಯಿಂದ ವಿರಾಮವೇ ಇತ್ತಲ್ಲವೇ ? ಕೊನೆಯ 2 – 3 ಕಾರ್ಯಕ್ರಮಗಳಿರುವಾಗಲೇ ನಮ್ಮ ಸಭಿಕರೆಲ್ಲ ತಂಡ ತಂಡವಾಗಿ ಎದ್ದು ಚಪ್ಪರವನ್ನು ಬಿಟ್ಟು ಹೊರಗೆ ಧಾವಿಸಿದರು ! ಅದೇಕೆ ಎಂದು ನಮಗೆ ರಂಗಸ್ಥಳದಿಂದ ಗೊತ್ತಾಗದೆ ತುಂಬಾ ಘಾಬರಿಯಾಯಿತು ! ಕೊನೆಗೆ ವ್ಯವಸ್ಥಾಪಕರೆಂದರು— ಶ್ರೀ ದೇವರ ಉತ್ಸವ ದೇವಸ್ಥಾನದಿಂದ ಹೊರಗೆ ಪಲ್ಲಕ್ಕಿಯಲ್ಲಿ ಬರುತ್ತಿರುವ ಕಾರಣ ಭಕ್ತಾದಿಗಳು ಆ ಸುಯೋಗವನ್ನು ಕಳೆಯಲಾರದೆ ಧಾವಿಸಿದರು— ಎಂದು ! ಆಗ ಸಮಯ ಸುಮಾರು 3–30 ಗಂಟೆಯ ಬೆಳಗ್ಗೆಯ ಜಾಮ ! ಸಭೆಯಲ್ಲಿ ಪೂರ್ತಿ ಬರಿದಾಯ್ತು ! ಸಭಿಕರಿಲ್ಲದಿದ್ದ ಮೇಲೆ ನರ್ತಿಸುವುದು ಯಾರಿಗಾಗಿ ? ಯಾರು ನೋಡಲೆಂದು ? ಕೊನೆಗೆ ಅಂಕದ ಪರದೆ ಇಳಿಸಿ, ಕಾರ್ಯಕ್ರಮವನ್ನು ಅಲ್ಲಿಗೇ ತಟ್ಟನೆ ನಿಲ್ಲಿಸಿ ಶ್ರೀ ಮಂಜುನಾಥ ಸ್ವಾಮಿಯ ಪಲ್ಲಕ್ಕಿ ಉತ್ಸವದ ದರ್ಶನವನ್ನು ಆ ಜನರೊಂದಿಗೇ ಪಡೆದು ನಮ್ಮ ವಸತಿಗೆ ಹೋಗಿ ವಿಶ್ರಮಿಸಿದೆವು !

ಅದೊಂದು ದಿನ ರಾಯದುರ್ಗದಲ್ಲಿ ವಿಜೃಂಭಣೆಯ ಮದುವೆಯ ಸಂಭ್ರಮ. ನಮಗೆ ನೃತ್ಯಕ್ಕೆ ಆಹ್ವಾನ ಕೊಟ್ಟಿದ್ದರು. 'Rcception'ಗೆ ನಾವು ನರ್ತಿಸಲು ಒಪ್ಪುವುದಿಲ್ಲ ಎಂದಾಗ " 'ಸಾಂಸ್ಕೃತಿಕ ಕಾರ್ಯಕ್ರಮ'ವಾಗಿ ಮರುದಿನ ಏರ್ಪಾಡು ಮಾಡುತ್ತೇವೆ— ಅಂತೂ ನೀವೇ ನೃತ್ಯ ಪ್ರದರ್ಶನ ಕೊಡಬೇಕು" ಎಂದು ಬಲವಂತದಿಂದ ನಮ್ಮನ್ನು ಕರೆಸಿಕೊಂಡರು. ಶ್ರೀಮಂತ ಮನೆತನದವರಾದ ಅವರು ಅತಿ ಅಂದವಾದ ಚಪ್ಪರವನ್ನೂ ರಂಗಸ್ಥಳವನ್ನೂ ನಿರ್ಮಿಸಿ, ಇಡೀ ಊರಿನ ಗಣ್ಯ ವ್ಯಕ್ತಿಗಳನ್ನೆಲ್ಲ ಆಮಂತ್ರಿಸಿ ಪ್ರದರ್ಶನಕ್ಕೆ ಉತ್ಸಾಹದ ನೆರವು ಮಾಡಿಕೊಟ್ಟರು. ವಧೂ-ವರರ ಕುಟುಂಬದವರೆಲ್ಲ ಆತುರದಿಂದ ಕಾರ್ಯಕ್ರಮವನ್ನು ಎದುರು ನೋಡುತ್ತಿದ್ದರು. ಚಪ್ಪರ ತುಂಬಲು ಧಾರಾಳ ಜನರಿದ್ದರು — ಆದರೆ ಅದೇನೋ ಅಂದು ಮಳೆರಾಯ ಮಾತ್ರ ಪ್ರಸನ್ನನಾಗಲಿಲ್ಲ ! ಸಾಯಂಕಾಲ 5 ಗಂಟೆಯಿಂದ ಧೋ... ಎಂದು ಮಳೆ ಆರಂಭವಾಗಿ ಧಾರಾಕಾರವಾಗಿ ಜಡಿಮಳೆ ಒಂದೇ ಸಮನೆ ಸುರಿದು ಚಪ್ಪರದಲ್ಲೆಲ್ಲ ಕಾಲುವೆ ಕಾಲುವೆಗಳು ಹರಿಯಲಾರಂಭಿಸಿದವು ! ಅಕಾಲ, ಅಕಸ್ಮಾತ್ ಬಂದ ಈ ಮಳೆಗೆ ಏನು ಮಾಡಲೂ ದಿಕ್ಕುತೋಚದೆ ವ್ಯವಸ್ಥಾಪಕರು ಕಂಗಾಲಾದರು. ತಾಳ್ಮೆಯಿಂದ ನಾವೆಲ್ಲರೂ ಮಳೆ ನಿಲ್ಲುವ ಗಳಿಗೆಯನ್ನು ಕಾಯುತ್ತ ಕಾಲಕಳೆದವು ! ಅಂತೂ ರಾತ್ರಿ 9 ಗಂಟೆಯ ಹೊತ್ತಿಗೆ ಮಳೆರಾಯನ ಕೋಪ ಇಳಿದು ಶಾಂತತೆ ಬಂತು. ನಾವು ನೃತ್ಯ ಕಾರ್ಯಕ್ರಮ ಆರಂಭಿಸಿದೆವು. ಅಂದು ನಾವು ಶಿವಪಾರ್ವತಿ ನೃತ್ಯ ಮಾಡಲು ಯೋಚಿಸಿದ್ದೆವು. ಪತಿಯವರು ಶಿವನಾಗಿ ಬರಿ ಮೈಯಲ್ಲಿ ತಪಸ್ಸಿಗೆ ಕುಳಿತಾಗ ಒಂದೆಡೆ ಸೊಳ್ಳೆಗಳ ಕಾಟ— ಸೊಳ್ಳೆ ಕಡಿದರೂ ಅವನ್ನು ಹೊಡೆಯುವಂತಿಲ್ಲ— ತುರಿಸಿಕೊಳ್ಳುವಂತಿಲ್ಲ— ತಪಸ್ಸಿಗೆ ಸ್ತಬ್ಧವಾಗಿ ಕುಳಿತ ಪತಿಯವರ ಮೈ ಅಂದು ಸೊಳ್ಳೆಗಳಿಗೆ ಮೃಷ್ಟಾನ್ನಭೋಜನವಾಗಿತ್ತು ! ಇನ್ನೊಂದೆಡೆ ರಂಗಸ್ಥಳದ ಮೇಲಿನ ಛಾವಣಿಯಿಂದ ಆಗತಾನೇ ನಿಂತಿದ್ದ ಮಳೆಯ ತುಂತುರು ಹನಿಗಳು ಬಿಡದೆ ಅವರ ತಲೆಗೆ, ಭುಜಕ್ಕೆ, ಕೈಗಳಿಗೆ ಬೀಳುತ್ತಲೇ ಇದ್ದವು. ಅವರ ತಪಸ್ಸು ಭಂಗವಾದಾಗ ಸಂತೋಷವೇ ಆಯಿತೆನ್ನಬೇಕು ! ನಾವಿಬ್ಬರೂ ಶಿವ-ಪಾರ್ವತಿ ಭಂಗಿಗಳನ್ನು ಮಾಡುವಾಗ ನಮ್ಮಿಬ್ಬರ ಮೇಲೆ ತುಂತುರು ಹನಿಗಳು— ಮಾಗಿನ

ಮೇಲೆ, ಹೆಗಲಮೇಲೆ ಬೀಳುತ್ತಲೇ ಇದ್ದವು! ಸಧ್ಯ ವಿದ್ಯುಚ್ಛಕ್ತಿ ಹೋಗಲಿಲ್ಲ—ಅದೂ ಇಲ್ಲದಿದ್ದರೆ? ಒಮ್ಮೆ ನಾವು ಇದೇ ನೃತ್ಯವನ್ನು ಬೆಂಗಳೂರಿನಲ್ಲಿ ಮಾಡುತ್ತಿರುವಾಗ ಕೊನೆಯ ಆ ಶಿವ-ಪಾರ್ವತಿ ನೃತ್ಯ ಭಂಗಿಗಳ ಆರಂಭದಲ್ಲೇ ವಿದ್ಯುಚ್ಛಕ್ತಿ ಕಡಿದುಹೋಗಿತ್ತು. ಆಗ ನಮ್ಮ ಸಂಗೀತಗಾರರಲ್ಲಿ ಇಬ್ಬರು ಅಲ್ಲೇ Emergencyಗೆ ಎಂದು ಇಟ್ಟ ಪೆಟ್ರೊಮ್ಯಾಕ್ಸ್ ದೀಪಗಳನ್ನು ನಮ್ಮಿಬ್ಬರ ಎಡಬಲಗಳಿಗೆ ಹಿಡಿದು ಆ ನೃತ್ಯವನ್ನು ಮುಗಿಸಿ, ಅದರೊಡನೆ ನೃತ್ಯ ಕಾರ್ಯಕ್ರಮವನ್ನೂ ಕೊನೆಗಳಿಸಿದ ಜ್ಞಾಪಕವಾಯಿತು!

o o o o

ಮತ್ತೊಂದು ದಿನ ಬೆಂಗಳೂರಿನಲ್ಲಿ ನಾವು Red Cross Fund ಗೆ ನೃತ್ಯಪ್ರದರ್ಶನಕೊಟ್ಟು ಮನೆಗೆ ಬರುವಾಗ ರಾತ್ರಿ 12 ಗಂಟೆ ಆಗಿತ್ತು. ಅಂದರೆ Red Cross Van ನಮಗೆ ನಮ್ಮ ನಮ್ಮ ಮನೆಗಳಿಗೆ ತಲ್ಪಿಸಲಿಲ್ಲ—ಆ Vanಗೆ ಅಂದು ಎಷ್ಟು Petrol Sanction ಆಗಿತ್ತೋ ಅಷ್ಟಕ್ಕೆ ಸರಿಯಾಗಿ ಅವರು ಎಲ್ಲೋ ದಾರೀಲಿ ನಮನ್ನ 'ಇಳಿಯಿರಿ' ಎಂದು ಇಳಿಸಿದರು! ನಾವು ಎಷ್ಟು ಕೇಳಿಕೊಂಡರೂ ಪ್ರಯೋಜನವಾಗಲಿಲ್ಲ. Red Cross Fundಗಾಗಿ ನಾವೆಲ್ಲರೂ 3 ಗಂಟೆಗಳಕಾಲ ಕುಣಿದು ಬೆವರು ಸುರಿಸಿ, ಸಾವಿರಾರು ರೂಪಾಯಿ ಹಣ ಸಂಪಾದಿಸಿ ಕೊಟ್ಟ ನಮಗೆ ಈ ಗತಿಯೇ? ಸುಸ್ತಾಗಿದ್ದ ನಮಗೆ ಬೇಗ ಮನೆಗೆ ಬರಲು ವಾಹನ ಸೌಕರ್ಯವೂ ಇಲ್ಲವಾಯಿತೇ? ಎಂದು ವಿಧವಿಧವಾಗಿ ಹಲುಬಿದೆವು. ಸಂಗೀತಗಾರರೆಲ್ಲ ಪಾಪ, ಅವರವರ ವಾದ್ಯಗಳನ್ನು ಹೊತ್ತುಕೊಂಡು ಜಟಕಾಗಾಡಿ ಹುಡುಕಿ ಹೋದರು—ಫರದೆ, ದೀಪಾಲಂಕಾರಗಳ ಸರಂಜಾಮು ಹೊತ್ತು ಹೊತ್ತು ಆ ವ್ಯಕ್ತಿಗಳು ತುಂಬಾ ಕಷ್ಟಪಟ್ಟರು. ನಮಗೇನೋ ಪುಣ್ಯವಶಾತ್ ಒಂದು ಟ್ಯಾಕ್ಸಿ ಸಿಕ್ಕಿ ಮನೆಗೆ ಬರುವಾಗ ರಾತ್ರಿ 2 ಗಂಟೆ! ದಣಿದು ರಾತ್ರಿ ಮನೆಗೆ ಬಂದು ಸೇರಿದಾಗ ಮನೆಯ ಬಾಗಿಲು ತೆಗೆಯಲು ನಮ್ಮ ಇಬ್ಬರು ಹುಡುಗರು—9—5 ವರುಷದ ಮಕ್ಕಳು ಮಲಗಿ ಗಾಢನಿದ್ದೆಯಲ್ಲಿದ್ದರು. ಬಾಗಿಲು ತಟ್ಟಿದರೆ ಆಗಲೇಇಲ್ಲ! ಎಷ್ಟು ತಟ್ಟಿದರೂ 'ಊಹೂಂ' ಕೇಳಿಸಲಿಲ್ಲ. ನಾವು ಬಾಗಿಲು ತಟ್ಟಿದ ಶಬ್ಧಕ್ಕೆ ನೆರೆಹೊರೆಯವರೆಲ್ಲ ಎದ್ದು ಹೊರಗೆ ಬಂದರು! ಮಕ್ಕಳಿಬ್ಬರನ್ನೂ ನೋಡಿಕೊಂಡಿರಲು ಇರಿಸಿದ್ದ 12 ವರುಷದ ಹುಡುಗನಿಗೂ ಗಾಢನಿದ್ರೆ! ಕೊನೆಗೆ ಏನು ಮಾಡಲೂ ತೋಚದೆ ಇರುವಾಗ ನೆರೆಹೊರೆಯವರು ಒಂದು ಏಣಿ ಒದಗಿಸಿಕೊಟ್ಟರು. ನಾವಿದ್ದ ಮನೆ ಮಹಡಿಮೇಲಿನ ಮನೆಯಾಗಿತ್ತು. ಏಣಿಯನ್ನು Bedroomನ ಕಿಟಕಿಯ ಹತ್ತಿರ ಇಟ್ಟು, ಪತಿಯವರು ಅದನ್ನು ಹತ್ತಿ, ಕಿಟಕಿಯಿಂದ ಮಕ್ಕಳನ್ನು ಗಟ್ಟಿಯಾಗಿ ಕೂಗಿದಾಗ—ಆಳು ಎದ್ದ! ಬಾಗಿಲು ತೆರೆದ!! ಅಷ್ಟೊತ್ತೂ ನಮ್ಮಿಬ್ಬರ ಮುಖದ ಬಣ್ಣ ಹಾಗೇಯೇ ಇತ್ತು. ನೆರೆಹೊರೆಯವರೆಲ್ಲ ಈ ನಮ್ಮ ಜೀವನದ ನಾಟಕದ ದೃಶ್ಯವನ್ನು ನೋಡುವಂತಾಯಿತು! ಸದ್ಯ ಅವರಿಗೆಲ್ಲ ನಮ್ಮ ಕಲಾಜೀವನದ ಹಣೇಬರಹ ಗೊತ್ತಿದ್ದ ಕಾರಣ ನಾಚಿಕೆಪಡುವಂತಿರಲಿಲ್ಲ. ಅಂದಿನಿಂದ ನಾವು ಪ್ರದರ್ಶನಕ್ಕೆ ಹೋಗುವಾಗ, ಸಮಯ ಸಾಯಂಕಾಲವೇ ಆದರೂ, ಮಕ್ಕಳನ್ನು ಒಳಗೆ ಹಾಕಿ ಹೊರಗಿನಿಂದ ಬೀಗ ಹಾಕಿ ಹೋಗುತ್ತಿದ್ದೆವು. ಮನೆಗೆ ಎರಡು ಬಾಗಿಲು ಇದ್ದಕಾರಣ ಮಕ್ಕಳಿಗೆ ತೊಂದರೆಯೇನೂ ಆಗುತ್ತಿರಲಿಲ್ಲ—ಒಂದು ಬಾಗಿಲು ಅವರಿಗೆ! ಒಂದು ನಮಗೆ!

o o o o

ಶ್ರೀ ರಾಮಗೋಪಾಲರವರಿಗೆ ಕೊಲ್ಹಾಪುರದಲ್ಲಿ ನೃತ್ಯ ಪ್ರದರ್ಶನ ಕೊಡಲು ಆಹ್ವಾನವಿತ್ತು. ಅವರ ಆಪ್ತಮಿತ್ರರಾದ ನಮ್ಮಿಬ್ಬರನ್ನು ಕರಕೊಂಡು ಹೋಗಲು ಇಚ್ಛಿಸಿದರು. ನಮ್ಮ ಜಯದೇವ ಆಗ 10 ತಿಂಗಳ ಮುದ್ದು ಹಸುಗೂಸು–ಎದೆ ಹಾಲು ಇನ್ನೂ ಕೊಡುತ್ತಿದ್ದರೂ ನಮ್ಮ ನಾದಿನಿ "ಚಂದನಮ್ಮಾ, ನೀನು ಹೋಗು, ಕಲೆ ನಿನ್ನ ಜೀವನಕ್ಕೆ ಅಡ್ಡಿ ಬಾರದಿರಲಿ–ನಾನು ಮಗುವನ್ನು ಸುಧಾರಿಸಿಕೊಳ್ಳುತ್ತೇನೆ. ಬಾಟ್ಲಿ ಹಾಲು ಅಭ್ಯಾಸ ಮಾಡಲು ತಕ್ಕ ಅವಕಾಶ ಸಿಕ್ಕಿದೆ" ಎಂದು ಆಶ್ವಾಸನೆ ಕೊಟ್ಟು ಸಹಾನುಭೂತಿಯಿಂದ ನನ್ನನ್ನು ನೃತ್ಯ ಕಾರ್ಯಕ್ರಮಕ್ಕೆ ಕಳಿಸಿಕೊಟ್ಟರು. ಕೊಲ್ಹಾಪುರದ ಕಾರ್ಯಕ್ರಮವನ್ನು ನಾವು ಮೂರೇ ಜನ ವಹಿಸಿಕೊಂಡೆವು. ಪ್ರದರ್ಶನಕ್ಕೆ ಅಂದು ಒಂದು ದೊಡ್ಡ ರಂಗಮಂದಿರವನ್ನೇ ಕಟ್ಟಿದ್ದರು. ನಾವು ಮೂವರೂ ಸಾಯಂಕಾಲ 6 ಗಂಟೆಗೆ ಸರಿಯಾಗಿ ಪ್ರದರ್ಶನಕ್ಕೆ ಸಿದ್ಧರಾದೆವು. 6-30 ಗಂಟೆಗೆ

ಕಾರ್ಯಕ್ರಮ ಆರಂಭವಾಗಬೇಕಾಗಿದ್ದರೂ ರಂಗಮಂದಿರದ ಹತ್ತಿರ ಜನರ ಸುಳಿವೇ ಇಲ್ಲ! ಆವರಣದಲ್ಲೆಲ್ಲ ನಿಶ್ಶಬ್ದ! ನಾವು ಪರದೆಯ ಮೂಲೆ ಮೂಲೆಗಳಿಂದ ಆತುರದಿಂದ ಸಭಿಕರ ಆಗಮನವನ್ನು ಕಾಯುತ್ತಿದ್ದೆವು! 6-45 ಗಂಟೆಗೆ ಸಭೆಯಲ್ಲ 3 ಜನರಿದ್ದರು! 7-15 ಗಂಟೆಗೂ ಅದೇ ಮೂರೇ ಮೂರು ಪ್ರೇಕ್ಷಕರು! ಏನು ಕಾರಣವೋ ಎಂದು ನಾವು ಬೇಸರಿಸಿದಾಗ ವ್ಯವಸ್ಥಾಪಕರೆಂದರು— "ಇಂದು ನಾವು ಕಾರ್ಯಕ್ರಮ ಏರ್ಪಡಿಸಬಾರದಾಗಿತ್ತು. ನಿನ್ನೆ ರಾತ್ರಿಯೆಲ್ಲ ಇದೇ ಮಂದಿರದಲ್ಲಿ "ಏಕಚ ಪ್ಯಾರಾ" ಎಂಬ ಇಲ್ಲಿನ ಮಹಾರಾಷ್ಟ್ರದ ಅತಿ ಅಚ್ಚುಮೆಚ್ಚಿನ ನಾಟಕ ಬೆಳಿಗ್ಗೆ 4 ಗಂಟೆಯವರೆಗೆ ನಡೆದಿತ್ತು. ಕೊಲ್ಹಾಪುರದ ಜನರೆಲ್ಲ ಮುಂಚಿನ ದಿನದ ನಿದ್ದೆ ಕೆಟ್ಟ ಗಂಟೆಗಳನ್ನು ಇಂದು ಪಡೆದು ವಿಶ್ರಮಿಸುವುದರಿಂದ ನೃತ್ಯಕ್ಕೆ ಪ್ರೋತ್ಸಾಹ ಇಲ್ಲ"–ಎಂದು ಹೇಳಿದ ಮೇಲೆ ಕಾರ್ಯಕ್ರಮ ರದ್ದು ಮಾಡೋಣ ಎಂದರೆ ಶ್ರೀ ರಾಮಗೋಪಾಲರವರು ಪ್ರದರ್ಶನದ Contract ಹಣವನ್ನು ಮುಂಗಡವಾಗಿಯೇ ಪೂರ್ತಿ ಪಡೆದು ಖರ್ಚು ಮಾಡಿದ್ದರು! ಆದ್ದರಿಂದ ನಾವು ನೃತ್ಯ ಕಾರ್ಯಕ್ರಮ ಕೊಡಲೇಬೇಕಾಯಿತು! ರಂಗಸ್ಥಳದಲ್ಲಿ ನೃತ್ಯಕಲಾವಿದರು 3 ಜನ! ಸಭೆಯಲ್ಲಿ ಪ್ರೇಕ್ಷಕರು ಮೂರು ಜನ! ವ್ಯವಸ್ಥಾಪಕರು ಹೊರಾಂಗಣದಲ್ಲಿ ತಮ್ಮ ದುರದೃಷ್ಟವನ್ನು ಶಪಿಸುತ್ತಾ ಕುಳಿತಿದ್ದರು. ನೃತ್ಯವನ್ನು ನೋಡಲು ಒಳಗೂ ಬರಲಿಲ್ಲ! ಆ ರಂಗಮಂದಿರದಲ್ಲಿ ರಂಗಸ್ಥಳಕ್ಕೆ ಎದುರಾಗಿ ಅತಿ ವಿಸ್ತಾರವಾದ ಒಂದು ಕನ್ನಡಿಯನ್ನು ತೂಗಹಾಕಿದ್ದರು. ನಾವು ರಂಗಸ್ಥಳದಲ್ಲಿ ನಿಂತರೆ ಆ ಕನ್ನಡಿಯಲ್ಲಿ ನಮ್ಮ ಪ್ರತಿಬಿಂಬಗಳು ತಲೆಯಿಂದ ಕಾಲುತುದಿಯವರೆಗೆ ಸ್ವಚ್ಛವಾಗಿ ಕಾಣುತ್ತಿದ್ದುದು ನಮಗೆ ಅತಿ ಚೋದ್ಯವಾಗಿತ್ತು. ನಾವು ಆ ಪ್ರತಿಬಿಂಬಗಳನ್ನು ನೋಡುತ್ತಾ ಆನಂದದಿಂದ ಕುಣಿದುದು ಸ್ವಾರಸ್ಯವಾಗಿತ್ತು. "ಯತೋ ಹಸ್ತಸ್ತತೋ ದೃಷ್ಟಿ ......" ಎಂಬ ಶ್ಲೋಕವನ್ನು ಅನುಸರಿಸದೆ ನಾನು ನನ್ನ ಪ್ರತಿಬಿಂಬವನ್ನು ನೋಡಿ ಕುಣಿದ ಫಲವಾಗಿ, ಕಾಲಡಿಯ ಅಡಿಯಲ್ಲಿನ ನೆಲದ ಏರು-ತಗ್ಗುಗಳನ್ನು ಗಮನಿಸಲಾರದೆ 'ಅಲಾರಿಪು' ಮಾಡುವಾಗ ಎಡವಿ ಬಿದ್ದು ನಾಚಿಕೆ ಪಡುವಂತಾಯಿತು!

° • ° °

ಹೀಗೆ ಇನ್ನೊಂದು ದಿನ ನಾವು ನೃತ್ಯ ಕಾರ್ಯಕ್ರಮ ಮುಗಿಸಿ ಮನೆಗೆ ಬರುವಾಗ 10½ ಗಂಟೆ ರಾತ್ರಿಯಾಗಿತ್ತು. ಅಂದಿನ ದಿನಗಳಲ್ಲಿ ಬೆಂಗಳೂರಿನಲ್ಲಿ ಆಟೋ ರಿಕ್ಷಾ ಇರಲಿಲ್ಲ. ಜಟಕಾಗಾಡಿ ಮಾಡಬೇಕಾಗಿತ್ತು. Greenroomನಲ್ಲಿ ಮುಖದ ಬಣ್ಣ ತೆಗೆದು ಮನೆಗೆ ಬರುವಾಗ ಹೊತ್ತಾಗುತ್ತೆಂದೂ, ಮನೆಯಲ್ಲಿನ ಮಕ್ಕಳ ಯೋಚನೆಯಿಂದಾಗಿಯೂ ಮನೆಗೆ ಬೇಗ ಬಂದೆವು. ಮನೆಗೆ ಬಂದಾಗ ಹೆಬ್ಬಾಗಿಲು ತೆರೆದೇ ಇತ್ತು. Drawingroomನಲ್ಲಿ ದೀಪ ಉರಿಯುತ್ತಲೇ ಇತ್ತು. ಎಂದೂ ಇಲ್ಲದ ಆ ಚಿತ್ರ ವಿಚಿತ್ರವೆನಿಸಿತು! ಗಾಬರಿಪಟ್ಟು ಮನೆ ಒಳಗೆ ಕಾಲಿರಿಸುತ್ತಲೇ ನಮ್ಮ ಆಪ್ತಮಿತ್ರರೊಬ್ಬರು ನಮ್ಮನ್ನು ಸ್ವಾಗತಿಸಿದರು! ಅವರನ್ನು ಕಂಡ ಕೂಡಲೇ ನಮ್ಮ ಯಜಮಾನರು ಆತ್ಮೀಯತೆಯಿಂದ ಅವರನ್ನು ಕುರಿತು, "ಕ್ಷಮಿಸಿ ಡಾಕ್ಟರ್, ನಿಮಗೆ ಈ ರಾತ್ರಿ ಊಟಕ್ಕೆ ಕರೆದಿದ್ದೆ, ಅಲ್ವೆ? ಅಕಸ್ಮಾತ್ ಒಂದು ನೃತ್ಯ ಕಾರ್ಯಕ್ರಮ ಬಂದ ಕಾರಣ ನಿಮಗೆ ತಿಳಿಸಲಾಗಲಿಲ್ಲ. ಊಟಕ್ಕೆ ಹೊತ್ತಾಯಿತು, ಕ್ಷಮಿಸಿ" ಎಂದರು! ಅವರು ಊಟಕ್ಕೆ ಬರುವ ವಿಷಯ ನನಗೆ ಹೇಳಲೂ ಯಜಮಾನರು ಮರೆತ್ತಿದ್ದರು.!! ಡಾಕ್ಟರ್ ಅಂದರು, "ಪರ್ವಾಗಿಲ್ಲ-9 9–30 ಗಂಟೆಯವರೆಗೆ ನಿಮ್ಮ ಹುಡುಗರ ಜೊತೆಗೆ ಮಾತನಾಡುತ್ತಾ ಕುಳಿತಿದ್ದೆ. ಈಗ ತಾನೇ ಇಬ್ಬರೂ ಅಮ್ಮ, ಅಪ್ಪ ಈಗ ಬರ್‍ತಾರೆ, ನಮಗೆ ನಿದ್ದೆ ಬರುತ್ತಿದೆ-ಕ್ಷಮಿಸಿ ಡಾಕ್ಟರ್ ಎಂದು ಮಲಗಲು ಹೋದರು. ಡಾಕ್ಟರ್ ತಿಳಿದುಕೊಂಡಿದ್ದರು, ನಾನು ಅವರಿಗಾಗಿ ವಿಶೇಷ ಅಡುಗೆ ಮಾಡಿಟ್ಟು ಪ್ರದರ್ಶನಕ್ಕೆ ಹೋಗಿದ್ದೆ ಎಂದು! ನಾನೇನೋ, ಆ ದಿನ, ರಾತ್ರಿಗಾಗಿ ಮಾಮೂಲು ಚಪಾತಿ, ಪಲ್ಯ, ಸೆಲೆಡ್ ಮಾಡಿಟ್ಟಿದ್ದೆ. ರಾತ್ರಿ ಅನ್ನ ಊಟ ಮಾಡುವ ಅಭ್ಯಾಸವಿಲ್ಲದೆ ಅನ್ನವನ್ನೂ ಮಾಡಿರಲಿಲ್ಲ. ಸಾರೂ ಇಲ್ಲ. ಅಂತೂ, ನಾನು ಹೇಗೆ ಮುಖದ ಬಣ್ಣ ವಗೈರೆ ಇದ್ದು ಮನೆ ಒಳಗೆ ಸೇರಿದೆನೋ ಹಾಗೆಯೇ ಸಾಲಂಕೃತವಾಗಿ ಅಡಿಗೆ ಮನೆಗೆ ಸೇರಿಹೋದೆ; ಅಡುಗೆಗೆ ಹೊರಟೆ! ಗಂಡಸರಿಬ್ಬರೂ ಹರಟೆ ಹೊಡೆಯುತ್ತಾ, ಪಾನೀಯ ಸೇವಿಸುತ್ತಾ ಕಾಲ ಕಳೆಯುವ ಹೊತ್ತಿಗೆ ನಾನು ಒಳಗೆ ಅನ್ನ ಮಾಡಿದೆ. ಬೆಳಿಗ್ಗೆ ಮಾಡಿದ್ದ ಬದನೇಕಾಯಿ ಹುಳಿ ಒಂದಿಷ್ಟು ಮಿಕ್ಕಿತ್ತು. ಈರುಳ್ಳಿ ಹುರಿದು, ಅದಕ್ಕೆ ಗರಂ ಮಸಾಲೆ

ಪುಡಿ ಹಾಕಿ, ಬೆಳಗಿನ ಹುಳಿಯನ್ನೂ ಅನ್ನವನ್ನೂ ಅದಕ್ಕೆ ಬೆರಸಿ ವಾಂಗೀಬಾತ್ ಮಾಡಿದೆ. ಮೊಸರನ್ನ ಕಲಿಸಿದೆ. ಹುರಿಗಡಲೆ ಚಟ್ಣಿ ಪುಡಿ ಇತ್ತು. ಅದಕ್ಕೆ ಕೊತ್ತಂಬ್ರಿ ಸೊಪ್ಪು, ಹಸಿ ಮೆಣಸಿನಕಾಯಿ, ಮಜ್ಜಿಗೆ ಕಿವುಚಿ ಗೊಜ್ಜು ಮಾಡಿದೆ. (ಅಂದು ನಾನು ಆ ಗಡಿಬಿಡಿಗೆ ಮಾಡಿದ ಆ ಗೊಜ್ಜು ಇಂದಿಗೂ ನಮ್ಮ ಯಜಮಾನರ ಅತಿ ಪ್ರಿಯವಾದ ವಿಷಯವಾಗಿದೆ!) ಹಪ್ಪಳ, ಸಂಡಿಗೆ ಕರೆದೆ. ಚಪಾತಿಗೆ ಮಾಡಿದ ಪಲ್ಯಕ್ಕೆ ಬೇಕಾದ ಪೂರಿ ಕರೆದು ಬಡಿಸಿದೆ! ಸಧ್ಯಕ್ಕೆ ಅಡುಗೆಗೆ ಬೇಕಾದ ಸಾಮಾನುಗಳೆಲ್ಲ ತಯಾರಾಗಿದ್ದುದು ನನ್ನ ಪುಣ್ಯ! ಅಂತೂ ಭರ್ಜರೀ ಊಟವಾಯಿತು. ಆದರೆ ಊಟ ಮಾಡುವಾಗ ಮಾತ್ರ ರಾತ್ರಿ 12 ಗಂಟೆ! ಅಂದರೆ ಆಗ gas ಒಲೆಗಳಿರಲಿಲ್ಲ; Pressure Cookerನ ಸಹಾಯ ಇರಲಿಲ್ಲ. ಪತಿ ಮತ್ತು ಡಾಕ್ಟರ್ ಅತಿಥಿಗಳೊಂದಿಗೆ ಸಾಲಂಕೃತ ಗೃಹಿಣಿಯಾಗಿ ಊಟ ಮಾಡಿದೆ. ಅಡುಗೆ ಮಾಡುವಾಗಲೂ ಸಾಲಂಕೃತ ವೇಷ! ಊಟ ಮಾಡುವಾಗಲೂ ಸಾಲಂಕೃತ ವೇಷ! ನಮ್ಮ ನೃತ್ಯ ಜೀವನ ಎರಡು ಮುಖ! ಎರಡು ಜಗತ್ತು!

o o o o

ಶ್ರೀ ಗಣಪತಿ ಉತ್ಸವ ಹುಳಿಯೂರಿನಲ್ಲಿ ಒಂದು ಅಪೂರ್ವ ಸಂದರ್ಭ. ನಮ್ಮ ನೃತ್ಯ ಕಾರ್ಯಕ್ರಮವಿತ್ತು. ನಾವೆಲ್ಲರೂ ಒಂದು Special Van ಮಾಡಿ ಅಲ್ಲಿಗೆ ಸಾಯಂಕಾಲ ಸೇರಿದೆವು. ರಾತ್ರಿ 10 ಗಂಟೆಗೆ ನಮ್ಮ ಕಾರ್ಯಕ್ರಮ ಏರ್ಪಾಡಾಗಿತ್ತು. ಸಾಯಂಕಾಲದ ಊಟ ತೀರಿಸಿಯೇ ಮುಖಕ್ಕೆ ಬಣ್ಣ ಹಚ್ಚಿಕೊಂಡು ಪ್ರದರ್ಶನಕ್ಕೆ ತಯಾರಾಗುವುದೆಂದು ತೀರ್ಮಾನವಾಗಿತ್ತು. ಊಟಕ್ಕೆಂದು ನಾವೆಲ್ಲ ಸಾಲಾಗಿ ಕುಳಿತುಕೊಂಡೆವು—ಊಟದ ಎಲೆಗಳನ್ನು ಹಾಕಿದರು–ಉಪ್ಪು, ಉಪ್ಪಿನಕಾಯಿ ಬಡಿಸಿದರು. ಅಷ್ಟೊತ್ತಿಗೆ ಅಡಿಗೆ ಮನೆಯಲ್ಲಿ ಒಂದು ಪುಟ್ಟ ವಾಗ್ವಾದ ಕೇಳಿಸಿತು. ನಮಗೆ ಅನ್ನ ಬಡಿಸಲೇ ಇಲ್ಲ! ಎಲೆ ಮುಂದೆ ಕಾದು ಕಾದು ಸಾಕಾಯಿತು! "ಏಕೆ ಇಷ್ಟು ತಡ?" ಎಂದು ಯಜಮಾನರು ಅಡಿಗೆ ಮನೆಗೆ ಹೋದರೆ ವ್ಯವಸ್ಥಾಪಕರು "ಕೃಷ್ಣರಾಯರೇ, ದಯವಿಟ್ಟು ಕ್ಷಮಿಸಿ ಈಗ ತಾನೆ ಆಕಸ್ಮಾತ್ D.C. ಯವರು ಹುಳಿಯೂರಿಗೆ ಭೇಟಿ ಕೊಟ್ಟಿದ್ದಾರೆ, ನಿಮಗೆ ಮಾಡಿದ ಅಡುಗೆ ಅವರಿಗೆ, ಅವರ ಪರಿವಾರಕ್ಕೆ ಕಳುಹಿಸಿಕೊಡಬೇಕಾಯಿತು. ಸ್ವಲ್ಪ ಹೊತ್ತು ಕಾದರೆ ಹೊಸ ಅನ್ನ ಬೇಯಿಸಿ ಬಡಿಸುತ್ತೇವೆ" ಅಂದರು. ಪತಿಯವರಿಗೆ ತುಂಬಾ ರೇಗಿತು. "ಯಾರು ಆ D.C.?" ಎಂದು ಅವರನ್ನು ನೋಡಲು ಹೋದಾಗ ಆ D.C. ಅವರ ಕಾಲೇಜಿನ ಹಳೇ ಶಿಷ್ಯಂದಿರಾಗಿದ್ದರು. ಅವರು ಪತಿಯವರನ್ನು ಗೌರವದಿಂದ ಕಂಡು "ಏನು ಮೇಷ್ಟ್ರೇ ಸಮಾಚಾರ? ಇಲ್ಲಿಗೆ ದಯಮಾಡಿಸಿದ್ದೀರಿ?" ಎಂದು ಕ್ಷೇಮ ಸಮಾಚಾರ ಕೇಳಿದರು. ಪತಿಯವರು ನಮ್ಮ ಪ್ರದರ್ಶನಕ್ಕೆ ಅವರಿಗೆ ಆಹ್ವಾನ ಕೊಟ್ಟು ನಮ್ಮ ರಾತ್ರಿಯ ಊಟದ ಅವ್ಯವಸ್ಥೆಯನ್ನು ತಿಳಿಸಿದರು. ಅದನ್ನು ಕೇಳಿದ ಕೂಡಲೇ ಆ ಅಡುಗೆ ಪುನಃ ನಮಗಾಗಿ ಕಳುಹಿಸಿ ಕೊಟ್ಟರು ಆ D.C. ಹೊಟ್ಟೆ ತುಂಬಾ ಊಟ ಮಾಡಿ, ಸಂತೃಪ್ತರಾಗಿ ನೃತ್ಯಕ್ಕೆ ಸಿದ್ಧರಾದೆವು. ಅಲ್ಲಿ ಬಯಲು ರಂಗಮಂದಿರವನ್ನು ನಿರ್ಮಿಸಿದ್ದರು. ಗಳಗಳನ್ನೆಲ್ಲಾ ಜೋಡಿಸಿ ಅದರ ಮೇಲೆ ಒಂದು Carpet ಹಾಸಿದ್ದರು. ನಾವು ಕಾಲು ಹೆಜ್ಜೆ ಇಡುವಾಗ ನಮ್ಮ ಕಾಲಡಿಗಳು ಆ ಗಳಗಳ ಮಧ್ಯೆ ಸಿಕ್ಕಿಕೊಂಡು ಹೊರಗೆ ಎತ್ತಲಾಗುತ್ತಿರಲಿಲ್ಲ. ಹೆಜ್ಜೆ ವಿನ್ಯಾಸ ಹೇಗೆ ಸಾಧ್ಯ? ಆದರೆ ಆ ಬಯಲಿನಲ್ಲಿ ದಿಗಂತದವರೆಗೆ ಸುಮಾರು 3-4 ಸಾವಿರ ಜನರು ಕಿಕ್ಕಿರಿದು ಸದ್ದಿಲ್ಲದೆ ಆತುರದಿಂದ ನಮ್ಮ ನೃತ್ಯ ನೋಡಲು ಕೂತಿದ್ದರು. ಆ ದೃಶ್ಯ ನಮ್ಮನ್ನು ಹುರಿದುಂಬಿಸಿತು. ನಮ್ಮ ನೃತ್ಯ ಕಾರ್ಯಕ್ರಮ ಸರಾಗವಾಗಿ ನಡೆಯಿತು. ನಾವು ನಮ್ಮ ಮಾಮೂಲು "ಶಿವ–ಪಾರ್ವತಿ" ನೃತ್ಯ ಮಾಡಿ ಕಾರ್ಯಕ್ರಮ ಮುಗಿಸಿದೆವು. ನಮಗಾಗಿ ಕೊಟ್ಟ ವಸತಿಗೆ ಹಿಂತಿರುಗುವಾಗ ಆ ಹಳ್ಳಿಯ ಜನರೆಲ್ಲ ನಮ್ಮಿಬ್ಬರ ಕಾಲುಗಳಿಗೆ ಬಿದ್ದು ಸಾಷ್ಟಾಂಗ ನಮಸ್ಕಾರ ಮಾಡುತ್ತಾ ನಮ್ಮ ದಾರಿ ಅಡ್ಡಗಟ್ಟುತ್ತಿದ್ದರು. ಒಬ್ಬ ಮುದುಕ ಮಹಾಶಯನು ಆನಂದ ಬಾಷ್ಪಗಳಿಂದ "ಸ್ವಾಮಿ! ಸಾಕ್ಷಾತ್ ಶಿವ-ಪಾರ್ವತಿ ಕಂಡ ದೃಶ್ಯವಾಯಿತು ನಮಗೆ!" ಎಂದು ಮುಗ್ಧ ಭಕ್ತಿಯಿಂದ ಮನಃಪೂರ್ವಕವಾಗಿ ಹೊಗಳಿ ಆ ಮುಗ್ಧ ಜನರ ಹೃದಯವನ್ನು ಬಿಚ್ಚಿದನು. ಅದಕ್ಕಿಂತ ಹೆಚ್ಚಿನ ಸಿರಿ ಬೇಕಿತ್ತೇ ನಮಗೆ ಎಂದು ಕೃತಜ್ಞತೆಯಿಂದ ಮನೆಗೆ ಹಿಂತಿರುಗಿದ್ದೆವು.

o o o o

ಒಮ್ಮೆ ಒಂದು ಇಂಜನಿಯರಿಂಗ್ ಸಂಸ್ಥೆ ನಮ್ಮ ನೃತ್ಯ ಕಾರ್ಯಕ್ರಮವನ್ನು ಯಾವುದೋ ಒಂದು ತಾರೀಖಿಗೆ

ಒಂದು ತಿಂಗಳ ಮುಂಚಿತವಾಗಿಯೇ ಏರ್ಪಡಿಸಿ ಹೋಗಿದ್ದರು. ಅದಕ್ಕೆ ತಕ್ಕ ಅಭ್ಯಾಸವನ್ನು ನಾವೂ ನಮ್ಮ ಸಂಗಡದವರೂ ಮಾಡಿ ಕಾರ್ಯಕ್ರಮಕ್ಕೆ ಸಿದ್ದರಾಗುತ್ತಲಿದ್ದೆವು. ಇಂತಹ ಅಭ್ಯಾಸಕ್ಕೆ ಬೇಕಾದ ಖರ್ಚನ್ನು ನಾವು ನಮ್ಮ ಕೈಯಿಂದಲೇ ಮುಂಗಡವಾಗಿ ಹಾಕುತ್ತಲೇ ಇದ್ದೆವು. ಆದರೆ ತಿಂಗಳು ಮುಗಿಯುತ್ತಾ ಬಂದರೂ ಕಾರ್ಯಕ್ರಮದ ಕೂಲಂಕಷ ವಿವರಗಳನ್ನು ಮಾತನಾಡಲು ವ್ಯವಸ್ಥಾಪಕರ ಭೇಟಿ ಆಗಲೇ ಇಲ್ಲ. ಕಾರ್ಯಕ್ರಮ ಇದೆಯೋ ಇಲ್ಲವೋ ಎಂಬ ಸಂಶಯಕ್ಕೀಡಾಯಿತು ಮನಸ್ಸು. ಆದ್ದರಿಂದ ಆ ತಾರೀಖನ್ನು ಖಚಿತಪಡಿಸಲು ಪತಿಯವರು ಆ ವ್ಯವಸ್ಥಾಪಕರನ್ನು ಕಾಣಲು ಅವರ ಆಫೀಸಿಗೆ ಹೋದರು. ಬೆಳಗ್ಗೆ 10½ ಗಂಟೆಗೆ ಕಾಲೇಜಿಗೆ ಹೋಗುವಾಗಲೇ 15 ನಿಮಿಷ ತಡವಾಗಿ 10¼ ಗಂಟೆಗೆ ಅವರನ್ನು ಭೇಟಿಯಾದರೂ. ವ್ಯವಸ್ಥಾಪಕರು ಪತಿಯವರನ್ನು ಕಂಡಕೂಡಲೇ "ಬನ್ನಿ ಕೃಷ್ಣರಾಯರೇ....ಹ್ಹ ಹ್ಹ ಹ್ಹ ಹ್ಹ ಹ್ಹ" ಎಂದು ಮೆಲುದನಿಯಲ್ಲಿ ನಕ್ಕರು.

ಪತಿಯವರು : ಆ ಕಾರ್ಯಕ್ರಮದ ವಿಷಯ ಏನಾಯಿತು ಎಂದು ಕೇಳಲು ಬಂದೆ"

ಅವರು : "ಹ್ಲಹ್ಹಹ್ಹಹ್ಹಹ್ಹ"

ಪತಿಯವರು : "ಕಾರ್ಯಕ್ರಮವು fix ಆಗಿದೆಯೋ ಇಲ್ಲವೋ ?"

ಅವರು : "ಅದು ಅದು, ಹ್ಹ ಹ್ಹ ಹ್ಹ ಹ್ಹ ಹ್ಲ" ಎಂದು ನಿಧಾನ ಕೆಳದನಿಯಲ್ಲಿ ನಕ್ಕರು.

ಪತಿಯವರು : "ಇದೆಯೋ ಇಲ್ಲವೋ ಅಂತ ನನಗೆ ತಿಳಿದರೆ ಸಾಕು"

ಅವರು : "ಕೂತ್ಕೊಳ್ಳಿ ಹ್ಹ ಹ್ಹ ಹ್ಹ ಕೃಷ್ಣರಾಯರೇ, ಹ್ಹಹ್ಹಹ್ಹಹ್ಹ"

ಪತಿಯವರು : ಕೂತ್ಕೋಳಕ್ಕೆ ಸಮಯ ಇಲ್ಲ. 10½ ಗಂಟೆಗೆ ಕಾಲೇಜಿನಲ್ಲಿರಬೇಕು, ಪಾಠ ಇದೆ, ಅವಸರದಲ್ಲಿದ್ದೇನೆ. ಕಾರ್ಯಕ್ರಮ ಇದೆಯೋ ಹೇಳಿ"

ಅವರು : ಹ್ಹಹ್ಹಹ್ಹಹ್ಹಹ್ಹ–ಸ್ವಲ್ಪ–ಹ್ಹ ಒಂದು ನಿಮಿಷ ಕೂತ್ಕೊಳ್ಳಿ ಒಂದುಕಪ್ ಕಾಫಿ ತರಿಸ್ತೀನಿ. ಹ್ಹಹ್ಹ ಹ್ಹಹ್ಹಹ್ಹ"

ಪತಿಯವರು : "ಕಾಫಿ ಗೀಫಿ ಏನೂ ಬೇಡ ನನಗೆ ಅಂಥಾ ಅಭ್ಯಾಸ ಇಲ್ಲ. ದಯವಿಟ್ಟು ಕಾರ್ಯಕ್ರಮದ ವಿಷಯ ತಿಳಿಸಿ. ಅದು ಏರ್ಪಾಟಾದರೆ ನನಗೆ ಕೈ ತುಂಬ ಕೆಲಸವಿರುತ್ತದೆ, ವಾದ್ಯವೃಂದ, ಶಿಷ್ಯವೃಂದದವರನ್ನೆಲ್ಲಾ ಸಿದ್ಧಪಡಿಸಬೇಕಲ್ಲವೆ?"

ಅವರು : "ಹ್ಹಹ್ಹಹ್ಹಹ್ಹ ಅದೂ ಅದೂ ಹ್ಹಹ್ಹ ಅದೂ ಕಾರಣಾಂತರಗಳಿಂದ ರದ್ದು ಮಾಡಬೇಕಾಗಿದೆ.... ಹ್ಹಹ್ಹಹ್ಹಹ್ಹ"

ಪತಿಯವರು : "ಇಷ್ಟನ್ನು ಆವಾಗಲೇ ಹೇಳಬಾರದಿತ್ತೇ ?"

ಅವರು : "ಹ್ಲಹ್ಲಹ್ಹಹ್ಹಹ್ಹ"

ಪತಿಯವರು : "ನ ಮ ಸ್ಕಾ ರ ! ಕಾಲೇಜಿಗೆ ಹೊರಟೇ !

ಅವರು : "ಕ್ಷಮಿಸಿ, ಕೃಷ್ಣರಾಯರೇ....ಹ್ಲ ಹ್ಲ ಹ್ಲ ಹ್ಹ ಹ್ಲ ಕಾಫಿಯಾದರೂ ಕುಡಿಯಬಹುದಾಗಿತ್ತು. ಹ್ಹಹ್ಲಹ್ಹಹ್ಹಹ್ಹ ನಮಸ್ಕಾರ !...

o o o o

ಇಂತಹ ಅನೇಕಾನೇಕ ಅನುಭವಗಳು ಮನಸ್ಸಿನ ಆಳದಿಂದ ತೆರೆತೆರೆಯಾಗಿ ಮೇಲಕ್ಕೆ ಬಂದು ಸ್ಮೃತಿಯನ್ನು ಅಪ್ಪಳಿಸುತ್ತವೆ............

---

ರಘುನಾಥನಾಯಕನ ಆಸ್ಥಾನದಲ್ಲಿ ಜೇನುನೊಣ ಮುತ್ತಿಕೊಂಡು
ಝೇಂಕರಿಸುವಂತೆ ಮಹಿಳಾ ಕವಯಿತ್ರಿಯರು ಗಿಜುಗುಟ್ಟುತ್ತಿದ್ದರು.

ಮಧುರ ವಾಣಿ (ಆಂಧ್ರ ಕವಯಿತ್ರಿ)

# ಜನಪದ ಸಾಹಿತ್ಯದಲ್ಲಿ ಮಹಿಳೆ

—ವಿ. ಛಾಯಾದೇವಿ, ಎಂ.ಎ.

ಜಜನಪದ ಸಾಹಿತ್ಯದಲ್ಲಿ ಹೆಣ್ಣಿಗೆ ಹೆಚ್ಚು ಪ್ರಾಮುಖ್ಯತೆ. ಬೆಳಗಿನಿಂದ ಹಿಡಿದು ಸಂಜೆಯತನಕ ನಡೆಯುವ ದೈನಂದಿನ ಕೆಲಸಗಳಲ್ಲಿ ಬೀಸುವಾಗ, ಹೊಲದಲ್ಲಿ ಉತ್ತು-ಬಿತ್ತು ಮಾಡುವಾಗ, ಮಕ್ಕಳನ್ನು ಮಲಗಿಸುವಾಗ, ಮದುವೆ ಮುಂತಾದ ಶುಭ ಕಾರ್ಯಗಳು ನಡೆಯುವಾಗ ಹಾಡುಗಳು, ಗಾದೆ, ಒಡಪುಗಳು ಇವು ಇದ್ದೇ ಇರಬೇಕು. ಇದರಲ್ಲಿ ಗಂಡಿಗಿಂತ ಹೆಣ್ಣಿನದೇ ಹೆಚ್ಚು ಪಾಲು. ಆಕೆಯೇ ಜನಪದ ಕಾವ್ಯದ ಉಗಮಸ್ಥಾನ ಎಂದರೂ ತಪ್ಪಾಗಲಾರದು. ಇದನ್ನು ರಚಿಸಿದವರು ಯಾರೆಂದು ತಿಳಿಯದಿದ್ದರೂ ಬಹುಮಟ್ಟಿಗೆ ನಿರಕ್ಷರ ಕಕ್ಷಿಗಳಾಗಿದ್ದರೂ ಅವರ ಅವರ ಅನುಭವದ ಆಳದಿಂದ, ನೋವು-ನಲಿವುಗಳಿಂದ ಹೊರ ಹೊಮ್ಮಿದ ಲಯಬದ್ಧವಾದ ಮಾತುಗಳೇ ಹಾಡಾಗಿ ಕಿವಿಯಿಂದ ಕಿವಿಗೆ ಬಾಯಿಯಿಂದ ಬಾಯಿಗೆ ಹರಡಿ ಒಂದು ಅಮರ ಸಾಹಿತ್ಯ ಎನಿಸಿಕೊಂಡಿದೆ. ನಮ್ಮ ಸಂಸ್ಕೃತಿಯ ಜೀವಂತ ಸಂಕೇತವಾಗಿದೆ.

ಜನಪದ ಗೀತೆಗಳ ಸೊಬಗಿಗೆ, ಅದರ ಲಯಕ್ಕೆ, ಧ್ವನಿಗೆ, ನವಿರಾದ ಹಾಸ್ಯ, ಲಾಲಿತ್ಯಗಳಿಗೆ ಎಲ್ಲರೂ ಬೆರಗಾಗುತ್ತಾರೆ. ಹಾಡಿಗೆ, ಲಯಬದ್ಧವಾದ ಮಾತಿಗೆ ಇಂತಹುದೇ ಸಂದರ್ಭ ಬೇಕೆಂದಿಲ್ಲ. ದೇವರ ಮೇಲಿನ ಭಕ್ತಿ, ಮಕ್ಕಳ ಮೇಲಿನ ಮೋಹ, ಪತಿಪ್ರೇಮ, ಬಡತನ, ಕಲಹ, ಕೊನೆಗೆ ಹೆಣ್ಣಾಗಿ ಹುಟ್ಟಲೇಬಾರದು ಎನ್ನುವ ಜಿಗುಪ್ಸೆ, ಸಾವು, ನೋವು, ಮದುವೆ ಯಾವುದೇ ಸಂದರ್ಭವಿರಲಿ ಭಾವನೆಗಳು ಹಾಡಾಗಿ ಹೊಮ್ಮುತ್ತವೆ. ಕೆಲವು ಸಂದರ್ಭದಲ್ಲಿ ಬೈಗಳನ್ನು ಉಪಯೋಗಿಸುವುದಕ್ಕೂ ಹಿಂಜರಿಯುವುದಿಲ್ಲ. ಗ್ರಾಮದೇವತೆಗಳಿಗೆ, ಮಾರಮ್ಮ, ಎಲ್ಲಮ್ಮ, ದೇವೀರಿ, ಚಾಮುಂಡಿ ಮುಂತಾದವರಿಗೆ ಹೆಚ್ಚು ಪ್ರಾಶಸ್ತ್ಯ.

ಜನಪದ ಸಾಹಿತ್ಯದಲ್ಲಿ ಮಹಿಳೆಯ ಪಾತ್ರವನ್ನು ಕೆಲವು ದೃಷ್ಟಿಗಳಿಂದ ನೋಡಬಹುದು.

ಬಡತನವಿರಲಿ, ಸಿರಿತನವಿರಲಿ ಮದುವೆಯಾದ ಹೆಣ್ಣಿಗೆ ಸಂತಾನ ಫಲಬೇಕು. "ಮಕ್ಕಳ ಕೊಡು, ಮುತ್ತೈದಿತನ ಕೊಡು, ನೂರಾಯರ ಮುಂದ ಮರಣ ಕೊಡು" ಇದೇ ಹೆಣ್ಣಿನ ಬೇಡಿಕೆ. ತಾನು ಬಂಜೆ ಮಾತ್ರ ಆಗಬಾರದು.

ಬಂಜೆ ಬಾಗಿಲ ಮುಂದ ಅಂಜೂರಿ ಗಿಡಹುಟ್ಟಿ
ಟೊಂಗಿ ಟೊಂಗಿಲಿ ಗಿಣಿಕೂತು ಹೇಳ್ಯಾವ
ಬಂಜೆ ನಿನ ಬದುಕು ಹೆರವರಿಗೆ.

ಮಕ್ಕಳಿಲ್ಲದ ಬದುಕು ಬದುಕೇ ಅಲ್ಲ.

ಕಂದನ ಕೊಡು ಶಿವನೆ ಬಂಧನ ಪಡಲಾರೆ
ಹಂಗೀನ ಬೋನ ಉಣಲಾರೆ ಭುವಿಯಲಿ
ಬಂಜೆಂಬ ಶಬ್ದ ಹೊರಲಾರೆ,

ಇದು ಹೆಣ್ಣಿನ ಪ್ರಾರ್ಥನೆ. 'ಬಾಲಕರಿಲ್ಲದ ಬಾಲೆಯ ಜನ್ಮವಾದರೂ ಏತಕ್ಕೆ ? ಅಂತಹ ಜನ್ಮ ಬಾಳೆಯಲ್ಲಿ ಊಟ ಮಾಡಿ ಅನಂತರ ಅದನ್ನು ಹೊರಕ್ಕೆ ಬಿಸಾಡಿದಂತೆ ನಿಷ್ಪ್ರಯೋಜಕ.

ಒಂದು ಮಗುವಾದರೆ ಸಾಕು, ಹೆಣ್ಣಿಗೆ ಬಂಜೆಯೆಂಬ ಬಿರುದು ಅಳಿಸಿ ಹೋಗುತ್ತದೆ. ತನ್ನ ಮಗು ಸುಂದರವಾಗಿರಲಿ, ಕುರೂಪಿಯಾಗಿರಲಿ, ತನಗೆ ಬಡತನವಿರಲಿ, ಸಿರಿತನವಿರಲಿ, ಆಕೆ ಅದನ್ನು ರಾಜಕುಮಾರನಂತೆ

ಕಾಣುತ್ತಾಳೆ. ಮಗು ಆಟವಾಡಿ ಮನೆಗೆ ಬಂದಾಗ ತಾಯಿ ಅದಕ್ಕೆ ಎಲ್ಲಿಲ್ಲದ ಉಪಚಾರ ಮಾಡುತ್ತಾಳೆ.

ಆಡಿ ಬಾ ನನಕಂದ ಅಂಗಾಲ ತೊಳದೇನು
ತೆಂಗಿನ ಕಾಯಿ ತಿಳಿನೀರ ತೆಕ್ಕೊಂಡು
ಬಂಗಾರದ ಮೋರೆ ತೊಳದೇನು.

ಆಕೆ ಮಗುವಿನ ಮುಖವನ್ನು ಬರಿಯ ನೀರಿನಿಂದ ತೊಳೆಯುವುದಿಲ್ಲ, ತಂಪಾದ ಎಳೆನೀರಿನಿಂದ ತೊಳೆಯುತ್ತಾಳೆ. ಇದು ತಾಯಿಯ ಮಮತೆಯ ಉತ್ಕಟತೆಯನ್ನು ತೋರುತ್ತದೆ. ತನ್ನ ಮಗು ಮನೆತುಂಬ ಓಡಾಡಿದರೆ ಆಕೆಗೆ ಸಂತೋಷ.

ಕೂಸು ಇದ್ದ ಮನೆಗೆ ಬೀಸಣಿಗೆ ಯಾತಕೆ
ಕೂಸು ಕಂದಯ್ಯ ಒಳ ಹೊರಗೆ ಆಡಿದರೆ
ಬೀಸಣಿಗೆ ಗಾಳಿ ಸುಳಿದಾವು.

ಕೂಸು ಅತ್ತರೆ ಅಳಲಿ, ಅಳುವ ಕೂಸೇ ಹುಟ್ಟಲಿ ಅಂತೂ ಮನೆಯ ತುಂಬ ಮಕ್ಕಳಿರಬೇಕು ಆಕೆಗೆ. ಹತ್ತು ಗಂಡು ಮಕ್ಕಳನ್ನು ಹೆತ್ತರೇನು? ಒಂದು ಹೆಣ್ಣು ಮಗು ಹುಟ್ಟಿದರೆ ಚೆಂದ, ಹೆಣ್ಣು ನಿಕೃಷ್ಟ ಎಂದು ಕಾಣುವವರಿಗೆ ಆಕೆ ಹೇಳುತ್ತಾಳೆ :

ಹೆಣ್ಣು ಹುಟ್ಟಿದೆ ಅಂತ ಹೇಳಿ ಕಳುವಲು ಬೇಡ
ಹೆಣ್ಣೆಂದರವರು ಹೆದರ್‍ಯಾರು ಕಂದವ್ವ
ಹೆಣ್ಣಲ್ಲ ನಮಗೆ ರವೆಚಿನ್ನ.

ಹೆಣ್ಣೆಂದರೆ ತಾಯಿಗೆ ರವೆಚಿನ್ನವಂತೆ. ಹೆಣ್ಣು ಗಂಡಿಗಿಂತ ಕಡಿಮೆ ಎನ್ನುವ ಭಾವನೆಯನ್ನು ತೊಡೆದು ಹಾಕಿ ಎನ್ನುವ ಧ್ವನಿ ಕಾಣುತ್ತೇವೆ. ಹೆಣ್ಣನ್ನು ವರ್ಣಿಸುವ ಪದ್ಯಗಳು ಜನಪದ ಸಾಹಿತ್ಯದಲ್ಲಿ ಬಹಳ ರಮ್ಯವಾಗಿದೆ. ಹೆಣ್ಣನ್ನು ವರ್ಣಿಸುವುದರಲ್ಲಿ ಜನಪದ ಕವಿಗಳು ಬೇರೆಯ ಪ್ರೌಢ ಕಾವ್ಯಕ್ಕಿಂತ ಹಿಂದೆ ಬಿದ್ದಿಲ್ಲ. ತಾಯಿಯೊಬ್ಬಳು ಮಗಳನ್ನು ಕುರಿತು ಹೇಳುವ ಪದ್ಯ :

ಹೆಣ್ಣಿದ್ದ ಮನೆಗೆ ಕನ್ನಡಿಯಾತಕೆ
ಹೆಣ್ಣು ಸಣ್ಣವಳು ಒಳಗಿರಲು ನನಮಗಳು
ಕನ್ನಡಿಯಂಗೆ ಹೊಳೆಯುವಳು.

ಅತ್ತೆ ತನ್ನ ಸೊಸೆಯನ್ನು ಊರಿಗೆ ಕಳಿಸುವಾಗ ಹೇಳುತ್ತಾಳೆ :

ಹೋಗಿ ಬಾರೆ ನೀನು ಹೊನ್ನೋಲಿ ಕಿವಿಯವಳೆ
ಕೆನ್ನೇಲಿ ಸೂರ್ಯ ಹೊಳೆವವಳೆ ಸೊಸೆಮುದ್ದೆ
ತೌರು ಒಳ್ಳೇದೆಂದು ಇರಬೇಡ.

'ಕೆನ್ನೆಯಲ್ಲಿ ಸೂರ್ಯ ಹೊಳೆವವಳೆ' ಎಂಬ ಮಾತೇ ತುಂಬ ಧ್ವನಿಪೂರ್ಣವಾಗಿದೆ. ಅತ್ತೆ ತನ್ನ ಸೊಸೆಯನ್ನು ನೋಡಲಿಕ್ಕೆ ಬನ್ನಿ ಎಂದು ಕರೆಯುವ ಹಾಡಿನಲ್ಲಿ :

ಅಕ್ಕಿಯಂಥ ಹಲ್ಲು ಲಕ್ಷಣಸೂಸುವ ಮುಖ
ಹೊಟ್ಟೆ ಹೊಂಬಾಳೆ ನಡು ಸಣ್ಣ
ನಡುಸಣ್ಣವಾಗಿರುವೊಳ ನಡೆದಾಡಿಸಿ
ನೋಡು ಸೊಸೆ ಮುದ್ದ

ಹೆಣ್ಣು ಗರ್ಭ ಧರಿಸಿದಾಗ ಆಕೆಯ ಲಾವಣ್ಯ ಹೆಚ್ಚಾಗುತ್ತದೆ. ಇದನ್ನು ಜನಪದ ಕಾವ್ಯ ಉತ್ಸಾಹದಿಂದ ವರ್ಣಿಸುತ್ತದೆ.

ಬಸವನ ಹೆಂಡತಿ ಹಸುಮಗಳು ನೀಲವ್ವ
ಬಸುರಾದರ್‍ಯಾಂಗ ನಡೆದಾಳ ಗೋಧಿಯ
ಸಸಿಯಾಗ ನವಿಲು ನಡೆದ್ಹಂಗ

ಗೋಧಿಯ ಹೊಲದ ಮಧ್ಯೆ ನವಿಲು ನಿಧಾನವಾಗಿ ನಡೆಯುವಂತೆ ಆ ಗರ್ಭಿಣಿ ನಡೆಯುತ್ತಿದ್ದಳಂತೆ.

ಹೆಣ್ಣಿಗೆ ತವರಿನ ವ್ಯಾಮೋಹ ಹೆಚ್ಚು. ಹುಟ್ಟಿದಾಗಲೇ ಹೆಣ್ಣು ಪರರ ವಸ್ತು. ತಾಯಿಯ ಮನೆಯಲ್ಲಿ ಎಷ್ಟೇ ದಿನವಿದ್ದರೂ ಒಂದಲ್ಲ ಒಂದು ದಿನ ಆಕೆ ಗಂಡನ ಮನೆಗೆ ಹೋಗಲೇಬೇಕು. ಮಗಳಿಗೆ ಮದುವೆ ಮಾಡಿ ಕೊಟ್ಟ, ಭಾರ ನೀಗಿಕೊಂಡ ಸಂತಸ ತಂದೆ-ತಾಯಿಗಳಿಗೆ ಇದ್ದರೂ ಅವಳನ್ನು ಗಂಡನ ಮನೆಗೆ ಕಳಿಸಿಕೊಡುವಾಗ ಆಗುವ ವೇದನೆ ಅಪಾರ. ಆಗ ತಾಯಿಗೆ ಹೆಣ್ಣು ಮಕ್ಕಳನ್ನೇ ಹಡೆಯಬಾರದಿತ್ತು ಎನಿಸುತ್ತದೆ.

ಹೆಣ್ಣು ಹಡೆಯಲಿ ಬ್ಯಾಡ ಹೆರವರಿಗೆ ಕೊಡಬ್ಯಾಡ
ಹೆಣ್ಣು ಹೋದಾಗ ಅಳಬ್ಯಾಡ ಹಡೆದವ್ವ
ಸಿಟ್ಟಾಗಿ ಶಿವಗ ಬೈಬ್ಯಾಡ

ಗಂಡನ ಮನೆಗೆ ಹೋದ ಹೆಣ್ಣಿಗೆ ಯಾವಾಗಲೂ ತೌರಿನ ನೆನಪು. ತೌರು ಎಂದ ಕೂಡಲೇ ಮಧುರವಾದ ಭಾವನೆಗಳ ತಂಪು ನೆರಳಿನ ಅನುಭವವಾಗುತ್ತದೆ. ತನ್ನನ್ನು ಎಷ್ಟೇ ಪ್ರೀತಿಸುವ ಅತ್ತೆ ಸಿಕ್ಕಿದರೂ ಕೂಡ ತನ್ನ ತಾಯಿಯ ಸಮಾನ ಯಾರೂ ಬರಲಾರರು.

ಯಾರು ಇದ್ದರು ನಿನ್ನ ತಾಯವ್ವನ್ಹೋಲರು
ಸಾವಿರ ಕೊಳ್ಳಿ ಒಲಿಯಾಗ ಒಲಿಯಾಗ
ಇದ್ದರೂ ಜ್ಯೋತಿ ನಿನ್ನಾರು ಹೋಲರು

ತಾಯಿ ಜ್ಯೋತಿಯ ಹಾಗೆ. ಉಳಿದವರೆಲ್ಲ ಒಲೆಯೊಳಗಿನ ಕೊಳ್ಳಿ ಇದ್ದ ಹಾಗೆ. ಜ್ಯೋತಿ ಒಂದು ಪವಿತ್ರವಾದ ಶಕ್ತಿಗೆ ಜ್ಯೋತಕ.- ಆಕೆಯ ಪ್ರೀತಿ ಮಾತುಗಳು ಆಕೆಯ ನೆನಪೇ ತಂಪು.

ಬೇಸಿಗೆ ದಿವಸಕ ಬೇವಿನ ಮರತಂಪು
ಭೀಮರಥಿಯೆಂಬ ಹೊಳೆತಂಪು ಹಡೆದವ್ವ
ನೀ ತಂಪು ನನ್ನ ತವರಿಗೆ.

ತಾಯಿಯನ್ನು ನೆನೆದರೆ "ಮಾಸೀದ ತಲೆಯು ಮಡಿಯಾಯ್ತು" ಹೆಣ್ಣಿಗೆ ತೌರಿನ ಹಂಬಲ ತಾಯಿ-ತಂದೆಯರ ಹಂಬಲ, ಅಣ್ಣ, ಅಕ್ಕ, ತಮ್ಮ, ತಂಗಿಯರ ಮೇಲಿನ ಪ್ರೀತಿ ಹೋಗುವುದಿಲ್ಲ. ಎಂಬಾದರೂ ತೌರಿಗೆ ಹೋಗಬೇಕಾದ ಪ್ರಸಂಗ ಬಂದರೆ ಆಸೆಗೆ ಆಗುವ ಆನಂದ

ತೌರೂರ ದಾರಿಯಲಿ ಮುಳ್ಳಿಲ್ಲ
ಕಲ್ಲಿಲ್ಲ ಸಾಸಿವೆಯಷ್ಟು ಮರಳಿಲ್ಲ
ದಾರಿಯಲಿ ಬಿಸಿಲಿನ ಬೇಗೆ ಸುಡಲಿಲ್ಲ,

ಆಕೆ ತೌರಿಗೆ ಹೋಗುತ್ತಿರುವ ಆನಂದದಲ್ಲಿ ಪ್ರಯಾಣದ ಕಷ್ಟವನ್ನು ಮರೆಯುತ್ತಾಳೆ. ತನ್ನ ತೌರಿಗೆ ಸದಾ ಶ್ರೇಯಸ್ಸನ್ನು ಬಯಸುತ್ತಾಳೆ. ಅದು ಎಳೆಗರಿಕೆಯಂತೆ ಹಬ್ಬಲಿ ಎಂದು ಹಾರೈಸುತ್ತಾಳೆ.

ಹಾಲುಂಡ ತವರೀಗಿ ಏನೆಂದು ಹಾಡಲಿ
ಹೊಳೆದಂಡೇಲಿರುವ ಕರಟೀಯ ಕುಡಿಯಂತೆ
ಹಬ್ಬಲೇ ಅವರ ರಸಬಳ್ಳಿ.

ಹೆಣ್ಣು ಅತ್ತೆಯ ಮನೆಯನ್ನು ಹೊಕ್ಕಿದ ಮೇಲೆ ಅಹಿತವಾದ ಎಷ್ಟೋ ಸಂದರ್ಭಗಳನ್ನು ಎದುರಿಸಬೇಕು. ಅತ್ತಿಗೆ-ನಾದಿನಿಯರ ಕಾಟ, ಅತ್ತೆಯ ಬೈಗುಳ ಮೈದುನಂದಿರ ಕಿರುಕುಳ ಇವೆಲ್ಲವನ್ನೂ ಸಹಿಸಬೇಕು. ತನ್ನ ತವರನ್ನು ಹಂಗಿಸುವ ಎಷ್ಟೋ ಮಾತುಗಳನ್ನು ಕೇಳಬೇಕು. ತನ್ನ ಗಂಡ ಬೈದರೆ ಆಕೆ ಸಹಿಸುತ್ತಾಳೆ. ಪ್ರೀತಿಸುವವನಿಗೆ ಬೈಯ್ಯುವ ಹಕ್ಕೂ ಇರುತ್ತದೆ. ಅದೇ ಆಕೆ ತನ್ನ ಮೈದುನನ ಬಾಯಿಗೆ ಸಿಕ್ಕಿ ಅತ್ತಿಗೆ ಹೇಳುತ್ತಾಳೆ.

ಮಾರಾಯ್ರು ಬೈದಾರೆ ಬಾರಾವು ಕಣ್ಣೀರು
ಮಾರಾಯ್ರು ತಮ್ಮ ಮೈದುನ ಬೈದರೆ
ಮೂಡಿಲ್ದ ಮಳೆಯು ಸುರಿದ್ಹಂಗೆ,

ಒಬ್ಬ ಹೆಣ್ಣು "ಸಾವಿರಾ ಕೊಟ್ಟರೂ ಸವತಿಯ ಮನಿಬೇಡ" ಎಂದರೆ ಮತ್ತೊಬ್ಬ ಹೆಣ್ಣಿಗೆ ತನ್ನ ಗಂಡ ಬೇರೊಬ್ಬಳ ಕೂಡ ನಗುತ್ತಿದ್ದ" ಎಂಬ ಸುದ್ದಿ ಬಂದಾಗ ಆಕೆ ಕೊಡುವ ಉತ್ತರ ಮಾರ್ಮಿಕವಾದ್ದು.

ನಾ ಮುಚ್ಚಿ ಮುಡಿದ ಪರಿಮಳದ
ಆ ಹೂವ ಅವಳೊಂದ ಗಳಿಗೆ ಮುಡಿಲೇಳು.

ಎನ್ನುತ್ತಾಳೆ. ತನ್ನ ಪತಿಯ ಬಗೆಗೆ ಆಕೆಗೆ ಸಿಟ್ಟಿಲ್ಲ. ಎಂದಿದ್ದರೂ ತನ್ನ ಬಳಿಗೆ ಆತ ಬಂದೇ ಬರುತ್ತಾನೆ. ತನ್ನ ಪತಿಯ ಸಂಗವನ್ನೇ ಆ ಹೆಣ್ಣು ಅನುಭವಿಸಲಿ ಎಂಬ ಉಧಾರಭಾವ.

ಜನಪದ ಸಾಹಿತ್ಯದಲ್ಲಿ ಹೆಣ್ಣಿನ ಪಾತ್ರ ಇಷ್ಟೇ ಅಲ್ಲ ಅವಳು ತ್ಯಾಗಿ ಕೂಡ. ಊರಿನ ಹಿತಕ್ಕಾಗಿ, ಜನರ ಉಪಯೋಗಕ್ಕಾಗಿ ಕೆಲವು ಕೆಲಸಗಳನ್ನು ಊರ ಹಿರಿಯರು ಗೊಂಡಾಗ ಕೈಎಷ್ಟೋ ಅಡ್ಡಿ ಆತಂಕಗಳು ಬರುವುದು ಸಹಜ. ಕೆರೆಯನ್ನು ಕಟ್ಟಿಸಿದರೆ ನೀರೆ ಬರದಿರುವುದು. ಊರಹಿತಕ್ಕಾಗಿ ಭದ್ರತೆಗೆ ಕೋಟೆಯನ್ನು ಕಟ್ಟಿಸಿದರೆ ಬಾಗಿಲುಬಾಡವೇ ನಿಲ್ಲದಿರುವುದು. ಇಂತಹ ಸಂದರ್ಭಗಳಲ್ಲಿ ದೇವರಿಗೆ ಯಾವುದೋ ವಿಷಯದಲ್ಲಿ ಅತೃಪ್ತಿಯಾಗಿರಬೇಕೆಂಬ ಕಾರಣದಿಂದಲೋ ಅಥವಾ ನರಬಲಿ ಬೇಕೆಂಬ ಕಾರಣದಿಂದಲೋ ಹೆಣ್ಣು ಪ್ರಾಣಾರ್ಪಣೆ ಮಾಡಿದ ಸಂದರ್ಭಗಳಿವೆ. ಇದಕ್ಕೆ ಉದಾಹರಣೆಗಳು ಸಿಗುತ್ತವೆ. ಅನೇಕ ಮಾಸ್ತಿಕಲ್ಲುಗಳು ಕೂಡ ಇವೆ. ಜನಪದ ಸಾಹಿತ್ಯದಲ್ಲಿ ಹೆಣ್ಣು ಪ್ರಾಣಾರ್ಪಣೆ ಮಾಡಿದ ಅನೇಕ ಕಥನಗೀತಗಳು ಸಿಗುತ್ತವೆ. "ಕೆರೆಗೆ ಹಾರ"ದ ಕಥೆಯಲ್ಲಿನ ಭಾಗೀರಥಿ, ಗರತಿ ಗಂಗವ್ವ ಮುಂತಾದ ಕಥೆಗಳಲ್ಲಿ ಹೆಣ್ಣಿನ ಉದಾತ್ತ ತ್ಯಾಗದ ಹೃದಯಸ್ಪರ್ಶಿ ವರ್ಣನೆ ಇದೆ.

"ಗರತಿಯ ಹಾಡು" ನಮ್ಮ ಸ್ತ್ರೀಯರ ಜೀವನದ ತಿರುಳು. ಜನಪದ ಮಹಿಳೆ ತ್ಯಾಗಮಯ, ಪತಿಗೆ ತಕ್ಕ ಸತಿಯಾಗಿ, ಮಕ್ಕಳಿಗೆ ತಾಯಿಯಾಗಿ, ಹುಟ್ಟಿದ ಮನೆ

ಯನ್ನು ಬಿಟ್ಟು ಆದರ ಶ್ರೇಯಸ್ಸನ್ನೇ ನೆನಸುತ್ತ ಕೊಟ್ಟ ಮನೆಗೆ ಬೆಳಕಾಗುತ್ತಾಳೆ. ಬಡತನ, ಸಿರಿತನವನ್ನು ಆಕೆ ಲೆಕ್ಕಿಸುವುದಿಲ್ಲ. ಉಳಿದವರ ಸಂತೋಷದಲ್ಲಿ ತನ್ನ ದೇಹ ಶ್ರಮವನ್ನು ಮರೆಯುತ್ತಾಳೆ. ಆಕೆಯ ಇಡೀ ಬದುಕು ಬೇರೆಯವರ ಸುಖ–ಸಂತೋಷಕ್ಕೆ ಮೀಸಲು. ಹಾಡು, ಗಾದೆ, ಲಾವಣಿ, ಕಥನ ಗೀತೆಗಳಲ್ಲಿ ಹೆಣ್ಣಿನ ಪಾತ್ರವೇ ಹೆಚ್ಚು. ತಾಯಿ ತನ್ನ ಮಗಳನ್ನು ಗಂಡನ ಮನೆಗೆ ಕಳಿಸಿಕೊಡುವಾಗ ಹೇಳುವ ಬುದ್ಧಿ ಮಾತುಗಳು ಗಮನೀಯವಾದ್ದು. ಬೇರೆಯವರ ಸುಖ-ಸಂತೋಷಕ್ಕೆ ಮೀಸಲಾದ ಹೆಣ್ಣಿನ ಬದುಕನ್ನು ಜಾನಪದ ಸುಂದರವಾಗಿ ಈ ತ್ರಿಪದಿಯಲ್ಲಿ ಹೇಳಿದೆ.

**ಹೆಣ್ಣಿನ ಜನ್ಮವು ಸುಣ್ಣಾಗಿ ಕುದಿಯಲಿ**
**ಕಲ್ಲುಗಾಣದಲಿ ನುರಿಯಲಿ ಪರಮಾತ್ಮ**
**ದೀಪದೆಣ್ಣೆಯು ತೆರ ಉರಿಯಲಿ.**

---

ಮಲಗುವ ಮನೆಯಲ್ಲಿ ರಾಟೆ, ಜಿನ್ನು (ಮದ್ಯ) ವಿಲಪಿಸುತ್ತಿದೆ. ನಡುಮನೆಯಲ್ಲಿ ಸೋದರಿ ನಿನಗಾಗಿ ದುಃಖಿಸುತ್ತಿದ್ದಾಳೆ, ಹಿತ್ತಿಲಲ್ಲಿ ಮಗ್ಗ ಮುಲುಗುತ್ತಿದೆ. ಈ ವಿಷಾದವೆಲ್ಲ ಎಲೆ ಹುಡುಗಿ ! ನಿನ್ನ ವಿವಾಹ ನಿಶ್ಚಯವಾದಾಗಿನಿಂದ ಕಣೆ !

ಅಯನಾಮ್ (ಅಸ್ಸಾಮಿ ಕವಯಿತ್ರಿ)

# ಬಿರುಕು

ಬಿರುಕು ಬಿಟ್ಟ ಗೋಡೆ, ಹಾರಿಬಿದ್ದ ಹೆಂಚು,
ಮುರುಕು ಬಾಗಿಲು
ಅಸ್ಪಷ್ಟ ಚಿತ್ತಾರದ ಹೊಸಿಲು
ಮಸುಕು ಮಸುಕಾದ ಬಿಸಿಲು
ಜೇಡ ಬಾವುಲಿಯ ವಾಸ ಒಳಗೆ ಛಿದ್ರ ಛಿದ್ರ
ಏಕಸೂತ್ರತೆಯು ಹರಿದ ಅನೇಕತೆಯ ಛತ್ರ
ಈ ಮನೆಯ ಒಡೆಯು ಮತ್ತಾರೋ ?
ಹಗಲೆಲ್ಲ ಜಾರಿ
ಬಾಳೆಲ್ಲ ಸೋರಿ
ಆಗಿತ್ತು ಗೋರಿ
ಆಗ ಬದುಕಿನ ರಿಪೇರಿ
ಮೇಕಪ್ ಮಾಡಿದ ಮನೆ
ಹೊರಗೆಲ್ಲ ಬಣ್ಣ ಬಣ್ಣ
ಬಿಟ್ಟಿದ್ದ ಬಿರುಕ ಮುಚ್ಚಿಕೊಂಡಿತ್ತು ಗೋಡೆ ಹೊರಗೆ
ಪೊಟರೆಯ ಜಾಳಿನಂತೆ ಒಳಗೆ
ತುಳಿತಗಳ ತಿಂದ ಮೆಟ್ಟಿಲು
ಒದರಿಕೊಂಡು ನಿಲ್ಲಲು
ಚಿತ್ತಾರ ಕರಗಿದ ಹೊಸಿಲು
ಮೇಲೆ ಮುಸುಕಾಗಿ ಬಿದ್ದ ಬಿಸಿಲು ಹೇಳುತ್ತಿತ್ತು
ಮನೆಯೊಳಗೆ ಮನೆಯೊಡೆಯ ಬಂದಿರುವನೋ ಏನೋ?

—ಟಿ. ಆರ್. ಶಾಂತಕುಮಾರಿ

# ಹೆಣ್ಣು

ಹೆಣ್ಣೇ ನೀನೆಷ್ಟು ಚದುರೆ
ನೀನಿಲ್ಲದ ಚದುರ ನಮ್ಮಲಿಲ್ಲ
ಮಂಡನನಾ ಮಂಡನಕೇ
ಮಡ್ಡಳಾಗಿ ನೀ ಬರಲೇಬೇಕು
ಆದರೂ ದೂರು ನಿನಗೆ ತಪ್ಪದು!
ಮಾರಮಾರಿಯು
ಹೇಷಾರವ
ನಿನ್ನ ಮನ ಮುಟ್ಟುತ್ತಿದ್ದರೂ
ನಾರಿಯಸೊಲ್ಲು
ಷಂಡನ ಮುಂದೆ ನರ್ತಿಸಿದಂತಲ್ಲವೇ ?
ಕೆನ್ನೀರಿನ ಬಿಂದು ಬಿಂದುವಿನಲ್ಲೂ
ಗಂಡೆಂಬ ಅಹಂ ತುಂಬಿ
ಹೆಣ್ಣೆಂದರೆ ತುರಗ ನಾಗುವ
ತಾಯಿಯ ಮಗನೇ
ಲಿಂಗತ್ರಯರಾಗಿ
ಲುಂಗಿಯನುಟ್ಟು
ಪಣಕೆ ಇಳಿದಾಗ
ಪಾಣ್ಬಗನಾಗಿ ಓಡೋಡಿ ಬರುವರ್‍ಯಾರು ?
ವೇದಕಾಲದ
ವೇದಾವತಿ
ಅನುಸೂಯರಂತಹ
ಚಿರಕಾಲದ ನಾಡು
ಮತ್ತೆ ಮತ್ತೆ
ಬುರುಕಾದ ನಾಡಾದೀತೆ ?
ಬತ್ತಿಹೋದ ನದೀಲಿ
ಮೀನ ಹಿಡಿದ್ಲಂಗೆ
ಟೊಂಗೆಯ ನಪ್ಪಿನಿಂತಾ
ಬೇರಿಲ್ಲದಾ ಬಳ್ಳಿಗೆ
ಖಡ್ಗವನೂರಿ
ಹೋಮ ಮಾಡಲು
ಹೊರಟಾಗ
ಹೆಗ್ಗಳಿಕೆಗೆ ಹೆಡಕಟ್ಟಾಗದೇ ?

—ಹೇಮಲತಾ ಪರಶುರಾಂ




—ಎಚ್. ಎಸ್. ಪಾರ್ವತಿ

ವಾರಸುದಾರರಿಲ್ಲದ ಬೀದಿ ನಾಯಿಂಗಳಿಗೆ ದಾರಿ ತೋರಲು ಕಾರ್ಪೊರೇಶನ್ ಇದೆ. ಆದರೆ ಕಾರಿಗೆ ಸಿಕ್ಕಿ ಕುಂಟಾದ ನಾಯಿಗೆ ?

'ಕುಯ್ ಕುಯ್........'

"ಗುರ್... ರ್ರ್ರ ರ್ರ್ರ...."

"ಬೌವ್ ಬೌವ್......"

ಶುರುವಾಯ್ತಪ್ಪ ನಾಯಿಗಳ ಕಾಟ. ಮಕ್ಕಳೆಲ್ಲಾ ಮಲಗಿದರು. ವಾತಾವರಣ ನಿಶ್ಶಬ್ದವಾಗಿದೆ. ಏನಾದರೂ ಓದಿ-ಬರೆದು ಮಾಡೋಣ ಅನ್ನೋ ಹೊತ್ತಿಗೆ ಶುರುವಾಗಿ ಬಿಡುತ್ತೆ ಈ ನಾಯಿಗಳ ಬಗುಳಾಟ, ಕಿರಿಚಾಟ.. ರಾತ್ರಿ ಆಯ್ತು ಅಂದರೆ ನಾಯಿಗಳ ಸಂಸಾರವೆಲ್ಲಾ ನಮ್ಮನೇ ಕಾಪೌಂಡಿನೊಳಗೇ. ಎಲ್ಲ ಇವಳಿಂದಾನೇ !....ಮಿಕ್ಕಿದಾಗಲೆಲ್ಲಾ ಅನ್ನ ಹಾಕಿ ಹಾಕಿ ಅವು ಸದಾ ಇಲ್ಲೇ ಬಿದ್ದುಕೊಂಡಿರೋ ಅಭ್ಯಾಸ ಮಾಡಿಕೊಂಡಿದಾವೆ....ಸಾಲದ್ದಕ್ಕೆ ಈ ಮಕ್ಕಳಿಗೂ ಅವುಗಳ ಮೇಲೆ ಎಲ್ಲಿಲ್ಲದ ಅಭಿಮಾನ !....ತೆಪ್ಪಗಾದರೂ ಬಿದ್ದು ಕೊಂಡಿದ್ದರೆ ಹಾಳಾಗಿ ಹೋಗಲಿ ಅನ್ನಬಹುದು !....ಆದರೆ ಸುಮ್ಮನಿರೋ ಜಾತಿಯೇ ಇದು ! ಗಳಿಗೆಗೊಂದು ಸಲ ಅಪಸ್ವರದಲ್ಲಿ ಆಲಾಪ್ !

"ಲೇ ! .... ಓಡಿಸ್‌ಬಾರದೇನೇ ಆ ಹಾಳು ಮುಂಡೇವನ್ನ !"

"ನಿಮ್ಮದ್ಯಾಕೋ ವಿಪರೀತ ಆಯ್ತು ಅಂದರೆ... ಬೀದೀಲಿ ನಾಯಿ ಬಗುಳಿದರೂ ತೊಂದರೆ ಆಗುತ್ತೆ ಅಂದರೆ ಹೇಗೆ ! ನಿಮ್ಮಂತಹವರು ಯಾವು ಯಾವುದಾದರೂ ಕಾಡಿನಲ್ಲಿ ಹೋಗಿ ಇರಬೇಕಪ್ಪ ... ಹೂಂ....ಅಲ್ಲೂ ನಿಮಗಿಂತ ಮುಂಚೆನೇ ಯಾವುದಾದರೂ ಪ್ರಾಣಿಗಳು ಬೀಡು ಬಿಟ್ಟಿರುತ್ವೆ. ಈಚೀಚೆಗಂತೂ ನಿಮ್ಮದ್ಯಾಕೋ ವಿಪರೀತವಾಗಿ ಹೋಗಿದೆ.

"ಸುಮ್ಮನೆ ಚರ್ಚೆ ಮಾಡಬೇಡ, ಈಗೇನು ಅವನ್ನ ಓಡಿಸ್ತೀಯೋ, ನಾನೇ ಬರಬೇಕೋ ?"

ಇವಳು ಗೊಣಗಿಕೊಂಡೇ ಎದ್ದು ಹೋದಳು. "ಹಚ್... ಹಚ್" ಎಂದು ಅಟ್ಟಿದ ಶಬ್ದ ಕೇಳಿಸಿತು. ಕೇಳಿಸಿತು. ನಾಯಿಗಳ ಕುಯ್ ಕುಯ್ ಧ್ವನಿಯೂ ಕ್ರಮೇಣ ದೂರವಾಯಿತು. ಅಬ್ಬ ! ಇನ್ನರ್ಧ ಗಂಟೆಯಂತೂ ಭಯವಿಲ್ಲ. ಮತ್ತೆ ಯಾವ ಮಾಯದಲ್ಲೋ ಒಳಗೆ ಬಂದು ಬಿದ್ದುಕೊಂಡಿರುತ್ತವೆ. ಹ್ಞೂ....ಇವೆಲ್ಲಾ ಎಷ್ಟೋ ವರ್ಷಗಳಿಂದ ಮಾಮೂಲೇ... ಆದರೆ ಇವಳು ಹೇಳಿದ ಹಾಗೆ ಇತ್ತೀಚೆಗೆ ನನಗೆ ಆ ನಾಯಿಗಳ ಮುಖ ಕಂಡರೆ ಬೇಸರ ! ಧ್ವನಿ ಕೇಳಿದರೆ ಕಸಿವಿಸಿ !

ಹೌದು, ಮೊದಲು ತಾನು ಹೀಗಿರಲಿಲ್ಲ. ಬೀದಿಯ ನಾಯಿ ಬಗುಳಿದರೂ ಕೆಡುವಷ್ಟು ತನ್ನ ಮನಸ್ಸು ದುರ್ಬಲವಾಗಿರಲಿಲ್ಲ. ಆದರೆ ಆ ದಿನ ...

ಓಡಾಡುವುದಕ್ಕೆಂದು ತಾನು ಕೊಂಡದ್ದು ಒಂದು ಸೆಕೆಂಡ್ ಹ್ಯಾಂಡ್ ಕಾರು. ಆ ಕಾರಿಗೆ ಯಾವಾಗಲೂ ಬ್ರೇಕಿನ ತೊಂದರೆ ಮಿಕ್ಕ ರಸ್ತೆಗಳಲ್ಲಿ ಹೇಗೂ ವಾಸಿ, ಮನೆ ಮೂಲೆಯಲ್ಲಿ ಕಾರು ತಿರುಗಿಸುವುದೇ ಒಂದು ಪ್ರಯಾಸ. ಸಣ್ಣ ರಸ್ತೆ... ಸಾಲದ್ದಕ್ಕೆ ಬೀದಿಯ ಹುಡುಗರಿಗೆಲ್ಲಾ ರಸ್ತೆಯೇ ಆಟದ ಮೈದಾನ. ನಿಮಿಷಕ್ಕೊಬ್ಬ ಹುಡುಗ ಕಾರಿಗೆ ಬಡ್ಡ ಬರುತ್ತಾನೆ. ಈ ಎಲ್ಲ ತೊಂದರೆಗಳನ್ನು ದಾಟಿಕೊಂಡು ಕಾರನ್ನು ಮನೆಯ ಕಾಂಪೌಂಡಿನೊಳಗೆ ಬಿಟ್ಟರೆ ದೊಡ್ಡ ಸಾಹಸದ ಕೆಲಸ ಮಾಡಿದಂತೆ! ಆವತ್ತು ನಡೆದದ್ದೂ ಹಾಗೆಯೇ! ಇನ್ನೇನು ಬಾಗಿಲಿಗೆ ಬಂದೆ ಎನ್ನುವಷ್ಟರಲ್ಲಿ ಮಗುವೊಂದು ಅಡ್ಡ ಬಂತು. ತಕ್ಷಣ ಬ್ರೇಕು ಹಾಕಿದ ರಭಸಕ್ಕೆ ಕಾರು ಹಿಂದೆ ಸರಿದಂತಾಯಿತು .... ಜೊತೆಗೆ ನಾಯಿಮರಿಯೊಂದು ಕರುಳು ಕತ್ತರಿಸುವಂತೆ ಕಿರುಚಿದ ಶಬ್ದ, ಒಂದೇ ಸೆಕೆಂಡಿನಲ್ಲಿ ರಸ್ತೆಯ ಹುಡುಗರೆಲ್ಲಾ ಗುಂಪು ಗೂಡಿದರು. ಕೊಡ ನೀರು ಸುರಿದಂತೆ ನನ್ನ ತಲೆ ಮುಖಗಳಿಂದ ಬೆವರು ಸುರಿಯಿತು. ಚಕ್ರ ನಾಯಿಮರಿಗೆ ತಗಲುವ ಬದಲು ಒಂದು ಮನುಷ್ಯ ಶಿಶುವನ್ನು ಕೆಡುವಿದ್ದರೆ ಎನ್ನುವ ಕಲ್ಪನೆಯಿಂದಲೇ ಕಣ್ಣಿಗೆ ಕತ್ತಲು ಕಟ್ಟಿದಂತಾಯಿತು. ಸುತ್ತ ನೆರೆದಿದ್ದ ಹುಡುಗರು ನಾಯಿಮರಿಯನ್ನು ಎತ್ತಿಕೊಂಡು ಬಂದರು. ನೀರು ತಟ್ಟಿದರು. ಔಷಧಿ ಹಾಕಿದರು. ಆದರೂ ಮರಿ ಕಣ್ಣು ತೆರೆಯಲಿಲ್ಲ. ಹುಡುಗರೆಲ್ಲಾ ಅದು ಸಾಯುವ ಸಮಯವನ್ನೇ ಕಾದರು ನಮ್ಮ ಮನೆಯ ಪುಟ್ಟು, ಶಾಮುವೂ ತುಂಬಾ ನಿಷ್ಠೆಯಿಂದ ಅದರ ಸೇವೆ ಮಾಡಿದರು. ಈ ಎಲ್ಲದರ ಪರಿಣಾಮ ನಾಯಿಮರಿ ಬದುಕಿತು. ಅದರ ಒಂದು ಕಾಲು ಮಾತ್ರ ಲೊಟಕ್ಕೆಂದಿತ್ತು. ಎಂಟು ದಿನಗಳ ಮೇಲೆ ಕುಂಟಿಕೊಂಡು ಓಡಾಡುವಂತಾಯಿತು! (ಸುಡುಗಾಡು ನಾಯಿ! ಸತ್ತಾದರೂ ಹೋಗಬಾರದಾಗಿತ್ತೆ!) ಮನೆಯವರ ಉಪಚಾರ ಜಾಸ್ತಿಯಾದಂತೆ ಮರಿ ಮನೆಯ ಅಂಗಳದಲ್ಲೇ ಓಡಾಡುವುದೂ ಜಾಸ್ತಿಯಾಯಿತು. ಬೆಳಗಾದರೆ ಆ ನಾಯಿಯ ದರ್ಶನ! ಅದರ ತುಂಟತನದ ದರ್ಶನ! ಅದರ ಆ ತುಂಟತನಕ್ಕೆ ತಾನೇ ಕಾರಣ ಎನ್ನುವ ಅರಿವಿನ ಪ್ರಜ್ಞೆ! ರಾತ್ರಿಯಾದರೆ ಅದರ ಕುಯ್‌ಗುಟ್ಟುವಿಕೆ....

ನೋಡ ನೋಡುತ್ತಿದ್ದಂತೆ ಮರಿ ಬೆಳೆದು ದೊಡ್ಡದಾಯಿತು. ಬೆಳವಣಿಗೆಯ ಶಕ್ತಿಯನ್ನು ಕಳೆದುಕೊಂಡಿದ್ದ ಒಂದು ಕಾಲು ಮಾತ್ರ ವಿಕಾರವಾಗಿ ನೇತಾಡುತ್ತಿರುತ್ತಿತ್ತು. ಸುಡುಗಾಡು ನಾಯಿ! ಕಾಲು ಮುರಿದ ಎನ್ನುವ ದ್ವೇಷಕ್ಕಿಂತ ಔಷದಿ ಹಾಕಿ ಉಪಚರಿಸಿದ. ಆಹಾರ ಕೊಟ್ಟ ಎನ್ನುವ ಕೃತಜ್ಞತೆಯೇ ಹೆಚ್ಚು? ಎಷ್ಟಾದರೂ ನಾಯಿ ಬುದ್ಧಿ!

ಅದೋ ಮಂದ್ರಸ್ಥಾಯಿಯಲ್ಲಿ ಶುರುವಾಯಿತು 'ಕು ಂ ಯ್' 'ಕುಂಯ್' ಧ್ವನಿ.... ಇದ್ಯಾವುದೋ ಸಂಗಾತಿ 'ಗುರ್ ಗುರ್' ಎನ್ನುತ್ತಿದೆ!.... ಹ್ಞೂಂ.... ಅದಕ್ಕೆ ನೋಡ ನೋಡುತ್ತಿದ್ದ ಹಾಗೇ ಆರು ತಿಂಗಳಲ್ಲಿ ಆರೇಳು ಮರಿಗಳು! ಹೆಜ್ಜೆ ಇಟ್ಟಲ್ಲಿ ಕಾಲಿಗೆ ತೊಡರುತ್ತಿದ್ದವು... ಅವುಗಳ ಹಿಂದೆ ಬಾಲ ಅಲ್ಲಾಡಿಸುತ್ತಾ! ಕಾಲು ಎಳೆಯುತ್ತಾ ಬರುತ್ತಿತ್ತು ಆ ಕುಂಟ ನಾಯಿ! ಆ ಕಣ್ಣುಗಳಲ್ಲೋ ಕೃತಜ್ಞತೆಯ ಮಹಾಸಾಗರವೇ ಅಡಗಿದೆಯೇನೋ ಎನ್ನುವಂತಹ ನೋಟ!.... ಸುಡುಗಾಡು ಬದುಕು ಕುಂಟಾದರೂ ಪರವಾಗಿಲ್ಲ ನಾವು ಬೇಡ ಎನ್ನುವ ಹೇಸಿಬುದ್ಧಿ! ಆ ಬದುಕಿಗೆ ಕಾರಣರಾದವರೆಲ್ಲರ ಹಿಂದೆ ಬಾಲ ಅಲ್ಲಾಡಿಸುತ್ತಾ ತಿರುಗುವ ಬಾಲ ಬಡುಕತನ!....

....ಥೂ! ಥೂ! ಯೋಚನೆ ಎಲ್ಲಿಂದ ಎಲ್ಲಿಗೋ ಹೋಯಿತು. ಹೀಗಾದರೆ ಈ ಬಾರಿ ನಾನು ಬರೆಯಬೇಕೆಂದುಕೊಂಡಿರುವ ಗ್ರಂಥವೂ ನಾಯಿಬಾಲದಂತೆ ಡೊಂಕಾಗಿಯೇ ಆಗುತ್ತದೆ. ಅಷ್ಟೇ! ಆದರೆ ಏನು ಮಾಡಲಿ! ಮುಂದೆ ಇಲ್ಲದಿದ್ದಾಗಲೂ ಸ್ಪಷ್ಟವಾಗಿ ಒಡಮೂಡಿ ನಿಲ್ಲುವ ಈ ನಾಯಿಯನ್ನು ದೃಷ್ಟಿಪಥದಿಂದ ದೂರ ತಳ್ಳುವುದು ಹೇಗೆ? ಅದರ ಕೃತಜ್ಞತೆಯನ್ನು, ಅದರ ವಿಕಲತೆಯನ್ನು ಮನಸ್ಸಿನಿಂದ ಅಳಿಸಿ ಹಾಕುವುದು ಹೇಗೆ? ಇದೊಳ್ಳೆ ಪೀಡೆ ಗಂಟು ಬಿತ್ತಲ್ಲಾ!.... ನಿಮಿಷವೂ ಬಿಡದೆ ಕಾಡುವ ಏಳುರಾಟೆ ಶನಿ!....

ಹ್ಞಾಂ.... ಇದಕ್ಕೊಂದೇ ಉಪಾಯ!

ಹೌದು!

ವಾರಸುದಾರರಿಲ್ಲದ ಬೀದಿನಾಯಿಗಳಿಗೆ ದಾರಿ ತೋರಿಸಲು ಕಾರ್ಪೊರೇಷನ್ ಇದೆಯಲ್ಲಾ?

ಮಾರನೆಯ ದಿನ ಕಾಲೇಜಿಗೆ ಹೋದಕೂಡಲೇ ನಾನು ಮೊದಲು ಮಾಡಿದ ಕೆಲ್ಸ ಕಾರ್ಪೊರೇಷನ್ನಿಗೆ ಫೋನ್ ಮಾಡಿದ್ದು.... ಕಂಪ್ಲೇಂಟ್ ಕೊಟ್ಟದ್ದು.... ಈ ರಸ್ತೆಯಲ್ಲಿ ಬೀದಿ ನಾಯಿಗಳ ಕಾಟ ವಿಪರೀತ ಎಲ್ಲವೂ ಮನೆಗೆ ನುಗ್ಗುತ್ತವೆ. ರಾತ್ರಿಯೆಲ್ಲಾ ನಿದ್ದೆಯಿಲ್ಲ... ಇತ್ಯಾದಿ ಇತ್ಯಾದಿ.... ಅದಕ್ಕೂ ಇನ್‌ಫ್ಲೂಯನ್ಸ್ ಬೇರೆ! ದೇವರ ದಯ! ಲಂಚವೊಂದು ಕೊಡಲಿಲ್ಲ.

ಕೆಲಸ ಮುಗಿಸಿ ಸಂಜೆ ಮನೆಗೆ ನಾ ಬಂದಕೂಡಲೇ ದೊಡ್ಡ ವರದಿಯೇ ಕಾದಿತ್ತು. ಮನೆಯಾಕೆ ಹೇಳಿದಳು.

ರಸ್ತೇಲಿ ಈವತ್ತು ಕಾರ್ಪೊರೇಷನ್ನಿನ ನಾಯಿಗಾಡಿ ಬಂದಿತ್ತು ರೀ! ಬೀದಿ ನಾಯಿಗಳನ್ನೆಲ್ಲಾ ಹಿಡಕೊಂಡು ಹೋದರು.... ಪಾಪ! ಅವುಗಳ ಅರಚಾಟ ಕೇಳೋದಕ್ಕೆ ಆಗ್ತಿರಲಿಲ್ಲ. ಕಾಂಪೌಂಡ್ ಒಳಗೆಲ್ಲಾ ನುಗ್ಗಿ ಒಂದನ್ನೂ ಬಿಡದೆ ಎಳೆದುಕೊಂಡು ಹೋದರು.

"ಒಂದನ್ನೂ ಬಿಡದೆ?" ನನ್ನ ದನಿಯಲ್ಲಿ ನನಗೇ ಅರಿವಿಲ್ಲದಂತೆ ಹರ್ಷದ ಎಳೆ ಕಾಣುತ್ತಿತ್ತು?

"ಹೋಗಲಿ ಬಿಡು ರಾತ್ರಿ ನಿಶ್ಚಿಂತೆಯಾಗಿ ನಿದ್ದೆ ಮಾಡಬಹುದು!"

ಆಕೆ ಆಕ್ಷೇಪಣೆಯ ಸ್ವರವೆತ್ತಿದಳು.

"ಓ! ಕಂಪ್ಲೇಂಟ್ ಕೊಟ್ಟವರು ನೀವೇನೋ!"

"ಛೇ! ಛೇ! ನಾನ್ಯಾತಕ್ಕೆ ಕೊಡೋದಕ್ಕೆ ಹೋಗಲಿ!

ಕಂಪ್ಲೇಂಟ್ ಕೊಟ್ಟಿದ್ದು ನಾನೇ ಎಂದು ಆಕೆಯ ಮುಂದೆ ಒಪ್ಪಿಕೊಳ್ಳಲು ನನ್ನ ಮನಸ್ಸು ಸಿದ್ಧ ವಿರಲಿಲ್ಲ.

ಆ ರಾತ್ರಿ ನನಗೆ ಸುಖನಿದ್ದೆ! ಕುಂಯ್ ಕುಂಯ್ ಗುರ್ ಗುರ್ ಧ್ವನಿಯಿಲ್ಲದ ರಾತ್ರಿ! ಪೂರ್ತಿ ನಿಶ್ಶಬ್ದ ಎಂದೇನೂ ಹೇಳುವಂತಿಲ್ಲ. ಒಂದೆರಡು ಬಾರಿ ನಾಯಿಯ ಬಗಳುವಿಕೆ ನಿದ್ದೆಯ ಪಾತಾಳದಿಂದ ಕೇಳಿಸಿದ ನೆನಪು!.... ಬಹುಶಃ ಕನಸಿರಬೇಕು!

ಬೆಳಗ್ಗೆ ಖುಶಿಯಾಗಿಯೇ ಎದ್ದೆ. ಬೇಗ ಬೇಗ ಕಾಫಿ ತಿಂಡಿ ಮುಗಿಸಿದೆ.

"ಶ್ಯಾಮು ಕಾರು ಶೆಡ್‌ನಿಂದ ತೆಗೆದಿಡೋ" ಎಂದು ಕೂಗಿದ್ದಾಯ್ತು.

ಟಿಪ್ ಟಾಪಾಗಿ ಟೈ ಸರಿಪಡಿಸಿಕೊಳ್ಳುತ್ತಾ ರಸ್ತೆಗೆ ಬಂದೆ.

ಙ್ಞಂ? ಇದೇನು?

ಎದುರಿಗೆ?

ಹೌದು!

ಕಣ್ಣೊಳಗೆ ಕೃತಜ್ಞತೆಯ ಸಮುದ್ರ! ಬಾಲ ಅಲ್ಲಾಡಿಸುತ್ತಾ, ಕಾಲೆಳೆಯುತ್ತಾ ಹತ್ತಿರ ಬಂದು ನನ್ನ ಬೂಡ್ಸ್ ಕಾಲನ್ನು ಮೂಸಿನೋಡಿತು ಕುಂಟನಾಯಿ!

---

# ಅ. ಪೋ. ಸ. (ರಿ)

—ಪುಷ್ಪಾ ರಘುರಾವ್

## ಮುನ್ನುಡಿ

ಸಂಗೀತೋಪಾಸನೆಯನ್ನು ಮಾಡುವವರು ಸಂಗೀತಗಾರರು ಮಾತ್ರ ಅಂತ ಅನೇಕ ಜನರು ಭಾವಿಸಿದರೆ ಶ್ರೋತೃಗಳೂ ಅಷ್ಟೇಮಟ್ಟಿಗೆ ಸಂಗೀತ ಸರಸ್ವತಿಯ ಭಕ್ತರು ಅಂತಲೂ ಕೆಲವರ ವಾದ. ಆ ಶ್ರೋತೃಗಳಲ್ಲಿ ಎರಡು ಗುಂಪು. ಒಂದು "ಸಂಗೀತಸ್ಥ"ರದು ಇನ್ನೊಂದು "ಅಸಂಗೀತಸ್ಥ"ರದು (ಸಂಗೀತತೆಯ, ಸಂಗೀತ ವಂಶ ಏನು ಬೇಕಾದರೂ ಕರೆಯಬಹುದು. ಆದರೆ ಸಂಗೀತಸ್ಥ ಅನ್ನೋ ನಾಮಪದವೇ ಸರಿ ಅಕ್ಷರಜ್ಞಾನ ಉಳ್ಳವನು ಅಕ್ಷರಸ್ಥ—ಸಂಗೀತ. ಜ್ಞಾನ ಉಳ್ಳವನು ಸಂಗೀತಸ್ಥ. ವಿದ್ಯೆಯ ಜ್ಞಾನವಿಲ್ಲದವನು ಅವಿದ್ಯಾವಂತ. ಅದೇ ರೀತಿ ಸಂಗೀತ ಜ್ಞಾನ ಇಲ್ಲದಿರುವವನು ಅಸಂಗೀತಸ್ಥ.) ಸಂಗೀತಗಾರರಿಗೆ ಹಾಡುವುದಕ್ಕೆ ಒಂದು ಕಂಠ ಮಾತ್ರ ಇದ್ದರೆ ಸಂಗೀತಸ್ಥರಿಗೆ ಅವರು ಹಾಡಿದ್ದನ್ನ ಕೇಳುವುದಕ್ಕೆ 'ಎರಡು' ಕಿವಿ ಇದೆ. ಸಂಗೀತಸ್ಥರಿಗೆ ಸಂಗೀತ ಜ್ಞಾನ ಬಹಳ. ಅವರು ಎಂತಹ ಸಂಗೀತಗಾರರು ಹಾಡಿದರೂ ಅವರು ಹಾಡುತ್ತಿರುವುದು ಇಂತಹದೇ ರಾಗ, ಇಂತಹವರು ಬರೆದಿರುವ ಕೀರ್ತನೆ ಇಂತಹುದೇ ಸ್ವರ ಅಂತ ಗುರ್ತೇಟ್ ಹೇಳಿಬಿಡುತ್ತಾರೆ, ಅವರಿಗೆ ಹಾಡುವುದಕ್ಕೆ ಬರುವುದಿಲ್ಲ ಎನ್ನುವುದು ಒಂದೇ ಹೊರತು ಸಂಗೀತಗಾರರಿಗಿಂತ ಅವರು ಸಂಗೀತೋಪಾಸನೆಯನ್ನು ಒಂದು ಪಟ್ಟು ಹೆಚ್ಚೇ ಮಾಡುತ್ತಾರೆ ಎಂದು ಹೇಳಬಹುದು. ಅಸಂಗೀತಸ್ಥರಿಗೆ ಸಂಗೀತ ಅಜ್ಞಾನ ತುಂಬಾ ಹೆಚ್ಚಾದರೂ ಅಂತಹವರಿಲ್ಲದೆ ಇದ್ದರೆ ಸಂಗೀತ ಸಭೆಗಳೂ, ಗಾಯನ ಸಮಾಜಗಳೂ ನಿರ್ಜೀವವಾಗಿರುತ್ತದೆ. ಪೂಜಾರಿಯಿಲ್ಲದ ದೇವರ ಗುಡಿಯಂತೆ.

## ನುಡಿ

ರಾಮು, ಶ್ಯಾಮು, ಭೀಮು, ರಘು, ಮಧು, ಸುಂದ್ರು, ನಾಣಿ, ಚಂದ್ರು, ಗೋಪು, ಲಲ್ಲೂ, ಗೀತು, ಸಂಧ್ಯ ಇವರೆಲ್ಲಾ ಹೆಸರಾಂತ ಅಸಂಗೀತಸ್ಥರು. ಇವರೆಲ್ಲ ಸೇರಿ ತಮ್ಮ ಸಂಗೀತೋಪಾಸನೆ ಶ್ರೀಸಾಮಾನ್ಯನಿಗೆ ವೇದ್ಯವಾಗಬೇಕಾದರೆ ಒಂದು ಸಭೆಯನ್ನು ಸ್ಥಾಪಿಸಲೇಬೇಕು ಎಂದು ದೃಢನಿರ್ಧಾರಕ್ಕೆ ಬಂದು ಅದಕ್ಕೆ "ಅಸಂಗೀತಸ್ಥ ಪೋಷಕರ ಸಭೆ" ಎಂದು ನಾಮಕರಣ ಮಾಡಿ ಅದನ್ನು ಕಾನೂನು ಬದ್ಧವಾಗಿ 'ರಿಜಿಸ್ಟರ್' ಮಾಡಿಸಿದರು. ನಂತರ ಅದು "ಅ. ಪೋ. ಸ.(ರಿ)" ಎಂದು ಹೆಸರಾಂತವಾಯಿತು. ರಾಮು, ಸ್ಥಾಪಕಾಧ್ಯಕ್ಷ, ಶ್ಯಾಮು ಸ್ಥಾಪಕಾರ್ಯದರ್ಶಿ, (ಕ+ಕಾ=ಕಾ ಸವರ್ಣದೀರ್ಘ ಸಂಧಿ), ಭೀಮು ಸ್ಥಾಪಕೋಪಕಾರ್ಯದರ್ಶಿ (ಕ+ಉ=ಕೋ ಗುಣ ಸಂಧಿ), ಅಧಾರಾಳಿ ಲಲ್ಲೂ ಖಜಾಂಚಿ. ಎಲ್ಲರೂ ಒಮ್ಮತವಾಗಿ ಚುನಾಯಿಸಲ್ಪಟ್ಟವರೇ. ಇವರೆಲ್ಲಾ ತಿಂಗಳಿಗೆ ಒಂದು ಸಲವಾದರೂ ಯಾವುದಾದರೂ ಒಬ್ಬ ಸದಸ್ಯನ ಮನೆಯಲ್ಲಿ ಸೇರಿ ಸಭೆಯನ್ನು ನಡೆಸುವುದು ಪದ್ಧತಿ.

ಆ ರೀತಿ ನಡೆದ ಒಂದು ಸಮ್ಮೇಳನದಲ್ಲಿ ಎರಡು ಮುಖ್ಯವಾದ ವಿಷಯಗಳ ಮೇಲೆ ನಡೆದ ವಿಚಾರ ವಿನಿಮಯ ಕೆಳಕಂಡಂತಿದೆ.

ಮೊದಲನೆಯ ವಿಷಯ : ಸಂಗೀತ ಸಭೆಯಲ್ಲಿ ಅಸಂಗೀತಸ್ಥರ ಚಟುವಟಿಕೆಗಳ ಬಗ್ಗೆ ಸಂಭಾಷಣೆ ವಿಚಾರ ವಿನಿಮಯ.

ಸಲಹವಂತ (ಸಲಹೆ ಕೊಡುವುದರಲ್ಲಿ ನಿಪುಣನಾದ) ಮಧು ಸಭೆಯ ಮೌನವನ್ನು ಮುರಿದ. ನಾವೆಲ್ಲಾ

ಸಂಗೀತ ಸಭೆಗಳಿಗೆ ಅನಿವಾರ್ಯವಾಗಿ ಹೋಗಲೇಬೇಕಾದ ಸಂದರ್ಭಗಳು ಎಷ್ಟೋ ಸಲ ಒದಗುತ್ತದೆ. ಆಗ ನಾವು ಸಾಕಷ್ಟು ಹಣ್ಣಾದ ಟೊಮೆಟೋಗಳನ್ನು, ಮೊಟ್ಟೆಗಳನ್ನು, ಎಲ್ಲ ರಸ್ತೆಗಳಲ್ಲೂ ಧಾರಾಳವಾಗಿ ಸಿಗುವ ಜಲ್ಲಿ ಕಲ್ಲುಗಳನ್ನೂ ಕೈಗಳ ತುಂಬಾ, ಇಲ್ಲವೇ ಚೀಲದ ತುಂಬ ತೆಗೆದುಕೊಂಡು ಹೋಗುವುದು ಒಳ್ಳೆಯದು !

ರಸಿಕ ಸುಂದ್ರು ಸಲಹೆ ನೀಡುವುದರಲ್ಲೂ ಏನೂ ಕಮ್ಮಿ ಇಲ್ಲ. ಗಾಯನಸಭೆಗಳಲ್ಲಿ ದೂರಕುಳಿತು ಹಲವರ ಸೌಂದರ್ಯೋಪಾಸನೆಯನ್ನು ಮಾಡಲು ಒಳ್ಳೆಯ ಸದವಕಾಶ ಅಕಸ್ಮಾತ್ ದೃಷ್ಟಿ–ದೃಷ್ಟಿ ಮಿಲಾಯಿಸಿದರೆ ಅಥವ ಮೈಗೆ ಮೈ ತಗುಲಿದರೇ ಪ್ರೇ (ಕಾ)ಮೋಪಾಸನೆಗೂ ಅನುಕೂಲ ಎಂದ. ಮಾತಿನಮಲ್ಲ ರಘುವಂತೂ ಇತರ ಅಸಂಗೀತಸ್ಥರೊಂದಿಗೆ ರಾಷ್ಟ್ರದ ರಾಜಕೀಯದಿಂದ ಹಿಡಿದು ತನ್ನ ಪಕ್ಕದ ಮನೆಯ ಗೋಪಿವಲ್ಲಭಾಚಾರ್ಯರು ನಿನ್ನೆ ದೇವಸ್ಥಾನದ ರಸ್ತೆಯಲ್ಲಿ ನಡೆಸಿದ ಕಾಲಕ್ಷೇಪದ ವಿಷಯದವರೆಗೂ ಟೀಕೆ ಟಿಪ್ಪಣಿಗಳನ್ನು ಮಾಡಲು ಸಂಗೀತ ಕಛೇರಿಗಳು ಒಳ್ಳೆ ಸುಯೋಗವನ್ನು ಕಲ್ಪಿಸಿಕೊಡುವುದು ಎಂದು ತನ್ನ ಅಭಿಪ್ರಾಯವನ್ನು ಸಭೆಯ ಮುಂದಿಟ್ಟ. ಜೇಬುಗಳ್ಳ ಗೋಪು ಸುಪ್ರಸಿದ್ಧ ಸಂಗೀತಗಾರರು ಹಾಡುವ ದಿನ ಆದಷ್ಟು ಸಂಪಾದಿಸಿ ಹೊಟ್ಟೆ ಹೊರೆದುಕೊಳ್ಳುವುದನ್ನು ಗಮನಿಸಬೇಕು ಎಂದು ವಾದಿಸಿದ. ಸಂಪ್ರದಾಯ ಪ್ರಿಯ ಚಂದ್ರು ಇವರೆಲ್ಲರ ಸಲಹೆಗಳನ್ನು ಕೇಳಿ ಸ್ಫೂರ್ತಿಗೊಂಡು ತಾನೂ ಎದ್ದು ಕಛೇರಿ ಮುಗಿಯುವ ವೇಳೆಗೆ ಹಲವು ಜೊತೆ ಹೊಸ ಚಪ್ಪಲಿಗಳನ್ನು ಛತ್ರಿಗಳನ್ನು ಜಮಾವಣೆ ಮಾಡುವ ಪದ್ಧತಿಯನ್ನು ಅಸಂಗೀತಸ್ಥರು ಅನೂಚಾನವಾಗಿ ನಡೆಸಿಕೊಂಡು ಬಂದಿರುವರು ಎಂದು ನುಡಿದು ಅಷ್ಟು ಜನರೆದರು ಮಾತನಾಡಿದ ಭಯದಿಂದ ಬಂದ ಬೆವರನ್ನು ಒರೆಸುತ್ತಾ ಕುಳಿತ. ನಾನು ಕುಂಭಕರ್ಣನ ಮನೆತನಕ್ಕೆ ಸೇರಿದವ ಸಂಗೀತ ಸಭೆಗಳಲ್ಲಿ ಕುಳಿತು ಹಾಗೆಯೇ ಕಣ್ಣು ಮುಚ್ಚಿದರೆ ಆಗುವ ಆನಂದಕ್ಕೆ ಎಣೆಯಿಲ್ಲ. ಹಾಗಾದಾಗ ಆಗಾಗ್ಗೆ ತಲೆ ತನ್ನ ಭುಜದ ಮೇಲೆ, ಅಥವ ಪಕ್ಕದಲ್ಲಿ ಕುಳಿತ ಪರಿಚಿತ–ಅಪರಿಚಿತರ ಭುಜದ ಮೇಲೋ ವಾಲುವುದು ವಾಡಿಕೆ. ಮೂಗಿನಿಂದಲೂ ಲಯಬದ್ಧವಾಗಿ ಉಸಿರು ಬಿಡಬಹುದು ಎಂದು ಅವನ ಮತ.

ಸಲಹೆಗಳನ್ನು ನೀಡುವುದರಲ್ಲಿ ಹೆಂಗಸರು ಹಿಂದೆಯೇ ? 'ತಮ್ಮ ಅತ್ತೆ ನಾದಿನಿಯರ ಬಳಿ ತಮಗಿರುವ ಸೌಹಾರ್ದತೆಯ ಬಗ್ಗೆ ಆದರೆ ಆ ಅತ್ತೆ ನಾದಿನಿಯರಿಗೆ ತಮ್ಮ ಮೇಲೆ ಇರುವ ಅಸಹನೆ, ಊರಿನಲ್ಲಿ ಪ್ರದರ್ಶನವಾಗಿರುವ ಚಲನ ಚಿತ್ರಗಳ ಮೇಲೆಲ್ಲ ನಿರರ್ಗಳವಾಗಿ ಚರ್ಚೆ ಮಾಡಬಹುದು' ಎಂದು ಲಲ್ಲೂ ಗೀತು ನಗೆಯಾಡಿದರು. ಸಂಧ್ಯ ಸುಮ್ಮನಿರುವಳೇ ? ಅಲ್ಲಿ ಬಂದಿರುವ ಇತರ ಸ್ತ್ರೀಯರ ಕೇಶಾಲಂಕರವನ್ನು ಕಲಿಯಬಹುದು, ಚೆನ್ನಾಗಿ ಕಾಣುವ ಸೀರೆಗಳ ಬೆಲೆಗಳನ್ನು, ಅವುಗಳನ್ನು ಕೊಂಡಿದ್ದ ಅಂಗಡಿಗಳ ವಿಳಾಸಗಳೊಂದಿಗೆ ಅವುಗಳ ಮೇಲೆ ದೊರೆತ ಡಿಸ್ಕೌಂಟ್‌ನ್ನು ಅರಿತುಕೊಳ್ಳಬಹುದು ಎಂದು ಧ್ವನಿಗೂಡಿಸಿದಳು up-to-date ಸಂಧ್ಯ. "ಅಯ್ಯಂಗಾರ ಪುಳಿಹೋರೆ ಮಾಡುವ ವಿಧಾನವಾಗಲಿ, ಮಾಧ್ವರು ಬಿಸಿಬೇಳೆ ಹುಳಿ ಅನ್ನ ಮಾಡುವ ವಿಧಾನವಾಗಲಿ ಇತರ ಹೆಂಗಸರೊಂದಿಗೆ ಕೇಳಿ ತಿಳಿದುಕೊಳ್ಳಲು ಇದು ಸುಸಂಧರ್ಭವಲ್ಲವೆ ?" ಹಿಂಜರಿಯುತ್ತಲೇ ಸೂಚಿಸಿದಳು ನೂತನ ಸದಸ್ಯೆ ನೀಲು.

ವಿಚಾರ ವಿನಿಮಯ ಮುಂದುವರಿಯುತ್ತಲೇ ಹೋಯಿತು. ಸ್ಥಾಪಕಾಧ್ಯಕ್ಷ ರಾಮು ಮೊದಲ ವಿಷಯದ ಮೇಲೆಯೇ ಆದ ಕಾಲವ್ಯಯದ ಮೇಲೆ ಎಲ್ಲರ ಗಮನವನ್ನು ಸೆಳೆದು, ಅದನ್ನು ಅಲ್ಲಿಗೆ ನಿಲ್ಲಿಸಬೇಕೆಂದು ಕೋರಿ, ಸಭೆಗೆ ಎರಡನೆ ವಿಷಯವನ್ನು ಮುಂದಿಟ್ಟ.

ಎರಡನೆಯ ವಿಷಯ : ಸಭೆಯ ಸದಸ್ಯತ್ವವನ್ನು ಹೆಚ್ಚಿಸುವ ಬಗೆ.

ಸದಸ್ಯರೆಲ್ಲಾ ಏನೂ ಮಾತನಾಡಲು ತೋಚದೆ ಮೌನವಾಗಿ ಕುಳಿತರು. ಇದ್ದಕ್ಕಿದ್ದಂತೆ ಒಂದು ಬಾಂಬ್ ಆಸ್ಫೋಟವಾದಂತೆ ಶಬ್ದ ಕೇಳಿಸಿತು. ಭೀಮು ನಿಂತು ಗಂಟಲು ಸರಿಮಾಡಿಕೊಂಡ ಶಬ್ದ ಅದು. 'ಮೊದಲು ಇರುವುದನ್ನ ಉಳಿಸಿಕೊಳ್ಳಿರಿ. ಆಮೇಲೆ ಹೊರಗಡೆಯಿಂದ ಸದಸ್ಯರನ್ನ ಕರೆಸ್ತೀರಂತೆ' ಎಂದ.

ಅವನು ಹೇಳಿದುದು ಯಾರಿಗೂ ವೇದ್ಯವಾಗಲಿಲ್ಲ. "ಹಾಗಾದ್ರೆ?" ಪ್ರಶ್ನೆ ಉಳಿಸಿದ ಚಂದ್ರು.

"ಈಚೀಚೆಗೆ ಹಳೇ ಸಂಗೀತದ ಕಾಲ ಮುಗೀತಾ ಬರ್‍ತಿದೆ. ಈಗ ಹೊಸ ಸಂಗೀತ ಬರ್‍ತಿದೆ. "ಪಾಪ್" ಓ "ಗೀಪ್" ಓ ಅಂತಾರಲ್ಲ ಅಂಥ ಸಂಗೀತ. ಅದರಲ್ಲಿ

ಕೇಳುವವರೇ ಇಲ್ಲವಂತೆ. ಎಲ್ಲಾ ಹೇಳುವವರೇನೆ ಅಂತ. ರಂಗದ ಮೇಲೆ ನಿಂತು ಒಬ್ಬ ಆರಂಭಿಸಿದರೆ ಸಾಕು ಹಾಡೋಕ್ಕೆ ಕೆಳಗಡೆ ಕುಂತವರೆಲ್ಲ ನಿಂತು ಅವನ ಜೊತೆ ಕೈ ಚಪ್ಪಾಳೆ ತಟ್ತಾ, ಕಾಲು ಕುಟ್ತಾ, ತಲೆ ಆಡಿಸ್ತಾ, ಅವರ ಕರ್ಕಶ ಧ್ವನೀನೂ ಕೂಡಿಸ್ತಾರಂತೆ. ಹಾಗಂದ ಮೇಲೆ ಎಲ್ಲರೂ ಸಂಗೀತಜ್ಞರೇ ಆದ ಹಾಗಾಯತು. ಈ ತರಹ ಸಂಗೀತದ ಮೋಜಿಗೆ ನಮ್ಮ ಸದಸ್ಯರೂ ಸೇರಿ ಕೊಂಡರೆ ನಮ್ಮ ಸಭೇನ ಇಷ್ಟರಲ್ಲೆ ಮುಚ್ಚಬೇಕಾಗ್ತದೆ. ಅದರ ವಿಚಾರ ಆಲೋಚಿಸಿ ಮೊದಲು ಎಂದು ಗುಡುಗಿದ ಭೀಮು.

ಸದಸ್ಯರೆಲ್ಲಾ ತಲೆ ಮೇಲೆ ಕೈ ಹೊತ್ತು ಕುಳಿತರು. ಸಲಹವಂತ ಮಧು ಈ ಸಲವೂ ಮೊದಲಿಗನಾಗಿ ಸಲಹೆ ನೀಡಿದ. ಸದಸ್ಯರಿಗೆ ಬಿರುದು ಬಾವಲಿಗಳ ಅಥವ ಸುವರ್ಣ ರಜತ ಪದಕಗಳ ಆಕರ್ಷಣೆ ನೀಡಿದರೆ ಸದಸ್ಯರು ಹೊರಗೆ ಹೋಗುವುದಿಲ್ಲ, ಹೊರಗಿನವರೂ ಹೊಸ ಸದಸ್ಯರಾಗಬಹುದು ಅಂತ ನಿರೀಕ್ಷಿಸಿದ ಮಧು ಸರಿ ಯಥಾಪ್ರಕಾರ ರಸಿಕ ಸುಂದ್ರು ಮುಂದುವರಿಸಿದ. "ಹೌದು ನಮ್ಮ ಮಧು ಹೇಳುವುದು ನಿಜ, ಸದಸ್ಯರ ಸಂಗೀತ ಅಜ್ಞಾನದ ಮೇರೆಗೆ ತಕ್ಕಂತೆ ಹಲವು ಬಿರುದು ಗಳನ್ನು ನೀಡಬಹುದು. ಅಸಂಗಿತ ವಿಶಾರದ, ಅಸಂಗಿತ ಕೋವಿದ, ಅಗಾನ್ ಕಲಾವಿಶಾರದ, ಸಂಗೀತ ಅವಿಭೂಷಿ .... ಪಟ್ಟಿ ಬೆಳೆಯುತ್ತಲೇ ಹೋಯಿತು.

ಈ ಸಲಹೆಗೆ ಸಭೆಯ ಎಲ್ಲರ ಸಮ್ಮುಕವೂ ದೊರೆ ಯಿತು.

ಮಾತಿನಮಲ್ಲ ರಘು ಮತ್ತೊಂದು ಸಲಹೆಯನ್ನು ನೀಡಿದಿ. "ಇದುವರೆವಿಗೂ ನಾವು ಕೂಪಮಂಡೂಕ ದಂತೆ ನಮ್ಮ ಚಟುವಟಿಕೆಗಳನ್ನು ಮುಂದುವರಿಸುತ್ತಿ ದ್ದೇವೆ. ವಿದೇಶಗಳಲ್ಲಿ ಅಸಂಗಿತಜ್ಞರ ಬಗ್ಗೆ ನಾವು ಯಾವ ವಿಷಯಗಳನ್ನೂ ಅರಿತುಕೊಂಡಿಲ್ಲ. ಅದಕ್ಕಾಗಿ ಸದಸ್ಯ ರನ್ನ ವರ್ಷಕ್ಕೆ ಒಮ್ಮೆ ಒಬ್ಬರನ್ನಾದರೂ ವಿದೇಶ ಪ್ರಯಾ ಣಕ್ಕೆ ಸಭೆಯ ಖರ್ಚಿನಲ್ಲಿ ಕಳುಹಿಸಿದರೆ, ನಮ್ಮ ಅ. ಪೊ. ಸಭೆಗೆ ಹೊರಗಿನಿಂದ ನಾನು, ತಾನೆಂದು ಹೊಸ ಸದಸ್ಯರು ಬರುತ್ತಾರೆ ಎಂದ. ಸದಸ್ಯರು ಒಂದು ಕ್ಷಣ ಸ್ಥಂಭೀ ಭೂತರಾದರು. ಈ ಹೊಸ "ಕೋಣದಿಂದ ಎಲ್ಲರೂ ವಿಷಯವನ್ನು ವೀಕ್ಷಿಸಿದರು. ವಿದೇಶ ಪ್ರವಾಸಕ್ಕೆ ತಮಗೆ ಯಾವಾಗ ಛಾನ್ಸ್ ಸಿಗುವುದೋ ಎಂದು ಎಲ್ಲರ ಕುತೂಹಲ. ಅಧಾರಾಳಿ ಲಲ್ಲೂ ಮಾತ್ರ ಈ ವಿಷಯ ವನ್ನು ಕೇಳಿ ಯೋಚನಾಕ್ರಾಂತಳಾದಳು. ಅವಳಲ್ಲವೇ ಖಜಾಂಚಿ, ಅವಳು ಯೋಚನಾಸಕ್ತಳಾಗುವುದು ನ್ಯಾಯವೇ ?

"ಇದೆಲ್ಲಾ ಮಾತನಾಡುವುದು ಸುಲಭ, - ಇಂತಹ ಯೋಜನೆಗೆ ಹಣ ಹೇಗೆ ಹೊಂದಿಸುವುದು ? ಸಭೆಯ ಆರ್ಥಿಕ ಪರಿಸ್ಥಿತಿ ಅಷ್ಟು ಅನುಕೂಲವಾಗಿಲ್ಲದೆ ಇರುವುದು ಎಲ್ಲರಿಗೂ ತಿಳಿದ ಅಂಶವೆ." ಲಲ್ಲೂವಿನ ಈ ಮಾತು ಅನೇಕರ ಉತ್ಸಾಹಕ್ಕೆ ನೀರೆರೆಚಿತು. ಚಲನಚಿತ್ರ ಪ್ರಿಯೆ ಗೀತುವಿಗೆ ಒಂದು ಐಡಿಯ ಮಿಂಚಿನಂತೆ ಹೊಳೆ ಯಿತು. "ಒಂದು ಬೆನಿಫಿಟ್ ಶೋ ಸಿನಿಮಾ ಹಾಕಿ ದರೆ ?"........"ಟಿಕೇಟ್ ಮಾರುವವರು ಯಾರೋ ?" ಸಂಧ್ಯ ನಡುವೆ ನುಡಿದಳು. "ಆ ಜವಾಬ್ದಾರಿ ಎಲ್ಲರಿಗೂ ಸೇರಿದ್ದು" ಗೀತು ತಟ್ಟನೆ ಉತ್ತರವಿತ್ತಳು.

"ಅದಕ್ಕಿಂತ ಸುಲಭವಾದ ಸಲಹೆ ನಾನು ಹೇಳಿ ದರೆ........"ಅಂತ ನಾಣೂ ಪ್ರಾರಂಭಿಸುತ್ತಿರುವಂತೆಯೇ ಎಲ್ಲರೂ ಅವನತ್ತ ದೃಷ್ಟಿ ಹಾಯಿಸಿದರು. "ಪ್ರಾಂತ, ಸರ್ಕಾರ, ಕೇಂದ್ರ ಸರ್ಕಾರದಂತೆ ನಾವೂ ಲಾಟರಿ ಅಥವಾ ಉಳಿತಾಯ ಯೋಜನೆಯನ್ನು ಪ್ರಾರಂಭಿಸಿದರೆ...."

ನಾಣೂ ಇನ್ನೂ ಮುಗಿಸಲೇ ಇಲ್ಲ. "ಲಾಟರಿ ಗೀಟರಿಯಲ್ಲಿ ನನಗೆ ಸ್ವಲ್ಪವೂ ನಂಬಿಕೆಯಿಲ್ಲ" ಆಜನ್ಮ ದುರದೃಷ್ಟಶಾಲಿ ನೀನು ಗೊಣಗಿದ.

ಸಭೆ ಮುಕ್ತಾಯವಾಗುವ ಸಮಯ ಮೀರಿತ್ತು, ಸದಸ್ಯರು ಅಸಹನೆಯಿಂದ ಗಡಿಯಾರ ನೋಡಿಕೊಳ್ಳ ತೊಡಗಿದರು. ಭೀಮು ತನ್ನ ಕರ್ತವ್ಯ 'ವಂದನಾರ್ಪಣೆ' ಯನ್ನು ಮಾಡಲು ಎದ್ದು ನಿಂತು ಕೈ ಎತ್ತಿ ಸಭೆಯಲ್ಲಿನ ಗದ್ದಲವನ್ನು ನಿಲ್ಲಿಸಿದ. "ಈಗಾಗಲೇ ಹೊತ್ತಾಯಿತು. ಅಧ್ಯಕ್ಷರ ಪರವಾಗಿ ನಾನು ಹೇಳೋದೇನೆಂದರೆ ಈ ವಿಷಯವನ್ನ ಬರೋ ತಿಂಗಳು ನಡೆಯೋ ಮೀಟಿಂಗ್ ನಲ್ಲಿ ಮತ್ತೆ ಸದಸ್ಯರ ಮುಂದೆ ಇಡ್ತೇವೆ. ಆಗ ನೀವು ಯಾವುದಕ್ಕೂ ತೀರ್ಮಾನಕ್ಕೆ ಬರಬಹುದು. ನಿಮಗೆಲ್ಲ

ನನ್ನ ಪರವಾಗಿಯೂ, ಅಧ್ಯಕ್ಷರ ಪರವಾಗಿಯೂ ವಂದನೆಗಳು* ಅ. ಪ್ರೋ. ಸ. (ರಿ.) ಯ ಧ್ಯೇಯಗಳಿಗೆ ರಾಷ್ಟ್ರಗೀತೆಯನ್ನು ನಿಂತು ಹಾಡುವುದಾಗಲಿ, ಕೇಳುವುದಾಗಲಿ ವಿರುದ್ಧವಾದ್ದರಿಂದ ಸದಸ್ಯರು ಹಾಗೆಯೇ ಚದುರಿದರು.

ಹಿನ್ನುಡಿ

ಅಸಂಗೀತಸ್ಥರು ಸಂಗೀತೋಪಾಸನೆಯನ್ನು ಯಾವ ಯಾವ ರೀತಿ ಮಾಡುತ್ತಾರೆ ಅನ್ನುವ ವಿಷಯದ ಮೇಲೆ ವಾಚಕರ ಅಭಿಪ್ರಾಯಗಳೇನಾದರೂ ಇದ್ದರೆ ದಯವಿಟ್ಟು ಅದನ್ನು ಅ.ಪ್ರೋ.ಸ.(ರಿ.)ಯ ಸ್ಥಾಪಕಾಧ್ಯಕ್ಷ ರಾಮುಪಿಗೆ ಕೂಡಲೇ ಪತ್ರಮೂಲಕ ಅರಿಕೆ ಮಾಡಿಕೊಳ್ಳಬೇಕಾಗಿ ನನ್ನ ನಮ್ರವಿನಂತಿ ಹಾಗೂ ಹೆಚ್ಚು ಹೆಚ್ಚು ಅಸಂಗೀತಸ್ಥರು ಸ್ವಪ್ರೇರಣೆಯಿಂದಲೋ, ಇಲ್ಲ ದೈವ/ಮಾನವ ಪ್ರೇರಣೆಯಿಂದಲೋ, ಅ.ಪ್ರೋ.ಸ.(ರಿ.)ಗೆ ಸದಸ್ಯ/ಆಜೀವ ಸದಸ್ಯ/ಹಿತೈಷಿಗಳಾಗಿ ಸೇರಿ ಸಭೆಗೆ ಹೃತ್ಪೂರ್ವಕವಾದ ಬೆಂಬಲವನ್ನು ನೀಡಿ ಅದನ್ನ 'ಏಕಮೇವ ನದ್ವಿತೀಯ' ಸಭೆಯನ್ನಾಗಿ ಮಾಡಬೇಕಾಗಿ ನನ್ನ ಸವಿನಯ ಪ್ರಾರ್ಥನೆ.

---

# ‘ಹೊರ ನಾಡಿನಲ್ಲಿ ಕನ್ನಡ ಮಹಿಳೆ’

—ನೀರಜಾ ಅಚ್ಯುತರಾವ್

ಹುಟ್ಟಿ ಬೆಳೆದದ್ದು ಕನ್ನಡ ನಾಡು. ಮಾತನಾಡಿದ್ದು, ಓದಿದ್ದು ಬರೆದಿದ್ದು ಕನ್ನಡ. ಅತ್ತೆಯ ಮನೆಗೆ ಬಂದ ಮೇಲೆ ತೌರು ಮನೆ ಎಂದರೆ ಏನೆಂಬುದು ಸ್ಪಷ್ಟವಾಗಿ ತಿಳಿಯುವಂತೆ, ತೌರೂರಾದ ಕನ್ನಡ ನಾಡನ್ನು ಬಿಟ್ಟು, ನೆರೆಯ ನಾಡಿಗೆ ಬಂದು ನಮ್ಮದೇ ಮನೆ, ನಮ್ಮದೆ ಜೀವನವನ್ನು ರೂಪಿಸಿಕೊಳ್ಳುವಾಗ, ಪ್ರತಿ ಹೆಜ್ಜೆಗೂ ತೌರೂರನ್ನೂ, ಕನ್ನಡವನ್ನೂ, ಜ್ಞಾಪಿಸಿಕೊಳ್ಳುವಂತಾಗುತ್ತದೆ. ‘ಹೊರ ನಾಡಿನಲ್ಲಿ ಕನ್ನಡ ಮಹಿಳೆ’ ಎಂದಾಗ ‘ನಾನಿರುವುದು ಕನ್ನಡ ನಾಡಿನಿಂದ ಹೊರಗೆ ; ಆದರೆ ನಾನು ಕನ್ನಡತಿ’ ಎಂಬ ಕನ್ನಡತನ ಜಾಗೃತಿವಾಗುತ್ತದೆ ಭಾರತದ ಹಲವು ರಾಜ್ಯಗಳಿಂದ ಬಂದು ನೆಲೆಸಿದ ಜನರ ನಡುವೆ ನಮ್ಮ ಊರು ನಮ್ಮ ಭಾಷೆ ಹಾಗೂ ನಮ್ಮ ಪದ್ಧತಿಗಳನ್ನು ಉಳಿಸಿಕೊಂಡು, ಪೋಷಿಸಿಕೊಂಡು ಬರುವುದು ಸಹಜವಾಗಿದೆ.

ಹೊರನಾಡಿಗೆ ಬಂದ ಹೊಸತರಲ್ಲಿ ಅಲ್ಲಿನ ಭಾಷೆ ತಿಳಿಯದೆ ಇತರರೊಡನೆ ವ್ಯವಹರಿಸುವುದು ಕಷ್ಟವೇ ಆದರೂ, ಬೇರೆ ಭಾಷೆಯನ್ನು ಕಲಿಯಲು ಉತ್ಸಾಹ ತೋರಿ, ನೆರೆ ಹೊರೆಯುವರ ಸ್ನೇಹ ಗಳಿಸಿ ಅವರಿಂದಲೂ, ಸ್ವಯಂ ಬೋಧಿನಿಗಳ ಸಹಾಯದಿಂದಲೂ ಅಲ್ಲಿನ ಭಾಷೆಯನ್ನು ಕನ್ನಡ ಮಹಿಳೆ ಬೇಗ ಕಲಿಯಲು ಪ್ರಯತ್ನಿಸುತ್ತಾಳೆ. ಭಾಷೆ ಎಲ್ಲ ಸಂಸ್ಕೃತಿಗಳಿಗೂ ಮೂಲ. ಭಾಷೆಯನ್ನು ಪರಿಚಯಮಾಡಿ ಕೊಂಡರೆ ಅಲ್ಲಿನ ವ್ಯವಹಾರ ನಡತೆ ಆಚಾರಗಳು ತಾವಾಗಿಯೇ ಪರಿಚಯವಾಗುತ್ತವೆ.

ನೆರೆಯ ನಾಲ್ವರು ಗೆಳತಿಯರು ಸೇರಿದಾಗ, ನೀವು ಯಾರೂರವರು ?’ ಎಂಬ ಪ್ರಶ್ನೆ ಕೇಳಿದರೆ ‘ನಾವು ಮೈಸೂರಿನವರು, ನಾವು ಕನ್ನಡ ಮಾತಾಡುತ್ತೇವೆ. ನಮ್ಮೂರಲ್ಲಿ ಹೆಚ್ಚು ಸೆಖೆಯಾಗುವುದಿಲ್ಲ, ತಂಪಾಗಿರುತ್ತದೆ. ಅಂತೆಯೇ ಕಣ್ಣಿಗೆ ತಂಪಾದ ಬಣ್ಣ ಬಣ್ಣದ ವಿಧ ವಿಧವಾದ ಹೂಗಳೂ, ನಾಲಿಗೆಗೆ ರುಚಿಕರವಾದ ಹಣ್ಣು ತರಕಾರಿಗಳೂ ಸಮೃದ್ಧವಾಗಿರುತ್ತವೆ’ ಎಂದು ಪ್ರವರವನ್ನು ಹೇಳಿಕೊಂಡು ನಮ್ಮ ನಾಡಿನ ರಾಯಭಾರಿಗಳಾಗುತ್ತೇವೆ. ಮಾತು ಹಾಗೇ ನಮ್ಮ ಅಡಿಗೆ, ನಮ್ಮ ಹಬ್ಬ ಹರಿದಿನಗಳು, ನಮ್ಮಲ್ಲಿ ವಿವಾಹ ಪದ್ಧತಿಗಳು ಮುಂತಾದ ಸಾಮಾಜಿಕ ವಿಷಯಗಳ ಬಗೆಗೆ ಹೊರಳುತ್ತದೆ.

‘ಸುಖವನ್ನು ನೆರೆ ಹೊರೆಯೊಡನೆ ಹಂಚಿಕೋ, ದುಃಖವನ್ನು ನೀನೇ ಇಟ್ಟುಕೋ’ —ಎಂಬುದು ಕನ್ನಡ ಮಹಿಳೆಗೆ ಬಹಳ ಮಟ್ಟಿಗೆ ಸರಿಹೊಂದುವ ಹೇಳಿಕೆ. ಈ ಬೆಲೆ ಯೇರಿಕೆಯ ಕಾಲದಲ್ಲೂ ರುಚಿರುಚಿಯಾಗಿ’ ಧಾರಾಳವಾಗಿ ಅಡೆಗೆ ಮಾಡುವುದು ಕನ್ನಡಿತಿಯೇ ಮಾಡಿದ ತಿಂಡಿ ತೀರ್ಥವನ್ನು ಇತರರಿಗೆ ಹಂಚದೆ ತಿನ್ನಲಾರಳು. ಅತಿಥಿ ಸತ್ಕಾರ ಮಾಡುವುದರಲ್ಲಿ ಕನ್ನಡತಿಯದು ಎತ್ತಿದ ಕೈ. ಅದಕ್ಕೆ ಮುಖ್ಯ ಕಾರಣ, ಹುಟ್ಟನಿಂದ ನಮ್ಮ ಪರಿಸರದಲ್ಲಿ ‘ನಾನು–ನನಗಾಗಿ ಮಾತ್ರ’ —ಎಂಬ ಸಂಕುಚಿತ ಭಾವಕ್ಕೆ ಪ್ರಾಧಾನ್ಯ ಕೊಡದೆ ಇರುವುದನ್ನು ಹಂಚಿ ತಿನ್ನುವ ಪರರನ್ನು ಆತ್ಮೀಯರಂತೆ ಕಾಣುವ ಸತ್ಸಂಪ್ರದಾಯ ಬೆಳೆದಿರುವುದು. ಕೈ ಧಾರಾಳವಾಗಿದ್ದರೆ ಸ್ನೇಹಕ್ಕೆ ಸ್ನೇಹಿತರಿಗೆ ಕೊರದೆಯೇ ? ಅಂತೆಯೇ ಕನ್ನಡ ಮಹಿಳೆ ಯಾವುದೇ ಊರಿಗೆ ಹೋದರು ಬೇಗ ಜನರ ವಿಶ್ವಾಸಕ್ಕೆ ಪಾತ್ರಳಾಗುತ್ತಾಳೆ. ತನ್ನ ದಿನಚರಿಯಲ್ಲಿ ಹಲವಾರು ವಿಧದ ಕೆಲಸಗಳಿಗೆ ವೇಳೆಯನ್ನು ವಿನಿಯೋಗಿಸಬಲ್ಲಳು. ಅವಳು ಮಲಗುವುದು ತಡ ಏಳುವುದೂ ತಡ ಎಂಬ

ಕಾರಣ ಮುಂದೆ ಮಾಡಿಕೊಂಡು "ಕನ್ನಡದವರು ಸೋಮಾರಿಗಳು, ಸಿಥಾನಸ್ಥರು" ಎಂದು ಕೆಲವರು ಹೇಳು ವುದುಂಟು. ಆದರೆ ಅವಳು ತನ್ನ ಕೆಲಸವನ್ನು ಮನೆಗಷ್ಟೆ ಮಿತಿಗೊಳಿಸದೆ ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಿಗೂ ಹರಡಿಕೊಳ್ಳುತ್ತಾಳೆ. ವೇಳೆ ವೇಳೆಯೆಂದು ಅವಸರ ಪಡದೆ, ನೆರೆಹೊರೆಯಲ್ಲಿ ಹಲವ ರನ್ನು ಪರಿಚಯ ಮಾಡಿಕೊಂಡು, ಸ್ನೇಹ ಬೆಳಸಿ, ತನ್ನಿಂದ ಆದ ಸಹಾಯವನ್ನು ಮಾಡುವುದು ಕನ್ನಡಿತಿಯ ಹಿರಿಯ ಗುಣ.

ಹಬ್ಬ ಹರಿದಿನಗಳಲ್ಲಿ ವಿಶೇಷ ಪೂಜೆ ವ್ರತಾದಿ ಗಳನ್ನು ನಡೆಸಿ, ಸಂಪ್ರದಾಯಕ್ಕೆ ತಕ್ಕಂತೆ ಭಕ್ಷ್ಯಗಳನ್ನು ಮಾಡಿ ತಿನ್ನುವುದು ಎಲ್ಲರೂ ಮಾಡುವ ಕೆಲಸವೇ. ಒಂದೊಂದು ಹಬ್ಬದಲ್ಲೂ ನೆರೆಹೊರೆಯವರು ಬೇರೆ ರಾಜ್ಯದವರಾಗಿದ್ದರೂ ಅವರಿಗೆ ತಾಂಬೂಲ-ಬಾಗಿನ ಗಳನ್ನು ಕೊಡುವುದೂ, ಆ ಹಬ್ಬದ ಪ್ರಾಮುಖ್ಯತೆಯನ್ನು ವಿವರಿಸುವುದೂ ಕನ್ನಡಿತಿಯೇ. ಕನ್ನಡ ಸಂಘಗಳನ್ನು ರಚಿಸಿಕೊಂಡು ಗಣಪತಿ ಹಬ್ಬ, ನಾಡಹಬ್ಬ, ಯುಗಾದಿ ಇತ್ಯಾದಿ ಉತ್ಸವಗಳಲ್ಲಿ ಕನ್ನಡದ ಹಲವು ಸಂಸಾರಗಳು ಒಂದು ಸೇರಿ ತಮ್ಮ ಸಂಸ್ಕೃತಿಯ ಬಗ್ಗೆ ಇತರರಿಗೆ ಪರಿ ಚಯ ಮಾಡಿಕೊಡಲು ಅತ್ಯಂತ ಸಹಕಾರಿಯಾಗಿವೆ.

ಕನ್ನಡಿಗರು ಸರಳ ಜೀವನವನ್ನು ರೂಪಿಸಿಕೊಂಡು ಹೆಚ್ಚು ಧಾರಾಳಿಗೂ, ಪರೋಪಕಾರಿಗಳೂ ಆಗಿರುತ್ತಾ ರೆಂಬುದಕ್ಕೆ ಮುಖ್ಯಕಾರಣ ಹಣಕಾಸಿನ ಬಗೆಗಿನ ಅವರ ಧೋರಣೆ. ವರದಕ್ಷಿಣೆ ಪಡೆಯುವ ವಿರುದ್ಧ ಸರ್ಕಾರ ಕಾನೂನು ಮಾಡಿದ್ದರೂ ಸಹ, ಭಾರತೀಯರಲ್ಲಿ ಎಷ್ಟು ಜನಾಂಗಗಳು ಆ ದುರಭ್ಯಾಸವನ್ನು ಒಳಗೊಳಗೇ ಉಳಿಸಿ ಕೊಂಡಿಲ್ಲ ! ಇಂತಿಷ್ಟು ಓದಿದವರನಾದರೆ ಇಂತಿಷ್ಟು ಸಾವಿ ರಗಳು ; ವರದಕ್ಷಿಣೆಯ ದರಕ್ಕೆ ತಕ್ಕಂತೆ ಆಭರಣ, ಬಟ್ಟೆ ಇತರ ಸಾಮಗ್ರಿಗಳೂ ಹಿಂದೆಯೇ ಸಿದ್ಧವಾಗಬೇಕು. ಕನ್ನಡಿತಿಯಾದರೋ ಬಡ ಕುಟುಂಬದಲ್ಲೇ ಹುಟ್ಟಿ ಬೆಳೆ ದವಳಾಗಿದ್ದರೂ, ಚೆನ್ನಾಗಿ ಓದಿ ಬರೆದು, ಸುಸಂಸ್ಕೃತಳಾ ಗಿದು , ತನಗೆ ಅನುರೂಪನಾದ ಗಂಡನನ್ನು ತೌರಿವರಿಗೆ ಹತ್ತಾರು ಸಾವಿರಗಳ ಖರ್ಚಿಲ್ಲದೆ ಪಡೆಯುತ್ತಾಳೆ. 'ಕನ್ನಡಿಗರು ಧನಿಕಲ್ಲದಿದ್ದರೂ ಸುಸಂಸ್ಕೃತರು' ಎಂದು ಅನೇಕರು ಹೇಳುವುದನ್ನು ನಾವೆಲ್ಲ ಕೇಳುತ್ತೇವೆ. ಸಂಸ್ಕೃತಿಯನ್ನು ಬೆಲೆಕೊಟ್ಟು ಕೊಳ್ಳಲಾಗದು. ವೈವಾ ಹಿಕ ಸುಖಕ್ಕೆ ವರದಕ್ಷಿಣೆಯು ಬೇಕಿಲ್ಲ ಎಂಬುದನ್ನು ಕನ್ನಡಿಗರಾದ ನಾವು ಇತರ ಭಾರತೀಯರ ನಡುವೆ ಲಕ್ಷ ಣವಾಗಿ ಬಾಳಿ ಬದುಕಿ ತೋರಿಸಿ, ಈ ಮೂಲಕ ವರದಕ್ಷಿಣೆ ಯ ಪಿಡುಗನ್ನು ನಿವಾರಿಸಲು ಶ್ರಮಿಸಬೇಕು. ವರ ದಕ್ಷಿಣೆಯ ಭೂತ ಇಲ್ಲನೆಂದಾಗ ಅದರಿಂದ ದೊರಕುವ ನೆಮ್ಮದಿಯಿಂದ ಮನಸ್ಸು, ಹೃದಯಗಳು ಸ್ನೇಹ ಪರವೂ, ವಿಶಾಲವೂ ಆಗುವುದರಲ್ಲಿ ಸಂದೇಹವಿಲ್ಲ.

ಕನ್ನಡ ಮಹಿಳೆ ತಾನು ತೌರಿಗೆ ಅತಿ ಭಾರಳು ಎಂಬ ಕೊರಗಿಲ್ಲದೆ ಸ್ವತಂತ್ರ ಮನೋಭಾವವನ್ನು ಪಡೆ ದಿರುತ್ತಾಳೆಂದು ಹೇಳಬಹುದು. ವರದಕ್ಷಿಣೆ, ಚಿನ್ನ-ವಜ್ರ ಗಳ ಹಾವಳಿ ಇಲ್ಲದಿರುವುದರಿಂದ ಕೂಡಿಡುವುದೊಂದೇ ಜೀವನದ ಧ್ಯೇಯವಾಗದೆ, ಮನೆಯಲ್ಲಿ ಗಂಡು ಹೆಣ್ಣು ಮಕ್ಕಳೆಂಬ ಭೇದವಿಲ್ಲದೆ, ಮಕ್ಕಳಿಗೆ ವಿದ್ಯಾಭ್ಯಾಸ, ಕುಶಲ ಕಲೆಗಳಲ್ಲಿ ತರಬೇತಿ ಕೊಡಿಸುವವರು ಕನ್ನಡಿಗರು. ಎಂದರೆ ಕನ್ನಡಿಗರಲ್ಲೂ ಧನಕನಕದಾಸೆ ಇಲ್ಲವೆಂದಲ್ಲ. ಅದು ಸರಿಯಾದ ಮಿತಿಯಿಲ್ಲದೆ, ಅತಿಯಲ್ಲಿಲ್ಲ, ಬಡವ ರಾದವರಿಗೆ ವಿವಾಹಕ್ಕೆ ಯೋಗ್ಯತೆಯೇ ಇಲ್ಲ ಎಂಬಷ್ಟು ದೂರ ನಾವು ಹೋಗಿಲ್ಲ ಎಂದು ಧಾರಾಳವಾಗಿ ಹೇಳ ಬಹುದು. ಕನ್ನಡನಾಡಿನಲ್ಲಿರುವ ಕೆಲವರು, ಇತರ ಭಾರ ತೀಯರನ್ನು ಅನುಕರಿಸಿ ಮದುವೆಯಾಗಿ ಹಲವು ಹತ್ತು ಸಾವಿರಗಳನ್ನು ಬಲವಂತವಾಗಿ ಖರ್ಚು ಮಾಡಿಸುವ ಪರಿ ಪಾಠವಿದ್ದರೆ ಅದನ್ನು ಬಿಡುವುದೊಳ್ಳೆಯದು.

ಕನ್ನಡ ಮಹಿಳೆ ವೃತ್ತಿಗಾಗಿ ಹೊರನಾಡಿಗೆ ಬಂದಿರ ಬಹುದು, ಇಲ್ಲವೇ ವಿವಾಹಿತಳಾಗಿ ಹೊರನಾಡಿಗೆ ಬಂದಿರ ಬಹುದು. ಹೇಗಾದರೂ ತಾನು ಸೇರಿದ ಊರಿದ ಭಾಷೆ, ಅಲ್ಲಿನ ಜನರ ರೀತಿ ನೀತಿಗಳನ್ನು ಬೇಗ ಗ್ರಹಿಸಿಕೊಳ್ಳ ಬಲ್ಲಳು. ಬೇರೆ ಯಾವ ಭಾಷೆಯನ್ನಾದರೂ ಬೇಗ ಕಲಿತು ಮಾತನಾಡಬಲ್ಲಳು. ಸಂಸಾರ ಹೂಡಿದ ಹೊಸತರಲ್ಲಿ ಮಾತಾಡಲು ಬಾರದೆ ಕಷ್ಟಪಟ್ಟು, ಅನಂತರ ಕೆಲಸದವರು ವ್ಯಾಪಾರಿಗಳು ಮುಂತಾದವರೊಡನೆ ಹರುಕು ಮುರುಕು ಮಾತನ್ನೇ ಆಡಿ ಭಾಷೆ ಕಲಿತು, ಅನಂತರ "ನೀವು ಕನ್ನಡ ದವರಾದರೂ ನಮ್ಮ ಭಾಷೆಯನ್ನು ಚೆನ್ನಾಗಿ ಆಡು ತ್ತೀರಲ್ಲ" ಎಂದು ಅವರ ಕೈಲಿ ಷಹಬಾಸ್ ಗಿರಿ ಪಡೆಯು ತ್ತಾಳೆ. ಬೇರೆ ಪ್ರಾಂತ್ಯದ ವಿದ್ಯಾವಂತರೆನಿಸಿಕೊಂಡವರು

ಇಂಗ್ಲೀಷ್ ಭಾಷೆಯನ್ನು ಮಾತೃಭಾಷೆಗಿಂತ ಆಳವಾಗಿ ವ್ಯಾಸಂಗ ಮಾಡಿದವರೂ, ನೆರೆಯ ರಾಜ್ಯದ ಭಾಷೆ ಯಾವುದೆಂಬುದನ್ನು ಅರಿತಿರುವುದಿಲ್ಲ ಎಂಬ ಅಂಶ ಹೊರ ನಾಡಿಗೆ ಬಂದಾಗ ವೇದ್ಯವಾಗುತ್ತದೆ. "ಕನ್ನಡಕ್ಕೆ ಲಿಪಿ ಉಂಟೆ ?" ಕನ್ನಡ ಭಾಷೆಯಲ್ಲಿ ಮುದ್ರಣವುಂಟೇ ? ಮುದ್ರಿತ ಪುಸ್ತಕಗಳಿವೆಯೇ?" ಎಂದು ಕೆಲವು ವಿದ್ಯಾವಂತರೆನಿಸಿಕೊಂಡವರು ಕೇಳಿದ್ದುಂಟು. ಆಗ ನಮಗೆ ಬರುವ ಒಟ್ಟಿನಲ್ಲಿ ನಮ್ಮ ಭಾಷೆಯ ಬಗೆಗೆ ಇತರರಿಗಿರುವ ಅಂಧಕಾರವನ್ನು ಹೋಗಲಾಡಿಸುವ ಸಲುವಾಗಿ ಕನ್ನಡತನವನ್ನೂ, ಕನ್ನಡ ಧ್ವಜವನ್ನೂ ಬಲವಾಗಿ ಮೇಲಕ್ಕೆತ್ತಿ ತೋರಿಸಬೇಕಾಗುತ್ತದೆ. ರಾಮಾಯಣ-ಮಹಾಭಾರತಗಳನ್ನೂ ಕನ್ನಡಿಗರು ತಿಳಿದಿದ್ದಾರೆಯೇ? ನಿಮ್ಮ ಪೂರ್ವಿಕರು ಅವುಗಳನ್ನು ಓದಿದ್ದರೆ? ಎಂಬುದು ಮತ್ತೊಂದು ಪ್ರಶ್ನೆ. ಇಡೀ ಭರತಖಂಡದ ಸಂಸ್ಕೃತಿಗೆ ಮೂಲ ಗ್ರಂಥಗಳಾದ ರಾಮಾಯಣ-ಮಹಾಭಾರತಗಳು ಕನ್ನಡಿಗರಿಗೆ ತಿಳಿದಿಲ್ಲವೆಂದು ಶಂಕಿಸುವ ಮಹಿಳೆಯರ ಅಜ್ಞಾನಕ್ಕೆ ಮರುಗಿ ಅವರಿಗೆ ನಮ್ಮ ಸಂಸ್ಕೃತಿಯ ಬಗೆಗೆಲ್ಲ ಕೂಲಂಕುಶವಾಗಿ ತಿಳಿಯಪಡಿಸುವುದು ಹೊರನಾಡ ಕನ್ನಡತಿಯ ಆದ್ಯ ಕರ್ತವ್ಯ. ವಿದ್ಯಾವಂತರೋ, ಅವಿದ್ಯಾವಂತರೋ, ಕನ್ನಡ ಮಹಿಳೆಯರು ಭಾರತೀಯ ಭಾಷೆಗಳ ಬಗೆಗೂ ವಿವಿಧ ರಾಜ್ಯಗಳ ಬಗೆಗೂ ಬೇಕಾದಷ್ಟು ವಿವರಗಳನ್ನು ತಿಳಿದುಕೊಂಡಿರುತ್ತಾಳೆಯೇ ಹೊರತು, ಅಜ್ಞಾನ ಪ್ರದರ್ಶನವನ್ನು ಎಂದೂ ಮಾಡಳು. ಅವಳ ಸಾಮಾನ್ಯ ಜ್ಞಾನ ಉತ್ತಮ ಮಟ್ಟದ್ದಾಗಿರುತ್ತದೆ.

ಹೊರನಾಡಿನಲ್ಲಿರುವ ಆಚಾರ ವ್ಯವಹಾರಗಳ ಘರ್ಷಣೆಯ ನಡುವೆ ಕನ್ನಡ ಮಹಿಳೆ ತನ್ನ ಸಮತೋಲನವನ್ನು ಕಾಯ್ದುಕೊಳ್ಳುತ್ತಾಳೆ. ತನ್ನದಲ್ಲದ ಇತರ ವಿಷಯಗಳನ್ನು ಗ್ರಹಿಸಿ ತನ್ನದಾಗಿಸಿಕೊಳ್ಳುವ ಕಲೆ ಅವಳಿಗಿದೆ. ಎಂದೇ, ಹೊರನಾಡಿನ ಸಾಮೂಹಿಕ ಕಾರ್ಯಕ್ರಮಗಳಲ್ಲೂ ಸಾಂಸ್ಕೃತಿಕ ಅಥವಾ ಧಾರ್ಮಿಕ ಕಾರ್ಯಕ್ರಮಗಳಲ್ಲೂ ಹೃದಯಂಗಮವಾಗಿ ಪಾಲ್ಗೊಳ್ಳುತ್ತಾಳೆ. ತನ್ನ ಸುತ್ತಮುತ್ತ ಇರುವ ಸಂಘ ಸಂಸ್ಥೆಗಳಲ್ಲೆಲ್ಲ ಸೇರಿಕೊಂಡು, ಅವುಗಳನ್ನು ಕಟ್ಟಿ ಬೆಳೆಸಿ, ತಾನೂ ಬೆಳೆಯುತ್ತಾಳೆ, ಹೆಂಗಸರು ಮಾತ್ರ ಎಂದು ಅರ್ಥವಲ್ಲ, ಕನ್ನಡ ಜನರೆಲ್ಲ, ಹೆಣ್ಣು-ಗಂಡು, ಹಿರಿ-ಕಿರಿಯರೆಂಬ ಭೇದವಿಲ್ಲದೆ ಸಾಂಘಿಕ ಚಟುವಟಿಕೆಗಳಲ್ಲಿ ತಮ್ಮ ತನುಮನಧನಗಳನ್ನರ್ಪಿಸಿ, ಅಂತಹ ಸಂಸ್ಥೆಗಳ ಏಳಿಗೆಗಾಗಿ ಹಗಲಿರುಳೂ ದುಡಿಯುತ್ತಾರೆಂಬುದನ್ನು ಹೆಮ್ಮೆಯಿಂದ ಹೇಳಿಕೊಳ್ಳಬಹುದಾಗಿದೆ.

ಕನ್ನಡಿಗರು ಹೊರ ನಾಡಿನಲ್ಲಿ ಎದುರಿಸುವ ಮುಖ್ಯ ಸಮಸ್ಯೆಗಳೆಂದರೆ ತಮ್ಮ ಮಕ್ಕಳದು. ಮಕ್ಕಳು ಭಾಷೆಗಳನ್ನು ಬೇಗ ಕಲಿಯಬಲ್ಲರು ; ಬೇಗ ಮರೆಯಲೂ ಬಲ್ಲರು. ಹೊರನಾಡಿಗೆ ಬಂದ ಮಕ್ಕಳು ಅಲ್ಲಿನ ಪ್ರಾಂತೀಯ ಭಾಷೆಯನ್ನು ಆಡಲು ಬೇಗ ಕಲಿಯುತ್ತಾರೆ. ಆದರೆ ಮುಂದೆ ಭಾರತದ ಬೇರೆ ಬೇರೆ ಊರುಗಳಿಗೆ ವರ್ಗವಾಗಿ ಹೋದಾಗ ಶಾಲೆಗಳಲ್ಲಿ ಅವಕಾಶ ಸುಲಭವಾಗಿ ದೊರೆಯಲಿ ಎಂಬ ಉದ್ದೇಶದಿಂದ ಇಂಗ್ಲೀಷನ್ನು ಶಿಕ್ಷಣ ಮಾಧ್ಯಮವನ್ನಾಗಿ ಆರಿಸಿಕೊಳ್ಳಬೇಕಾಗುತ್ತದೆ. ಇದಲ್ಲದೆ ಶಾಲೆಗಳಲ್ಲಿ, ಭಾರತೀಯ ಭಾಷೆಗಳಲ್ಲಿ, ಅನೇಕ ವೇಳೆ, ಹಿಂದಿ ಅಥವಾ ಸಂಸ್ಕೃತವನ್ನು ಮಾತ್ರ ಕಲಿಯಲು ಸಾಧ್ಯ. ಹೀಗಾಗಿ ಪ್ರಾಂತೀಯ ಭಾಷೆಯನ್ನು ಓದಿ ಬರೆಯಲಾರರು. ಮಾತೃ ಭಾಷೆಯನ್ನೂ ಮಾತನಾಡುವ ಮಟ್ಟಕ್ಕಿಂತ ಹೆಚ್ಚಿಗೆ ಕಲಿಯಲು ಆಗುವುದಿಲ್ಲ. ಹೀಗಾಗಿ ಕನ್ನಡ ಸಾಹಿತ್ಯದ ಪರಿಚಯ ನಮ್ಮ ಮಕ್ಕಳಿಗೆ ದುರ್ಲಭವಾಗುತ್ತದೆ. ನಮ್ಮ ಸಂಸ್ಕೃತಿಯ ಚಿತ್ರಣಗಳನ್ನೂ, ಒಳ್ಳೆ ಗ್ರಂಥಗಳ ಹಾಗೂ ಗ್ರಂಥ ಕರ್ತರ ನಮ್ಮದೇ ಆದ ವಿಶಿಷ್ಟ ಕಲೆಗಳ ಪರಿಚಯ ನಮ್ಮ ಮಕ್ಕಳಿಗೆ ಇಲ್ಲವಾಗುತ್ತದೆ. ವರ್ಷಕ್ಕೊಮ್ಮೆ ಅಜ್ಜಿಯ ಮನೆಯಲ್ಲಿ ಭೇಟಿಯಾದ ವಿವಿಧ ಪ್ರಾಂತಗಳಾದ ಬಂದ ಮೊಮ್ಮಕ್ಕಳಿಗೆ ಭಾಷಾ ಸಮಸ್ಯೆ ನಿಜಕ್ಕೂ ಏರ್ಪಡುತ್ತದೆ. ಮುಂದೆ ಈ ಮಕ್ಕಳು ಬೆಳೆದು ದೊಡ್ಡವರಾಗಿ, ನನ್ನೂರು ಯಾವುದು, ನನ್ನ ಭಾಷೆ ಯಾವುದು ಎಂದು ಯೋಚಿಸಿದಾಗ, ಅವರು ತರ್ಕಬದ್ಧವಾಗಿ ಭಾರತೀಯರು ಮಾತ್ರವಾಗುತ್ತಾರೆ. ಈ ಕೊರತೆ ನೀಗಿಸಲು ತಾಯಿಯಾದವಳು, ತನ್ನ ಮಾತೃ ಭಾಷೆಯನ್ನು ಓದಲೂ ಬರೆಯಲೂ ಕಲಿಸಿಕೊಟ್ಟು, ಕನ್ನಡ ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಾಕಷ್ಟು ಪರಿಚಯವಾಗುವಂತೆ ಶ್ರಮಿಸಬೇಕು.

---

# ಶಿಕ್ಷಣ ರಂಗದಲ್ಲಿ ನನ್ನ ಅನುಭವಗಳು

—ಕೆ. ಟಿ. ಬನಶಂಕರಮ್ಮ

'ದಾನಗಳಲೆಲ್ಲ ವಿದ್ಯಾ ದಾನವೇ ಶ್ರೇಷ್ಠ'ವಾದುದೆಂದು ಪುರಾಣ–ಇತಿಹಾಸಗಳಲ್ಲಿ ಹೇಳಿದ್ದರೂ, ಅದಕ್ಕೆ ಸಲ್ಲುವ ಗೌರವ ಆತಿಥ್ಯ ಮಾತ್ರ ಗೌಣ. ಹಿಂದಿನ ಕಾಲದಲ್ಲಿ ಗುರುಗಳಿಗೆ ನೀಡುತ್ತಿದ್ದ ದಕ್ಷಿಣೆ, ಗೌರವ, ಪೂಜ್ಯ ಭಾವನೆ, ಸೇವೆ ಇತ್ಯಾದಿ ಗೌರವಾನ್ವಿತ ಲಕ್ಷಣಗಳು ಈಗ ಪೂರ್ತಿ ನಶಿಸಿ ಹೋದಂತಿದೆ. ಉದ್ಯೋಗ ಎಲ್ಲೂ ಸಿಕ್ಕದೆ ಹೋದರೆ ಶಿಕ್ಷಕನಾಗು ಎಂಬ ಮಾತಿನಂತೆ ಶಿಕ್ಷಕ ವೃತ್ತಿ ಜನಸಾಮಾನ್ಯರ ಕಣ್ಣಿಗೆ ಅಷ್ಟು ಕೀಳು. ಶಿಕ್ಷಕ ಮಗುವಿನ ಭವಿಷ್ಯದ ಶಿಲ್ಪಿ ಎಂಬುದನ್ನು ಸಮಾಜ ಗಣನೆಗೇ ತೆಗೆದುಕೊಳುವುದಿಲ್ಲ. ಅವನು ಕೇವಲ ದುಡಿಯುವ ಯಂತ್ರ: ಆವನಿಗೆ ಸ್ಥಾನ ಬೇಡ, ಸಹಾಯ ಬೇಡ, ಸನ್ಮಾನಕ್ಕೆ ಅಯೋಗ್ಯ. ಅಲ್ಲದೆ ಅವನ ಆರ್ಥಿಕ ಸ್ಥಿತಿ ಗತಿಗಳು ಯಾರ ಗಮನಕ್ಕೂ ಬಾರದು. ಆದರೆ ಅವನು ಮಾತ್ರ ಮಗುವಿನ ಭವಿಷ್ಯವನ್ನು ರೂಪಿಸುವ ಶಿಲ್ಪಿಯಾಗಲೇ ಬೇಕು. ಇದು ನಮ್ಮ ವಿದ್ಯಾಭ್ಯಾಸ.

ನಮ್ಮ ದೇಶ ಜಾತ್ಯಾತೀತ ರಾಷ್ಟ್ರ. ಒಂದು ಪಂಗಡ ಹೆಚ್ಚು ಮುಂದುವರೆದುದು ಇನ್ನೊಂದು ತೀರ ಹಿಂದುಳಿದಿರುವುದು. ಈ ಹಿಂದುಳಿದ ಪಂಗಡಕ್ಕೆ ಮುಂದುವರೆಯಬೇಕೆಂದೂ, ಉತ್ತಮ ಮಟ್ಟ ಮುಟ್ಟಬೇಕೆಂಬ ಆಸೆ. ತಂಡೆ–ತಾಯಿಂದಿರಿಗೆ ವಿದ್ಯೆ ಎಂಬ ಹೆಸರೇ ಗೊತ್ತಿಲ್ಲದವರು. ಅವರ ಮಕ್ಕಳಿಗೆ ಅದರ ವಾಸನೆ ಬರಿಸುವುದು ಹೇಗೆ? ವಂಶಪಾರಂಪರ್ಯವಾಗಿ ಬರಬೇಕು ಇಲ್ಲಾ.. ಒಳ್ಳೆ ವಾತಾವರಣದಿಂರ ಬರಬೇಕು. ಈ ಅನುಕರಣೆ ಮಾರ್ಗ ಶಿಕ್ಷಕ. ಆ ಶಿಕ್ಷಕ ತನ್ನ ತಾಪತ್ರಯಗಳನ್ನೆಲ್ಲಾ ಮರೆತು ತನ್ನ ವೃತ್ತಿಯ ಕಡೆ ನಿಷ್ಠೆ ವಹಿಸಿ ಪಾಠ ಹೇಳಿ ಕೊಡಲೇ ಬೇಕು. ಕಷ್ಟಪಟ್ಟು, ಶ್ರಮವಹಿಸಿ ಹೇಳಿಕೊಟ್ಟರೂ ಸಹ ಸಿಗುವ ಭಾಗ್ಯವೇನು? ಆ ಮಗುವಿಗೆ ಪಾಠ ಬಾರದು....ಈಕೆಗೆ ಹೇಳಿ ಕೊಟ್ಟದುದಕ್ಕೆ ಸಾರ್ಥಕವೂ ಇಲ್ಲ. ಅಲ್ಲಿದೆ ಪೋಷಕರ ವರ್ಗದವರಿಂದ ನಿಂದನೆ. ಇಷ್ಟು ಶಿಕ್ಷಕನಿಗೆ ಸಿಗುವ ಪ್ರಶಸ್ತಿ.

ಬೆಳಿಗ್ಗೆ ನರ್ಸರಿ, ಶಿಶು ವಿಹಾರ 4 ಗಂಟೆಗೆ ಪ್ರಾರಂಭ. ಮಗುವನ್ನು ಶಾಲೆಗೆ ಕಳುಹಿಸುವ ಮುನ್ನ ತಂದೆ-ತಾಯಿ ಮಗುವಿಗೆ ಕೊಡಬೇಕಾದ ಗಮನವನ್ನು ಎಳ್ಳಷ್ಟೂ ಕೊಡದೆ, ಶಾಲೆಗೆ ಶುಲ್ಕವೊ... ಸಹಾಯ ದ್ರವ್ಯವೋ ಕೊಡುವುದರಿಂದ ಆ ಉಪಾಧ್ಯಾಯಿನಿ ಎಲ್ಲವನ್ನೂ ನೋಡಿಕೊಳ್ಳಲಿ ಎಂಬ ದುರುದ್ದೇಶವಿಟ್ಟುಕೊಂಡು ಮಗುವಿಗೆ ಬೆಳಗಿನ ಪ್ರಾಥಃವಿಧಿಗಳನ್ನು ಮಾಡಿಸದೆ ಕಳುಹಿಸುವವರೂ ಇದ್ದಾರೆ. ಆ ಮಗು ಶಾಲೆಗೆ ಉಪಾಧ್ಯಾಯಿನಿ, ಆಯಾ ಬರುವುದರೊಳಗಾಗಿ ಬಾಗಿಲಿನಿಂದಲೇ ಚಡ್ಡಿ....ಲಂಗದೊಳಗೇ ಪಜೀತಿ ಮಾಡಿಕೊಂಡು ಗೋಳಾಡುವುದನ್ನು ಶಾಲೆ ಒಳಗೆ ಕಾಲಿಟ್ಟಕೂಡಲೇ ಮನೆಯಲ್ಲಿ ತಂದೆ-ತಾಯಿಯರು ಮಾಡುವ ಸೇವೆಗೆ ಪ್ರಾರಂಭ. 3 ವರ್ಷದ ಮಗುವನ್ನು ಸೇರಿಸಿ ಒಂದು ವಾರದೊಳಗಾಗಿ "ಮಗು ಏನೂ ಬರೆಯುವುದಿಲ್ಲವಲ್ಲಾ"? ಕಾಲಿ ಸ್ಲೇಟ್ ತರುತ್ತಾಳೆ" ಎಂಬ ಬಿರುನುಡಿಗಳು ಪೋಷಕರಿಂದ 8 ದಿನಗಳಲ್ಲಿ ಆ ಮಗು ಬಿ. ಎ. ಪರೀಕ್ಷೆಗೆ ಕಟ್ಟಬೇಕು....ಅಷ್ಟು ವಿದ್ಯಾಭ್ಯಾಸ ನರ್ಸರಿ ಶಿಕ್ಷಕಿಯಿಂದ ನಿರೀಕ್ಷಿಸುತ್ತಾರೆ ಕೆಲವು ಪೋಷಕರು.

ಶಾಲೆ 24 ಗಂಟೆ ಮಾಡಿದರೂ ಕೆಲವರಿಗೆ ತುಂಬಾ ಸಂತೋಷ. 1. ಮಗುವಿನ ಕಾಟವಿಲ್ಲ, ಎಲ್ಲಿ ಬೇಕಾದರೂ ಹೋಗಬಹುದು. 2. ಮಗುವಿಗೆ ಹೆಚ್ಚು ವಿದ್ಯಾ

ಭ್ಯಾಸವಾಗುವುದು. ರಜ ಕೊಡಲೇ ಕೂಡದು.... ಉಪಾಧ್ಯಾಯಿನಿ ಮನುಷ್ಯಳೇ ಅಲ್ಲ ಅವರ ಭಾವನೆಯಲ್ಲಿ.

ಮಧ್ಯಾಹ್ನ ಶಾಲೆ ಇದ್ದಲ್ಲಿ, ನಿದ್ದೆ ಮಾಡುತ್ತಿದ್ದ ಮಗುವನ್ನು ಹಾಗೇ ಎತ್ತಿಕೊಂಡು ಶಾಲೆ ಬಾಗಿಲಿನ ಒಳಗೆ ತಳ್ಳಿ ಹೋಗುವುದು ವಾಡಿಕೆ. ಇಷ್ಟು ನಿದ್ದೆ ಬಂದಿರುವ ಮಗುವನ್ನು ಏಕಮ್ಮ ಕರೆದುಕೊಂಡು ಬಂದಿರಿ ? ಮನೆಯಲ್ಲಿ ಮೆತ್ತನೆಯ ಹಾಸಿಗೆಯ ಮೇಲೆ ಸುಖವಾಗಿ ಮಲಗಿ ನಿದ್ದೆ ಮಾಡುತ್ತಿತ್ತಲ್ಲವೆ ? ಇಷ್ಟು ನಿದ್ದೆಯಿಂದ ಪೈವೆತ್ತ ಮಗುವಿಗೆ ಏನು ಹೇಳಿಕೊಡುವುದು ? ಹೇಳಿ ಕೊಟ್ಟರೆ ಆಲೈಸುವ ಅಥವಾ ಗ್ರಹಿಸುವುದಕ್ಕಾದರೂ ಸಾಧ್ಯವೇ ? ಎಂದು ಕೇಳಿದರೆ....ಇದಕ್ಕೆ ನಿದ್ದೆ ಇದ್ದೇ ಇದೆ. ಶಾಲೆ ಮುಖ್ಯವಲ್ಲವೆ ! ಸಂಜೆ ಬಂದು ಬಿದ್ದುಕೊಳ್ಳಲಿ ...ಎಂದು ಉತ್ತರ.

**ಮಗುವನ್ನೇ ಮರೆಯುವ ತಾಯಂದಿರುಂಟೆ ?**

ನೋಡಿ, ನಮ್ಮ ಪಕ್ಕದ ಮನೆಯರ ಜೊತೆ ಎಲ್ಲಿಗೋ ಹೋಗಿದ್ದೆ....ಮಗು ಶಾಲೆಗೆ ಹೋಗಿರುವುದೇ ಮರೆತೇ ಹೋಗಿತ್ತು. ಸಂಜೆ ಮನೆಗೆ ಬಂದ ಮೇಲೆ ಜ್ಞಾಪಕ ..ಅವರು ಬೇರೆ ಊರಲಿಲ್ಲ ...

ಹೇಗಿದ್ದರೂ ತಾಯಿಗಿಂತ ಚೆನ್ನಾಗಿ ನೋಡಿಕೊಳ್ಳುವ ಶಾಲೆ ಇದ್ದರೆ ಮಗು ಚಿಂತೆ ಏಕಮ್ಮ ?.... ಆದರೆ ಇದು Residential ಶಾಲೆ ಅಲ್ಲವೆಂಬುದು ತಮಗೆ ಜ್ಞಾಪಕ ವಿರಲಿ ಎಂಬ ಉತ್ತರ ಶಾಲೆಯ ಮುಖ್ಯಸ್ಥರಿಂದ.

ರಾತ್ರಿ 10ಗಂಟೆಯ ಮೇಲೆ ಸಿನಿಮಾ ಅಥವಾ ಮದುವೆ ಮನೆಯಿಂದ ವಾಪಸ್ಸು ಬರುವಾಗ ಮುಖ್ಯೋಪಾಧ್ಯಾಯಿನಿಯವರ ಮನೆಗೆ ಬಂದು Calling bell ಒತ್ತಿ....ನಾಳೆ ನಮ್ಮ ಮಗು ಸಮವಸ್ತ್ರ ಧರಿಸಿಕೊಂಡು ಬರಲಾಗುವುದಿಲ್ಲ ...ಮದುವೆ ಗಲಾಟೆಯಲ್ಲಿ ಒಗೆದಿಲ್ಲಾಂ ತಾನೇ....ಒಂದು ಕಾಲ್ಚೀಲ ಹಾಳಾಗಿದೇ ಅಂತಾನೋ.... ಬೂಡ್ಸ್ ಕಳೆದುಹೋಗಿದೆ ಅಂತಾನೋ .. ಅಜ್ಜಿ ಮನೆಗೆ ಹೋಗಿದ್ದಳು ಎಲ್ಲಾ ಅಲ್ಲಿ ಬಿಟ್ಟು ಬಂದಿದ್ದಾಳೆಂತಾನೋ ಬೂಡ್ಸು ಇನ್ನೂ ತೆಗೆದುಕೊಟ್ಟಿಲ್ಲಾ ಸಂಬಳ ಬಂದನಂತರ ತೆಗೆದುಕೊಡುತ್ತೇವೆಂದು 7–8ನೇ ತಾರೀಖು ಬಂದು ಹೇಳುವುದು .. ನಾಳೆ ಮಗು ಏನು ಓದಿಕೊಂಡು ಬರಬೇಕಾಗುತ್ತಾನೋ .... ಇತ್ಯಾದಿ ವಿಷಯಗಳ ಬಗ್ಗೆ ಸಮಯಾ ಸಮಯದ ಅರಿವು... ಶಿಸ್ತು, ಗೌರವ ತಿಳುವಳಿಕೆಗಳಿಲ್ಲದೆ ತುಂಬಾ ಸಲಿಗೆಯಿಂದ ಕೆಲವರು ವರ್ತಿಸುವುದೂ ಉಂಟು.

**ಮಗು ಓದದೇ ಹೋದರೂ ಪರವಾಗಿಲ್ಲ, ಸುಮ್ಮನೆ ಶಾಲೆಗೆ ಬಂದರೆ ಸಾಕು.**

ಮಕ್ಕಳ ಕಾಟ ತಾಳಲಾರದೆ ಶಾಲೆಗೆ ಕಳುಹಿಸುವವರೂ ಉಂಟು. ಅವರಿಗೆ ಶಾಲೆಯ ವೇಳೆಯನ್ನು ಬೆಳಗ್ಗೆ 7 ರಿಂದ ರಾತ್ರಿ 8ರವರೆವಿಗೆ, ಈ ಶಾಲೆಯವರು ಸರ್ಕಾರದವರು ಏಕೆ ಮಾಡುವುದಿಲ್ಲಾ ಎಂದು ನಿಂದಿಸುವವರು. ಪಾಪ ಕೇವಲ 4–5 ಅಥವಾ 6–7 ಮಕ್ಕಳನ್ನು ಪಡೆದ ಜನನಿಗೆ ಉಪಾಧ್ಯಾಯನಿಯು ಮಾನವ ಜಾತಿಗೆ ಸೇರಿದವಳೇ? ಎಂಬ ಅರಿವು ಹೇಗೆ ಸಾಧ್ಯ ?

ನಮ್ಮ ಮಗು ಯಾವ ಕ್ಲಾಸು ?

ವಿದ್ಯಾವಂತ, ಅವಿದ್ಯಾವಂತ ಕೆಲವು ತಂದೆ ತಾಯಂದರಿಗೆ ತಮ್ಮ ಮಕ್ಕಳು ಯಾವ ತರಗತಿಯಲ್ಲಿ ಓದುತ್ತಿರುವರೆಂಬ ಅರಿವೇ ಬೇಡವೆ? ಮಕ್ಕಳ ವಿದ್ಯಾಭ್ಯಾಸದಲ್ಲಿ ನಮ್ಮ ಪೋಷಕರಿಗೆ ಅಷ್ಟೊಂದು ಶ್ರದ್ಧೆ!!! ಹೆಚ್ಚು ಮಕ್ಕಳು ಇರುವುದರಿಂದಲೇ ಅಥವಾ ಬೇಜವಾಬ್ದಾರಿಯೋ ತಿಳಿಯದು.

**ಹೋದ ಸಲ 12ನೆಯ ರ್‍ಯಾಂಕ್... ಈ ಸಲ 5ನೆಯ ರ್‍ಯಾಂಕ್ ಬಂದಿದ್ದಾನೆ...ಇವನಿಗೆ ಊಟ ಆಕಿಲ್ಲ ಮೇಡಂ ಅವರೇ....**

ಪಾಪ 12 ಪೈಸೆ ಜಾಸ್ತಿ 5 ಪೈಸೆ ಕಡಿಮೆ ಎಂಬ ತಿಳುವಳಿಕೆಯುಳ್ಳ ನಮ್ಮ ಅವಿದ್ಯಾವಂತ ಸಮಾಜ, ನಮ್ಮ ಸರ್ಕಾರ ವಯಸ್ಕರ ಶಿಕ್ಷಣಕ್ಕೆ ಸಾವಿರಾರು ರೂಪಾಯಿ ಖರ್ಚು ಮಾಡಿದರೂ ಇನ್ನೂ ಉಳಿದೇ ಇದ್ದಾರೆ. ಅವರನ್ನು ಸಂತೈಸುವ ಹೊತ್ತಿಗೆ ಉಪಾಧ್ಯಾಯನಿಗೆ ಸಾಕಾಗಿ ಹೋಗುವುದು.

ನಿಮ್ಮ ಹುಡುಗ ಈಗ ತುಂಬಾ ಚೆನ್ನಾಗಿ ಓದುತ್ತಿದ್ದಾನೆ. 12 ರಿಂದ 5ನೆಯ ದರ್ಜೆಗೆ ಬಂದಿದ್ದಾನೆ, ತುಂಬಾ ಬುದ್ಧಿವಂತನಾಗುತ್ತಿದ್ದಾನೆಂದು ಗಂಟೆಗಟ್ಟಲೆ ಹೇಳಿ ಕಳುಹಿಸಬೇಕು.

ಹುಡುಗ ಪರೀಕ್ಷೆಯಲ್ಲಿ ಉತ್ತೀರ್ಣನಾಗದೆ ಹೋದರೆ.

ವರ್ಷವೆಲ್ಲ ಹೇಳಿ ಕೊಟ್ಟು .... ತಿಂಗಳುಗಟ್ಟಲೆ ಷುನೆಗೆ ಅವನ ಓದಿನ ಬಗ್ಗೆ ತಿಳಿಸಿ – ಮನೆಯಲ್ಲಿ ಸ್ವಲ್ಪವೂ ಗಮನವಿಲ್ಲ ... ಹೇಳಿದ ಮಾತು ಕೇಳುವುದಿಲ್ಲ ... ಪುಸ್ತಕಗಳಿಲ್ಲ.... ಶುದ್ಧವಾದ ಬಟ್ಟೆ ಧರಿಸಿಕೊಂಡು ಬರೋದಿಲ್ಲ.... ಕೊಟ್ಟ ಪಾಠ ಪ್ರವಚನಗಳನ್ನು ಮಾಡಿಕೊಂಡು ಬರುವುದಿಲ್ಲಾ .. ಇಲ್ಲಾ . ಎಂಬ ಹನುಮಂತನ ಬಾಲದಷ್ಟು ಇಲ್ಲಾ ಪ್ರವರವನ್ನು ತಿಳಿಸಿ ... ತಮ್ಮ ಮಕ್ಕಳ ಏಳಿಗೆಯು ತಮ್ಮ ಸಹಕಾರ ಇಲ್ಲದೆ ಹೋದ ಕಾರಣ ಕುಂಠಿತವಾಗಿದೆ ಎಂದು ತಿಳಿಸಿ ಆವರಿಗೆ ಮನದಟ್ಟಾಗಿದ್ದರೂ.... ಪರೀಕ್ಷೆಯಲ್ಲಿ ಫೇಲಾದ ಸುದ್ದಿ ಮುಟ್ಟಿದ ಕೂಡಲೇ ಶಿಕ್ಷಕಿಗೆ ಬೈಗಳ ಸುರಿಮಳೆ ಹೇಳತೀರದು. ಸಾಧ್ಯವಾದರೆ ದಾರಿಯಲ್ಲಿ ಒಬ್ಬಳೇ ಸಿಕ್ಕರೆ ಬಡಿಯುವುದಕ್ಕೂ... ಈಗಿನ ವೈಶಿಷ್ಟ್ಯ ಕೊಲೆ ಮಾಡುವುದಕ್ಕೂ ಕೆಲವು ಸಮಾಜ ಹಿಂಜರಿಯದು.

ಅಪ್ಪನ ಕಾಲ್ಚೀಲ.... ಅಪ್ಪನ ರುಜು ಇದು ಸರ್ವೇ ಸಾಮಾನ್ಯ.

ಹೀಗೆ ಇನ್ನೂ ನಾನಾ ವಿಚಿತ್ರ ರೀತಿಯ ಘಟನೆಗಳನ್ನು ಬರೆಯುತ್ತಾ ಹೋದರೆ ಈ 'ಆರತಿ' ಸಂಪುಟವೇ ನನಗೆ ಮೀಸಲಾಗಿಡಬೇಕಾಗುವುದು. (ಇವು ಕೇವಲ ಕೆಲವು ಜನರ ವರ್ತನೆ ಅಷ್ಟೆ.)

---



ಎಷ್ಟೇ ಸಿಸಿಕ ಸಾಹಿತ್ಯವನ್ನೋದಿವರು
ಪೆಟ್ಟು ಪಟಪಟನೆ ಬಿದ್ದರೂ
ಆಸೆಗಳು ಸತ್ತು ಹೋದರೂ
ಜೀವ ಸೋತು ಸೋಲನ್ನೊಪ್ಪಿದರೂ
ಪ್ರತಿ ಬೆಳಗಿನ ಜಾವದಲ್ಲೂ
ಹೊರಗಿನ ಗಾಳಿ
ಹೇಗೋ ಮನೆಯೊಳಗಡೆ ನುಸುಳಿ ಬೀಸಿದಾಗ
ಬೆಳ್ಳಗೆ ಬೆಳಕಾದಾಗ
ಹಚ್ಚ ಹಸಿರನ್ನು ಕಂಡಾಗ
ಸಂತೋಷವಾಗುತ್ತೆ
ಯಾವ ಅಸಮಾಧಾನದ ನೆನಪೂ ಉಳಿಯದೆ
ಯಾವ ಗೊಂದಲವೂ ಇಲ್ಲದೆ
ಯಾವ ದುಗುಡವೂ ದನಿಗೊಳ್ಳದೆ
ಮನಸ್ಸು ಅಷ್ಟುಗಾಲ
ನೆಮ್ಮದಿಯನ್ನು ಅನುಭವಿಸುತ್ತಿದೆ.
ಅರ್ಧ ಮೋಡದ ಆಕಾಶದಲ್ಲಿ
ಮುಳುಗುವ ಸೂರ್ಯನ ಬೆಳಕು
ರಂಗಾಗಿ ಪುಟಿದೆದ್ದು
ಬೆಳ ಬೆಳ ಬೆಳಕಾಗಿದೆ ನೋಡುಬಾರೇ
ಎಂದು
ವೀಣ ಕೂಗಿ ಕರೆದಾಗ
ಓಡಿ ಹೋಗಿ ನೋಡುತ್ತೇನೆ.
ಉಲ್ಲಾಸವನ್ನನುಭವಿಸುತ್ತೇನೆ.
ಸಿರಿತನವೆಲ್ಲ
ಸಿಡಿದು ಹೋಗುತ್ತದೆ.
ಇವೆಲ್ಲ ಹಳೆಯ ಸಂಪ್ರದಾಯದ ಅನಿಸಿಕೆಗಳು
ಈಗ ಅವುಗಳಿಂದ
ಉತ್ಸಾಹಿತಳಾಗಿ ಸಂತೋಷಪಡುವುದು
ಸಮಕಾಲೀನವಲ್ಲ
ಅಂದುಕೊಂಡರೂ

ಬೆಳಗು-ಸಂಜೆ ಹಸಿರು ಹಕ್ಕಿ
ಇವಿಷ್ಟಿರುವ ತನಕ
ಎಂದೆಲ್ಲ ಏನೇನೋ ಯೋಚಿಸುತ್ತೇನೆ.
ನನಗೆ ನಾನೇ ನಕ್ಕು ನಿಲ್ಲುತ್ತೇನೆ.
ಆದರೂ
ಎಲ್ಲರಂತಯೇ ನಾನು
ವ್ಯಂಗ್ಯ ಮಾತನಾಡುತ್ತ
ಗಂಡಸರನ್ನು ದ್ವೇಷಿಸುತ್ತ
ಹೆಂಗಸರ ಸ್ವಾತಂತ್ರ್ಯದ ಅನಿವಾರ್ಯತೆಯ
ಕುರಿತು ಮಾತನಾಡುತ್ತ
ಹೊಸ ಹೊಸ ಸಮಸ್ಯೆಗಳನ್ನು ಸೃಷ್ಟಿಸಿಕೊಂಡು
ಹೊಡೆದಾಡುತ್ತ
ಸಿರಿತನವನ್ನು ಮಾತು ಮಾತಿನಲ್ಲಿ ಇಣುಕಾಡಿಸುತ್ತ
ಅಲೆಯುತ್ತಿಲ್ಲವಲ್ಲ ಎಂದು
ವಿಷಾದವೆನ್ನಿಸುತ್ತೆ.

—ಎಲ್. ಜಿ. ಸುವಿತ್ರ

# ಸ್ತ್ರೀ, ಗೃಹಜೀವನ ಮತ್ತು ಪದ್ಧತಿಗಳು

—ಪದ್ಮಾ ಶೆಣೈ

ಇದು ಅಂತಾರಾಷ್ಟ್ರೀಯ ಮಹಿಳಾ ವರ್ಷ. ಇಂದು ನಾಲ್ಕೂ ನಿಟ್ಟಿನಿಂದಲೂ ಮಹಿಳೆಯ ಬಗ್ಗೆ ಸಮಾಲೋಚನೆಗಳು ನಡೆದಿವೆ. ಅವಳ ಸ್ಥಿತಿಗತಿ, ಸ್ಥಾನಮಾನ, ರೀತಿ ನೀತಿ ಒಂದು ಚರ್ಚಾವಿಷಯವಾಗಿದೆ.

ಸಬಲವಾದ ಪುರುಷವರ್ಗ ಅವಳ ಮೇಲೆ ಅಧಿಕಾರ ನಡೆಸುತ್ತಿದೆ. ಆಕೆ ಶೋಷಣೆಗೊಳಗಾಗುತ್ತಿದ್ದಾಳೆ. ಅವಳಿಗೆ ನಾಲ್ಕು ಗೋಡೆಗಳ ಬಂಧನವಿದೆ. ಕಾನೂನು ಸರ್ವರೀತಿಯಿಂದಲೂ ಆಕೆಗೆ ರಕ್ಷಣೆಕೊಟ್ಟರೂ, ಸಮಾಜವಿನ್ನೂ ಆಕೆಯ ಸಮಾನ ಹಕ್ಕು, ಸ್ವಾತಂತ್ರ್ಯ, ಅವಕಾಶಗಳನ್ನು ಮನ್ನಿಸಿಲ್ಲ ಎನ್ನುವುದು ಒಂದು ವಾದ.

ಇನ್ನೊಂದೆಡೆ ಆಕೆ ದೈವಸಂಭೂತೆ; ಶಕ್ತಿಸಂಜಾತೆ, ತ್ಯಾಗ, ಕಷ್ಟಸಹಿಷ್ಣುತೆ, ನಿರ್ವ್ಯಾಜ್ಯಪ್ರೇಮ, ನಿಸ್ವಾರ್ಥ ಸೇವೆ ಮೊದಲಾದ ದೈವೀಗುಣಗಳೇ ಮೈದಾಳಿಬಂದವಳು; ಮನೆಯೇ ಅವಳು ಕ್ಷೇತ್ರ ಎನ್ನುವ ಆದರ್ಶವೂ ಇದೆ.

ಇದೆಲ್ಲವೂ ಸಂಪ್ರದಾಯ ಶರಣರ ಗೊಡ್ಡು ವೇದಾಂತ. ಇಂದು ತ್ಯಾಗ, ಪ್ರೇಮ, ಸೇವೆ ಎನ್ನುವ ಶಬ್ದಗಳಿಗೆ ಅರ್ಥವಿಲ್ಲ. ಬೆಲೆಯೇರಿಕೆಯ ಈ ದಿನಗಳಲ್ಲಿ ಶ್ರೀಸಾಮಾನ್ಯರ ಬಳಿ ತ್ಯಾಗಮಾಡಲು ಉಳಿದಿರುವುದೆಂದರೆ ಪ್ರಾಣಗಳು ಮಾತ್ರ. ಸುಖವಾಗಿ ಬದುಕಬೇಕಾದರೆ ಹಣ ಬೇಕು. ಸಂಪಾದಿಸುವ ಕೈಗಳಿಗೆ ಹೆಣ್ಣು, ಗಂಡು ಎಂಬ ಭೇದ ಬೇಡ. ದಾರಿಯೂ ಯಾವುದೇ ಇರಲೊಲ್ಲದೇಕೆ? ಆರ್ಥಿಕ ಸುಭದ್ರತೆಯಿಂದಲೇ ಸುಖ ಸಾಧ್ಯ ಎನ್ನುವ ಪ್ರಬಲ ವಾದವೂ ಇದೆ.

ಸ್ತ್ರೀ ಪುರುಷರ ಶಾರೀರಕ ರಚನೆಗಳನ್ನು ಹೋಲಿಸಿ ಕೀಳು, ಮೇಲು, ಎಂದು ಸಾಧಿಸುವವರಿಗೂ ಕಡಿಮೆಯಿಲ್ಲ. ಸ್ವಚ್ಛಂದವೃತ್ತಿಯಲ್ಲಿ ಅವರಿಬ್ಬರ ಪಾಲು ಸಮಾನಾಗಿದ್ದರೂ ಬೆಲೆತೆರಬೇಕಾದವಳು ಸ್ತ್ರೀ. ಈ ದುರ್ಬಲತೆಯೊಂದು ಪ್ರಕೃತಿ ಅವಳಿಗಿತ್ತ ಶಾಪ. ಅಲ್ಲದೇ. ಜಗತ್ತಿನ ವಿಜ್ಞಾನಿಗಳ, ಸಂಶೋಧಕರ, ರಾಜಕೀಯ ಧುರೀಣರ ಪ್ರಶಸ್ತಿ ವಿಜೇತರ ಅಂಕೆಸಂಖ್ಯೆಗಳನ್ನು ಸಂಗ್ರಹಿಸಿ ಇವುಗಳಲ್ಲೆಲ್ಲ ಮಹಿಳೆಯರ ಪಾಲು ಅತೀ ಸಣ್ಣದು; ಯಾವ ಕೆಲಸವನ್ನು ಅವರು ಸಮರ್ಥವಾಗಿ ಮಾಡಲಾರರು ಎಂದು ತಲೆಯೋಡಿಸುವವರೂ ಇದ್ದಾರೆ.

ಇವೆಲ್ಲವೂ ಅತಿರಂಜಿತ ವಾದಗಳು. ಮನೆಯನ್ನು ನಾಲ್ಕುಗೋಡೆಗಳ ಬಂಧನವೆಂದು ತಿಳಿದುಕೊಳ್ಳುವ ಸ್ತ್ರೀಯರು ತೀರ ಕಡಿಮೆ. ಗೃಹಕೃತ್ಯಗಳಲ್ಲಿ, ಅಡುಗೆ ಮಾಡಿ ಸ್ವಜನರಿಗೆ ತಿನ್ನುಣ್ಣಿಸುವುದಲ್ಲಿ, ಮಕ್ಕಳನ್ನು ಬೆಳೆಸುವುದರಲ್ಲಿ, ತನ್ನ ಮನೆಯ ಒಪ್ಪ ಓರಣಗಳಲ್ಲ ಅವಳಿಗೆ ಆನಂದವಿದೆ. ಈ ಮನೆಯನ್ನು ಅವಳು ಎಷ್ಟೊಂದು ಪ್ರೀತಿಸುವಳೆಂದರೆ ಅವಳ ಎಲ್ಲ ಶಕ್ತಿಯೂ ತನ್ನ ಮನೆಯ ಒಳಗೇ ಕೇಂದ್ರೀಕೃತವಾಗುವುದರ ಸಾಧ್ಯತೆಯೇ ಹೆಚ್ಚಿರುವುದರಿಂದ ಸಾಮಾಜಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕಾದ ಅಗತ್ಯವೂ ಹೆಚ್ಚುತ್ತಿದೆ.

ಕಾನೂನು ಅವಳ ಹಕ್ಕು, ಸ್ವಾತಂತ್ರ್ಯಗಳ ರಕ್ಷಣೆಗೆ ಕಟಿಬದ್ಧವಾಗಿರುವುದು ನಿಜ, ಆದರೆ ಅನೇಕ ಸಂದರ್ಭಗಳಲ್ಲಿ ಸ್ತ್ರೀ ಈ ಕಾನೂನ ರಕ್ಷಣೆಪಡೆಯಲು ಸ್ವತಃ ಸಿದ್ಧಳಿಲ್ಲ ಎನ್ನುವುದೂ ಅಷ್ಟೇ ನಿಜ. ಈ ವಿಷಯವನ್ನು ಮುಂದೆ ಎತ್ತಿಕೊಳ್ಳೋಣ.

ಆದರೆ ಹೆಣ್ಣಿನ ತಾಳ್ಮೆ, ಕಷ್ಟಸಹಿಷ್ಣುತೆಗಳಾಗಲೀ, ತ್ಯಾಗಸೇವೆಗಳಾಗಲೀ ದೈವದತ್ತ ವರಗಳಾವುದು ಸಾಧ್ಯ

ವಿಲ್ಲ. ಹೆಣ್ಣಿಗೂ ಹೃದಯವಿದೆ; ಮನಸ್ಸಿದೆ. ಅಲ್ಲಿಯೂ ಅನೇಕ ಭಾವಗಳಿವೆ. ವಿಚಾರಗಳಿವೆ. ಇವುಗಳಿಗೆ ಸರಿಯಾದ ಅಭಿವ್ಯಕ್ತಿ ಸಿಗದೇ ಹೋದಾಗ ಆ ಜೀವಿಯೂ ನೊಂದುಕೊಳ್ಳುತ್ತಾಳೆ. ಆಕೆಯ ವಿಕಾಸಕ್ಕೂ ಧಕ್ಕೆಯೊದಗುತ್ತದೆ. ಅರಳುವುದೇ ಹೂವಿನ ಧರ್ಮವೆಂಬುದು ನಿಜ. ಆದರೆ ಗಿಡಕ್ಕೆ ಸರಿಯಾದ ಸಾರ, ನೀರು, ಗೊಬ್ಬರಗಳಿದ್ದರೆ ಹೂವಿನ ಸೌಂದರ್ಯವೇ ಬೇರೆ. ತನ್ನ ಸುತ್ತಲೂ ಸೌರಭವನ್ನು ಬೀರುವುದರೊಂದಿಗೇ ದೇವರ ಮುಡಿಯನ್ನೇರುವ ಯೋಗ್ಯತೆಯನ್ನು ಅದು ಪಡೆಯುತ್ತದೆ. ಅದೇ ರೀತಿ ತನ್ನ ಹೊಣೆಯನ್ನು ನಿರ್ವಹಿಸುವುದೇ ಸ್ತ್ರೀ ಧರ್ಮವಾದರೂ ಆಕೆಗೆ ಯೋಗ್ಯವಾತಾವರಣಗನ್ನು, ಪ್ರೋತ್ಸಾಹವನ್ನು ಕೊಡುವ ಹೊಣೆಗಾರಿಕೆ ಪುರುಷವರ್ಗ ಮತ್ತು ಸಮಾಜದ ಮೇಲಿದೆ.

ಸ್ವೇಚ್ಛಾಚಾರದಲ್ಲಿ ಸ್ತ್ರೀ–ಪುರುಷರಿಬ್ಬರ ಪಾಲು ಸಮನಾಗಿದ್ದರೂ ಪ್ರಕೃತಿ ಹೆಣ್ಣಿನ ಮೇಲೆ ಸಾಕ್ಷೀಮುದ್ರೆಯನ್ನೊತ್ತುತ್ತದೆ. ಮೇಲ್ನೋಟಕ್ಕೆ ಇದೊಂದು ಬಂಧನವೆನಿಸುವುದು ನಿಜ; ಪಕ್ಷಪಾತ ಧೋರಣೆಯೆಂದು ವಾದಿಸುವವರೂ ಇದ್ದಾರೆ. ಆದರೆ ವಿಚಿತ್ರ ರೀತಿಯಲ್ಲಿ ತನ್ನ ಸಮತೋಲನವನ್ನು ಕಾಯ್ದುಕೊಂಡು ಬಂದ ಈ ಅದ್ಭುತ ಸೃಷ್ಟಿಯಲ್ಲಿ ಹೆಣ್ಣಿನ ಮಾತೃತ್ವವೆಂಬುದು ಪ್ರಕೃತಿಯ ಸಮಸ್ತ ಮಾನವ ಜನಾಂಗಕ್ಕೆ ನೀಡಿದ ಅತೀ ದೊಡ್ಡ ಕೊಡುಗೆ. ಡಾ॥ ಆಲೆಕ್ಸಿಸ್ ಕ್ಯಾರೆಲ್‌ರಂತಹ ಮಹಾವಿಜ್ಞಾನಿಗಳೇ ತಾಯ್ತನ ಹೆಣ್ಣಿಗೆ ಸಹಜವಾದ ನೈಸರ್ಗಿಕ ಕ್ರಿಯೆ, ಆಕೆಯ ಶರೀರ ರಚನೆ, ಅಂಡ ನಿರ್ಮಿತಿಯೆಲ್ಲವೂ ಇದಕ್ಕೆ ಅನುಕೂಲವಾಗಿಯೇ ಇದೆ. ಇದರಿಂದ ಆಕೆಯ ಶರೀರ, ಮನಸ್ಸು ಅರಳುತ್ತದೆ ಎಂಬ ನಿರ್ಣಯಕ್ಕೆ ಬಂದಿದ್ದಾರೆ. ತಾಯ್ತನದ ಅರಿವಿನ ಮಾತ್ರದಿಂದಲೇ ಆಕೆಯ ನರ-ನಾಡಿಗಳು ಸ್ಪಂದಿಸತೊಡಗುತ್ತವೆ. ಮಾತೃತ್ವದೊಂದಿಗೇ ಆಕೆಯ ಬಾಳು ಅನಿರ್ವಚನೀಯವಾದ ಆನಂದ, ಶಾಂತಿ, ತೃಪ್ತಿಯಿಂದ ತುಂಬಿ ಬರುತ್ತದೆ. ಆಕೆಯ ಸ್ತನಗಳಲ್ಲಿ ಉಕ್ಕುವ ಅಮೃತ ಸದೃಶ ಹಾಲು ಆ ಬಾಳಿನ ಸಕಲ ಲಾಲಿತ್ಯ, ಚೈತನ್ಯ, ವಾತ್ಸಲ್ಯಗಳಿಂದ ತುಂಬಿ ಜೀವಸತ್ವವನ್ನೇ ಧಾರೆಯೆರೆಯುವುದೋ ಎಂಬಂತೆ ತನ್ನ ಕರುಳ ಕುಡಿಯನ್ನು ಪೋಷಿಸುತ್ತದೆ. ಹುಲಿ-ಸಿಂಹಗಳಂತಹ ಕ್ರೌರ್ಯ, ರೌದ್ರತೆಗಳಿಗೇ ಹೆಸರಾದ ವನ್ಯ ಜಂತುಗಳಲ್ಲಿಯೇ ಒಂದು ಹಂತದವರೆಗೆ ಈ ಮಾತೃತ್ವ ತನ್ನ ಮರಿಗಳ ರಕ್ಷಣೆಗೆ ಪ್ರಾಣವನ್ನೇ ಪಣವಾಗಿಡುವ ದೃಶ್ಯ ಕಂಡು ಬರುವಾಗ ಮಾನವ ಜಗತ್ತಿನಲ್ಲಿ ಈ ಪ್ರಜ್ಞೆ ಎಷ್ಟು ಆಳವಾಗಿ ಬೇರೂರಲು ಸಾಧ್ಯ ವೆಂಬುದನ್ನು ಗಮನಿಸಲೇ ಬೇಕು. ಸ್ತ್ರೀತ್ವದ ವಿಕಾಸದ ಚರಮ ಹಂತವೇ ಮಾತೃತ್ವ.

ಒಂದು ಕ್ಷಣ ನಾವು ದೇವರು, ಧರ್ಮ-ಅಧರ್ಮ ಇವುಗಳೆಲ್ಲವನ್ನೂ ಬದಿಗಿಟ್ಟು ಸ್ವಚ್ಛಂದ ಜೀವನವನ್ನು ಕಲ್ಪಿಸಿಕೊಳ್ಳೋಣ. ಆಗ ಕಾಡಿಗೂ, ನಾಡಿಗೂ ಮೃಗಗಳಿಗೂ, ಮನುಷ್ಯರಿಗೂ ಯಾವ ವ್ಯತ್ಯಾಸವೂ ಉಳಿಯುತ್ತಿರಲಿಲ್ಲ! ಇತಿಹಾಸದಲ್ಲೂ ಹೆಣ್ಣಿಗಾಗಿ ಚಕ್ರಾಧಿಪತ್ಯಗಳೇ ಉರುಳಿದ, ರಾಜ-ಮಹಾರಾಜರುಗಳು ಮಣ್ಣು ಮುಕ್ಕಿದ ಉದಾಹರಣೆಗಳೂ ಕಡಿಮೆಯಿಲ್ಲ. ಭೋಗ ಜೀವನದ ಈ ಮುಖವೇ ಉಳಿದು ಬಿಟ್ಟಿದ್ದರೆ ಹೆಣ್ಣು ಪ್ರಳಯಾಂತಕಾರಿಯೇ ಆಗಿಬಿಡುತ್ತಿದ್ದಳು. ಮಾತೃತ್ವದ ಈ ವಿಶೇಷ ಶಕ್ತಿ ಪ್ರಕೃತಿಯ ಎಚ್ಚರಿಕೆಯೇ ಆಗಿದೆ.

ಸರಿಯಾಗಿ ವಿವೇಚಿಸಿದರೆ ಈಗ ಎದ್ದಿರುವ ವಾದಗಳಲ್ಲಿ ಹುರುಳಿಲ್ಲ. ಹೆಣ್ಣು ಮತ್ತು ಗಂಡು ಎನಿಸಿಕೊಂಡ ಎರಡು ಶಕ್ತಿಗಳೂ ಒಂದಕ್ಕೊಂದು ಪೂರಕವಾದ ಅಂಶಗಳು. ವೃಕ್ಷ ಮೇಲೋ ಬೀಜ ಮೇಲೋ ಎಂದು ಚರ್ಚೆ ಹೂಡಿದರೆ ತಿಳಿದವರು ನಕ್ಕಾರು. ಒಂದನ್ನು ಬಿಟ್ಟು ಇನ್ನೊಂದಕ್ಕೆ ಅಸ್ತಿತ್ವವೇ ಇಲ್ಲ.

ಅಂತರ ರಾಷ್ಟ್ರೀಯ ಮಹಿಳಾ ವರ್ಷದಲ್ಲಾದರೂ ನಾವು ಭಾರತೀಯ ಸ್ತ್ರೀ ಮತ್ತು ಪಾಶ್ಚಿಮಾತ್ಯ ಸ್ತ್ರೀಯಲ್ಲಿರುವ ಮೂಲಭೇದವನ್ನು ಅರಿತುಕೊಳ್ಳಬೇಕು. ನಮ್ಮ ಸಂಸ್ಕೃತಿ ಸ್ತ್ರೀಯರಲ್ಲಿ ಮಾತೃತ್ವವನ್ನೇ ಆರೋಪಿಸಿ ಮಾನವ ಬದುಕನ್ನೇ ಉದ್ದಾತವನ್ನಾಗಿ ಮಾಡುವ ಪ್ರಯತ್ನವನ್ನು ನಡೆಸಿದೆ. ಸಾಮಾನ್ಯ ಭಿಕ್ಷುಕನಿಂದ ಹಿಡಿದು ರಾಜ-ಮಹಾರಾಜರುಗಳವರೆಗೂ ಇಲ್ಲಿ ಸ್ತ್ರೀಯನ್ನು ಅಮ್ಮ, ತಾಯಿ ಎಂದು ಸಂಭೋಧಿಸುವುದೇ ರೂಢಿಯಾಗಿದೆ. ಸ್ತ್ರೀ, ಕ್ಷಣ ಕಾಲಕ್ಕೆ ಪತ್ನಿಯಾಗಿದ್ದರೆ ಅನಂತ ಕಾಲವೂ ಮಾತೆಯೇ. ಇಲ್ಲಿಯ ಗೃಹ ಜೀವನ ಮತ್ತು ಪದ್ಧತಿಗಳು ಅತ್ಯಂತ ಸುಂದರವಾಗಿದೆ.

ಇಂದಿಗೂ ಸಶಕ್ತವಾದ ಎರಡು ತೋಳುಗಳು ಸಂಪಾದಿಸಿ ತಂದುದನ್ನು ಕುಶಲವಾದ ಎರಡು ಕೈಗಳು

ಸ್ವೀಕರಿಸಿ ಹತ್ತಾರು ಹೊಟ್ಟೆಗಳನ್ನು ತಂಪಾಗಿಡುವ ಕ್ರಮವಿದೆ. ಮನೆ-ಮಂದಿಯನ್ನು ಅನುಸರಿಸಿ ನಡೆಯುವುದು. ಮಕ್ಕಳನ್ನು ಹೆತ್ತು-ಹೊತ್ತು ಸಲಹುವುದು, ಅಡುಗೆ, ನೆಂಟರಿಷ್ಟರ ಸತ್ಕಾರ, ಸಾಧು-ಸಜ್ಜನ ಅತಿಥಿಗಳ ಸೇವೆ, ಹಬ್ಬ-ಹರಿ ದಿನಗಳು, ದಾನ-ಧರ್ಮ, ನೆರೆ-ಕರೆಯವರಿಗೆ ಆಪತ್ಕಾಲದ ಸಹಾಯ ಇವುಗಳೆಲ್ಲದರ ಹೊಣೆಯನ್ನು ನಿರ್ವಹಿಸುತ್ತ ನಗುಮೊಗದಿಂದ ಓಡಾಡುವ ಸಂತುಷ್ಟ ಗೃಹಿಣಿ ಮನೆಯ ಅತಿ ದೊಡ್ಡ ಸಂಪತ್ತಾಗಿದ್ದಾಳೆ. ಬೆಳಗಿನ ಜಾವ ಆಕೆ ಹೇಳಿಕೊಳ್ಳುತ್ತಿರುವ ದೇವರ ನಾಮಗಳು, ಪೂಜೆ-ಪುನಸ್ಕಾರ, ಹಿರಿಯರನ್ನು ಗೌರವದಿಂದ ಕಾಣುವುದು, ಅವೇಳೆಗಳಲ್ಲಿ ಅತಿಥಿಗಳ ಆಗಮನವಾದರೆ ತನಗೂ ಉಳಿಸಿಕೊಳ್ಳದಂತೆ ಅವರನ್ನು ಊಟ-ತಿಂಡಿಗಳಿಂದ ಸಂತುಷ್ಟಗೊಳಿಸುವುದು, ಮನೆ-ಮಂದಿಗೆ ಸ್ವಲ್ಪ ಅನಾರೋಗ್ಯ ಕಂಡರೂ ವಾತ್ಸಲ್ಯಪೂರ್ಣ ಆರೈಕೆ ಇವುಗಳೆಲ್ಲ ಪರೋಕ್ಷವಾಗಿ ಬೆಳೆಯುವ ಮಕ್ಕಳ ಮನಸ್ಸಿನ ಮೇಲೆ ಭಾರೀ ಪರಿಣಾಮವನ್ನುಂಟುಮಾಡುತ್ತಿವೆ. ಹಬ್ಬಹರಿದಿನಗಳಲ್ಲಿ, ಸಾಧುಸಜ್ಜನರ ಸೇವೆಯಲ್ಲಿ ದಾನ-ಧರ್ಮಗಳಲ್ಲಿ ಇರುವ ಸಂಭ್ರಮವಾದರೂ ಎಷ್ಟು ? ತಾಯಿಯನ್ನು ಅನುಸರಿಸಿ ನಡೆಯುವ ಮಕ್ಕಳು ಸೇವೆ, ತ್ಯಾಗ, ಪರೋಪಕಾರದಂತಹ ಗುಣಗಳನ್ನು ರೂಢಿಸಿಕೊಂಡೇ ಬೆಳೆಯುತ್ತಾರೆ. ಆರ್ಥಿಕ ಸಂಪತ್ತು ಕೊಂಡು ತರಲಾಗದ ಜೀವನ ಶಿಕ್ಷಣ ಏನಿದೆಯೋ ಅದೆಲ್ಲವನ್ನು ನೀಡುವ ತಾಯಿ ಅಕ್ಷರಶಃ ಮೊದಲ ಗುರುವಾಗಿಯೇ ಇದ್ದಾಳೆ. ಪತಿಯ ಬಗೆಗೆ ಅನಾದರ, ಆವ ಹೇಳನದ ಒಂದು ನುಡಿಯನ್ನು ಅವಳು ಆಡಲಾರಳು. ವಿಶೇಷ ಧನ, ದೌಲತುಗಳಿಲ್ಲದ ಕಷ್ಟಕಾರ್ಪಣ್ಯಗಳ ಜೀವನವಾದರೂ ಸರಿಯೇ, ದೈವೇಚ್ಛೆಯೆಂದೋ, ಋಣಾನುಬಂಧವೆಂದೋ ತಿಳಿದು ಸರಳ, ನಿರಾಡಂಬರ ಜೀವನ ನಡೆಯಿಸುವುದು ಸರ್ವೇ ಸಾಮಾನ್ಯವಾದ ದೃಶ್ಯ. ಅನುಕೂಲದ ಬೆನ್ನು ಹತ್ತಿ ಪತಿಯನ್ನಾಗಲೀ, ಮಕ್ಕಳನ್ನಾಗಲೀ ತ್ಯಜಿಸುವ ಕಲ್ಪನೆ ಕನಸಿನಲ್ಲಿಯೂ ಸುಳಿಯಲಾರದು. ಹಾಗೆಯೇ ಪತಿಗೂ ಕೈ ಹಿಡಿದ ಹೆಂಡತಿ ಹೇಗೂ ಇರಲಿ ; ಅವಳೇ ಜೀವನದ ಸರ್ವಸ್ವ. ಮಕ್ಕಳನ್ನು ಹೆತ್ತು, ಹೊತ್ತು ಅಂಗಸೌಷ್ಠವ ಕಳೆದು ಹೋಗಿದೆಯೆಂಬ ಆಕ್ಷೇಪವಾಗಲೀ, ತನ್ನ ಮಟ್ಟಕ್ಕೆ ಸರಿಯಾಗಿ ನಡೆಯುವ ಶಕ್ತಿಯಿಲ್ಲವೆಂಬ ನಿಂದೆಯಾಗಲೀ ಬರುವುದು ಕಡಿಮೆ. ಜೀವನದಲ್ಲಿ ಕಷ್ಟಸುಖಗಳನ್ನೂ, ಅನುಕೂಲ ಪ್ರತಿಕೂಲ ಪರಿಸ್ಥಿತಿಗಳನ್ನು ಎದುರಿಸುತ್ತಾ ಹೋದಂತೆಲ್ಲ ದಾಂಪತ್ಯ ಅನ್ಯೋನ್ಯವಾಗುತ್ತಾ ನಡೆದು ಸ್ನೇಹ, ಪ್ರೀತಿಯೂ ವರ್ಧಿಸಿ ಕೊನೆಗೆ ತನ್ನ ಪತ್ನಿಯಲ್ಲಿಯೂ ಮಾತೃತ್ವವನ್ನೇ ಕಾಣುವ ಸಾಧ್ಯತೆಗಳೂ ಇವೆ. ಒಂದೊಮ್ಮೆ ಪತಿಯು ಕಾಲುಜಾರಿದರೂ ಪತ್ನಿ ಕಳೆದು ಹೋದ ತನ್ನ ವಸ್ತುವನ್ನು ಪಡೆಯುವ ಪ್ರಯತ್ನವನ್ನು ನಡೆಯಿಸುವಳಲ್ಲದೇ ತಾನೂ ಜಾರಿಣಿಯಾಗಬಹುದೆಂಬ ವಿಚಾರ ಎಂದೂ ಬರಲಾರದು. ಮಕ್ಕಳ ಭವಿಷ್ಯ ಸುಗಮವಾಗಲು ಆಕೆ ಯಾವ ಕಷ್ಟಕ್ಕೂ ಹೆದರುವವಳಲ್ಲ. ಕಾನೂನು ಅವಕಾಶ ಕೊಟ್ಟರೂ ಸ್ತ್ರೀ, ಅದರಲ್ಲೂ ತಾಯಿ ವಿವಾಹ ವಿಚ್ಛೇದನವನ್ನಾಗಲೀ, ಎರಡನೇ ಸಂಬಂಧವನ್ನಾಗಲೀ ಒಪ್ಪಿಕೊಳ್ಳುವುದು ತೀರ ಕಡಿಮೆ. ಈ ಕಾರಣದಿಂದಾಗಿಯೇ ಕುಟುಂಬ ವ್ಯವಸ್ಥೆ ಇನ್ನೂ ಕುಸಿದಿಲ್ಲ.

ಗಾಂಧೀಜಿ, ವಿನೋಬಾರಂತಹ ಪುಣ್ಯಪುರುಷರು ತಾಯಂದಿರಿಂದಲೇ ತಮ್ಮ ಬದುಕು ಉಜ್ವಲವಾಗಿ ರೂಪುಗೊಂಡಿತು ಎಂದಿರುವುದು ಅರ್ಥವತ್ತಾಗಿದೆ. ಯಾವ ಆರ್ಥಿಕ ಸಂಪತ್ತು ಕೊಳ್ಳಲಾಗದ ಬದುಕಿನ ಮೌಲ್ಯಗಳು ಒಂದೆರಡು ದಿನಗಳಲ್ಲಿ ಅಥವಾ ಲೇಖನ, ಭಾಷಣ, ಉಪದೇಶಗಳಿಂದ ಮೂಡಿಬರುವಂತಹುಗಳಲ್ಲ. ಜೀವನಮೌಲ್ಯಗಳಿಂದ ಕೂಡಿದ ಬದುಕು ಗೃಹಿಣಿಯರ ಸಾಧನೆಯ ಫಲ.

ಸ್ತ್ರೀ ಜೀವನದ ಇನ್ನೊಂದು ಮುಖವಾದ ಭೋಗಕ್ಕೆ ಹೆಚ್ಚಿನ ಪ್ರಾಮುಖ್ಯತೆ ಪಶ್ಚಿಮ ದೇಶಗಳಲ್ಲಿದೆ. ಆ ವಿಲಾಸೀ ಜಗತ್ತಿನಲ್ಲಿ ಸ್ತ್ರೀ ಭೋಗವಸ್ತು. ಸ್ವಾತಂತ್ರ್ಯದ ಹೆಸರಿನಲ್ಲಿ ವಿವಾಹವಿಚ್ಛೇದನಗಳು ಮನೆಮಾತಾಗಿವೆ. ನಡು ಹರೆಯದಲ್ಲೂ ತಾಯಂದಿರು ತಾವು ಕುಮಾರಿಯರೆಂದೇ ಭ್ರಮಿಸುತ್ತಾರೆ. ಗರ್ಭನಿರೋಧಕಗಳು, ಕಾನೂನುಬದ್ಧ ಗರ್ಭಪಾತ ತಾಯ್ತನದ ವಿರುದ್ಧವಾಗಿ ಎಲ್ಲ ಹೋರಾಟಗಳೂ ನಡೆದಿವೆ. ನೈಸರ್ಗಿಕವಾದ ತಾಯ್ತನವನ್ನು ವಿರೋಧಿಸುವುದರಿಂದ ಸ್ತ್ರೀ ಮನೋದೌರ್ಬಲ್ಯ, ನರದೌರ್ಬಲ್ಯಗಳಂತಹ ವ್ಯಾಧಿಗಳಿಗೆ ತುತ್ತಾಗಬಹುದು ಎಂಬ ವಿಜ್ಞಾನಿಗಳ ತೀರ್ಮಾನವನ್ನು ಕಡೆಗಣಿಸಲಾಗಿದೆ. ಆರ್ಥಿಕ ಸುಖ, ಅನುಕೂಲಗಳನ್ನು ಒದಗಿಸುವವನ ಬೆನ್ನುಹಿಡಿಯುವುದೇ ಸಾಮಾನ್ಯ

ನಿಯಮವಾಗಿದೆ. ಸ್ವೈರ ವೃತ್ತಿಯಲ್ಲಿ ಸ್ತ್ರೀ, ಪುರುಷರಿಗೆ ಪೈಪೋಟಿ ನಡೆದಿದೆ. ಈ ಅಭದ್ರ ವಾತಾವರಣದಲ್ಲಿ ಬೆಳೆಯುವ ಮಕ್ಕಳ ಸ್ಥಿತಿ? ಕುಟುಂಬ ವ್ಯವಸ್ಥೆಯೇ ಕುಸಿದಿರುವಾಗ ತಂದೆತಾಯಿ ಯಾರು ಎಂದು ತಿಳಿಯುವ ಸಾಧ್ಯತೆಗಳೂ ಕಳೆದುಹೋಗುತ್ತಿರುವಾಗ ಈ ಮಕ್ಕಳು ಯಾರ ಬಗ್ಗೆ ಗೌರವ, ಶ್ರದ್ಧೆಗಳನ್ನಿಟ್ಟು ಬೆಳೆಯಬೇಕು? ಯಾವ ಆದರ್ಶವನ್ನಿಟ್ಟುಕೊಳ್ಳಬೇಕು? ಪರಿಣಾಮವಾಗಿ ಉಚ್ಛೃಂಕಲ ವೃತ್ತಿಯ ಜನಾಂಗ ಸೃಷ್ಟಿಯಾಗಿದೆ. ಸುಖ, ಶಾಂತಿ, ನೆಮ್ಮದಿಗಳು ಮಾಯವಾಗಿವೆ. ಆರ್ಥಿಕವಾಗಿ ಸುಸಂಪನ್ನರಾದ ಜನ, ಸ್ನೇಹ, ಪ್ರೇಮ, ವಾತ್ಸಲ್ಯಗಳಿಲ್ಲದೇ ಹುಚ್ಚರಂತಾಗಿದ್ದಾರೆ. ಜೀವನದಲ್ಲಿ ನಂಬಿಕೆ ಕಳೆದುಹೋಗುತ್ತದೆ. ನಮ್ಮ ಜೀವನ ಪದ್ಧತಿಗಳನ್ನು ಅಲ್ಲಿ ನಿರೀಕ್ಷಿಸಿದರೆ ತಪ್ಪಾಗುತ್ತದೆ. ಅಲ್ಲಿಯ ಪರಿಸ್ಥಿತಿಯೂ, ನಂಬಿಕೆಗಳೂ ತೀರ ಭಿನ್ನವಾಗಿವೆ.

ಭಾರತೀಯ ಸಂಸ್ಕೃತಿಗೆ ಅನುಗುಣವಾಗಿ ನಮ್ಮ ನಂಬಿಕೆಗಳೂ, ಜೀವನ ಪದ್ಧತಿಗಳು ಇವೆ. ಹೀಗೆಂದ ಮಾತ್ರಕ್ಕೆ ಇದೇ ಜೀವನದ ಏಕಮೇವ ಸತ್ಯವಲ್ಲ.

ಇಂದು ಕಾಲ ಬದಲಾಗಿದೆ. ಸಾಮಾಜಿಕ ಮೌಲ್ಯಗಳೂ ಬದಲಾಗಿವೆ. ಎರಡು ಕೈಗಳ ಸಂಪಾದನೆಯಿಂದ ನಾಲ್ಕು ಹೊಟ್ಟೆಗಳನ್ನು ತಂಪಾಗಿರಸಬಲ್ಲೆನೆಂಬ ವಿಶ್ವಾಸ ಯಾವ ಸಾಮಾನ್ಯ ಗೃಹಿಣಿಯಲ್ಲೂ ಉಳಿದಿಲ್ಲ. ಎಷ್ಟೋ ಸಂಸಾರಗಳಲ್ಲಿ ಹೆಣ್ಣಿನ ಸಂಪಾದನೆ ಅನಿವಾರ್ಯವೂ ಆಗಿದೆ. ಇಂತಹ ಸಂದರ್ಭಗಳಲ್ಲಿ ಆಕೆ ದುಡಿದು ತರುವುದು ಅವಳ ಸಾಮರ್ಥ್ಯದ ಇನ್ನೊಂದು ಮುಖವೇ ಆಗಿದೆ. ಆದರೆ ಸುಖಜೀವನಕ್ಕೆ ಆರ್ಥಿಕ ಸುಭದ್ರತೆ ಅನಿವಾರ್ಯವೆಂದು ಪರಿಗಣಿಸುವ ಮಹಿಳೆಯರಿಗೆ ಸುಖವೆಂಬುದರ ಸರಿಯಾದ ಕಲ್ಪನೆಯಿರುವುದು ಒಳಿತು. ಬೇಕೆನಿಸಿದುದನ್ನು ಕೊಳ್ಳುವುದು, ತರತರಹದ ಬಟ್ಟೆಬರೆಗಳು, ನಾಲಗೆ ಬಯಸಿದ ತಿಂಡಿ, ಸ್ವೇಚ್ಛಾವಿಹಾರ, ಚಿತ್ರವಿಚಿತ್ರದ ಸುಖಸಾಮಗ್ರಿಗಳು ಇವುಗಳೆಲ್ಲ ಸುಖದ ಮಾನದಂಡಗಳಾಗುವುದು ಸಾಧ್ಯವೇ ಎಂಬುದು ಗಹನವಾದ ಪ್ರಶ್ನೆ. ಭೋಗಜೀವನದ ಆಸೆ ಒಮ್ಮೆ ಪ್ರಜ್ವಲಿಸಿದರೆ ಅದು ಉರಿವ ಅಗ್ನಿಯಂತೆ. ಸ್ವಾಹಾ ಮಾಡುತ್ತಲೇ ಉರಿಯೂ ಹೆಚ್ಚುತ್ತಲೇ ಹೋಗುತ್ತದೆ. ಇದಕ್ಕೆ ಪಾರವಿಲ್ಲ, ವಿಲಾಸೀಜೀವನಕ್ಕೆ ಬಗ್ಗಿದ ಮೈ, ಮನಸ್ಸು ನೂರು ನೆವಗಳನ್ನು ಒಡ್ಡಿ ತಮ್ಮ ಜವಾಬ್ದಾರಿಯನ್ನು ತಪ್ಪಿಸಿಕೊಳ್ಳುತ್ತವೆ. ಇದು ಅತಿಯಾದಾಗ ಇಬ್ಬರ ಸಂಪಾದನೆಯೂ ಸಾಲದೇ ಹೋಗಬಹುದು. ಆಗ ಅಗ್ಗದ ಸಂಪಾದನೆಗೂ ಕೈಯೊಡ್ಡುವ ಚಟ ಬೆಳೆಯುತ್ತದೆ. ಲಂಚ, ಭ್ರಷ್ಟಾಚಾರ, ಕಳ್ಳಸಾಗಾಣಿಕೆ ಮೊದಲಾದ ದೇಶದ್ರೋಹದ ಚಟುವಟಿಕೆಗಳೂ ಬೆಳೆಯುತ್ತವೆ. ತಂದೆತಾಯಂದಿರ ಹೆಚ್ಚಿನ ಸಮಯ ಮನೆಯಿಂದ ಹೊರಗೇ ಕಳೆಯುವಾಗ ಬೆಳೆಯುವ ಮಕ್ಕಳಿಗೂ ಸ್ನೇಹ, ವಾತ್ಸಲ್ಯದ ವಾತಾವರಣದಿಂದ ವಂಚಿತರಾಗುತ್ತಾರೆ. ಸರಿಯಾದ ಮಾರ್ಗದರ್ಶನವಿಲ್ಲ. ಕಣ್ಣುಮುಂದೆ ಯೋಗ್ಯ ಆದರ್ಶವೂ ಇಲ್ಲ. ಮುಂದೆ ಅವರಿಂದ ವಿಧೇಯತೆ, ಗೌರವಗಳನ್ನು ನಿರೀಕ್ಷಿಸುವುದು ಹೇಗೆ?

ಸುಖಜೀವನದಲ್ಲಿ ಆರ್ಥಿಕತೆಯ ಪಾಲು ಇದೆ. ಅದಕ್ಕಿಂತಲೂ ಹೆಚ್ಚಾಗಿ ಜೀವನ ಶಿಕ್ಷಣದ ಪಾಲು ಇದೆ. ಆರ್ಥಿಕ ಜವಾಬ್ದಾರಿಯನ್ನು ಪುರುಷರು ನಿರ್ವಹಿಸಿದರೆ ನೈತಿಕ ಜವಾಬ್ದಾರಿ ಮಹಿಳೆಯದು. ಈಗ ಜೀವನ ಪದ್ಧತಿಯನ್ನು ಕುರುಡು ಸಂಪ್ರದಾಯವೆಂದು ತಳ್ಳಿಹಾಕಲು ಬರುವುದಿಲ್ಲ. ಯಾವ ಪದ್ಧತಿಗಳಿಂದ ವ್ಯಕ್ತಿತ್ವದ ಬೆಳವಣಿಗೆಯಾಗುತ್ತದೋ, ಜೀವನದ ವಿಕಾಸವಾಗುತ್ತದೋ, ಸಮಾಜದಲ್ಲಿ ಯೋಗ್ಯ ಘಟಕಗಳ ನಿರ್ಮಾಣವಾಗುತ್ತದೋ ಆ ಪದ್ಧತಿಗಳೆಲ್ಲವೂ ಒಳ್ಳೆಯವುಗಳು. ಅಲ್ಲದೇ ಹಿಂದಿನಕಾಲದಿಂದಲೂ ನಡೆದು ಬಂದ ಪದ್ಧತಿಗಳಾದುದರಿಂದ ಅವುಗಳಿಗೆ ಜೋತುಬೀಳಬೇಕೆನ್ನುವುದು ತಪ್ಪು. ಉದಾಹರಣೆಗಾಗಿ ಸಾಧಾರಣವಾಗಿ ಬದುಕುವ ಸಂಸಾರವೊಂದು ತಮ್ಮ ಮನೆತನ ಧಾನ ಧರ್ಮಗಳಿಗೆ ಹೆಸರಾದುದು, ತಾವು ಸಂಪ್ರದಾಯಸ್ಥರು ಎಂದುಕೊಂಡು ಸಾಲ, ಸೋಲಗಳನ್ನನುಭವಿಸಿ ಮಗಳ ಮದುವೆಯನ್ನು ಅದ್ಧೂರಿಯಾಗಿ ನಡೆಸಲು ನಾಲ್ಕಾರು ದಿನಗಳ ದರಬಾರು ನಡೆಯಿಸಿದರೆ ಈ ಸಂಪ್ರದಾಯ ಹಾಸ್ಯ ನಿಂದೆಗಳಿಗೆ ಗುರಿಯಾಗುತ್ತದೆ. ಕಾಲ, ಪರಿಸ್ಥಿತಿ ಅನುಕೂಲಗಳನ್ನು ಹೊಂದಿಕೊಂಡು ಪದ್ಧತಿಗಳಲ್ಲಿ ಕೆಲವು ಬದಲಾವಣೆಗಳಾಗಲೇಬೇಕು.

ಹಾಗೆಯೇ ಪತಿಯ ಸಂಪಾದನೆ ಏತಕ್ಕೂ ಬಾರದ ಸಂಸಾರವೊಂದರಲ್ಲಿ ಮನೆಯಲ್ಲಿ ಹಿರಿಯರಾದ ಅಜ್ಜಿಯೋ, ಅತ್ತೆಯೋ ತಮ್ಮಂತಹ ಸಂಪ್ರದಾಯವಂತರ ಕುಟುಂಬ

ದೆಲ್ಲಿಯೇ ಯಾವ ಹೆಣ್ಣೂ ಕೆಲಸಕ್ಕೆ ಹೋಗಿಲ್ಲವೆಂಬ ಆಕ್ಷೇಪ ವೆತ್ತಿದರೆ ಅವರಿಗೆ ಸರಿಯಾದ ತಿಳುವಳಿಕೆಯನ್ನು ಕೊಟ್ಟು ಗೃಹಿಣಿಯಾದವಳ ಸಂಸಾರದ ಭಾರಕ್ಕೆ ಪತಿ ಯೊಂದಿಗೆ ತಾನೂ ಹೆಗಲನ್ನೊಡ್ಡುವುದು ನ್ಯಾಯವಾಗಿದೆ. ಇಂತಹ ಪರಿಸ್ಥಿತಿಗಳಲ್ಲಿ ಸಂಪ್ರದಾಯವನ್ನು ಮುರಿದು ಜೀವನ ಪದ್ಧತಿಗಳನ್ನು ಉಳಿಸಬೇಕಾಗುತ್ತದೆ. ಮಕ್ಕಳು ಮಾತೃಸ್ನೇಹ, ವಾತ್ಸಲ್ಯಗಳಿಂದ ವಂಚಿತರಾಗದಂತೆ ನೋಡಿಕೊಂಡು ಮನೆಯಲ್ಲೂ ಯೋಗ್ಯವಾತಾವರಣವ ನ್ನೀಡುವ ಮಹತ್ತರ ಜವಾಬ್ದಾರಿಯನ್ನು ಆಕೆ ಅತ್ಯಂತ ಜಾಗರೂಕಳಾಗಿ ನಿರ್ವಹಿಸಬೇಕಾಗುತ್ತದೆ. ಪದ್ಧತಿಗಳಲ್ಲಿ ಕೆಲವು ಬದಲಾವಣೆಗಳು ಒಂದು ಸಮಾಜ ಜೀವಂತವಾಗಿ ರುವುದಕ್ಕೆ ಸಾಕ್ಷಿಯಾಗಿದೆ.

ನಾವು ಯಾವ ಸುಖವನ್ನು ಅಪೇಕ್ಷಿಸುತ್ತೇವೋ ಆ ಸುಖ ಕೊನೆವರೆವಿಗೂ ಉಳಿಯಬೇಕಾದರೆ ಜೀವನಮೌಲ್ಯ ಗಳಿಂದ ಕೂಡಿದ ಬದುಕುಬೇಕು ; ಈ ಬದುಕನ್ನು ರೂಪಿ ಸುವಲ್ಲಿ ಗೃಹ, ಗೃಹಿಣಿ ಮತ್ತು ಜೀವನ ಪದ್ಧತಿಗಳ ಪಾಲು ಅತಿ ದೊಡ್ಡದು ಎಂಬುದು ಚಿಂತನೆಯಿಂದ ಕಂಡು ಕೊಳ್ಳುವ ವಿಚಾರ.

ದಡಗಳಿಂದ ನದಿಗೊಂದು ಪಾತ್ರತೆಯಿದೆ. ಹರಿ ಯುವ ನೀರಿಗೆ ಒಡ್ಡುಹಾಕಿ ಸರಿಯಾದ ಉಪಯೋಗ ವಾಗುವಂತೆ ದಿಕ್ಕನ್ನೇ ಬದಲಾಯಿಸುವುದಿದೆ. ಇದು ಬಂಧನವಾಗುವುದು ಸಾಧ್ಯವಿಲ್ಲ. ಅದೇ ರೀತಿ ಗೃಹಗ ಳಿಂದ ಗೃಹಿಣಿಗೊಂದು ಪಾತ್ರತೆಯಿದೆ. ಸಾಮಾಜಿಕ ವಾಗಿಯೂ, ಪ್ರಾಕೃತಿಕವಾಗಿಯೂ ಕೆಲವು ನಿಯಮ ಗಳು ಬಿಗಿಯಾಗಿರುವುದರಿಂದ ಆಕೆಯ ಶಕ್ತಿ ಮಾತೃತ್ವದ ವಿಶ್ವರೂಪದಿಂದ ಪ್ರಕಟವಾಗಲು ಸಾಧ್ಯವಾಗಿದೆ. ಈ ಶಕ್ತಿ ಎಲ್ಲೆಲ್ಲೂ ಜಾಗೃತವಾದರೆ ಅನೇಕ ಸಮಸ್ಯೆಗಳು ತಮ್ಮಿಂದ ತಾವೇ ಪರಿಹಾರ ಗೊಂಡಾವು.

ಮಹಿಳೆಯರು ನೆಮ್ಮದಿಯಿಂದ ಬದುಕುವ ದಿನಗಳು ಕಳೆದುಹೋಗಿವೆ. ಇಂದು ಆಕೆಗೆ ಒದಗಿ ಬಂದಿರುವ ಸವಾಲುಗಳು ಒಂದಕ್ಕಿಂತಲೂ ಒಂದು ಬಲವತ್ತರವಾದು ವುಗಳು. ಭೌತಿಕತೆಯ ಆಕರ್ಷಣೆಯು ಕಡಿಮೆಯಿಲ್ಲ. ಸ್ವಾತಂತ್ರ್ಯ ಮತ್ತು ಸ್ವಚ್ಛಂಧತೆಯೊಳಗಣ ಸೀಮಾರೇಖೆ ಅತಿ ಸೂಕ್ಷ್ಮವಾಗುತ್ತಾ ಸಾಗಿದೆ. ಈ ಸಂದರ್ಭದಲ್ಲಿ ಪರಿಸ್ಥಿತಿಯನ್ನು ಸಮರ್ಥವಾಗಿ ಎದುರಿಸುವ ಧಾರ್ಷ್ಟ್ಯ ವನ್ನು ತೋರಿಸಿ, ಜೊತೆಗೆ ಬದುಕಿನ ಮೌಲ್ಯಗಳನ್ನು ರಕ್ಷಿಸುವ ತಾಯಿಬೇರು ತಾನು ಎಂಬುದನ್ನು ಮರೆಯದೆ, ಎರಡನ್ನೂ ಸಮನ್ವಯಿಸಿದ ಸುಂದರ ಬದುಕು ಅವಳದಾಗ ಬೇಕಾದರೆ ವಿಶೇಷ ಪ್ರಯತ್ನವೂ ಬೇಕೆಂಬುದನ್ನು ಮರೆ ಯಬಾರದು.

ಮಹಿಳಾ ವರ್ಷದಲ್ಲಿ ಈ ಬಗ್ಗೆ ಚಿಂತನ-ಮಂಥನ ಗಳು ನಡೆದಿರುವುದು ಸ್ವಾಗತಾರ್ಹ.

---

"ಪ್ರೇಮವಶೆಯಾದ ಲೈಲಾ ತನ್ನ ಪ್ರಿಯಕರನಾದ ಮಜ್ನುಗಾಗಿ ಉನ್ಮಾದಿನಿಯಂತೆ ಮರಳುಗಾಡಿನಲ್ಲಿ ಓಡುತ್ತಿರುವಂತೆ ನಾನೂ ಓಡಿ ಹೋಗಿ ಹುಚ್ಚಿಯಂತೆ ಅಲೆದಾಡಲು ಆಶಿಸುತ್ತೇನೆ. ಆದರೆ ನನ್ನ ಪಾದಗಳಿಗೆ ನಾಚಿಕೆ ಎಂಬ ಶೃಂಖಲೆಗಳು ಬಂಧಿಸಿವೆ."

"ನಿನ್ನ ಶತೃ ನಿನ್ನ ಬಳಿಗೆ ನಮ್ರತೆಯಿಂದ ಬಂದಾಗ ಅವನ ನಮ್ರತೆ ನಂಬಬೇಡ. ಕುಟಿಲ ಧನಸ್ಸು ಬಗ್ಗಿದಷ್ಟೂ ತನ್ನ ಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸುತ್ತದೆ."

ಜೇಬುನ್ನೀಸಾ (ಉರ್ದು ಕವಯಿತ್ರಿ)



—ಉಷಾ ನವರತ್ನರಾವ್

'ಬುದ್ದ್ಯೋರಾ... ಒಂದ್ನಾಕು ಅಡಿಕೆ ಕೊಟ್ಟೀರಾ ?' ರಾಮಕ್ಕ ರಂಗಶೆಟ್ಟರ ಅಂಗಡಿಯ ಮುಂದಿದ್ದ ಕಲ್ಲು ಚಪ್ಪಡಿಯ ಮೇಲೆ ಕುಳಿತಳು. ಸೊಂಟದಿಂದ ಎಲೆ ಅಡಿಕೆ ಚೀಲ ತೆಗೆದು ಹೊಗೆಸೊಪ್ಪನ್ನು ಅಂಗೈಗೆ ಹಾಕಿಕೊಂಡು ಸಣ್ಣ ತಗಡಿನ ಡಬ್ಬಿಯಲ್ಲಿದ್ದ ಸುಣ್ಣವನ್ನು ಹೊಗೆ ಸೊಪ್ಪಿನೊಂದಿಗೆ ಬೆರೆಸಿ ಉಜ್ಜ ತೊಡಗಿದಳು. ಶೆಟ್ಟರು ಕೊಟ್ಟ ಚೂರಡಿಕೆಯನ್ನು ಬಾಯಿಗೆ ಹಾಕಿಕೊಂಡು ಒಣಗುತ್ತಾ ಬಂದ ನಾಲ್ಕು ಎಲೆಗಳನ್ನು ಮಡಚಿ ಬಾಯಿಗೆ ತುರುಕಿಕೊಂಡಳು. ಎಲೆ ಅಡಿಕೆಯನ್ನು ಸವಿಯುತ್ತಾ ಅರೆ ಕಣ್ಣುಮುಚ್ಚಿ ಕುಳಿತಳು.

ಅವಳು ಹಾಗೆ ಬಂದು ಬಿಡುವಾಗಿ ಆ ಕಲ್ಲಿನ ಮೇಲೆ ಕುಳಿತರೆ ಏನಾದರೂ ವಿಶೇಷವಿರಬೇಕೆಂದು ತಿಳಿದಿದ್ದ ಶೆಟ್ಟರು ಗಂಟಲು ಸರಿಮಾಡಿಕೊಂಡು ಕೇಳಿದರು.

'ಏನು ರಾಮಕ್ಕಾ, ಇವೊತ್ತು ಇಷ್ಟು ಬಿಡುವಾಗಿ ಬಂದು ಕೂತಿದ್ದೀ ? ನಿನ್ನ ಬಾಕಿ ಎಲ್ಲಾ ಯಾವಾಗ ತೀರಿಸ್ತೀ ?'

ಕಣ್ಣು ಮುಚ್ಚಿಯೇ ರಾಮಕ್ಕ ಉತ್ತರಿಸಿದಳು: "ಅದ್ಯಾಕೆ ಬುದ್ಧ್ಯೋರಾ ...ನಾನೇನು ಊರ್ಬಿಟು ಒಂಟೋಯ್ತೀನಾ ? ಇಲ್ಲಾ ಪರಾಣ ಬುಟ್ಬುಡ್ತೀನಾ ?.... ತೀರಿಸ್ತೀನಿ ಸುಮ್ಕಿರಿ.... ಬ್ಯಾಕಾದ್ರೇ ನನ್ನ ಮನೀನ್ನ ಅಡವಿಡ್ತೀನೇಳಿ.... ಏನೋ ನನ್ಮಗ ಎಲ್ಡು ತಿಂಗಳಿಂದ ನಂಗೆ ಅಣ ಕಳಿಸಿಲ್ಲಾ....ನಂಗೇ ಪಾಡು ಬಂದ್ಬುಡ್ತು.... ಅವ್ನು ಇಂದು ನಾಳೀಕೆ ಕಳಿಸಿದ್ರೆ ಒಂದೇ ದಪ ಎಲ್ಲಾ ತೀರಿಸ್ಬುಡ್ತೀನೆ...."

"ಹಂಗಲ್ಲಾ ರಾಮಕ್ಕ. ಸಾಲ ಹನುಮಂತನ ಬಾಲದ ಹಾಗೆ ಬೆಳೀತಿದೆ. ಆಗಲೇ ಐವತ್ತು ರುಪಾಯಿ ಆರವತ್ತು ಪೈಸಾ ಆಗೋಗಿದೆ." ಶೆಟ್ಟರಿಗೆ ಆತಂಕ ರಾಮಕ್ಕನ ಸಣ್ಣ ಮನೆಯ ಆಸೆ ಕಣ್ಣ ಮುಂದೆ ನಿಂತರೂ ಒಂದು ವೇಳೆ ಅವಳ ಮಗ ನಿಂಗ ಬಂದರೆ ಅದು ತಮ್ಮ ಕೈತಪ್ಪಿ ಹೋಗುವುದೆಂಬ ಭಯ.

ಶೆಟ್ಟರ ಮಾತು ಕಿವಿಗೆ ಬೀಳಲಿಲ್ಲವೆನ್ನುವಂತೆ ರಾಮಕ್ಕ ಬಾಯಲ್ಲಿದ್ದ ಎಲೆಯಡಿಕೆ ರಸವನ್ನು ಪಿಚಕ್ಕನೇ

ರಸ್ತೆಗೆ ಉಗುಳಿ ರಸ್ತೆಯಂಚಿನಲ್ಲಿ ಮೈ ಕೆರೆದುಕೊಳುತ್ತಾ ಕುಳಿತಿದ್ದ ಬೀದಿನಾಯತ್ತ ದೃಷ್ಟಿ ಹಾಯಿಸಿದಳು.

ಶೆಟ್ಟರು ಅವಳನ್ನು ಬೇಕೆಂತಲೇ ಎಚ್ಚರಿಸಿದರು. "ಕೇಳಿಸ್ತಾ ರಾಮಕ್ಕಾ ?.... ನಿನ್ನ ಮಗ ನಿಂಗೆ ಕಾಗ್ದ ಬರೆದು, ಹಣ ಕಳಿಸಿ ಎರಡು ತಿಂಗಳ ಮೇಲಾಯ್ತು.... ಇನ್ನೂ ನಿಂಗೆ ಅವನ ಆಸೇನಾ ? ಸುಮ್ನೇ ನೀನೇ ಸಾಲ ತೀರಿಸೋಕೆ ಯಾವ್ದಾದ್ರೂ ಏರ್ಪಾಡು ಮಾಡು.... ನೀನು ಸಾಲ ತೀರಿಸೋತನ್ಕ ನಾನು ನಿಂಗೆ ಏನೂ ಕೊಡೋಲ್ಲ...."

ರಾಮಕ್ಕ ಶೆಟ್ಟರ ಕಡೆ ತಿರುಗಿ ಅವರನ್ನೇ ದಿಟ್ಟಿಸಿ ಸಿದಳು. "ಬುದ್ಧೀರಾ.... ನಿಮ್ಮಗ....ದೊಡ್ಡೋನೂ ನಮ್ಮ ನಿಂಗನ ಜೊತೆ ಅಲ್ವಾ ? ಅವ್ನು ಓದಾಕೆ ಓದಾಗ್ನಿನಿಂದ... ಒಂದು ದಿನ ಅವನ ಕಾಜ್ಗ ಬರ್ದಿದ್ರೆ ನಿಮ್ಗೆ ಏಂಗಾಗ್ತೈತೆ ?.... ನಂಗೂ ಅಂಗೆ ಅಲ್ವಾ ? ನೀವು ತಿಳ್ದೋರು ಬುದ್ದೀ.... ನಿಮ್ಗೆ ನಾಯೇಳಾದಾ ?...."

ಗಿರಾಕಿಗಳು ಬಂದಿದ್ದರಿಂದ ಅವಳ ಮಾತು ಅಲ್ಲಿಗೇ ನಿಂತಿತು. ಶೆಟ್ಟರು ಗಿರಾಕಿಗಳಿಗೆ ಸಾಮಾನುಗಳನ್ನು ಕೊಟ್ಟು ದುಡ್ಡು ಎಣಿಸಿ ಒಳಗಿಟ್ಟರು. ಅವರ ಮನಸ್ಸು ರಾಮಕ್ಕನ ವಾದವನ್ನು ಮೆಲಿಕು ಹಾಕುತಿತ್ತು. ರಾಮಕ್ಕನ ಮಗ ನಿಂಗ, ತನ್ನ ಮಗ ಜನಾರ್ದನ ಇಬ್ಬರೂ ಒಂದೇ ಓರಗೆಯವರು. ನಿಂಗ ನಾಲ್ಕನೆಯ ಕ್ಲಾಸು ಪಾಸು ಮಾಡುವ ಹೊತ್ತಿಗೆ ಹದಿನಾರರ ಹರಯದಲ್ಲಿದ್ದ. ಜನಾರ್ದನ ಎಸ್ಸೆಸೆಲ್ಸಿ ಪಾಸು ಮಾಡಿ ಕಾಲೇಜಿನ ಮೆಟ್ಟಲು ಹತ್ತಿದ್ದ. ತಾಯಿಯ ಸಂಪಾದನೆಯಲ್ಲಿ ಕಾಲ ತಳ್ಳಿ ನಿಂಗನಿಗೆ ಬೇಸರವಾಯಿತೇನೋ, ಜನಾರ್ದನ ಬೇರೆ ಊರಿನಲ್ಲಿ ಇಂಜನಿಯರಿಂಗ್ ಕಾಲೇಜು ಸೇರುವ ಹೊತ್ತಿಗೆ–ಊರು ಬಿಟ್ಟು ಓಡಿ ಹೋಗಿದ್ದ. ಐದಾರು ತಿಂಗಳಾದ ಮೇಲೆ ಗಿರಣಿಯಲ್ಲಿ ಕೆಲಸ ಸಿಕ್ಕಿರುವುದಾಗಿ ಕಾಗದ ಬರೆದು ಖರ್ಚಿಗಾಗಿ ತಾಯಿಗೆ ಐವತ್ತು ರೂಪಾಯಿ ಕಳಿಸಿದ್ದ. ಆ ಕಾಗದವನ್ನು ತಾವೇ ಓದಿ ರಾಮಕ್ಕನಿಗೆ ಹೇಳಿರಲಿಲ್ಲವೇ ? ಬಂದಿದ್ದ ದುಡ್ಡನ್ನು ಕೈಲಿ ಹಿಡಿದು ರಾಮಕ್ಕ ಊರೆಲ್ಲ ತೋರಿಸಿಕೊಂಡು ಬಂದಿದ್ದಳು. "ನಮ್ಮ ನಿಂಗಂಗೆ ದೊಡ್ಡಕೆಲ್ಸ ಸಿಕ್ಕಿದ್ಬೋದೂ.... ಯಾವಾಟ ದುಡ್ಡು ಕಳಿಸುನ್ನೆ....ದೊಡ್ಡ ಮನೆ ಮಾಡಿ ನನ್ನೂ ಕರಸ್ಕಂಬೋದು. ನನ್ನ ದೊರೆ ಮಗ...."

ಅದೇ ಹೊತ್ತಿನಲ್ಲಿ ತಾನು ಮಗನ ಹಾಸ್ಟಲು ಫೀಸಿಗಾಗಿ ಐನೂರು ರುಪಾಯಿಗಳ ಮನಿಯಾರ್ಡರನ್ನು ಮಗನಿಗಾಗಿ ಕಳಿಸಿರಲಿಲ್ಲವೇ ?

ಅದಾದ ಮೇಲೆ ನಿಂಗ ಬರೆಯುತ್ತಿದ್ದ ಕಾಗದಗಳನ್ನು ರಾಮಕ್ಕಶೆಟ್ಟರ ಬಳಿಗೆ ತಂದು ಓದಿಸಿಕೊಳ್ಳುತ್ತಿದ್ದಳು. ಅವರ ಕೈಲೇ ಅವನಿಗೆ ಉತ್ತರ ಬರೆಸಿ ಹಾಕುತ್ತಿದ್ದಳು.

"ನಾಲ್ಕು ಬುದ್ಧಿ ಮಾತು ಏಳಿ ಬರೀರಿ ಬುದ್ಧೀ.... ಬೀಡಿಗೀಡಿ ಕುಡ್ಯಾದು ಕಲೀಬೇಡ, ಸೋಕಿಗೆ ಅಣ ಆಳ್ಮಾಡ್ಬೇಡಾ....ಕೆಟ್ಟ ಜನರ ಸವಾಸ ಮಾಡ್ಬೇಡಾಂತ...." ಎಂದು ಪ್ರತಿ ಕಾಗದದಲ್ಲೂ ಬರೆಸುತ್ತಿದ್ದಳು. ಅದನ್ನು ಬರೆಯುವಾಗಲೆಲ್ಲಾ ಶೆಟ್ಟರ ಮನಸ್ಸಿನಲ್ಲೊಂದು ಕಹಿ ಭಾವನೆ ಮೂಡುತಿತ್ತು. ತಮ್ಮ ಮಗ ಸಿಗರೇಟು, ಸಿನಿಮಾ, ಕುಡಿತಕ್ಕೆ ಬಹಳ ದುಡ್ಡು ಸುರಿಯುತ್ತಾನೆಂದು ಅವರಿವರ ಬಾಯಿಂದ ಕೇಳಿದ್ದರು.

"ನಂಗೊಬ್ನೆ ಮಗ ಬುದ್ಧೀ, ಅವ್ನೇ ನಂಬಿ ಕಾಲ ತಳ್ತಾ ಇವ್ನಿ. ನಂಗೆ ಅವ್ನು ಮೋಸ ಮಾಡ್ಬ್ಯಾಡ್ದು ...." ಎಂದು ರಾಮಕ್ಕ ಹೇಳಿದಾಗ ಶೆಟ್ಟರಿಗೂ ಹಾಗೇ ಅನ್ನಿಸುತ್ತಿತ್ತು. ತನಗಿರುವವನು ಅವನೊಬ್ಬನೇ ಮಗ. ಅವನಾದ ಮೇಲೆ ಆರು ಜನ ಹೆಣ್ಣುಮಕ್ಕಳು. ಮಗ ದೊಡ್ಡ ಹುದ್ದೆ ಹಿಡಿದು ತಮ್ಮನ್ನು ಕಾಪಾಡಲೆಂಬ ಆಸೆ.

ರಾಮಕ್ಕ ತಲೆಯನ್ನು ಸರಪರನೆ ಕೆರೆದುಕೊಂಡು ಶೆಟ್ಟರ ಕಡೆ ನೋಡಿ ನಸುನಕ್ಕಳು.

"ನಂಗೊಸಿ ಕಾಗ್ದ ಬರ್ಕೊಡಿ ಬುದ್ಧೀ, ಅದ್ಯಾಕೋ ನೆನ್ನಿಂದ ನನ್ನ ಕನಸ್ನಾಗೆ ಬಂದು ನಿಂತ್ಕೋತಾನೆ.... ಯೇಟು ದಿನಗಳಾಗೋಯ್ತು....! ನಂಗೆ ಒಂದು ಕಾಜ್ಗ ಬರ್ಯೋದು ಬ್ಯಾಡ್ವಾ ಅವ್ನು ?... ದುಡ್ಡು ಕಳಿಸ್ದಿದ್ರೆ ಬ್ಯಾಡ, ನಮ್ಮವ್ವ ನೊಂದ್ಕೊತಾಳೇಂತ ಬರೀಬ್ಯಾಡ್ವಾ?"

ಶೆಟ್ಟರು ಚಿಲ್ಲರೆ ಲೆಕ್ಕ ಮಾಡಿ ಮೇಜಿನೊಳಗಿದ್ದ ರಹಸ್ಯ ಪೆಟ್ಟಿಗೆಗೆ ಹಾಕಿದರು.

"ಸುಮ್ನೆ ಕಾಗ್ದ ಬರ್ದು ದುಡ್ಡು ಯಾಕೆ ಹಾಳು ಮಾಡ್ತೀ? ಅವನ್ನಾಗಿ ಎಷ್ಟು ದುಡ್ಡು ಹಾಳು ಮಾಡಿದ್ದಿ! ಅವನು ಊರ ಶೋಕಿ ಕಂಡೋನು, ನಿನ್ನ ಕೈಗೆ ಹತ್ತು ತಾನಾ ?"

ರಾಮುಕ್ಕ ಯೋಚನೆಗೀಡಾದಳು. ನಿಜ, ತಾನೆಷ್ಟು ಆಸೆ ಇಟ್ಟುಕೊಂಡಿದ್ದೆ. ಕಣ್ಣಿಗೆ ರಂಗು ರಂಗಾಗಿ ಕಂಡ ಚೀಟಿ ಸೀರೆಗಳನ್ನು ಉಡಬೇಕೆಂಬ ಆಸೆಯಿದ್ದರೂ ಎಂದೂ ಕೊಂಡು ಉಟ್ಟಿರಲಿಲ್ಲ. ಅವರಿವರ ಮನೆಗೆ ಹೋಗಿ ಕೂಲಿ ಕೆಲಸ ಮಾಡುವಾಗ ಅದರಿಂದ ಕಾಡಿ ಬೇಡಿ ಹಳೆಯ ಸೀರೆಗಳನ್ನು ತಂದು ಉಡುತ್ತಿದ್ದಳು. ಮಗ ಕಳಿಸುತ್ತಿದ್ದ ದುಡ್ಡನ್ನು ಜೋಪಾನ ಮಾಡಿ ಒಲೆಯ ಮೂಲೆಯಲ್ಲಿ ಮಾಡಿದ್ದ ತೂತಿನೊಳಗೆ ಮುಚ್ಚಿಡುತ್ತಿದ್ದಳು. ಎದುರು ಮನೆ ಕೆಂಪಮ್ಮನ ಮೊಮ್ಮಗಳು ಗಂಗೆ ತನ್ನ ಮಗನಿಗೆ ತಕ್ಕ ಹೆಣ್ಣೆಂದು ನಿರ್ಧರಿಸಿ ಉಗಾದಿ ಹಬ್ಬದಂದು ಅವಳಿಗೆ ಕುಪ್ಪಸದ ಬಟ್ಟೆ ಕೊಟ್ಟಿದ್ದಳು. ಪುಡಿಗಾಸು ಸೇರಿಸಿ ಅವಳಿಗಾಗಿ ಬೆಳ್ಳಿ ಕಾಲ್ಗಡಗಗೆನ್ನು ಮಾಡಿಸಿಟ್ಟಿದ್ದಳು. ಅಷ್ಟಲ್ಲದೇ ಎಲ್ಲರ ಮುಂದೆ ಗಂಗೆಯನ್ನು ನಿಲ್ಲಿಸಿ ಜಂಬವಾಗಿ ಹೇಳಿದಳು "ವುಪ್ಳ ಬೋ ಚಂದುಳ್ಳಿ ಎಣ್ಣು ಕಣವ್ವಾ....ಬೋ ನಾಜೂಕು. ಬರೀ ಮಲ್ಗೆ ಊನಾಗೆ ಮಾಡ್ದಂಗವ್ಳೆ.... ನಂ ಸಿಂಗಂಗೆ ಸರಿಯಾದ ಎಣ್ಣು....ನಿಂಗ ಏನಾರ ಊರಿ ಗ್ಬಂದ್ರೆ ಈ ದಪ ಬುಡಾಕಿಲ್ಲ. ಇವ್ಳ ಕುತ್ಗೇಗೆ ತಾಳಿ ಕಟ್ಟಿಸ್ಬುಡ್ತೀನಿ" ಆದರೆ ಕ್ರಮೇಣ ದುಡ್ಡು ಬರುವುದು, ಕಾಗದ ಬರುವುದು ನಿಂತು ಹೋದಾಗ ಜೋಪಾನವಾಗಿ ಟ್ಟಿದ್ದ ದುಡ್ಡೆಲ್ಲಾ ಕರಗುತ್ತಾ ಬಂದಿತ್ತು. ಬೆಳ್ಳಿ ಕಾಲ್ಗ ಡಗ ಸಿದ್ಧಾಚಾರಿಯ ಹತ್ತಿರ ಅಡವಿಟ್ಟಾಗಿತ್ತು. ರಾಮುಕ್ಕ ನಿಟ್ಟುಸಿರಿಟ್ಟಳು.

"ಅದೆಂಗೋ ಬುಡಿ ಅವನು ಕಳಿಸ್ತಾ ಇದ್ದ ಅಣ ಅವನ್ಗೇ ಆಕ್ದೆ....ಅವನ್ಗೆನೋ ಜಡ್ಡಾಗಿರ್ಬೇಕು ಇಲ್ಲಾ ಬ್ಯಾರೆ ಎಲ್ಲೋ ಕೆಲ್ಸ ಉಡಿಕೊಂಡು ಒಂಟೋಗಿರ್ಬೇಕು, ಇಲ್ದಿದ್ರೆ ಇಂಗ ಕಾಜ್ಗ ಬರ್ಯೋದು ಬುಟ್ಬುಡೋಲ್ಲ.... ಏನಾರ ಆಗ್ಲಿ ಅತ್ತು ಕಾಜ್ಗ ಬರ್ದಾಯ್ತು, ಇನ್ನೊಂದು ಬರ್ದಾಕೀ ಬುದ್ದೀ, ನಿಮ್ಗೆ ಪುಣ್ಯ ಬತ್ತೈತೆ"

ಶೆಟ್ಟರು ತಮ್ಮ ಸುತ್ತ ಹಾರುತ್ತಿದ್ದ ನೊಣಗಳನ್ನು ಕೈ ಬೀಸಿ ಓಡಿಸಿದರು.

"ಅಂದಂಗೆ ರಾಮುಕ್ಕ ಇಪ್ಪತ್ತು ದಿನಗಳ ಕೆಳಗೆ ಬೀರಣ್ಣನ್ನ ನೀನೇ ಊರಿಗೆ ಹಣ ಕೊಟ್ಟು ಕಳಿಸಿದ್ಯಂತೆ, ಅವನೇನೂ ಹೇಳಿಲ್ವಾ ನಿಂಗನ ಸಮಾಚಾರಾನ್ನಾ ?"

ರಾಮುಕ್ಕ ಮುಖದ ಮೇಲೆ ಸಣ್ಣಗೆ ಜಿನುಗಿದ್ದ ಬೆವರನ್ನು ಹಿಂಗೈಯಿಂದ ಒರೆಸಿಕೊಂಡಳು. ಬೀರಣ್ಣನಿಗೆ ಅರವತ್ತು ರೂಪಾಯಿ ಕೊಟ್ಟು ಊರಿಗೆ ಹೋಗಿ ನಿಂಗನ ವಿಷಯ ತಿಳಿದುಕೊಂಡು ಬರುವಂತೆ ಹೇಳಿ, ಅವನ ಕೈಗೆ ನಿಂಗನ ವಿಳಾಸವನ್ನೂ ಕೊಟ್ಟಿದ್ದಳು. ಬೀರಣ್ಣ ಬಹಳ ಶೋಕಿಯುವನು. ನಿಂಗನ ಜೊತೆಗಾರ. ಒಂದು ವಾರದ ಮೇಲೆ ಒಂದು ರಾಮುಕ್ಕನ ಮುಂದೆ ನಿಂತು ತಲೆ ತಗ್ಗಿ ಸಿದ್ದ.

"ಬಾಳ ಉಡುಕಾಡ್ದೆ ಕಣವ್ವಾ. ಅವ್ನ ಸುಳ್ವೇ ಸಿಕ್ನಿಲ್ಲ. ಅವ್ನು ನಿಂಗೆ ಸುಳ್ಳು ಏಳಿರ್ಬೇಕೊ.... ಪ್ಯಾಟೀ ಲೇನೇಳು. ದುಡ್ಡು ಸಂಪಾದ್ನೇ ಮಾಡೋಕೆ, ಸಟ್ಟಾ ಆಡ್ಬೋದೂ... ಇಸ್ಪೇಟಾಟ ಆಡ್ಬೋದೂ... ಜೇಬು ಕತ್ತ ರಿಸ್ಬೋದೂ.... ಯಂತ ಯಾವಾರಾ ಬ್ಯಾಕಾದ್ರೂ ಮಾಡ್ಬೋದೂ....ನಿಮ್ಮಗ ನಾಲ್ಕು ದಿನ ಸಂಪಾದ್ಸಿ ಕಳಿ ಸ್ಬುಟ್ಟ. ಆಮ್ಯಾಕೆ ಎಲ್ಲೋ ಪೋಲಿಸ್ನೋರ ಕೈಗೆ ಸಿಕ್ಕಾಕಿ ಕೊಂಡಿರ್ಬೋದು...ಎಲ್ಲಾ ಕಡೆಗೂ ಹೋಗಿ ನೋಡ್ಕೊಂ ಡ್ಬಂದೆ.. ಜೇಲ್ನಾಗೆ ನೋಡ್ಲಿಲ್ಲ ಅಷ್ಟೆ....ಅಮೇಲೆ ಎಷ್ಟು ದುಡ್ಡು ಸುರ್ದೆ ಗೊತ್ತಾ ?" ಅವನ ಮಾತಿಗೆ ರಾಮುಕ್ಕ ಕಣ್ಣೀರು ಹಾಕಿದ್ದರೂ ಅವಳಿಗೆ ತನ್ನ ಮಗ ಎಂದೂ ಹಾಗೆ ಮಾಡುವವನಲ್ಲ ಎಂಬ ನಂಬಿಕೆ. ಬೀರಣ್ಣ ಊರಿಗೆ ಹೋಗಿ ಅವಳು ಕೊಟ್ಟ ಹಣದಲ್ಲಿ ಮಜಾಮಾಡಿ ಬಂದ್ಬಿಟ್ಟನೇ ಹೊರತು ನಿಂಗನ ವಿಷಯ ವಿಚಾರಿಸುವ ಗೊಡವೆಗೇ ಹೋಗಿರಲಿಲ್ಲವೆಂದು ಅವಳಿಗೆ ತಿಳಿಯದು.

"ಉ ಬುದ್ಧೀ ಬೀರಣ್ಣ ಓಗಿ ಬಂದ. ಪಾಪ ನಾನು ಕೊಟ್ಟ ಅಣದ್ಜೊತೆ ತಾನೂ ಅಣ ಆಕ್ಕೊಂಡು ಊರೆಲ್ಲಾ ಉಡ್ಕಿದ್ನಂತೆ. ಸಿಕ್ಕಿಲ್ಲಂತೆ...."

"ಹಾಗಾದ್ರೆ ನೀನು ಕಾಗ್ದ ಬರ್ದು ಏನು ಉಪ ಯೋಗ....?" ಶೆಟ್ಟರು ಆಕಳಿಸಿದರು. ರಾಮುಕ್ಕ ಕಣ್ಣಿಗೆ ಸೆರಗು ಹಚ್ಚಿದಳು,

"ಅಂಗನ್ಬೇಡಿ ನನ್ನೊಡ್ಯಾ....ಎತ್ತ ಕರ್ಳು ನಂದು. ಆಗ್ಲೂ ರಾತ್ರಿ ನನ್ಜೀವ ಅವನ್ನಾಗಿ ಬಡ್ಕೊಂತದೆ....

ಇದೊಂದ ದಪ ಬಠ್ಕೊಡಿ ಬುದ್ಧಿ. ಇನ್ನೊಂದಪ ನಿಮ್ಮನ್ನ ಕೇಳಾಕಿಲ್ಲ"

ಶೆಟ್ಟರು 'ಅವಳ ಕಣ್ಣೀರಿನಿಂದ ಕೊಂಚ ಮೆತ್ತಗಾದರು. ಮನೆಯಲ್ಲಿ ಮಗನಿಂದ ಕಾಗದ ಬರುವುದು ಎರಡು ದಿನ ತಡವಾದರೆ ಅವರ ಪತ್ನಿ ಕಣ್ಣೀರು ಹಾಕಿಕೊಂಡು ಓಡಾಡುತ್ತಿದುದು ಅವರ ಕಣ್ಮುಂದೆ ಸುಳಿಯಿತು.

"ಆಗ್ಲಿ ಬಿಡು ರಾಮಕ್ಕ. ಅವ್ನ ಗಿರಣಿ ವಿಳಾಸಕ್ಕೆ ಬರ್ದು ಅವರಿಂದಲೇ ಅವನ ವಿಷಯ ವಿಚಾರಿಸೋಣ.... ಮಧ್ಯಾಹ್ನ ಅಂಗ್ಡಿ ಮುಚ್ಚಿದ್ಮೇಲೆ ಬರೆದು ಹಾಕ್ತೀನಿ.... ನಿನ್ನ ಅದೃಷ್ಟ ಇದ್ದಂಗಾಗ್ಲಿ"

"ಅಷ್ಟು ಮಾಡಿ ಪುಣ್ಯ ಕಟ್ಕೊಳ್ಳಿ ಬುದ್ಧಿ.... ನಿಮ್ಮಗಂಗೆ ದೇವ್ರು ನೂರ ವರ್ಷ ಆಯಸ್ಸುಂಬ್ಲಿ" ರಾಮಕ್ಕ ಉಡಿಯಿಂದ ಸಾಲ್ಕಾಣೆಯ ಬಿಲ್ಲೆಯೊಂದನ್ನು ಶೆಟ್ಟರ ಕೈಗೆ ಕವರಿಗಾಗಿ ಇತ್ತಳು.

ಅಂದಿನಿಂದ ರಾಮಕ್ಕ ಪ್ರತಿದಿನ ಶೆಟ್ಟರ ಅಂಗಡಿಯ ಮುಂದೆ ಅಂಚೆಗಾಗಿ ಕಾದು ಕುಳಿತಿರುತ್ತಿದುದು ಶೆಟ್ಟರಿಗೆ ವ್ಯಥೆಯಾಗುತ್ತಿತ್ತು. ಸೊರಗಿ, ಬಾಡಿದ ಮುಖ, ಮಗನಿಂದ ಬರುವ ಕಾಗದಕ್ಕಾಗಿ ನಿರೀಕ್ಷಿಸಿ ಬೇಸತ್ತ ನೋಟ ಸರಿಯಾದ ಊಟ, ತಿಂಡಿ, ನಿದ್ದೆ ವಿಶ್ರಾಂತಿಯಿಲ್ಲದ ದೇಹ ಎಣ್ಣೆ ನೀರು ಕಾಣದ ತಲೆ... ಒಂದು ವಾರದಲ್ಲಿ ರಾಮಕ್ಕನಿಗೆ ಎಂದೂ ಬಾರದ ಕಾಯಿಲೆ-ಮುಪ್ಪು ಆವರಿಸಿತ್ತು. ಕಾಗದಕ್ಕೆ ಉತ್ತರ ಬಾರದಿದ್ದಕ್ಕೆ ಶೆಟ್ಟರಿಗೂ ಯೋಚನೆ, ಆತಂಕ. ರಾಮಕ್ಕ ಈ ಮಗನ ಕೊರಗಿನಲ್ಲಿ ಕಣ್ಮುಚ್ಚಿದರೆ, ತನ್ನ ಬಾಕಿಯ ವಿಷಯ! ಕಣ್ಣೀರ್ಗ್ಗರೆಯುತ್ತಾ ಕುಳಿತಿದ್ದ ರಾಮಕ್ಕನನ್ನು ಸಮಾಧಾನಗೊಳಿಸಿದರು.

"ಹೋಗು ರಾಮಕ್ಕ.. ಇದ್ಯಾಕೆ ಹಿಂಗೆ ಕೊರಗ್ತೀ, ಮನೇಗೋಗಿ ಮೈ ತೊಳ್ದು ಹೊಟ್ಟೆಗೇನಾರ ಹಾಕ್ಕೊ, ಕಾಗ್ದ ಬಂದ್ರೆ ಯಾರ್ಕೈಲಾದ್ರೂ ಹೇಳಿ ಕಳಿಸ್ತೀನಿ... ಇಲ್ಲ ನಾನೇ ತಂದ್ಕೊಡ್ತೀನಿ. ನನ್ಮನೆ ವಿಳಾಸಾನೇ ಕೊಟ್ಟಿರೋದು. ನಿನ್ಕಾಗ್ದ ಎಲ್ಲೂ ಹೋಗೋಲ್ಲ.. ಹಿಂಗೆ ಕೊರಗಿದ್ರೇ ಹುಚ್ಚು ಹಿಡಿಯುತ್ತೆ ಅಷ್ಟೆ. ನಿಮ್ಮಗ ನೋಡಿದ್ರೆ ಬೇಜಾರು ಮಾಡ್ಕೊಳ್ಳೊಲ್ವಾ ?"

ರಾಮಕ್ಕ ಒಲ್ಲದ ಮನಸ್ಸಿನಿಂದ ಎದ್ದು ಹೊರಟಳು.

ಅದಾದ ಮೇಲೆ ರಾಮಕ್ಕ ಮತ್ತೆ ಶೆಟ್ಟರ ಅಂಗಡಿಯ ಕಡೆ ಸುಳಿಯಲಿಲ್ಲ. ಶೆಟ್ಟರು ಆತಂಕದಿಂದ ವಿಚಾರಿಸಿದಾಗ ಅವಳಿಗೆ ಮೈ ಸ್ವಸ್ಥವಿಲ್ಲೆಂದು ತಿಳಿಯಿತು. ರಾಮಕ್ಕನಂತೆ ಅವರಿಗೂ ಕಾಗದ ಬಂದರೆ ಸಾಕೆಂಬ ಉತ್ಕಟಾಕಾಂಕ್ಷೆ ಪ್ರಾರಂಭವಾಯಿತು.

ಅಂದು ಕೊಂಚ ಮಳೆ ಬಿದ್ದಿದ್ದರಿಂದ ರಸ್ತೆಯಲ್ಲಿ ಕೆಸರು ಹರಡಿತ್ತು. ಅಂಗಡಿಗೆ ಬರುತ್ತಿದ್ದ ಗಿರಾಕಿಗಳೆಲ್ಲಾ ಅದನ್ನು ತುಳಿದುಕೊಂಡೇ ಬರುತ್ತಿದ್ದರಿಂದ ಅಂಗಡಿಯ ಮುಂದೆ ಕೆಸರಿನ ಹಾಸು ಹಾಕಿದಂತಾಗಿತ್ತು. ಶೆಟ್ಟರು ತಮ್ಮ ಮಗನ ಯೋಚನೆಯಲ್ಲಿದ್ದರು. ಅವನು ಊರಿನಲ್ಲಿ ಓಡಾಡಲು, ಬಸ್ಸಿಗಾಗಿ ಕಾಯಲು ತೊಂದರೆಯೆಂದು ತನಗೊಂದು ಸ್ಕೂಟರಿನ ಅಗತ್ಯವೆಂದೂ ಬರೆದಿದ್ದ. ಆದರೆ ಅವರ ಪತ್ನಿಯದು ಒಂದೇ ಹಠ, ಹಾಳು ಊರಿನಲ್ಲಿ ಬಸ್ಸು, ಕಾರು, ಲಾರಿಗಳ ಓಡಾಟ ಬಹಳ ಜೋರು ಪ್ರತಿದಿನ ಪೇಪರಿನಲ್ಲ ಸ್ಕೂಟರ್, ಮೋಟಾರ್, ಸೈಕಲ್ ಅಪಘಾತಗಳನ್ನು ಓದುತ್ತಿರಲಿಲ್ಲವೇ.... ಏನಾದರೂ ಅವನಿಗೆ ಸ್ಕೂಟರ್ ಕೊಡಿಸ ಕೂಡದೆಂದು, ಕೊಡಿಸಿದರೆ ತಾವು ಉಪವಾಸ ಸಾಯುವುದಾಗೂ ಹಠ ಮಾಡಿದ್ದರು. ಶೆಟ್ಟರಿಗೂ ಮನಸ್ಸು ವ್ಯಾಕುಲಗೊಂಡಿತ್ತು.

ಅಂಚೆ ಪೇದೆ ಅವರ ಮುಂದೆ ಹಾಕಿದ ಬಿಳಿಯ ಕವರು ಅವರನ್ನು ಎಚ್ಚರಿಸಿತು. ಬೆಳ್ಳಗೆ ಹಾಲ್ನೊರೆಯಂತಿದ್ದ ಕವರು ಅದು ತಮ್ಮ ಮಗನದು ಖಂಡಿತ ಅಲ್ಲ. ಯಾರದಿರಬಹುದು ?.... ಅವರು ಅದನ್ನು ಎತ್ತಿಕೊಳ್ಳಲು ಹೋದಾಗ ಕೈಜಾರಿ ಕೆಳಗೆ ಬಿದ್ದು ಕೆಸರಂಟಿಕೊಂಡಿತು. ಶೆಟ್ಟರು ಅದನ್ನು ಕೈಯಿಂದ ಒರೆಸಿ, ಜೇಬಿನಿಂದ ಮುರದುಹೋಗಿ ದಾರ ಕಟ್ಟಿ ಸರಿಮಾಡಿಕೊಂಡಿದ್ದ ಕನ್ನಡಕವನ್ನು ಮೂಗಿಗೇರಿಸಿ, ನೋಡಿದರು. ಹೌದು.. ತಮಗೇ ಬರೆದ ಕಾಗದ. ಅವರ ಕೈ ಕಾಗದವನ್ನು ಒಡೆದಾಗ ಕೊಂಚ ನಡುಗಿತು. ತಮ್ಮ ಮಗನ ವಿಷಯವೇ ? ಹಿಂದಿನ ದಿನ ಪತ್ರಿಕೆಯಲ್ಲಿ ದಾರಿಯಲ್ಲಿ ಹೋಗುತ್ತಿದ್ದ ಪಥಿಕನ ಮೇಲೆ ಬಸ್ಸು ಹರಿದು ಮರಣ ಹೊಂದಿದನೆಂದು ಓದಿ ಹೆಂಡತಿಯ ಮುಂದೆ ನಕ್ಕಿರಲಿಲ್ಲವೇ ? "ಆಯುಸ್ಸು ಗಟ್ಟಿ ಇರೋತನ್ಕ ಏನೂ ಆಗೋಲ್ಲ. ಅವ್ನು ಸ್ಕೂಟರ್ ತೂಗೊಂಡ್ರೇ ಏನು ಕಷ್ಟ. ಇಲ್ನೊಡಿದ್ಯಾ ? ರಸ್ತೇಲಿ ನಡೆದುಕೊಂಡು ಹೋಗೋರ್ಮೇಲೇ ಬಸ್ಸು ಹತ್ತಿತ್ತಂತೆ....

ಸುಮ್ನೇ ಎಲ್ರು ತಲೇನೂ ಕೆಡಿಸ್ತೀಯಾ....ನಾಳೇನೇ ಅವನ್ಗೆ ದುಡ್ಡು ಕಳಸ್ತೀನಿ.... ಪಾಪ ಓಡಾಡೋಕೆ ತೊಂದ್ರೆ ಆಗಿರ್ಬ್ಯೋದೂ " ಅವರ ಹೆಂಡತಿ ಮಾತಾಡದೇ ಎದ್ದು ಹೋಗಿದ್ದರು....ಅವಳ ಮನಸ್ಸಿನಲ್ಲಿದ್ದ ಭಿಯದಂತೆ ತಮ್ಮ ವೇಗ...!

ಅವರು ಕವರು ತೆಗೆದು ಒಳಗಿದ್ದ ಹಾಳೆಯನ್ನು ಹೊರತೆಗೆದರು. ಅದರ ಶಿರದಲ್ಲಿದ್ದ ಗಿರಣಿಯ ಹೆಸರು ಕಂಡು ಅವರು ನಿರ್ಭಯರಾಗಿ ನಿಟುಸಿರಿಟ್ಟರು. ಆಗಲೇ ಹೊಳೆದದ್ದು ಅದು ರಾಮಕ್ಕನ ಮಗ ನಿಂಗನ ಸಮಾಚಾರವೆಂದು" ಬಿಳಿಯ ಹಾಳೆಯಲ್ಲಿ ಟೈಪು ಮಾಡಿ ಕಳಿಸಿದ್ದ ಪತ್ರ. ಬರೆಯಬೇಕಾದುದನ್ನು ಸ್ಫುಟವಾಗಿ ಒಂದೇ ಪುಟದಲ್ಲಿ ಬರೆದು ಮುಗಿಸಿದ್ದರು.

"ನೀವು ಕೇಳಿದ್ದ ನಿಂಗ ನಮ್ಮ ಗಿರಣಿಯಲ್ಲಿ ಕೆಲಸ ಮಾಡುತ್ತಿದ್ದ. ಈಗ ಎರಡು ತಿಂಗಳ ಕೆಳಗೆ ನಮ್ಮ ಗಿರಿಣಿಯಲ್ಲಿ ಸಂಭವಿಸಿದ ಅಪಘಾತವೊಂದರಲ್ಲಿ ಅಸುನೀಗಿದನೆಂದು ತಿಳಿಸಲು ವಿಷಾಧಿಸುತ್ತೇವೆ. ದೇವರು ಮೃತನ ಆತ್ಮಕ್ಕೆ ಶಾಂತಿ ನೀಡಲಿ. ಈ ಬಗ್ಗೆ ನಿಮಗೆ ತಿಳಿಸಲು ನಮಗೆ ನಿಮ್ಮ ವಿಳಾಸ ತಿಳಿದಿರಲಿಲ್ಲ. ಅದಕ್ಕಾಗಿ ನಾವು ವಿಷಾಧಿಸುತ್ತೇವೆ. ಅವನಿಗೆ ಸಲ್ಲಬೇಕಾದ ಹಣವನ್ನು ಅವನ ಮರಣೋತ್ತರ ಕಾರ್ಯಗಳಿಗಾಗಿ ಖರ್ಚಾಗಿ ಇನ್ನೂ ಐನೂರು ರೂಪಾಯಿಗಳು ಉಳಿದಿವೆ. ಅವನ ಬಗ್ಗೆ ಮಾಹಿತಿ ತಂದಲ್ಲಿ ಅದನ್ನು ತಮ್ಮ ಕೈಗೊಪ್ಪಿಸಲಾಗುತ್ತದೆ." ಅದರ ಕೆಳಗಡೆಯಿದ್ದ ರುಜು ಶೆಟ್ಟರ ಕಣ್ಣಿಗೆ ಮಬ್ಬು ಮಬ್ಬಾಗಿ ಕಂಡಿತು. ಶೆಟ್ಟರು ನಿಂತಲ್ಲೇ ಕುಸಿದರು. ಅವರಿಗೆ ಯೋಚಿಸುವ ವ್ಯವಧಾನ ವಿರಲಿಲ್ಲ. ಉಟ್ಟಿದ್ದ ಪಂಚೆಯ ತುದಿಯಿಂದಲೇ ಮುಖ ಒರೆಸಿಕೊಂಡರು.

ಗಿರಾಕಿಗಳು ಬಂದಾಗ ಅವರಿಗೆ ಸರಿಯಾಗಿ ಸಾಮಾನು ಕೊಡಲಾರದೇ ಕೈ ನಡುಗಿತು. ಕುಳಿತಲ್ಲಿಂದಲೇ ಮನೆಯೊಳಗಿದ್ದ ಹೆಂಡತಿಯನ್ನು ಕರೆದು ಅಂಗಡಿಯನ್ನು ನೋಡಿಕೊಳ್ಳುವಂತೆ ಹೇಳಿ ಕಾಲಿಗೆ ಚಪ್ಪಲಿ ಮೆಟ್ಟಿ ಅಂಗಡಿಯಿಂದ ಹೊರಬಿದ್ದರು. ಎಲ್ಲಿಗೋ ಹೊರಟ್ಟಿದ್ದ ಶೆಟ್ಟರನ್ನು ಎಲ್ಲಿಗೆಂದು ಕೇಳುವ ಧೈರ್ಯ ಅವರ ಪತ್ನಿಗಿರಲಿಲ್ಲ.

ರಸ್ತೆಯಲ್ಲಿ ನಡೆಯುವಾಗ ಬೀಸಿದ ಗಾಳಿ ಅವರನ್ನು ಎಚ್ಚರಿಸಿತು. ರಾಮಕ್ಕ ಕಾಯಿಲೆಯಲ್ಲಿ ಮಲಗಿದ್ದಾಳೆ. ಅವಳ ಮಗ ಇನ್ನಿಲ್ಲ.. ಅವನಿಗೆ ಬರಬೇಕಾಗಿದ್ದ ದುಡ್ಡು ಇನ್ನು ತಮ್ಮ ಕೈ ಸೇರುತ್ತವೆ. ರಾಮಕ್ಕನ ಸಾಲದ ದುಡ್ಡು ತೆಗೆದುಕೊಂಡು ಮಿಕ್ಕಿದ್ದು ಅವಳಿಗೆ ಕೊಟ್ಟು ಬಿಟ್ಟರೆ ಆಯಿತು. ಆದರೆ.... ರಾಮಕ್ಕನಿಗೆ ಈ ವಿಷಯ ತಿಳಿಸುವುದು ಹೇಗೆ ?....

ಬಾಗಿಲು ಮುಂದು ಮಾಡಿದ್ದ ರಾಮಕ್ಕನ ಮನೆ ಮುಂದೆ ನಿಂತಾಗ ಅವರಿಗೆ ಉಗುಳು ನುಂಗುವ ಹಾಗಾಯಿತು. ಕೈ ಕಾಲು ತಣ್ಣಗಾದಹಾಗಾಯಿತು. ಮೆಲ್ಲಗೆ ಬಾಗಿಲು ತಟ್ಟಿದರು. ಉತ್ತರ ದೊರೆಯದಿದ್ದಾಗ ಬಾಗಿಲನ್ನು ಮೆಲ್ಲನೇ ತಳ್ಳಿ ಒಳಗೆ ಕಾಲಿಟ್ಟರು. ಅವರ ಎದೆ ಡವ ಡವನೆ ಹೊಡೆದುಕೊಂಡಿತು. ನೆಲದ ಮೇಲಿದ್ದ ಹರಕು ಚಾಪೆಯ ಮೇಲೆ ಹರಕು ಗೋಣಿ ಚೀಲವನ್ನು ಹೊದ್ದು ಮುದುರಿ ಮಲಗಿದ್ದ ರಾಮಕ್ಕ ! ಅಲುಗಾಡುತ್ತಿರಲಿಲ್ಲ.

"ರಾಮಕ್ಕ...." ಶೆಟ್ಟರ ಬಾಯಿಂದ ಅವರಿಗರಿವಿಲ್ಲದಂತೆ ಹೊರಬಿತ್ತು. ಅವರ ಧ್ವನಿ ಕೇಳಿ ಕ್ಷೀಣವಾಗಿ ನರಳಿ ರಾಮಕ್ಕ ಹೊರಳಿದ್ದಳು. ಎದುರಿಗೆ ನಿಂತಿದ್ದ ಶೆಟ್ಟರನ್ನು ಅವಳು ಗುರಿತಿಸಲಾಗಲಿಲ್ಲ.

"ಯಾರೂ....ನಿಂಗನಾ ?" ಅವಳ ಬಾಯಿಂದ ಅಸ್ಪಷ್ಟವಾಗಿ ಹೊರಟಿತ್ತು. ಶೆಟ್ಟರು ಮುಂಡಿಯೂರಿ ಅವಳ ಹತ್ತಿರ ಬಾಗಿ ಹೇಳಿದರು.

"ನಾನು ರಾಮಕ್ಕಾ.... ನಾನು... ಶೆಟ್ಟರು....!" ರಾಮಕ್ಕ ಕಣ್ತೆರೆದು ಕಣ್ಣುಗಲಿಸಿ ಅವರನ್ನು ನೋಡಿದಳು, ಬಾಯಿಂದ ಮಾತು ಹೊರಡಲಿಲ್ಲ.

"ರಾಮಕ್ಕಾ.... ಇಲ್ನೋಡೂ.... ನಿನ್ನ ಮಗನ ಕಾಗದ...." ಶೆಟ್ಟರು ಅವಳ ಮುಂದೆ ಕವರನ್ನು ಹಿಡಿದರು. ಹಿಂದಿನಿಂದ ಎದರು ಮನೆಯ ಕೆಂಪಮ್ಮ ಗಂಗೆ ಬಂದುದು ಅವರು ನೋಡಲಿಲ್ಲ.

"ಬುದ್ಯೋರಾ....ಇದೇನು ಇಲ್ಲಿಗಂಟಾ ?" ಕೆಂಪಮ್ಮನ ಧ್ವನಿಗೆ ಬೆಚ್ಚಿ ಎದ್ದು ನಿಂತರು. ಅವರ ಕೈಲಿದ್ದ

ಕಾಗದವನ್ನು ಕಂಡು ಕೆಂಪಮ್ಮನೇ ಬಂದ ಕಾರಣ ಊಹಿಸಿದಳು.

"ಪಾಪಾ....ರಾಮಕ್ಕ ಇದ್ರು ಕೊರಗ್ನಿಂದ್ಲೇ ಇಂಗೆ ಮನಿಗ್ಬಿಟ್ಲು. ಎಲ್ಡ್ ದಿನದಿಂದ ವೈಮ್ಯಾಕೆ ಗ್ಯಾನ ಇಲ್ಲ. ಯಾವಾಗ್ಲೂ 'ನಿಂಗಾ, ನಿಂಗಾ' ಅಂತಾವ್ಳೆ.... ಈಗ್ಬಂತೇನೋ ಅವನ ಕಾಜ್ಗ...!"

ಶೆಟ್ಟರ ಕಣ್ಣಿನಲ್ಲಿ ಅವರಿಗರಿವಿಲ್ಲದೇ ನೀರು ತುಂಬಿತು, "ಹೌದು. ಈಗ್ಬಂತು, ಅವಳಿಗೆ ತಿಳಿಸೋಣಾಂತ ಬಂದೆ...."

ಕೆಂಪಮ್ಮ ಬಗ್ಗಿ ರಾಮಕ್ಕನನ್ನು ಅಲುಗಿಸಿದಳು. "ರಾಮಕ್ಕಾ.... ರಾಮಕ್ಕಾ.... ಇಲ್ನೋಡೂ.... ಶೆಟ್ರು ಬಂದವ್ರೆ. ನಿಂಗ ಕಾಜ್ಗಾ ಬರ್ದವ್ನಂತೆ...." ಶೆಟ್ಟರು ಅವಳನ್ನೇ ನೋಡಿದರು. ಅವರಿಗೆ ರಾಮಕ್ಕನ ನಿಸ್ತೇಜವಾದ ಕಣ್ಣುಗಳು ಅರಳಿದಂತೆ ಕಂಡಿತು.

"ಚೆಂದಾಕವ್ನಂತೆ ..." ಕೆಂಪಮ್ಮ ರಾಮಕ್ಕನ ಕಿವಿಯ ಹತ್ತಿರ ಉಸರಿದಾಗ ಅವರಿಗೆ ಅವಳ ತುಟಿಯಂಚಿನಲ್ಲಿ ನಗು ಮಿನುಗಿದಂತೆ ಕಂಡಿತು. ಅವರೂ ಕೂಡ ಬಗ್ಗಿ ರಾಮಕ್ಕನಿಗೆ ಕೇಳಿಸುವಂತೆ ಹೇಳಿದರು. "ಹೌದು ರಾಮಕ್ಕ. ನಿನ್ನ ಮಗ ಸುಖವಾಗಿದ್ದಾನಂತೆ. ಅವ್ನ ದೂರದೇಶಕ್ಕೆ ಕಳಿಸಿದ್ದಾರಂತೆ.... ನಿನ್ಗೆ ಐನೂರು ರೂಪಾಯಿ ಕಳಿಸ್ತಾನಂತೆ...."

ರಾಮಕ್ಕನ ತುಟಿಯೆಲುಗಿತು. "ನಿಂಗಾ...." ಶೆಟ್ಟರು ಎದ್ದು ನಿಂತು ತಮ್ಮ ಹಿಂಗೈನಿಂದ ಮಂಜಾಗಿದ್ದ ಕಣ್ಣೊರಸಿಕೊಂಡರು. "ಬರ್‍ತೀನಿ ಕೆಂಪಮ್ಮ. ರಾಮಕ್ಕನ್ನ ಡಾಕ್ಟರಿಗೆ ತೋರಿಸಿ ಸರಿಯಾಗಿ ನೋಡಿಕೋ...."

"ಅಯ್, ಇನ್ಮೇಲೆಂತಾ ದಾಕ್ತ್ರು ಬುದ್ದೀ.... ಅವಳು ಬದುಕ್ತಾಳಾ? ನಾಳೀಕೆ ಕೋಳಿ ಕೂಗೋಗಂಟ ಇದ್ರೇ ಎಚ್ಚು. ಸಾಯೋ ಕಾಲಕ್ಕೆ ಮಗನ ಇಸ್ಯ ಕೇಳಿದ್ಲಲ್ಲ. ಸಂತೋಸ್ವಾಗಿ ಸಾಯ್ತಾಳೆ. ಅವ್ನ ಕೊರಗಿಂದ್ಲೇ ಇಂಗಾಗಿದ್ದು...!" ಕೆಂಪಮ್ಮ, ಗಂಗೆ ಕಣ್ಣೊರಸಿಕೊಂಡರು.

"ಏನಾದ್ರೂ ತಿಂದ್ಲಾ.... ಯಾರಪ್ಪು ಕಾಯಿಲೆ ಆಗೋಯ್ತು ?" ಶೆಟ್ಟರು ಕೇಳಿದಾಗ. ಕೆಂಪಮ್ಮ ಸೆರಗಿನಿಂದ ಮೂಗು ಕಣ್ಣು ಒರೆಸಿಕೊಂಡಳು.

"ಎಂಟು ದಿನ ಆಯ್ತು ಬುದ್ಧೀ, ಕೆಂಡದ್ಹಂಗೆ ಜೊರ.... ಒಂದು ತೊಟ್ಟು ಆಲು ನೀರು ಕುಡೀನಿಲ್ಲಾ. ಮೂರೊತ್ತೂ ನಿಂಗಾ, ನಿಂಗಾ ಅಂತ ಜಪಾನೆ ..."

ಶೆಟ್ಟರಿಗೆ ಅಲ್ಲಿ ನಿಲ್ಲಲಾಗಲಿಲ್ಲ. ಬಾಗಿಲಿನತ್ತ ನಡೆದರು.

"ಅದ್ಯಾಕ್ಬುದ್ದೀ ಒಂಟು ಬುಟ್ರೀ? .... ಒಳ್ಳೇ ಸುದ್ದಿ ತಂದಿದ್ದೀರಾ! ನೀವೂ ಅಂಗೇ ಆಲು ಕುಡ್ದು ಓಗಿ ಇಲ್ಲಾ ಅಣ್ಣಾದ್ರೂ ತಗಂಡೋಗಿ...." ಕೆಂಪಮ್ಮ ಹೇಳುತ್ತಿದ್ದರೂ ಕೇಳಿಸದಂತೆ ಅವರು ಮನೆಯಿಂದ ಹೊರಬಿದ್ದರು. "ದೇವರೇ ಕ್ಷಮಿಸು" ಶೆಟ್ಟರು ಇಳಿಮುಖನಾಗುತ್ತಿದ್ದ ಸೂರ್ಯನತ್ತ ನೋಡಿದಾಗ ಅವರ ಕಣ್ಣು ಮತ್ತೆ ಒದ್ದೆಯಾಗಿತ್ತು.

---

ಸುಡಿಗೂನಿ ರಾಮುಪಾದಮುಲು ಸೋಂಕಿನ ಧೂಳಿ ವಹಿಂಚಿ ರಾಯಿಮೋ
ರ್ಪಡ ನೊಕ ಕಾಂತಯಯ್ಯೆನಚೀಪನ್ನುಗ ನೀತನಿಪಾದರೇಣುವಿ
ಪ್ಪೆಡವತಿನೋಡಶೋಕ ಇದಿ ಏಮಗುನೋಮನಿ ಸಂಶಯಾತ್ಮುಡೈ
ಕಡಿಗೆ ಗುಹ್ಯಂಕು ರಾಮುಪದ ಪಂಕಜಮುಗಮ್ಮಾ ಪೆುಪುನನ್.

ಅತುಕೂರಿಮೊಲ್ಲ (ಆಂಧ್ರ ಕವಯಿತ್ರಿ)

(ರಾಮನ ಪಾದ ಧೂಳಿ ಸೋಕಿದ ಕಲ್ಲೇ ಹೆಣ್ಣಾಯಿತು, ಎಂಬುದನ್ನು ತಿಳಿದ ಗುಹನು, ರಾಮನ ಪಾದ ಧೂಳಿ ಸೋಕಿ ತನ್ನ ದೋಣಿ ಏನಾಗುವುದೋ ಎಂಬ ಚಿಂತೆಯಿಂದ ರಾಮನ ಪಾದ -ಪಂಕಜಗಳನ್ನು ತೊಳೆದನು.)

# ಪತ್ರಿಕೋದ್ಯಮ - ಒಂದು ಅನಿಸಿಕೆ

— ವಿ ಜ ಯಾ

'ಪತ್ರಿಕೋದ್ಯಮ' ಕುರಿತು ಬರೆಯುವಾಗಲೇ ಈ ಲೇಖನದ ಮಿತಿಯನ್ನು ಗಮನದಲ್ಲಿಟ್ಟು ವಿಷಯ ವ್ಯಾಪ್ತಿಯನ್ನು ಒಂದು ಚೌಕಟ್ಟಿಗೆ ಸಂಕುಚಿಸುತ್ತಿದ್ದೇನೆ. ಈ ಕಾರಣದಿಂದಾಗಿಯೇ ಈ ರಂಗದಲ್ಲಿ ದುಡಿದವರ, ಆಗಿ ಹೋದ ವಿಚಾರಗಳನ್ನು ಕುರಿತ ಪಟ್ಟಿಯನ್ನೋ, ಇತಿಹಾಸವನ್ನೋ ಹೇಳುವುದು ಅಗತ್ಯವೆನಿಸುವುದಿಲ್ಲ. ವಿಶ್ವ ವ್ಯಾಪ್ತಿಯ ಈ ವಿಷಯವನ್ನು ಕರ್ನಾಟಕದ ಸಂದರ್ಭದಲ್ಲಿ ನಿಂತು ನನ್ನ ವೃತ್ತಿಮಾಧ್ಯಮದ ಕೆಲವು ಅನುಭವಗಳಿಂದ ತಳೆದ ಅಭಿಪ್ರಾಯಗಳನ್ನು ಸ್ಪಷ್ಟ ಮಾಡುವುದಷ್ಟೇ ನನ್ನ ಪ್ರಯತ್ನ.

ಒಂದು ಅರ್ಥದಲ್ಲಿ ಈ ದಂಧೆ ಕಷ್ಟಸಾಧ್ಯವೆನಿಸಿದರೂ ಅಷ್ಟೇ ಖುಷಿಕೊಡುವುದೂ ಉಂಟು. ಅನೇಕ ಸಂದರ್ಭಗಳಲ್ಲಿ ಪತ್ರಿಕೋದ್ಯಮಕ್ಕೆಂದೇ ಹಲವು ಸಿದ್ಧಾಂತಗಳ ರೀತಿನೀತಿಗಳನ್ನೊಳಗೊಂಡ ನಡನಳಿಕೆಯ ಆಚರಣೆಯಲ್ಲಿದೆ. ಇಂಥ ಅನೇಕ ನಿಯಮಗಳನ್ನು ಉಲ್ಲಂಘಿಸಿಯೇ ನನ್ನ ಕೆಲಸ ಸಾಧಿಸಿದ್ದೇನೆ. ಅದು ಫಲಕಾರಿಯಾಗಿದೆ ಕೂಡ 'ಭಾವುಕ'ತನದಿಂದ ದೂರನಿಂತೇ ಪತ್ರಿಕೋದ್ಯಮಿ ವಿಚಾರವನ್ನು ಹೇಳುವುದು ಅಗತ್ಯವೆನ್ನುವ ಮಾತೂ ಉಂಟು. ಭಾವುಕತೆಯ ಹೆಸರಲ್ಲಿ ಮೂಢ ನಂಬಿಕೆಯನ್ನು ಬೆಂಬಲಿಸುವುದನ್ನು ನಾನು ಒಪ್ಪಲಾರೆನಾದರೂ, ಮಾನವೀಯತೆಯ ಸಹಜ ಪ್ರತಿಕ್ರಿಯೆಯಷ್ಟೇ "ಭಾವುಕತೆ"ಯ ಹಣೆಪಟ್ಟಿ ಹಚ್ಚಿಬಂದುದೇ ಆದರೆ ಅಂಥ ಭಾವ ಪತ್ರಕರ್ತನಿಂದ ದೂರನಿಲ್ಲಬೇಕೆಂಬ ವಿಚಾರದಲ್ಲಿ ನನ್ನ ವಿರೋಧವಿದೆ. ಪತ್ರಿಕೋಧ್ಯಮದಲ್ಲಿ ಹೆಚ್ಚು ಜನ ಮಹಿಳೆಯರ ಪ್ರವೇಶ ಆಗಿಲ್ಲ ಎಂಬ ಬಗ್ಗೆ ಹಲವು ವಿವಾದಗಳೂ ಉಂಟು. ಪ್ರವೇಶಿಸುವಾಗಲೇ ಪೈಪೋಟಿ ಸ್ವತಂತ್ರ ವಿಚಾರಗಳನ್ನು ಕರಪ್ಟ್ ಮಾಡಿಬಿಡುವ ಸಂದರ್ಭಗಳನ್ನು ಎದುರಿಸುವ ದೃಢ ನಿಶ್ಚಯವಂತೂ ಈ ರಂಗಕ್ಕೆ ಅತ್ಯಗತ್ಯ. ತಾತ್ಕಾಲೀನ ಸಮಾಜದ ಎಲ್ಲ ರಂಗದ ಆಗುಹೋಗುಗಳನ್ನು ಚೆನ್ನಾಗಿ ಅರಿತಿರಬೇಕಾದ ಅನಿವಾರ್ಯತೆಗಾಗಿ ಹೆಚ್ಚು ಅಧ್ಯಯನ ಅಗತ್ಯ. ಈ ಓದುವ ಹವ್ಯಾಸ ಅನೇಕ ಸಂದರ್ಭದಲ್ಲಿ ಕೇವಲ ಸಂದೇಹಗಳು–ದ್ವಂಧ್ವದಲ್ಲಿ ನಮ್ಮನ್ನು ಕೆಡವಿಬಿಡುವುದುಂಟು. ಇವೆಲ್ಲದರ ಜತೆಗೆ ಇತಿಹಾಸ ಪ್ರಜ್ಞೆ–ವಾಸ್ತವ ಸತ್ವಗಳೊಂದಿಗಿನ ತಾರ್ಕಿಕ ವಿಚಾರಗಳ ಮಸೆತದಿಂದ ಸತ್ವಸಿಗುವುದು ಸಾಧ್ಯ. ಆಧ್ಯಯನದಿಂದ ಕೆಲವೊಮ್ಮೆ 'ಸ್ವಂತ'ಕ್ಕೆ ಏನೂ ಆಗದಿರಬಹುದು. ಆದರೆ ಪತ್ರಿಕಾರಂಗದ ನಮ್ಮ ಶ್ರಮಕ್ಕೆ ಪರಿಸರದ ವಿಚಾರಗಳ ಸ್ಪಷ್ಟ ಅರಿವು ಇಲ್ಲವಾದರೆ ವಿಷಯದ ಬಗ್ಗೆ ದೃಢತೆ ಇಲ್ಲದೆ ವರದಿ, ಹೇಳುವ ಧಾಟಿ ಎಲ್ಲವೂ ಜಾಳು ಜಾಳಾಗುತ್ತವೆ.

ಪತ್ರಿಕಾರಂಗದಲ್ಲಿ ದುಡಿಯುವ ನಾವು ಬರೆಯುವುದೂ ಹೆಚ್ಚು. ಆದರೆ ಈ ಬರಹವೆಲ್ಲ ಸಾಹಿತ್ಯಕ್ಷೇತ್ರದಲ್ಲಿ ಉಳಿಯುವಂಥವಲ್ಲ. ಬೆಳಗಿನ ಸಮಾಚಾರ ಪತ್ರಿಕೆ ಮಾರನೆ ದಿನಕ್ಕೆ ಹಳತಾದಂತೆ ಅದರೊಟ್ಟಿಗೆ ನಾವು ಬರೆದ ವಿಷಯವೂ ಮರೆವೆಯ ಪದರಿಗೇ ಸರಿದು ಬಿಡುತ್ತದೆ. ಹೀಗಾಗಿ ಹಲವರ ದೃಷ್ಟಿಯಲ್ಲಿ ಈ ವೃತ್ತಿಯ ಬಗ್ಗೆ ಆದರ–ಆಸ್ಥೆ ಇಲ್ಲದೇ ಹೋಗುತ್ತದೆ. ಅನೇಕ ಸ್ತ್ರೀಯರಿಗಂತೂ ಶ್ರಮಪಟ್ಟು ಬಂದು ಕಾದಂಬರಿ ಹೊಸದರೆ ಗಟ್ಟಿಯಾಗಿ ಉಳಿಯುತ್ತದಲ್ಲ ಎಂಬ ಭ್ರಮೆ. ಇವರಿಗಂತೂ ಓದುವ ಹವ್ಯಾಸ ಇರುವುದೇ ಇಲ್ಲ.

ನನ್ನ ಅನುಭವದಲ್ಲಿ ಈ ರಂಗ ತಂದ ಕಹಿ–ಸಿಹಿ ಅನುಭವಗಳು ಅನೇಕ. ಬಹುಪಾಲು ಕ್ರಿಯಾಶೀಲ

ಬರವಣಿಗೆಗೆ ಅವಕಾಶ, ಸಮಯ ಇರುವುದೇ ಇಲ್ಲ. ಬಿಡುವಿಲ್ಲದ ತಿರುಗಾಟ, ವಿಭಿನ್ನ ಅಭಿರುಚಿಯ ಜನರೊಂದಿಗೆ ಮಾತು–ಚರ್ಚೆ, ವಿಚಿತ್ರ ಅನುಭವವನ್ನು ಕೊಡುತ್ತದೆ.

ಕೇವಲ ಪ್ರಚಾರದ ಸಲುವಾಗಿ ಮಾತ್ರ ಪತ್ರಿಕೋದ್ಯಮಿಗಳನ್ನು ಆಶ್ರಯಿಸುವ ಜನಕ್ಕೆ ಅವರನ್ನು ಟೀಕಿಸಿದಾಗ ಉಂಟಾಗುವ ಅಸಮಾಧಾನ ವಿಚಿತ್ರ ಅನುಭವ ಕೊಡುತ್ತದೆ. ಈ ಜನಕ್ಕೆ ಪತ್ರಿಕಾಮಾಧ್ಯಮದ ಬಗ್ಗೆ ಸ್ಪಷ್ಟ ಅರಿವಂತೂ ಇರುವುದೇ ಇಲ್ಲ. ಅನೇಕರು ಮಾಡುವ ಸಾಧಾರಣ ಕೆಲಸಕ್ಕೂ ಪತ್ರಿಕೆಯ ಪ್ರಚಾರ ಬಯಸುತ್ತಾರೆ. ಅವರ ಕೆಲಸದ ಬಗ್ಗೆ ವಿಮರ್ಶಾತ್ಮಕವಾಗಿ ಬರೆದಾಗ ಹರಿಹಾಯುತ್ತಾರೆ. ಒಂದು ಅರ್ಥದಲ್ಲಿ ಇಂಥ ಪ್ರಚಾರ ಲಾಸೆಯೂ ನಮ್ಮ ಇಡೀ ಸಮಾಜದ ಸಂದರ್ಭದಲ್ಲಿ ಅವಲೋಕಿಸಿದಾಗಲೂ ಅಸಹ್ಯವೆನಿಸುವಷ್ಟು ಬೆಳಿದು ಬಿಟ್ಟಿದೆ.

ಸಾಮಾಜಿಕ ಬದಲಾವಣೆಗೆ ಕಾರಣವಾಗಬಹುದಾದ ಯಾವುದೇ ವಿಶೇಷ ಘಟನೆಯೂ, ವಿಚಾರವೂ ಪತ್ರಿಕೆಯ ದೃಷ್ಟಿಯಿಂದ ಮುಖ್ಯವಾಗುತ್ತದೆ. ಅಂಥ ವಿಶೇಷವಿದ್ದಲ್ಲಿ ಹುಡುಕಿ ತೆಗೆದು ಜನಸಮುದಾಯಕ್ಕೆ ಹೇಳುವುದೇ ಪತ್ರಕರ್ತರಿಗೆ–ಅವರಿಗೆ ಸಂಬಂಧಪಟ್ಟ ಪತ್ರಿಕೆಗೆ ಮುಖ್ಯ ಉದ್ದೇಶವಾಗಿರಬೇಕು. ಆದರೆ ಈಗಿನ ವ್ಯವಸ್ಥೆಯಲ್ಲಿ ಅದು ಸಾಧ್ಯವಾಗುತ್ತಿದೆಯೇ ?

ಮೂ ಲ ಭೂ ತ ವಾ ಗಿ ಪತ್ರಿಕಾಮಾಧ್ಯಮದ ಉದ್ದೇಶ ಏನೆಂಬುದನ್ನು ಉಭಯತ್ರ ಅರ್ಥಮಾಡಿಕೊಳ್ಳದೇ ತಮಗೆ ತಾವೇ ಸಿದ್ಧಾಂತಗಳನ್ನು ಮಾಡಿಟ್ಟುಕೊಂಡು ಜನತೆಯ ಸಮೀಪದ ಬಂಧುವಾಗಬೇಕಾದ ಈ ಮಾಧ್ಯಮವನ್ನು ಭಾರಿ ವ್ಯವಸ್ಥೆಯಾಗಿಸಿ, ಅದರ ಹಿಡಿಯಲ್ಲಿ ಎಲ್ಲರೂ ನಲುಗಿ ಹೋಗುತ್ತಿರುವ ದುರಂತವೊಂದೇ ಕಾಣುತ್ತಿದೆ ಈಗ.

ಸಂಸ್ಕೃತಿಯ ಬಗ್ಗೆ ಉದ್ದುದ್ದ ಮಾತಾಡುತ್ತ ಇವರೇ ಭಾರತೀಯ ಸಂಸ್ಕೃತಿಯ ವಕ್ತಾರರೋ ಎಂಬಂತೆ ಸಿದ್ಧಾಂತಗಳನ್ನು ಸೃಷ್ಟಿಸುತ್ತ, ಆ ಸಿದ್ಧಾಂತಗಳಿಗೆ ಸುಳ್ಳು ವ್ಯಾಖ್ಯಾನಗಳನ್ನು ಹೇಳುತ್ತ ತಿರುಗುವ ಚೇಲರನ್ನ ಸುತ್ತ ನಿಲ್ಲಿಸಿಕೊಂಡ ಮುಖವಾಡದ ಮಂ ದಿ ಯ Showmanshipಗೇ ಬೆರಗಾದ ಪತ್ರಿಕೆಗಳು ಅಂಥವರನ್ನು ಎತ್ತಿ ಹಿಡಿಯುತ್ತ ನಿಜವಾದ ಸಂಸ್ಕೃತಿ ಯಾವುದೆಂಬುದನ್ನೇ ಮರೆಯುತ್ತಿವೆ. ಇಂಥ ವ್ಯವಸ್ಥೆಗಳ ಅಡಿಯಲ್ಲಿ ಸಿಕ್ಕಿ ಪತ್ರಕರ್ತನ 'ಸ್ವತ್ವ' ಉಳಿಯುವುದಾದರೂ ಎಲ್ಲಿ ?

ಅನೇಕ ವಿಚಾರ ಸಂಕಿರಣಗಳು, ಕಲಾಪ್ರದರ್ಶನಗಳು–ಸಿನಿಮಾ–ನಾಟಕಗಳು ನಡೆಯುತ್ತಲೇ ಇವೆ. ಇವೆಲ್ಲ ಏನು ಹೇಳುತ್ತಿವೆ ? ಜನಸಾಮಾನ್ಯನಿಗೆ ಇದರಿಂದೇನು ಹೇಳಿದಂತಾಗುತ್ತಿದೆ ಎಂಬ ಬಗ್ಗೆ ವಿವೇಚಿಸಿ ಹೇಳದೆ, ಕೇವಲ ಅಲ್ಲಿ ಕಂಡ ಅಧೂರಿ ಗಿಮಿಕ್ಸ್‌ಗಳನ್ನು ಕಂಡು ಬೆರಗಾಗಿ ಸಂಭ್ರಮದಿಂದ ವರದಿಮಾಡಿದಾಗ ನಾವು ಮಹಾಜನತೆಗೆ ಎಂಥ ಮೋಸ ಮಾಡುತ್ತೇವೆಂಬುದನ್ನು ಸ್ವವಿಮರ್ಶೆ ಮಾಡಿಕೊಂಡ ಪ್ರತಿ ಪತ್ರಕರ್ತರೂ ಅರ್ಥಮಾಡಿಕೊಳ್ಳಬಲ್ಲರು.

ಕ್ರಿಯಾಶೀಲ ಬರಹಗಾರರ ಉತ್ಸಾಹ, ಅನೇಕ ಸಂದರ್ಭಗಳಲ್ಲಿ ಬಣ್ಣಕ್ಕೆ ಬೆರಗಾಗಿ ಅಡಗಿದ್ದ ವಿಶೇಷವನ್ನು ಹೊರತಂದೇ ಮೈ ಮರೆಯುವುದುಂಟು. ಇಂಥಲ್ಲಿ ಹೀಗೇಕೆ ಮಾಡಿದಿರೆಂದು ಟೀಕಿಸಿ ಅಂತರ್ಗತವಾಗಿರಬಹುದಾದ ಆಲೋಚನೆಗಳನ್ನು ಕೆದಕಿ ಮತ್ತೊಂದು ರೀತಿಯಲ್ಲಿ ಆಲೋಚಿಸುವಂತೆ ಮಾಡಬಹುದಾದ ಶಕ್ತಿ ಪತ್ರಕರ್ತರಿಗಿರುತ್ತದೆ. ಇಂಥಲ್ಲಿ ಸದ್ಭಾವ ಇಲ್ಲದೆ ಪೂರ್ವಗ್ರಹ ಪೀಡಿತರಾಗಿ ವ್ಯಕ್ತಿಗತವಾದ ಕ್ಷುಲ್ಲಕ ಕಾರಣಗಳನ್ನು ನೆಪಮಾಡಿ ಪತ್ರಿಕಾ ಮಾಧ್ಯಮವನ್ನು ದುರುಪಯೋಗ ಮಾಡಿಕೊಳ್ಳುವ ಅಪಾಯಗಳೂ ಉಂಟು.

ಸಂಸ್ಕೃತಿಯ ಹೆಸರಲ್ಲಿ ಇದೊಂದು ರೀತಿಯ ವ್ಯಭಿಚಾರವೇ ನಡೆದಿರುತ್ತದೆ. ಅ ನೇ ಕ ಸಂದರ್ಭಗಳಲ್ಲಿ, ಪತ್ರಿಕೆ-ಪತ್ರಕರ್ತ ಪೂ ರ್ವ ಗ್ರ ಹ ಪೀಡಿತರಾಗಿರಬಾರದೆಂದು ಹೇಳುತ್ತಿರುವಾಗಲೇ ಸ್ವಾತಂತ್ರ್ಯ ಕುರಿತೂ ಹೇಳದಿದ್ದರೆ ಅಪಚಾರವಾಗುತ್ತದೆ. 'ಸ್ವತಂತ್ರ' ಭಾರತದಲ್ಲಿ ಎಷ್ಟು ಪತ್ರಿಕೆಗಳಿಗೆ ಸ್ವಾತಂತ್ರ್ಯ ಇದೆ ಎಂದು ಕೇಳಿದರೆ ಸಿಗುವ ಉತ್ತರ ಸೊನ್ನೆಯೇ.

ಸಾಹಿತಿ–ಸಾಹಿತ್ಯ ಬೆಳೆದು ಬಂದದ್ದೇ ರಾಜಾಶ್ರಯದ ನೆರಳಲ್ಲಿ ಎಂದು ಇತಿಹಾಸ ಹೇಳುತ್ತದೆ. ಇಂದಿನ ಪರಿಸ್ಥಿತಿ ಅದಕ್ಕಿಂತ ಭಿನ್ನವಾಗೇನೂ ಇಲ್ಲ. ಪಟ್ಟಭದ್ರ ಹಿತಾಸಕ್ತಿಗಳ, ರಾಜಕೀಯ ವ್ಯಕ್ತಿಗಳ ಕೃಪಾ

ಶ್ರಯದಲ್ಲಿ ವಿಚಿತ್ರ ಧೋರಣೆಯನ್ನು ತಳೆಯಲೇ ಬೇಕಾಗಿರುವ ಈ ಸಂದರ್ಭದಲ್ಲಿ ಯಾವುದನ್ನೂ ಸತ್ಯವೆಂದು ಹೇಳಲಾಗದ ಸುಳ್ಳು ವರದಿಗಳನ್ನು ಕೆಲವು ಬಾರಿ ಯಾರದೋ ಬೆದರಿಕೆಗೆ ಬಾಗಿ ವರದಿಯನ್ನೇ ಮಾಡದ ಅನೇಕ ಘಟನೆಗಳನ್ನು ಕಾಣುತ್ತಿದ್ದೇವೆ. ತಾನಿರುವ ವ್ಯವಸ್ಥೆಯೇ ಯಾವುದೋ ಹಿಡಿಯಲ್ಲಿರುವಾಗ ಅದಕ್ಕೆ ಬದ್ಧವಾದ ಪತ್ರಕರ್ತನಿಗೆಲ್ಲಿರುತ್ತದೆ ಸ್ವಾತಂತ್ರ್ಯ? ಯಾವ ಮಾತಿಗೆ ಯಾರು ಮುನಿದುಕೊಳ್ಳುತ್ತಾರೊ-ಯಾವ ಟೀಕೆಗೆ ಯಾರ ಅಸಹಕಾರದ ಫಲ ಎದುರಿಸಬೇಕೋ ಎಂಬ ಕಾರಣಕ್ಕಾಗಿ-ಒಂದಿಗೇ ಸ್ವಲಾಭದ ಅನೇಕ ಕಾರಣಗಳಿಗಾಗಿ ತನ್ನ ಮಾಧ್ಯಮವನ್ನೇ-ಅನೇಕ ಬಾರಿ ತನ್ನ ಸ್ವಂತವನ್ನೇ ವಂಚಿಸಿಕೊಳ್ಳುವ ಪತ್ರಕರ್ತರಿಗೂ ಕಡಿಮೆಯಿಲ್ಲ ನಮ್ಮ ಸಂದರ್ಭದಲ್ಲಿ.

ಇಂಥ ವಾತಾವರಣದಲ್ಲಿ ಈ ರಂಗದಲ್ಲಿ ದುಡಿಯುವ ಹೆಣ್ಣು ಮಕ್ಕಳ ಪರಿಸ್ಥಿತಿ ಹೇಗಿರುತ್ತದೆಂದು ಹೇಳಬೇಕಾದ್ದೇ ಇಲ್ಲ. ಮಹಿಳೆಯ ಬಗ್ಗೆ ಉದ್ದುದ್ದ ಮಾತನಾಡುತ್ತ ಸಮಾನತೆ ಕುರಿತು ಅವಳಿಗೇ ತಿಳಿದಿರದ ಅರ್ಥಗಳನ್ನು ಅವಳಿಗೆ ತಿಳಿ ಹೇಳುತ್ತ, ಮಂಕು ಮಾಡುತ್ತಲೇ ಅವಳ ಬಗ್ಗೆ ಗಾಸಿಪ್‌ಗಳನ್ನು ಮಾಡುತ್ತ ಹೆಣ್ಣೆಂಬ ಕಾರಣಕ್ಕೆ ತಾತ್ಸಾರ ಮಾಡುತ್ತ ತಿರುಗುವ ವಿರೋಧಾಭಾಸ ನಮ್ಮ ಸಮಾಜದಿಂದ ಸಧ್ಯಕ್ಕೆ ದೂರಾಗುವ ನಿರೀಕ್ಷೆ ನನಗಂತೂ ಇಲ್ಲ.

ಪತ್ರಿಕೋದ್ಯಮ ಎಂದೊಡನೆ ಕರೆಬಂದಲ್ಲಿಗೆ ಹೋಗುವುದು ಅನಿವಾರ್ಯ. ಹಾಗೆ ಹೋದಾಗ ಜನ ಹೇಗೆ ನಡೆಸಿಕೊಳ್ಳುತ್ತಾರೆಂಬುದನ್ನು ಅನುಭವಿಸಿಯೇ ಅರಿಯಬೇಕು. ಮೌನವಾಗಿ ತನ್ನ ಕೆಲಸ ತಾನು ಮಾಡಿಕೊಂಡಿರುವ ಸ್ತ್ರೀಗೆ ಆಕೆಯ ಲಿಬರೇಶನ್ ಬಗ್ಗೆ ವ್ಯಾಖ್ಯಾನಿಸುವವರು ಕೆಲವರಾದರೆ, ಆಕೆಯ ಸರಳ-ಸಹಜ ನಡವಳಿಕೆಗೆ ತಮ್ಮದೇ ವಿಶೇಷ ಅರ್ಥಕೊಟ್ಟು ತಪ್ಪಾಗಿ ನಡೆಸಿಕೊಳ್ಳುವ ಜನಗಳಿಗೇನೂ ಕಡಿಮೆಯಿಲ್ಲ ನಮ್ಮಲ್ಲಿ.

ಗಂಡು-ಹೆಣ್ಣು ಸಂಬಂಧವನ್ನು ತೀರ ಸೀಮಿತ ಅರ್ಥದಲ್ಲಿ ಬೆಳೆಸುತ್ತ-ಅವಕಾಶ ಸಿಕ್ಕರೆ-ಸುಲಭ ಸಾಧ್ಯವಾದರೆ ಹೇಗೂ ಬಳಸಿಕೊಳ್ಳುವ ಪ್ರಯತ್ನದ ಈ ಪುರುಷ ಸಮಾಜದಲ್ಲಿ - ಪತ್ರಿಕೋದ್ಯಮದಲ್ಲಿ ಮುಂಬರುವುದು ನಾಲ್ಕು ಗೋಡೆಯ ಮಧ್ಯೆ ಕೂತು ಕತೆ, ಕಾದಂಬರಿ ಬರೆಯುವಷ್ಟು ಸುಲಭವಂತೂ ಅಲ್ಲ.

ಸಹಜವಾಗಿರುವ ಮೃದುತನಕ್ಕೆ - ಭಾವುಕತೆಗೆ-ಉದ್ರೇಕಕ್ಕೆ ಕಡಿವಾಣ ಹಾಕಿ ದಿಟ್ಟದಾಗಿ ಅಡಿಯಿಟ್ಟಾಗ ಈ ಎಲ್ಲ ಕುಂದುಕೊರತೆಗಳನ್ನು ಮೆಟ್ಟಿ ನಿಂತು ಜಯಿಸುವುದು ಅಸಾಧ್ಯವೇನಲ್ಲ. ಈ ದೃಷ್ಟಿಯಿಂದಲೂ ಪತ್ರಿಕೋದ್ಯಮ ಒಂದು ರೀತಿಯ ಖುಷಿಯನ್ನ ಅನೇಕ ಸಂದರ್ಭದಲ್ಲಿ ಥ್ರಿಲ್‌ಗಳನ್ನು ನನ್ನ ಪಾಲಿಗೆ ತಂದುಕೊಟ್ಟಿದೆ. ಸಮೀಪದಿಂದ ಮುಖವಾಡದ ಬುದ್ಧಿವಂತರನ್ನು ಕಂಡು ಇಷ್ಟೇನೇ? ಎಂದುಕೊಂಡಿದ್ದೇನೆ. ನಿಷ್ಕಲ್ಮಷ ಹೃದಯದ ಸರಳ ಜನರನ್ನ-ಮುಗ್ಧರನ್ನ ಕಂಡು ಖುಷಿಪಟ್ಟಿದ್ದೇನೆ.

ಕಥೆ-ಕಾದಂಬರಿ ಪ್ರಬಂಧ ಬರೆಯುವ ಕಿರಿಯ ಬರಹಗಾರನೊಂದಿಗೆ ಮಾತಾಡುವಾಗ ಅವರ ಬರೆದಾಗಿನ ಅನುಭವದ ಬಗ್ಗೆ ಕೇಳಿ ಸಾಹಿತ್ಯದ ಬೆಳವಣಿಗೆಯ ಬಗ್ಗೆ ವಿಸ್ಮಿತಳಾಗಿದ್ದೇನೆ. ನನ್ನ ಮಿತಿಯಲ್ಲಿದ್ದ ಅಧಿಕಾರದ ಅವಧಿಯಲ್ಲಿ ಅನೇಕರಿಗೆ ಪ್ರೋತ್ಸಾಹದ ಮಾತಾಡಿ ಅಡಗಿದ್ದ ಪ್ರತಿಭೆಯನ್ನು ಹೊರಗೆಳೆದು, ಇಂದು ಅವರೆಲ್ಲ ಉತ್ತಮ ಬರಹಗಾರರ ಸಾಲಿನಲ್ಲಿರುವುದನ್ನು ಕಂಡು ಹಿಗ್ಗಿದ್ದೇನೆ. ಇಲ್ಲಿಯ ಅನೇಕ ನೋವಿನ ಅನುಭವಗಳನ್ನು ಈ ಉತ್ಸಾಹದಲ್ಲಿ ಕೊಚ್ಚಿಹಾಕಿದ್ದೇನೆ.

ಮೊಳೆ ಜೋಡಿಸುವ, ಕರಡು ಪ್ರತಿ ತಿದ್ದುವ, ವಿನ್ಯಾಸ ರಚಿಸುವ ಸಂದರ್ಭಗಳಲ್ಲಿ ನನ್ನ ಎಲ್ಲ ಸಮಯವನ್ನು ವಿನಿಯೋಗಿಸಿ, ಕೆಲಸ ಛಂದ ಎನಿಸಿದಾಗ ಹಲವರ ಮೆಚ್ಚು ನುಡಿ ಕೇಳಿದಾಗ ಸಾರ್ಥಕವಾಯಿತೆಂದು ಕೊಂಡಿದ್ದೇನೆ.

ಯಾರಿಗಾಗಿ ಬರೆಯುತ್ತೇನೆಂಬ ದ್ವಂದ್ವದಲ್ಲಿ ತೊಳಲುತ್ತಿದ್ದಾಗ ಇದು ಹಿತವೆನಿಸಿತೆಂದು ದೂರದ ಹಳ್ಳಿಯಿಂದ ಬಂದ ಪತ್ರ-ಭೆಟ್ಟಿಯಾದಾಗ ಮೆಚ್ಚು ನುಡಿ ಕೇಳಿ ನನ್ನೊಳಗೆ ಅನೇಕ ನಿರ್ಧಾರಗಳಿಗೆ ಬಂದಿದ್ದುಂಟು.

ಈ ಉದ್ಯೋಗ ಅನೇಕರ ನಿಷ್ಠುರಕ್ಕೆ ದಾರಿ ಮಾಡಿದೆ. ಸ್ಪಷ್ಟವಾದ ಅಭಿಪ್ರಾಯ, ಸತ್ಯ-ಅನೇಕರನ್ನು ಚುಚ್ಚುತ್ತದೆಂದು ಬಲ್ಲೆ. ಆದರೆ ಇವೆಲ್ಲ ನನ್ನಲ್ಲಿಂದೂ

ನಿರಾಶಕ್ತಿಯನ್ನು ಹುಟ್ಟಿಸಿಲ್ಲ. ಸ್ವವಿಮರ್ಶೆ ನನ್ನನ್ನು ಗಟ್ಟಿಯಾಗಿಸಿದೆ. ಯಾವ ಪ್ರಲೋಭನೆಯು ನನ್ನನ್ನು ಇನ್ನೂ ಸಿಕ್ಕಿಸಿಲ್ಲವೆಂಬುದೊಂದೇ ನನಗಿರುವ ಸಮಾಧಾನ.

ಬದುಕಿನ ಸಂಕೀರ್ಣತೆಯನ್ನ–ನೂರು ವಿವಿಧ ಆಲೋಚನೆಗಳನ್ನ - ಸಮಸ್ಯೆಗಳನ್ನ ಕಾಣುತ್ತಲೇ ಈ ವ್ಯಾಪ್ತಿಯ ತಳದಲ್ಲಿ ಏನನ್ನೋ ಸಂಶೋಧಿಸುವ ಬಯಕೆ ಇಂಥ ವಿಚಿತ್ರ ಅನುಭವ ತಂದುಕೊಟ್ಟ–ನನ್ನ ವಿಚಾರಗಳನ್ನು ಹತ್ತು ದಿಕ್ಕಿನಲ್ಲಿ ಓಡಿಸಲು ನೆರವಾಗುತ್ತಿರುವ ಈ ಮಾಧ್ಯಮವನ್ನು – ವಿಚಾರವಂತರ, ಜನಸಾಮಾನ್ಯರ ನಡುವಣ 'ದವಿನ' ಯಾಗುವ ಅವಕಾಶ ಒದಗಿಸಿಕೊಟ್ಟ ಈ ವೃತ್ತಿಯನ್ನು ಅತ್ಯಂತ ಕೃತಜ್ಞತಾಭಾವದಿಂದ ಒಪ್ಪಿಕೊಳ್ಳುತ್ತಿದ್ದೇನೆ. ಹಲವರಿಗೆ ಮಹಿಳೆಯರಿಗೆ ಸುಖಾಗಮನ ಬಯಸುತ್ತೇನೆ.

---

## ಶೇಷ . . . ? ? ?

ಎತ್ತರಕ್ಕೆ; ಬಹು ಎತ್ತರಕ್ಕೆ
ಬಲಿಯ ತುಳಿದವನ
ಗೆಜ್ಜೆಯಂತೆ,
ಬೆಳೆದು ನಿಂತಿದ್ದ—
ಹುತ್ತದಿಂದ ಹುಡಿನುಣ್ಣು
ಉ...ದು ...ರು....ತ್ತಾ ...ಬಂದಿದ್ದರೂ
ಹುತ್ತವಿನ್ನೂ ಸಣ್ಣಗಾಗಿಲ್ಲ
ಅದರೊಳಗೆ ಅವಿತಿರುವುದು
ಭು....ಸ್ಸೆಂ....ದು....ಮೇಲೇರಿ;
ಬಿಸಿಲಿಗೆ ಬೆನ್ನೊಡ್ಡಿ; ಅಚ್ಚರಿಯಲಿ
ಕ್ಷಳಿತಿದ್ದ 'ಕೂಪ ಮಂಡೂಕ'ವನು,
ಗಬಕ್ಕನೆ, ಹಿಡಿದು ನುಂಗಿದಾಗ,
ಕುರುಹಾಗಿ ಉಳಿದಿದ್ದು ನಾಲ್ಕುಕಡೆ
ಹನಿ ಬಿದ್ದ ಚಿತ್ತು ?
ಬೆಳದ ಹುತ್ತವನು ಕಂಡು
ಜನ........, ಸೇರುಗಟ್ಟಲೆ ಹಾಲ ಹುಯ್ದು
(ಭಯದಿಂದ ದೂರವೇ ನಿಂತು)
ರಾಶಿ ಹೂವ ಏರಿಸಿ
ನಿರ್ಭೀತಿಯಲಿ ಇಷ್ಟಗಳ ಕಂತೆ
ಬಿ....ಚ್ಚು....ತ್ತಾ....ಹೋದಾಗಲೆಲ್ಲಾ
ಒಳಗೆ ಅವಿತಿದ್ದಕ್ಕೆ
ಭಾರ ಹೆಚ್ಚಾಗಿ
ಒರಗಿದಲ್ಲೇ ಒರಗಿಬಿತ್ತು ! ! !

—ಕುಮಾರಿ ಸ್ವರ್ಣಗೌರಿ

ನಗೆ ಲೇಖನ

# ಕಾಯಿಲೆ ಕಾಮಾಕ್ಷಮ್ಮ

—ಪದ್ಮಾ ಗುರುರಾಜ್

ಕಾಮಾಕ್ಷಮ್ಮನಿಗೆ ಹುಟ್ಟುತಲೇ ಕಾಮಾಲೆ! ಹೀಗೆ ಹೀಗೆ ಆಕೆ ಮತ್ತು ಆಕೆಯ ಕಾಯಿಲೆ ಎರಡೂ ಒಮ್ಮೆಗೇ ಜನ್ಮತಳೆದು ಈ ಭೂಮಿಗೆ ಬಂದುವು, ಎಂದರೆ ತಪ್ಪಲ್ಲ. ಅಂದಿನಿಂದ ಇಂದಿನವರೆಗೂ ಅಂದರೆ ಇಡಿ ನಲವತ್ತೆಂಟು ವರ್ಷಗಳ ಆಯುಷ್ಯದಲ್ಲಿ ಆಕೆ ಒಂದಲ್ಲ ಒಂದು ಬಗೆಯ ಕಾಯಿಲೆಗಳಿಂದ ನರಳುತ್ತಲೇ ಬದುಕಿದ್ದಾರೆ.

ಮೂಗಿದ್ದ ಮೇಲೆ ನೆಗಡಿ ಬಾರದೆ ಇದ್ದೀತೆ....? ಹಾಗೆಯೆ ಮನುಷ್ಯರು ಎಂದಮೇಲೆ ಕಾಯಿಲೆ ಕಸಾಲೆ ತಪ್ಪಿದ್ದಲ್ಲ. ರೋಗ ಮನುಷ್ಯನಿಗೆ ಬಾರದೆ ಮರಕ್ಕೆ ಬರುತ್ತದೆಯೇ....? ಅದೆಲ್ಲಾ ಸರಿ....ಆದರೆ ಕಾಮಾಕ್ಷಮ್ಮನ ಮೇಲೆ ರೋಗಗಳು ಅತಿ ಹೆಚ್ಚಿನ ಪ್ರಮಾಣದಲ್ಲಿ ದಾಳಿ ಮಾಡಿವೆ ಎನ್ನಬಹುದು. ಹುಟ್ಟುತ್ತಲೇ ಕಾಮಾಲೆ ಎಂದೆನಲ್ಲವೇ ನಂತರ ಮೂರು ತಿಂಗಳಿಗೆ ಮೂರ್ಛೆರೋಗ, ಆರು ತಿಂಗಳಿಗೆ ಗಂಟುಬೇನೆ (ಡಿಫ್ತೀರಿಯಾ) ವರ್ಷ ತುಂಬುವುದರಲ್ಲಿ ಕಾಲರಾ, ಸಿಡುಬು, ಮರುವರ್ಷಕ್ಕೆ ಮಲೇರಿಯಾ, ಆರು ವರ್ಷಕ್ಕೆ ನ್ಯೂಮೋನಿಯಾ, ಹತ್ತು ವರ್ಷಕ್ಕೆ ಟೈಫಾಯಿಡ್, ಹನ್ನೆರೆಡು ವರ್ಷದಲ್ಲಿ ನಾಯಿಕೆಮ್ಮು, ನ್ಯೂಮೋನಿಯಾ....ಒಂದೇ....ಎರಡೇ ....ರಾಮ ರಾಮ....ಆಕೆಯ ಬಾಲ್ಯಾವಸ್ಥೆಯನ್ನೆಲ್ಲಾ ಹೀಗೆ ಭಯಂಕರ ಕಾಯಿಲೆಗಳು ಆವರಿಸಿಕೊಂಡಿದ್ದುವು. ಈ ದೀರ್ಘಾವದಿ ರೋಗಗಳ ನಡುವಿನ Interval ನೆಗಡಿ, ಕೆಮ್ಮು, ವಾಂತಿ, ಭೇದಿ, ಜ್ವರ ಮುಂತಾದ ಸಣ್ಣ ಪುಟ್ಟ ಕಿರುಕುಳ, ರೇಜಿಗೆ ರೋಗಗಳು ಆಕ್ರಮಿಸಿ ಕೊಳ್ಳುತ್ತಿದ್ದವು.

ಹೀಗಾಗಿ ಹುಡುಗಿ ಕಾಮಾಕ್ಷಿಗೂ, ಅವಳಿಗೆ ಜನ್ಮ ಕೊಟ್ಟು ಧನ್ಯಲಾದ ಮಾತಾಪಿತರಿಗೂ ಆಕೆ ಆರೋಗ್ಯವಾಗಿದ್ದ ದಿನವೇ ನೆನಪಿಲ್ಲ.... ಹಾಗೊಮ್ಮೆ ಇದ್ದರೆ ಅದೇ ಅವರ ಪಾಲಿಗೆ ಶುಭದಿವಸ, ಹಬ್ಬ. ಕಾಮಾಕ್ಷಿಗೆ ಹನ್ನೆರಡು ವರ್ಷವಾಗುವ ವೇಳೆಗೆ ಆಕೆಯ ಹೆಸರಿನ ಹಿಂದೆ, ಅದು ಹೇಗೋ ಅಂತೂ 'ಕಾಯಿಲೆ' ಎಂಬ ಬಿರುದು ಭದ್ರವಾಗಿ ಸೇರಿ ಕೊಂಡಾಯಿತು. ಬರೀ ಕಾಮಾಕ್ಷಿ ಎಂದರೆ ನೆರೆಹೊರೆಯವರಿಗೆ, ಸ್ನೇಹಿತರು, ಬಂಧುಬಳಗಕ್ಕೆ ಅರ್ಥವಾಗುತ್ತಿರಲಿಲ್ಲ. ಅದೇ 'ಕಾಯಿಲೆ ಕಾಮಾಕ್ಷಿ' ಎಂದೊಡನೆ 'ಹೋ....ಅವಳೇ....!' ಎಂದು ನಕ್ಕು ತಕ್ಷಣ ತಲೆದೂಗತ್ತಿದ್ದರು.

ಈ ಕಾಯಿಲೆಗಳ ಗಡಿಬಿಡಿಯಲ್ಲಿ ಕಾಮಾಕ್ಷಿಯ ಓದು ಬರಹಕ್ಕೆ ಬಿಡುವೆಲ್ಲ? ಸಾಕ್ಷಾತ್ ಸರಸ್ವತಿಯ ಅಪರಾವತಾರವಾದ ಕಾಮಾಕ್ಷಿಗೆ ವಿದ್ಯೆಯಂತೂ ನೈವೇದ್ಯವಾಯಿತೆಂದರೆ, ರೂಪಾತಿಶಯಗಳ ವರ್ಣನೆಯೂ ಬೇಡವೆ? ಕೇಳಿ....

ಪೀಚುಶರೀರ, ಕಡ್ಡಿ ಕೈಕಾಲುಗಳು, ಆನೆ-ಕಿವಿ, ಸೊಂಡಲಿನಂತಹ ಮೂಗು, ಕೋಲಿನಂತಹ ಮುಖದಲ್ಲಿ ಪ್ಲೈಲಿಬೇನೆ ಉಳಿಸಿಹೋದ ಭಯಂಕರ ಕಲೆಗಳು.... ಪುಟ್ಟಬಾಯಿ, ಮೂರು ತೆಂಗಿನಕಾಯಿ ತುರಿಯಲು ಸಾಧ್ಯವಾಗುವಂತಹ ಮುಂದಿನ ಮೂರು ಬಾಚಿ ಹಲ್ಲುಗಳು, ಇಲಿಯ ಬಾಲವನ್ನು ನಾಚಿಸುವಂತಹ ಕೇಶ ಸಂಪತ್ತು, ಚುಕ್ಕೆಗಳಂತಹ ಕಣ್ಣುಗಳು....ಸಾಕು ತಾನೆ...?

ಇಂತಹ ರಂಭೆ ಕಾಮಾಕ್ಷಿಯನ್ನು ಕೈಹಿಡಿಯಲು ಧೀರೋದಾತ್ತ ಗಂಡುಪ್ರಾಣಿಯೊಂದು ದೊರಕಿ, ಕಾಮಾಕ್ಷಿಗೆ ಕಂಕಣಬಲ ಕೂಡಿಬಂತೆಂದರೆ ಮೂಗಿನ ಮೇಲೆ ಬೆರಳಿಟ್ಟುಕೊಂಡೀರಿ....ಜೋಕೆ....! ಅದರ ಹಿಂದೆ, ಭರ್ಜರಿ ಕಾರಣವೇ ಇದೆ. ಏನೆಂದರೆ.... ಕಾಮಾಕ್ಷಿ ಶ್ರೀಮಂತ ಪುತ್ರಿ. ಅಂತೆಯೇ ಅವಳನ್ನು ಹೆತ್ತವರು ತಮ್ಮ ಒಬ್ಬಳೇ ಮಗಳಿಗಾಗಿ ಗಂಡನನ್ನು ಹಣಸುರಿದು ಖರೀದಿಮಾಡಿದರು. ದಿಕ್ಕು ದೆಸೆಯಿಲ್ಲದೇ ಈ ಪರದೇಶಿ ಅಳಿಯ ಕಾಮಾಕ್ಷಿಯ ದೆಸೆಯಿಂದ ವಿದ್ಯಾವಂತನಾದ, ಉದ್ಯೋಗಸ್ಥನಾದ, ಶ್ರೀಮಂತನಾದ, ಎಲ್ಲಾ ಸರಿ. ಇಷ್ಟಾದರೂ ಈ ಮಡದಿಯ ದೆಸೆಯಿಂದಲೇ ಆತ ಮುಂದೆ ವಿರಕ್ತನಾಗಿ ದೇಶಾಂತರ ಹೋಗಬೇಕಾಯಿತು....ಇರಲಿ ಅದು ಬೇರೆ ವಿಷಯ.

ವಿವಾಹವಾದ ನಂತರ ಕಾಮಾಕ್ಷಿ ಕಾಮಾಕ್ಷಮ್ಮನಾದಳು. ಬಾಲ್ಯವಸ್ಥೆಗೆ ಹೋಲಿಸಿದರೆ, ಇತ್ತೀಚೆಗೆ ರೋಗಗಳ ಧಾಳಿ ಅಷ್ಟಿಷ್ಟು ಕಡಿಮೆಯಾಗಿ....ಆಕೆಯ ಆರೋಗ್ಯ ಸ್ವಲ್ಪ ಸುಧಾರಿಸಿತ್ತಿದರೂ, ಮೊದಲಿನಿಂದಲೂ ರೋಗಗಳ ರಾಶಿಯಲ್ಲಿ ಮುಳುಗಿ ಏಳುತ್ತಿದ್ದ ಆಕೆಗೆ ಈಗ ಇರುವುದರೊಂದಿಗೆ ಇಲ್ಲದಿರುವ ಕಾಯಲೆಗಳನ್ನು ಕಲ್ಪಿಸಿಕೊಂಡು ಕೊರಗುವ, ಮಹಾಜಾಡ್ಯವೊಂದು ಹೊಸದಾಗಿ ಅಂಟಿಕೊಂಡಿತು.

ನಾಲ್ಕುಸಲ ಕೆಮ್ಮಿದೊಡನೆಯೇ ತಮಗೆ ಕ್ಷಯವೆಂದು ನಿರ್ಧರಿಸಿ ಕಂಗಾಲಾಗುತ್ತಿದ್ದರು. ನೆಗಡಿ ಬಂದರೆ ನ್ಯೂಮೋನಿಯಾ, ಎಲ್ಲಾದರೂ ಒಂದು ಬೊಕ್ಕೆ ಕಂಡರೆ ಅದು ಕ್ಯಾನ್ಸರ್‌ಗೆ ತಿರುಗಬಹುದಲ್ಲವ ? ಎಂದು ಥರ ಥರ ನಡುಗುತ್ತಿದ್ದರು. ಮೈಮೇಲೆ ಒಂದು ಬಿಳಿ ಚುಕ್ಕೆ ಕಾಣಬಾರದು .. ಅದು ತೊನ್ನೋ....ಕುಷ್ಠವೋ.... ಎಂದು ಸಂಶಯ ಪೀಡಿತರಾಗಿ ಚಡಪಡಿಸುವರು. ಹೊಟ್ಟೆನೋವಿಗೆ ಅಪೆಂಡಿಸೈಟಸ್, ತಲೆನೋವಿಗೆ ಮೆನಿಂಜೈಬನ್- ಹಲ್ಲುನೋವಿಗೆ ಪಯೋರಿಯಾ, ಭೇದಿಗೆ ಡಯೋರಿಯಾ, ಬಚ್ಚಲುಮನೆ ಯಾತ್ರೆ ನಾಲ್ಕುಸಲವಾದರೆ ಡಯಾಬಿಟಿಸ್, ಬೆಳಗ್ಗೆ ಕಣ್ಣು ಮಂಜಾದರೆ ಬ್ಲಡ್ ಪ್ರೆಷರ್....ಎಂದು ದಿನಕೊಂದು ಹೊಸ ರೋಗಗಳಿಗೆ ತಮ್ಮನ್ನು ತಾವೇ ಬಲಿಮಾಡಿ ನರಳುತ್ತಿದ್ದರು...... ಡಾಕ್ಟರಲ್ಲಿಗೆ ಒಂದೇ ಸಮನೆ ಎಡತಾಕುತ್ತಿದ್ದರು.

ಕಾಮಾಕ್ಷಮ್ಮನಿಗೆ ಮಕ್ಕಳಾಗಲಿಲ್ಲ....ಸಧ್ಯ ಅವರ ಡಾಕ್ಟರ ಪುಣ್ಯ.... ಏನಿಲ್ಲದೆಯೋ ಕಾಯಿಲೆಗಳ ಇತಿಹಾಸದ ಕೋಟೆಯನ್ನೇ ತಮ್ಮ ಸುತ್ತ ನಿರ್ಮಿಸಿಕೊಂಡು ....ದಿನಕ್ಕೆ ನಾಲ್ಕುಬಾರಿ ಬಂದು ಮುಂದೆ ನಿಲ್ಲುವ, ನಿಂತರೆ ಗಂಟೆಗಟ್ಟಲೆ ಜಾಗಖಾಲಿಮಾಡದೆ, ಕಿವಿ ತೂತಾಗುವಂತೆ ಬಡಬಡಿಸುವ ಈಕೆ, ಬಸುರಿ ಬಾಣಂತಿಯಾಗಿದ್ದರೆ ಅವರ ಡಾಕ್ಟರನ್ನು ದೇವರೇ ಕಾಪಾಡಬೇಕಿತ್ತು.

ಅಲ್ಲದೆ ಇದರಿಂದ ರಾಷ್ಟ್ರಕ್ಕೂ, ಸಮಾಜಕ್ಕೂ ಸಹ ಮಹದುಪಕಾರವಾಯಿತು. ಕಾರಣ, ಆಕೆಯ, ಅಶಕ್ತ, ರೋಗಪೀಡಿತ ಪೀಳಿಗೆ ವಂಶಪಾರಂಪರ್ಯವಾಗಿ ಬೆಳೆದು, ವಿಶ್ವಾದ್ಯಂತ ಹರಡುವುದು ತಪ್ಪಿದಂತಾಯಿತು. ಆದರೆ ವೈಯಕ್ತಿಕವಾಗಿ ಸಂತಾನಹೀನತೆ, ಕಾಮಾಕ್ಷಮ್ಮ ದಂಪತಿಗಳಿಗೂ, ಆಕೆಯ ತಾಯ್ತಂದೆಯರಿಗೂ ಅಪಾರ ದುಃಖವನ್ನೇ ತಂದಿತಲ್ಲದೆ, ಮಗಳ ಅನಾರೋಗ್ಯದ ಚಿಂತೆಯಲ್ಲೇ ಬೆಂದು, ಸವೆದು ಹೋಗಿದ್ದ ಆ ವೃದ್ಧ ದಂಪತಿಗಳು, ಶೀಘ್ರದಲ್ಲೇ ಸಾವನ್ನಪ್ಪಲು ಕಾರಣವಾಯಿತು.

ಮುಂದೆ ಕಾಮಾಕ್ಷಮ್ಮನ ಪರಿಸ್ಥಿತಿ ಇನ್ನೂ ಯೋಚನಾಯವಾಯಿತು. ಮಕ್ಕಳಿಲ್ಲದ ಕೊರತೆಯನ್ನು ಮರೆಯಲು, ಆಕೆ ತನುಗೆ ಇರುವ, ಇಲ್ಲವೆ ಇಲ್ಲದಿರುವ ಕಾಯಿಲೆಗಳಿಗೆ ಶರಣು ಹೋದರು. ಹುಟ್ಟಿನಿಂದ ಬಂದ ರೋಗಗಳು, ಮಧ್ಯದಲ್ಲಿ ತಗುಲಿಕೊಂಡುವು, ಹಾಗೂ ಮುಂದೆ ಬರಬಹುದಾದ ಕಲ್ಪನಾ ಕಾಯಿಲೆಗಳು, ಯಾವುದಕ್ಕೂ ಆಕೆ ಅನ್ಯಾಯ ಮಾಡಲಿಲ್ಲ, ಅನಾದರ ತೋರಲಿಲ್ಲ. ಸ್ವಂತ ಮಕ್ಕಳಿಗಿಂತ ಹೆಚ್ಚಿನ ಮಮತೆಯಿಂದ ಅವುಗಳನ್ನು ಪೋಷಿಸಲಾರಂಭಿಸಿದರು.

ಅಲ್ಲಿಗೆ ಆಕೆಯ ಪತಿಯ ಪಾಡು ನಾಯಿಪಾಡೇ ಸರಿ. ಹೆಂಡತಿಯ ಹಳೆಯ ರೋಗಗಳ ರಾಮಾಯಣದೊಂದಿಗೆ, ಅಂದಂದಿನ ಹೊಚ್ಚ ಹೊಸ ಕಾಯಿಲೆಯ ವೈಭವ, ಡಾಕ್ಟರ್ ಭೇಟಿ, ಬಿನ್ನಾ, ಎಕ್ಸರೇ, ರಿಸಲ್ಟು, ಔಷಧಿ, ಇಂಜೆಕ್ಷನ್, ಪಥ್ಯ-ಪಾನಗಳ ಮಹಾ ಬೈರಿಗೆ ಸಡಗರಗಳ ನಡುವೆ ಈ ಬಡಪಾಯಿಯನ್ನು ಬದುಕಿದೆಯೋ ಸತ್ತೆಯೋ ಎನ್ನುವವರೂ ಗತಿಯಿಲ್ಲ.

ಹೆಂಡತಿಯ ಹಂಗಿನ ಕೂಳು ಉಂಡ ತಪ್ಪಿಗೆ, ಬಾಯಿ ಹೊಲೆದುಕೊಂಡು ಆತ ಅಪಾರ ಸಹನೆಯಿಂದ

ತಡೆಯುವಷ್ಟು ತಡೆದ. ಕೊನೆಗೆ ಮಿತಿ ಮೀರಿದಾಗ.... ಒಂದು ಬೆಳ್ಳನೆ ಬೆಳಗಿನ ಜಾವ ಕೊರೆಯುವ ಛಳಿಯಲ್ಲಿ, ಉಟ್ಟ ಬಟ್ಟೆಯ ಮೇಲೆ ಮನೆ ಬಿಟ್ಟು ಓಡಿ ಹೋದ ಹೆಂಡತಿಯನ್ನು ಆಕೆಯ ರೋಗಗಳೊಂದಿಗೆ ಹೋಗಲು ಒಂಟಿಯಾಗಿ ಬಿಟ್ಟು.

ಹಾಗೆ ಹೋದವನು ಕಾಶಿಯಲ್ಲೋ ಬದರಿಯಲ್ಲೋ ಬೈರಾಗಿಯಾಗಿರುವನೆಂಬ ಸುದ್ದಿ ಹೇಗೋ ಕಾಮಾಕ್ಷಮ್ಮನಿಗೆ ತಲುಪಿತ್ತು. ಆದರೆ ಆಕೆ ಮತ್ತೆ ಪತಿಯನ್ನು ಹುಡುಕಿಸುವ ಶ್ರಮ ವಹಿಸಲಿಲ್ಲ. ತಾವಾಯಿತು, ತಮ್ಮ ಕಾಯಿಲೆ....ಡಾಕ್ಟರು ಚಿಕಿತ್ಸೆಗಳಾಯಿತು, ಇಲ್ಲದಿರುವ ಮಕ್ಕಳ ಹಾಗೂ ಪತಿಯ ಪಾಲಿನ ಪ್ರೇಮ, ವಾತ್ಸಲ್ಯಗಳನ್ನು ನಿರ್ವಂಚನೆಯಿಂದ ತಮ್ಮ ಬಗೆಹರಿಯದ ಕಾಹಿಲೆಗಳಿಗೆ ಸಂಪೂರ್ಣವಾಗಿ ಧಾರೆ ಎರೆದು, ಅವುಗಳನ್ನು ಪೋಷಿಸತೊಡಗಿದರು.

ಈಗ ಕಾಮಾಕ್ಷಮ್ಮನನ್ನು ಕಾಡುತ್ತಿರುವುದು ಒಂದೇ ಚಿಂತೆ !

ಹುಟ್ಟಿನಿಂದಲೂ ಈ ಹಾಳಾದ ಕಾಯಿಲೆಗಳೊಂದಿಗೆ ಹೋರಾಟವೇ ಆಯಿತು. ಅವುಗಳೊಂದಿಗೆ ಹೆಣಗಾಡುತ್ತಲೆ ಅರ್ಧ ಆಯುಷ್ಯ ಕಳೆದಾಯಿತು. ಇನ್ನಾದರೂ ತಾವು ಈ ಕಾಯಿಲೆಗಳ ಕಾಟದಿಂದ ಪಾರಾಗಿ, ಆರೋಗ್ಯವಂತರಾಗಬೇಕೆಂದು ಹಂಬಲಿಸಿದರೆ ತಪ್ಪೆ ?

ಅದಕ್ಕಾಗಿ ಆಕೆ ತಮ್ಮ ಈ ನಲವತ್ತೆಂಟನೆಯ ವಯಸ್ಸಿನಲ್ಲಿ ತಮ್ಮ ಹಳತು, ಹೊಸತು ಹೊಚ್ಚಹೊಸತಾದ, ಕಾಯಿಲೆಗಳನ್ನೆಲ್ಲಾ ಗುಣಪಡಿಸಿ, ಮುಂದಿನ ದಿನಗಳಲ್ಲಿ ಮತ್ತಾವ ದಾರುಣ ರೋಗಗಳೂ ತಮ್ಮ ದುರ್ಬಲ ಶರೀರದ ಮೇಲೆ ಧಾಳಿ ಮಾಡದಂತೆ ರಕ್ಷಿಸಿ, ತಮ್ಮನ್ನು ಆರೋಗ್ಯವಂತರಾಗಿ ಮಾಡಬಲ್ಲ ಭರವಸೆ ನೀಡುವ ವೈದ್ಯರಿಗಾಗಿ ತಾವು ಶೋಧನೆ ನಡೆಸಿದ್ದಾರೆ.

ಅಂತಹ ಅರ್ಹತೆ ಪಡೆದ ಧನ್ವಂತರಿ ನಿಮ್ಮಲ್ಲಿ ಯಾರಾದರೂ ಅಕಸ್ಮಾತ್ ಇದ್ದರೆ, ನಮ್ಮ ಕಾಮಾಕ್ಷಮ್ಮನಿಗೆ ಬರೆದುಕೊಳ್ಳಿ....ವಿಳಾಸ ಕೊಡುತ್ತೇನೆ....?

---




ಅವಳ ಕಣ್ಣೆದುರಿಗಿನ ಸೀಟಿನಲ್ಲಿ ಮಧ್ಯವಯಸ್ಸಿನ ಮಹಿಳೆ, ಪಕ್ಕದಲ್ಲಿ ಮಗಳಿರಬೇಕು, ತೊಡೆಯಲ್ಲಿ ಎಳೆಯ ಮಗು ಪರಿಚಯವಿಲ್ಲದೆ ಅವರನ್ನು ನೋಡಲು ದಾಕ್ಷಿಣ್ಯವೆನಿಸಿ, ಅವಳು ಕೈಯಲ್ಲಿದ್ದ ಫ್ಯಾಮಿನಾ ಬಿಡಿಸಿ ಕಣ್ಣೆದುರು ಹಿಡಿದಳು.

ಮಗಳ ತೊಡೆಯಲ್ಲಿದ್ದ ಮಗು ಕಿರುದನಿಯಲ್ಲಿ ಅಳ ತೊಡಗಿದೆ. ಈಗ ಅವಳ ಕಣ್ಣುಗಳು ಸಹಜವಾಗಿ ಫ್ಯಾಮಿನಾದಿಂದ ಜಾರಿ ಮಗುವಿನತ್ತ ದಿಟ್ಟಿಸಿದವು. ಹತ್ತಿಯಂತೆ ಮೃದುವಾದ ಮೈಯನ್ನ ಮುಟ್ಟಿನೋಡಲು ಆಸೆಯಾಗಿ ಅವಳು ಫ್ಯಾಮಿನಾ ಸ್ವಲ್ಪ ಕೆಳಕ್ಕೆ ತರಿಸಿ ಎದುರು ನೋಡಿದಳು.

ಎಳೆಯ ಮಗು–ಗುಲಾಬಿ ಎಸಳನಂತೆ ಪುಟ್ಟ ಪಾದಗಳು ತಟತಟನೆ ಬಡಿದುಕೊಳ್ಳುತ್ತಿದೆ. ಫ್ಯಾಮಿನಾ ಇನ್ನಷ್ಟು ಕೆಳಕ್ಕೆ ಇಳಿಯಿತು. ಗುಲಾಬಿ ಮುಖ, ಎಳೆಯ

ಕೈ ಬೆರಳುಗಳು ತಾಯಿಯ ಕೊರಳಲ್ಲಿದ್ದ ಮಂಗಲ ಸೂತ್ರದಲ್ಲಿ ಆಡುತ್ತಿದೆ, ಅವಳ ಕಣ್ಣುಗಳು ಅಲ್ಲೇ ಗಕ್ಕನೆ ನಿಂತವು.

ಬ್ಲಾವುಜ್ ಮೇಲಕ್ಕೆ ಹೋಗಿ ಮಗುವಿನ ಬಾಯಿ ಎದೆ ಹಾಲು ಕುಡಿಯುವುದನ್ನು ಕಂಡು ಅವಳು ಫ್ಯಾಮಿನಾ ಮತ್ತೆ ಕಣ್ಣೆದುರು ಸರಿಯಾಗಿ ಹಿಡಿದು ತಾನು ಕದ್ದು ನೋಡಿದ್ದೂ ಅವರಿಗೆಲ್ಲಿ ತಿಳಿಯಿತೋ ಎಂದು ಒಂದು ಕ್ಷಣ ಗಾಬರಿಯಾಗಿ ಅವಳು ತನ್ನ ಮುಖದಲ್ಲಿ ಕೈಯಾಡಿಸಿದಾಗ ಬೆವರೊಡೆದದ್ದೂ ತಿಳಿಯುತ್ತದೆ.

ಕೈಯಲ್ಲಿದ್ದ ಪತ್ರಿಕೆ ಕೆಳಕ್ಕೆ ಜಾರಿ ಬಿದ್ದಾಗ ಮತ್ತೆ ಮಗು, ಪುಟ್ಟ ಪಾದಗಳು, ಮಗುವನ್ನು ಎದೆಗವಚಿಕೊಂಡ ತಾಯಿ! ಮರೆಯಲು ಅವಳು ಕಿಟಕಿಯಾಚೆ ನೋಡುತ್ತಾಳೆ.

ಖಟ್, ಖಟ್, ಖಟ್, ಹಿನ್ನೆಲೆಯ ಸಂಗೀತದಲ್ಲಿ ಟ್ರೈನು ಹೊರಟಿದ್ದೂ ಅವಳಿಗೆ ತಿಳಿಯುತ್ತದೆ. ಗಿಡಮರಗಳು, ಪೊದೆ ಮೋಡಗಳು, ಅವಳ ಕಣ್ಣೆದುರಿನಿಂದ ಸರಿದು ಹೋಗುತ್ತಿದ್ದರೂ ಮತ್ತೆ ಮತ್ತೆ ಆ ಮಾಂಸದ ಮುದ್ದೆ, ಪುಟ್ಟ ಕೈ ಬೆರಳುಗಳನ್ನು ನೋಡುವ ಬಯಕೆ ಅವಳಿಗೆ.

ತಟ್ಟನೆ ನೆನಪಿಗೆ ಬರುತ್ತದೆ. ಇನ್ನೆರಡು ಗಂಟೆಗೆ ತಾವಿಳಿಯುವ ನಿಲ್ದಾಣ ಬರುತ್ತದೆ. ಕರೆದೊಯ್ಯಲು ಸದಾಶಿವ ಬರಬಹುದು. ಅವರಲ್ಲದೆ ಮತ್ತಾರು ಬರಬೇಕು? ರಿಕ್ಷಾದಲ್ಲಿ ಅವರ ಜೊತೆಯಲ್ಲಿ ಕೂತುಕೊಳ್ಳಬೇಕು. ಅವಳಿಗೆ ಬಂದು ಬಗೆಯ ಅಸಹ್ಯವೆನಿಸುತ್ತದೆ. ಬಾಯಿ ತೀರ ಸಪ್ಪೆಎನಿಸಿ, ಬ್ಯಾಗಿನಲ್ಲಿದ್ದ ಕಿತ್ತಳೆ ಸುಲಿದು ಒಂದು ತೊಳೆ ಬಾಯಿಗಿಟ್ಟು ರಸಹೀರಿ ಗಂಟಲಲ್ಲಿ ಇಳಿಸುವಾಗ ಮತ್ತೆ ಸದಾಶಿವ ತನ್ನನ್ನು ಹೇಗೆ ಎದುರುಗೊಳ್ಳಬಹುದು? ಎಂದು ಅಂದುಕೊಳ್ಳುತ್ತಾಳೆ.

ಸದಾಶಿವ ಆ ದಿನ ತನ್ನನ್ನೇ ನೋಡೋದಕ್ಕೆ ಬಂದರೂ, ಆದರೆ ಕೈ ಹಿಡಿದಿದ್ದು ತಂಗಿ ನೀಲಮ್ಮನ್ನ!

ತನ್ನ ಡಿಗ್ರಿ–ತಾಯಿ, ಸದಾಶಿವನೊಟ್ಟಿಗೆ ಸ್ಪರ್ಧೆಗೆ ನಿಂತಾಗ ಅಪ್ಪ ಕೈಗೆ ಸಿಕ್ಕ ಬೇಟೆ ಜಾರಿಹೋದೀತು! ಎಂದು ಗಡಿಬಿಡಿಯಲ್ಲಿ "ನಮ್ಮ ನೀಲೂನ್ನ ನೋಡಬಹುದಿತ್ತು" ಎಂದದ್ದೂ.

ಸದಾಶಿವ ಮೊದಲ ನೋಟಕ್ಕೆ ನೀಲಿಮಾನ್ನ ಒಪ್ಪಿದ್ದೂ – ಅವಳ ಮನಸ್ಸಿನಲ್ಲಿ ಆಳವಾದ ಕಂದಕ ತೋಡಿದೆ.

ನೀಲಿಮಾನ ಮೊಂಡು ಮೂಗು, ಹಾಗೆ ನೋಡಿದರೆ ಗಿಡ್ಡ ಎಂದೇ ಹೇಳಬೇಕು. ಮೊಂಡು ಜಡೆ, ಓದುವ ಆಸೆ ಇಲ್ಲದೆ S.S.L.C.ಗೇ ನಿಲ್ಲಿಸಿ ಸಂಗೀತ ಕಲಿತದ್ದೂ ಸದಾಶಿವನ್ನ ಬಲೆಯಲ್ಲಿ ಹಿಡಿಯಿತಲ್ಲಾ ಎಂದು ಅವಳು ಯೋಚಿಸಿದ್ದಾಗಲೆಲ್ಲ - ಅವಳ ಡಿಗ್ರಿಯ ಬಗ್ಗೆ ಹೆಮ್ಮೆಯ ಬದಲು ಅವಳಿಗೆ ಕೋಪ ಬರುತ್ತದೆ.

ಗಾಳಿ ಬಂದು ಅವಳ ಮುಂಗೂದಲನ್ನ ಎಳೆದಾಡಿ ಹೋದಾಗ-ಯೋಚನೆ ಬದಲಾಯಿತು. ಈಗ ಅವಳಿಗೆ ಅಮ್ಮನ ಬಗ್ಗೆ ಸಿಟ್ಟು ಬಂತು. ಮಗು ಹುಟ್ಟಿದ ಸಂಭ್ರಮಕ್ಕೆ ಅಮ್ಮಂಗೆ "ಬಾ" ಎಂದದ್ದೂ, "ನಂಗೆ ವಾತಾದ ತೊಂದರೆ ಗೊತ್ತಲ್ಲ ಮಾಲೂ....ನಿಂಗೆ ಆಫೀಸಿನ ದುಡಿತ ಇದ್ದದ್ದೇ ನಾಲ್ಕು ದಿನ ಹೊಸ ಊರು, ನೀನೂ ನೋಡಿಲ್ಲ ನೀಲೂನ್ನ ಮಗೂನ್ನ ನೋಡಿಕೊಂಡು ಹಾಯಾಗಿ ಇದ್ದು ಬರೋವಾಗ ಅವರನ್ನ ಕರ್ಕೊಂಡು ಬಾ...." ಎಂದು ಒತ್ತಾಯ ಮಾಡಿ ಯಾಕೆ ಕಳುಹಿಸಬೇಕಿತ್ತು? ಊರು ತನಗೇ ನೋಡೋದಕ್ಕೆ ಆಗದಷ್ಟು ಕೈಲಾಗದವಳೇ? ಸದಾಶಿವ ತನ್ನನ್ನು ತಿರಸ್ಕರಿಸಿ, ತಂಗಿಯನ್ನ ಮೆಚ್ಚಿ, ತನ್ನವಳನ್ನಾಗಿ ಮಾಡಿಕೊಂಡ ಆ ಮನೆಗೆ ತಾನೀಗ ಅಥಿತಿಯಾಗಿ ಹೊರಟದ್ದೂ! ಅವರಿಬ್ಬರ ಆಸೆ ಬಳ್ಳಿಯಲ್ಲಿ ಹೂ ಅರಳಿದನ್ನ ತಾನು ನೋಡಬೇಕೆಂದು ಅಮ್ಮ ಕಳುಹಿಸಿದ್ದೂ !

ಅವಳಿಗೆ ಅದೇಕೋ ತುಂಬಾ ಬೇಜಾರಾಯಿತು. ಕಿಟಕಿ ಬಿಟ್ಟು ಈಚೆ ಸರಿದಳು. ಎದುರಿಗೆ ಮತ್ತೆ ಎಳೆ ಮಗು - ತಾಯಿ ! ಮಗು ಮಲಗಿಬಿಟ್ಟಿದೆ. ಚೆಲುವೆಲ್ಲಾ ಪೂರ್ಣ ಮುಚ್ಚಿದ ರೆಪ್ಪೆಯಲ್ಲೇ ಹಿಡಿದಿಟ್ಟ ಹಾಗಿದೆ. ತಾನಿನ್ನೂ ಹಾಲೂ ಕುಡಿಯುತ್ತಿದ್ದೇನೆ ಎನ್ನುವಂತೆ ಹವಳದ ತುಟಿ ಚೀಪುತ್ತದೆ, ತಾಯಿ ಕೂತಲ್ಲೇ ತೂಕಡಿಸುತ್ತಿದ್ದಾಳೆ.

ತನಗೂ ಹೀಗೆ ಒಂದು ಮಗು - ಸದಾಶಿವ ಕೈ ಹಿಡಿಯುತ್ತಿದ್ದಿದ್ದರೆ! ಆ ದಿನ — ಮದುವೆ ಮುಗಿಸಿ ಹೊರಟು ನಿಂತದ್ದೂ, ನೀಲಿಮಾ ಬಿಕ್ಕಳಿಸಿ ಅಳುತ್ತಿದ್ದಾಗ

ಸದಾಶಿವ ಅವಳನ್ನು ತಬ್ಬಿ ಹಿಡಿದು "ಅಳಬೇಡ ನನ್ನ ನೀಲ್....ಇಷ್ಟು ವರ್ಷ ನಿನ್ನಕ್ಕ ಜೊತೆಯಲ್ಲಿ ಇದ್ದದ್ದೂ ಸಾಲಿಲ್ವಾ? ಅವರಿಗಿಂತ ನಿನ್ನ ನಾನು ಹೆಚ್ಚು ಪ್ರೀತಿ ಮಾಡ್ತೇನೆ" ಸದಾಶಿವನ ಕಣ್ಣಿನಲ್ಲಿ ತನ್ನ ಹೆಣ್ತನವನ್ನು ನೆಲಕ್ಕೆ ಹಾಕಿ ತುಳಿದು ನಿಂತಂತೆ ಕಂಡು, ಅತ್ತೆ ಅವನನ್ನು ಕೊಚ್ಚಿಹಾಕುವಷ್ಟು ಕ್ರೋಧ ಉಕ್ಕಿತ್ತು — ಮತ್ತೆ ಶ್ರೀಮಂತಕ್ಕೆ ಮನೆಯ ಜನ ಹೋದದ್ದೂ, ಅವಳು ಕೆಲಸದ ನೆಪ ಒಡ್ಡಿ ಮನೆಯಲ್ಲೇ ಉಳಿದು ಸದಾಶಿವನಿಗೆ ಅಪಮಾನ ಮಾಡಿದ್ದಳು. ಈಗಲೂ ಅವಳು ಅಮ್ಮನ ಮಾತಿಗೆ ಒಪ್ಪಿ ಹೊರಟಿಲ್ಲ. ನೀಲಿಮಾ - ಗೋಗರೆದು ಬರೆದ ಕಾಗದಗಳು ! ಅವಳನ್ನ ಪ್ರೀತಿಯ ಸರಪಳಿಯಲ್ಲಿ ಬಿಗಿದು ಎಳೆದು ತಂದಿದೆ.

ನಿಲ್ದಾಣ ಸಮೀಪಕ್ಕೆ ಬಂದಾಗ ಅವಳೆದೆ ಬಡಿದುಕೊಳ್ಳುತ್ತದೆ. ನೀಲಮಾ ಬಂದಿದ್ದರೆ ಚೆನ್ನಾಗಿತ್ತು, ನಗು ಬರುತ್ತದೆ....ಹುಚ್ಚಲ್ಲವೇ ತನಗೆ? ಇನ್ನೂ ಮೂರು ತಿಂಗಳ ಬಾಣಂತಿ ! ಈ ಛಳಿಯಲ್ಲಿ ಹೊರಗೆ ಬರುವುದೆಂದರೆ ?

ಟ್ರೇನು ನಿಂತಿತು ! ಎಲ್ಲರೂ ಇಳಿದಂತೆ ಅವಳೂ ಇಳಿಯುತ್ತಿದ್ದಾಗ—"ಹಲ್ಲೊ ಮಾಲೂ ? ಸಾಮಾನು ಅಲ್ಲೇ ಇರ್ಲಿ. ನನ್ನ ಜವಾನ್ ತೆಕ್ಕೊಳ್ಳುತ್ತಾನೆ, ಬನ್ನಿ-ನೀವು ಹೀಗೆ ಬನ್ನಿ, ಎಂದದ್ದು ಕೇಳಿ ಅವಳು ಗಾಬರಿಯಲ್ಲಿ ಮುಖ ಎತ್ತಿ ನೋಡುತ್ತಾಳೆ ಸದಾಶಿವ ! ಹಿಂದಿನಿಗಿಂತಲೂ ತುಂಬ ಚೆಲುವಾಗಿ ಕಾಣುತ್ತಾರೆ ! ಗಲ್ಲಗಳು ತುಂಬಿಕೊಂಡು ಕೆಂಪು ಕೆಂಪಾಗಿ, ಮೀಸೆಯಿಡಿಯಲ್ಲಿ ನಗು ಕುಣಿದು ತುಟಿ ಜಾರಿ ಬರುವಾಗ, ಅವಳ ಕೈ ನಡುಗಿ, ಸೆರಗು ಜಾರಿದ್ದು ತಿಳಿದು ನಾಚಿಕೆಯಲ್ಲಿ ಅದನ್ನ ಎದೆಯ ಮೇಲೆಳೆದು, ನಿರಿಗೆ ಎಡಗೈಯಲ್ಲಿ ಹಿಡಿದುಕೊಂಡೇ ಅವನನ್ನು ಹಿಂಬಾಲಿಸುತಿದ್ದಾಗ—ಜವಾನ್ ಅವಳ ಸೂಟ್‌ಕೇಸ್ ಹಿಡಿದು ಹಿಂದಿನಿಂದ ಬರೋದು ಅವಳಿಗೆ ತಿಳಿಯುತ್ತದೆ.

ಸದಾಶಿವ್ ಪ್ಲಾಟ್‌ಫಾರಂ ದಾಟಿ ಈಚೆ ಬರೋವರೆಗೂ ನಿಮಿಷದ ಪುರುಸೊತ್ತು ಕೊಡದೆ ಹರಟುವಾಗ ಅವಳು ಮೂಕಿಯಾಗಿ ಹಿಂಬಾಲಿಸುತ್ತಿದ್ದಾಳೆ.

ರಿಕ್ಷಾ ಕಾಣೋದಿಲ್ಲ ! ಎದುರಿಗೆ ನಿಂತಿದ್ದ ಫಿಯೇಟ್ ಕಾರಿನಲ್ಲಿ ಸೂಟ್‌ಕೇಸ್ ಇಟ್ಟು "ಬನ್ನಿ ಹೋಗೋಣ" ಎನ್ನುತ್ತಿದ್ದಾಗ ಅವಳಿಗೆ ಅಚ್ಚರಿಯಾಗುತ್ತದೆ.

ಕಾರಿನ ಬಗ್ಗೆ ತನಗೆ ಒಂದೇ ಒಂದು ಮಾತು ನೀಲೂ ಬರೆದಿಲ್ಲ. ಒಂದೇ ಬಾರಿಗೆ ತನಗೆ ಸರ್‌ಪ್ರಾಯಿಜ್ ಮಾಡೋಣ ಎಂದು ಗುಟ್ಟಾಗಿಟ್ಟಿರಬೇಕೇ ? ಅಷ್ಟರಲ್ಲಿ ಜವಾನ್ ಬಾಗಿಲು ತೆರೆಯುತ್ತಾನೆ. ಅವಳು ಒಳಕ್ಕೆ ಹೋಗಿ ಮೂಲೆಯಲ್ಲಿ ಕೂತು ಕೊಳ್ಳುತ್ತಾಳೆ. ಇನ್ನು ಸದಾಶಿವ ತನ್ನ ಪಕ್ಕದಲ್ಲೇ ಕೂತು "ನಿಮ್ಮ ತಂಗಿಗೆ ಮಗು ಆಯ್ತು, ನಿಮಗಿನ್ನೂ ಮದುವೆಯೇ ಆಗಿಲ್ವಲ್ಲಾ ಎಂದರೆ ?" ಅಷ್ಟರಲ್ಲಿ ಸದಾಶಿವ ಎದುರಿಗೆ ಹೋಗಿ ಕೂತಾಗ—ಅವಳು ಉಸ್ಸಪ್ಪಾ ಎಂದು ಸೆರಗು ಮೈ ತುಂಬ ಹೊದೆದು ಸದಾಶಿವನಾದರೂ ಮಾತು ಅಡಿದರೆ, ತಾನು ಉತ್ತರಿಸದೆ ಇರೋದು ಸರಿಯಲ್ಲ ಎಂದು ಉಗುಳು ನುಂಗಿ, ಅವನ ಪ್ರಶ್ನೆಗಳಿಗಾಗಿ ಕಾಯುತ್ತಾಳೆ. ಆಫೀಸಿನಲ್ಲಿ ತಾನು ತುಂಬಾ ಫ್ರಿಯಾಗಿ ಎಲ್ಲರೊಟ್ಟಿಗೆ ಮಾತುಕತೆಯಲ್ಲಿ ಇದ್ದವಳು ಇಲ್ಲೇಕೆ ಹೀಗೆ ಹೆದರಿಕೊಳ್ಳುತ್ತಿದ್ದೇನೆ ಎಂದುಕೊಂಡಾಗ ಸದಾಶಿವನ ಹಿಂಬದಿಯ ಕೋಟಿನ ಕಾಲರ್ ಕ್ರಾಪಿನಡಿಯಲ್ಲ ಇಣಿಕಿ ಹಾಕುತ್ತಿದ್ದ ಕಿವಿ, ಅದರ ಪಕ್ಕದಲ್ಲೇ ಇಳಿದುಬಂದ ಸೈಡ್ ಬರ್ನ್ಸ್ ಕಂಡಾಗ, ತನ್ನ ಕಲೀಗ್ ಪ್ರದೀಪ ತನ್ನ ಸೈಡ್ ಬರ್ನ್ಸ ಬಗ್ಗೆ ಹೆಮ್ಮೆ ಕೊಚ್ಚೋದು ನೆನಪಾಗುತ್ತದೆ. ಅವಳಿಗೂ ಪ್ರದೀಪನ ಸೈಡ್‌ಬರ್ನ್ಸ ಮೆಚ್ಚಿಕೆಯಾಗಿತ್ತು ಎಂದು ಈಗ ಸದಾಶಿವನನ್ನು ನೋಡಿದಾಗ ಹೆಚ್ಚು ಮನದಟ್ಟಾಗುತ್ತದೆ. ಅವಳು ಪ್ರದೀಪನ್ನ ಇಲ್ಲಿ ತಂದು ಹೋಲಿಸಿ ನೋಡುತ್ತಾಳೆ. ತಾನು ಪ್ರದೀಪನ್ನ ಮದುವೆಯಾಗಿ, ಸದಾಶಿವನಿಗೆ "ನಿನಗಿಂತಲೂ ಹೆಚ್ಚಿನ ಡಿಗ್ರಿ, ರೂಪ, ಹಣ ಇದೆ"ಯೆಂದು ಇವನ ಅಹಂಕಾರಕ್ಕೆ ಬರೆ ಕೊಡಬೇಕೆಂದು ಯೋಚಿಸುವಾಗಲೇ ಕಾರು ಬಂಗ್ಲೆಯ ಎದುರಿನ ಪೋರ್ಟಿಕೋದಲ್ಲಿ ಬಂದು ನಿಂತಿರುತ್ತದೆ.

ಅವಳು ಆತುರದಿಂದ ಹೊರ ನೋಡಿದರೂ, ಸದಾಶಿವ ತನಗಾಗಿ ಬಾಗಿಲು ತೆಗೆಯಲು ಬಂದಾಗ-ತಾನು ಅವನನ್ನು ಕಣ್ಣೆತ್ತಿ ನೋಡದೆ, ತನಗೆಂದೇ ಕಾದು ನಿಂತ ತಂಗಿಯ ಬಳಿಗೋಡಿ ಮಗುವನ್ನ ಮುದ್ದಿಡಬೇಕೆಂದುಕೊಳ್ಳುವಾಗ ಸದಾಶಿವ ಆಗಲೇ ನೀಲೂನ ಕೈಯ್ಯಲ್ಲಿದ್ದ

ಮಗುವನ್ನೆತ್ತಿ " ಈ ಚಳಿಯಲ್ಲಿ ನೀನು ಇಲ್ಲಿ ಕೂತದ್ದೂ ಯಾಕೆ ? ಅಕ್ಕನ ಮನೆಗೆ ಸರಿಯಾಗಿ ತಂದು ಮುಟ್ಟಿಸೋದಿಲ್ಲ ಅಂತ ಭಯವೇ ?.... ಹೋಗು ಅವರನ್ನ ಕರ್ಕ್ಕೊಂಡುಬಾ" ಎಂದು ಮಗುವನೊಟ್ಟಿಗೆ ಅವನು ಒಳಗೆ ಹೋದಾಗ ಯಾರೋ ತಣ್ಣೀರಿನ್ನ ಅವಳ ಮೈಮೇಲೆ ಸುರಿದಂತಾಗಿ ಅವಳು ಒಮ್ಮೆಲೆ ನಡುಗಿದಳು.

ನೀಲೂ ಊಟಕ್ಕೆ ಕೂತಾಗ ನೂರು ಮಾತುಗಳ ನಡುವೆ ತಟ್ಟೆಯಲ್ಲಿ ಬಿಡಿಸಿ, ಹೊಟ್ಟೆ ತುಂಬಿ ಎಳಲಾರದೆ ಅವಳು ಪೇಚಾಡಿದಾಗ ಸದಾಶಿವ ಸಿಗರೇಟಿನ ಹೊಗೆ ಬಿಟ್ಟು "ನಿಮ್ಮಂಥ ಅಕ್ಕ–ತಂಗಿಯರನ್ನು ನಾನು ಕಂಡದ್ದು ಇದೇ ಮೊದಲು-ಇನ್ನು ರಾತ್ರಿ ಮಾತ್ರ ಜಾಗರಣೆ ಮಾಡದಿದ್ದರೆ ನನ್ನ ಪುಣ್ಯ ಎನ್ನಬೇಕು ಎಂದಾಗ ಅವಳು ತಲೆ ಎತ್ತಿ ಔಪಚಾರಿಕ ನಗೆ ನಕ್ಕರೆ ಸದಾಶಿವ ನೀಲೂನ್ನ ತುಂಟ ಕಣ್ಣುಗಳಲ್ಲಿ ಛೇಡಿಸೋದು ಕಾಣುತ್ತದೆ.

ನೀಲೂ ಮಗುವನ್ನು ಅವಳ ಕೈಯಲ್ಲಿ ಕೊಟ್ಟು ಒಂದು ಕ್ಷಣ ಬಂದೆಕ್ಕಾ ಎಂದು ಸದಾಶಿವನನ್ನು ಹಿಂಬಾಲಿಸಿದಾಗ ಅವಳು ಮಗುವನ್ನು ಕೈಯ್ಯಲ್ಲೆತ್ತಿ ಮುಖಕ್ಕೆ ಒತ್ತಿಕೊಂಡಾಗ ಅದರ ಪುಟ್ಟ ಪುಟ್ಟ ಕೈ ಬೆರಳುಗಳು ಅವಳ ಮುಖದಲ್ಲಿ, ಕಣ್ಣಲ್ಲಿ ಓಡಾಡಿದರೆ ಅವಳಿಗೆ ಕಚಕುಳಿಯಾಗಿ ಮೈಯ್ಯಲ್ಲಿ ನಡುಕ ಉಂಟಾಗಿ ಮಗುವಿನ ಮುಖ, ಸದಾಶಿವನ ಹಾಗಿದೆಯಲ್ಲ ಎಂದುಕೊಂಡು, ತಕ್ಷಣ ಮಗುವನ್ನ ಹಾಸಿಗೆಯಲ್ಲಿ ಮಲಗಿಸಿ ಬಿಟ್ಟಾಗ ಅದು ಕಿಟಾರನೆ ಕಿರುಚಿಕೊಳ್ಳುತ್ತದೆ.

ನೀಲೂ ಓಡಿ ಬಂದು ಅದನ್ನು ಎತ್ತಿ ಲೊಚ್ ಲೊಚ್ ಮುದ್ದಿಟ್ಟು, "ಯಾಕೆ ಆಂಟಿಯ ಗುರುತಿಲ್ವಾ ನಿಂಗೆ ? ಕದೀಮ.... ನೋಡಕ್ಕ ಬುದ್ಧಿ, ರೂಪ ಎಲ್ಲಾ ಅವರ ಹಾಗೆ ? ನಮ್ಮ ಕಡೆ ಬುದ್ಧಿ, ರೂಪ ಇವನಿಗೆ ಬರಲೇ ಇಲ್ಲ" ಎಂದಾಗ ಅವಳಿಗೆ ಈ ಮಗುಗಿಂತಲೂ ಟ್ರೇನಿನಲ್ಲಿ ಕಂಡ ಆ ಮಗು ತುಂಬ ಚೆಲುವಾಗಿ ಕಾಣ್ತದೆ.

ಸದಾಶಿವ ಆಫೀಸಿಗೆ ಹೋಗೋದನ್ನೇ ಕಾಯುತ್ತಿದ್ದ ನೀಲಿಮಾ ಅವಳನ್ನ ಮನೆಯ ಪ್ರತಿ ಕೋಣೆ, ಪ್ರತಿ ವಸ್ತುವಿನ ಬಗ್ಗೆ ವಿವರಣೆ ಕೊಟ್ಟು ವಾರ್ಡ್ರೋಬನ್ನ ತೆರೆದು ಅಲ್ಲಿದ್ದ ಸೀರೆಗಳನ್ನೆಲ್ಲ ಅವಳು ಎಷ್ಟು ಬೇಡ ಎಂದ್ರೂ ಕೇಳದೆ ಉಡಿಸಿ, ಮದುವೆಯಲ್ಲಿ, ಶ್ರೀಮಂತದಲ್ಲಿ ಮಾಡಿಸಿದ ಒಡವೆಗಳನ್ನೆಲ್ಲ ಸೀರೆಯೊಟ್ಟಿಗೆ ಮ್ಯಾಚಿಂಗ್ ಮಾಡಿ, ಅದಕ್ಕೆ ತಕ್ಕ ಕೇಶ ಶೃಂಗಾರದಲ್ಲಿ ಅವಳನ್ನ ನೋಡಿ, "ಅಕ್ಕ ನಿಜವಾಗ್ಲೂ ನೀನು ಎಷ್ಟು ಚಂದ ಕಾಣ್ತಿ ಗೊತ್ತಾ? ದೃಷ್ಟಿಯಾಗಬೇಕು. ನೀನು ಹೀಗೆ ಇರೋದು ನಿಜವಾಗ್ಲೂ ತುಂಬ ತಪ್ಪು....ನನಗೆ ಭಾಷೆ ಕೊಡು....ಈ ಯುಗಾದಿಗೆ ನಂಗೆ ಭಾವನ ಫೋಟೋ ಕಳಿಸ್ತೇನೆ ಅಂತಾ" ಎಂದಾಗ ಅವಳಿಗೆ ನೀಲಮಾನ ಬಗ್ಗೆ ಮಮತೆ ಉಕ್ಕಿ ಬರ್ತದೆ. ಮಗೂನ್ನ ಅವಳ ಕೈಯಿಂದ ಅಪ್ಪಿ ಮುದ್ದಿಡೋಣ ಎಂದು ಕೈ ಮುಂದೆ ಚಾಚುತ್ತಾಳೆ. ಮಗು ತನ್ನಪ್ಪನ ಎದೆಯಲ್ಲಿ ಮುಖ ಒತ್ತಿ ಹಾಲಿಗಾಗಿ ಹುಡುಕುತ್ತಿದ್ದಾಗ, ಸದಾಶಿವ ತನ್ನನ್ನೂ ಮೊದಲ ಸಾರಿಗೆ ನೋಡಿ ನೀಲಿಮಾನ ಇದೇ ಎದೆಯಲ್ಲಿ ಪ್ರೀತಿ ಕಂಡದ್ದೂ ನೆನಪಾಗಿ ಹೆಜ್ಜೆ ಮತ್ತೆ ಹಿಂದಕ್ಕಿಟ್ಟು ಸೋಫಾದಲ್ಲಿ ಕುಸಿಯುತ್ತಾಳೆ.

ಸದಾಶಿವ ಬಂದು ಬಟ್ಟೆ ಬದಲಾಯಿಸು ಮೊದಲೇ ನೀಲೂ, "ನೀವೀಗ ಬಟ್ಟೆ ಬದಲಾಯೀಸೋದು ಬೇಡ. ಟಿಫೀನ್ ಮುಗಿಸಿ, ಅಕ್ಕನ್ನ ಹಾಗೆ ಮ್ಯೂಜಿಯಂ ಅಲ್ಲಿ ನಿಲ್ಲಿ ಸುತ್ತಾಡಿಸಿಕೊಂಡು ಬನ್ನಿ. ಎದುರುಮನೆಯು ಬೇಬಿ ದಿನಾಲು ನನ್ನ ಪೀಡಿಸುತ್ತಾಳೆ. ಅಂಕಲ್‌ಗೆ ನನ್ನ ತಿರುಗಾಡಲು ಕರ್ಕ್ಕೊಂಡು ಬರೋದಕ್ಕೆ ಹೇಳಿ ಅಂಥ. ಹೋಗ್ತೀರಲ್ಲ ?" ಎಂದಾಗ–ಸದಾಶಿವ ಶಿಳ್ಳು ಹಾಕುತ್ತ ಬಾತ್‌ರೂಮಿನೊಳಗೆ ಹೋಗಿ ಬಾಗಿಲ ಹಾಕಿಕೊಂಡಾಗ–ಅವಳಿಗೆ ಪ್ರದೀಪ ಒಂದು ದಿನ ಹೇಳಿದ್ದ "ನಾನು ಮದುವೆಯಾದರೆ ನನ್ನ ಹಟದಂತೆ ಆಗ್ಬೇಕು. ಹೆಂಡ್ತಿ ಹೇಳಿದ ಹಾಗೆ ಕುಣಿಯೋ ಗಂಡು ನಾನಾಗೋಲ್ಲ —ಅವಳನ್ನೇ ಕುಣಿಸಿ ದಣಿಸಿ ಬಿಡ್ತೇನೆ". ಅಷ್ಟರಲ್ಲಿ ಅವಳಿಗೆ ಎಚ್ಚರ ಮೂಡುತ್ತದೆ.

"ನೀಲೂ....ಅವರು ದಣಿದು ಬಂದಿರ್ತಾರೆ... ನೀನು ...." ಅವಳನ್ನು ಅಷ್ಟಕ್ಕೇ ತಡೆದು ನಗುತ್ತ ಹೇಳ್ತಾಳೆ, "ಏನಕ್ಕ ಆಫೀಸಿನಲ್ಲಿ ಇವರೇ ಹೆಡ್....ಅಲ್ದೆ ಇವೊತ್ತು ಹಾಫ್ ಡೇ. ಗಾಳಿಯಲ್ಲಿ ಸುತ್ತಾಡಿದ್ರೆ ಮೈ ದಣಿಯುತ್ತದಾ? ನಾನು ಹೊರಗೆ ಹೋಗೋ ಹಾಗಿದೆ ...ನೀನು ಬಂದು ಇಷ್ಟು ದಿನಾ ಆದ್ರೂ ಹೀಗೆ ಮನೇಲಿ ಇರೋದಕ್ಕೆ ಬಿಡುತಿದ್ನಾ?"

ಸದಾಶಿವ ಟಿಫಿನಿಗೆಂದು ಡೈನಿಂಗ್ ಟೇಬಲಿಗೆ ಬಂದಾಗ ಲೆವೆಂಡರಿನ ಪರಿಮಳ ಗಮ್ ಎಂದು ಅವಳ

ಮೂಗಿಗೆ ಬಡಿಯುತ್ತದೆ. ಕಣ್ಣು ಮೆಲ್ಲನೆ ಮೇಲಕ್ಕೆತ್ತಿ ನೋಡುತ್ತಾಳೆ. ಮುಖದಲ್ಲಿ ತುಂಬಿದ್ದ ಮಂದಹಾಸ, ಕೂದಲಿನ ಮಿಂಚು, ಉತ್ಸಾಹ! "ನೀಲೂ ಅದೃಷ್ಟವಂತೆ" ಎಂದುಕೊಳ್ಳುತ್ತಾಳೆ. ಆಗಲೇ ಎದುರು ಮನೆಯ ಬೇಬಿ ಕಾರಿನಲ್ಲಿ ಕೂತು "ಮಾವ ಆಂಟಿ ಬನ್ನಿ.... ಯಾಕಿಷ್ಟು ಲೇಟು ಮಾಡ್ತೀರಿ?" ಎಂದಾಗ ಗಡಿಬಿಡಿಯಲ್ಲಿ ಚಪ್ಪಲಿ ಮೆಟ್ಟುತ್ತಿದ್ದಾಗ.. ಸದಾಶಿವ ಮಗುವಿಗೆ ಮುದ್ದಿಟ್ಟು ನೀಲೂನ್ನ ಗಲ್ಲ ಚಿವುಟುವುದನ್ನು ಕಂಡು ಬಾಯೆಲ್ಲ ಹುಳಿಹುಳಿಯಾಗಿ ಕಾರಿನತ್ತ ಕಾಲೆಳೆಯುತ್ತಾಳೆ.

ಕಾರಿನಲ್ಲಿ ತನ್ನ ಪಕ್ಕದಲ್ಲೇ ಕೂತು ಹರಟೆ ಕೊಚ್ಚುವ ಬೇಬಿಯನ್ನ ಕಂಡು ಹಿಡಿದಿಟ್ಟ ಮನಸ್ಸಿಗೆ ಹಿತವಾಗುತ್ತದೆ. ಅವಳು ಹುಡುಗಿಯ ಜೋಡು ಜಡೆಯಲ್ಲಿ ಕೈಯಾಡಿಸಿ "ನನ್ಜೊತೆ ಊರಿಗೆ ಬರ್ತಿಯಾ ಬೇಬಿ? ಅಲ್ಲಿ ನಿಂಗೆ ಬೋರ್ ಆಗೋದಿಲ್ಲ. ನನ್ನ ತಮ್ಮ ಗೋಪೂ ಭಾರಿ ಕಿಲಾಡಿ." ಎನ್ನುತ್ತಿದ್ದಾಗ ಎದುರಿನ ಪುಟ್ಟ ಕನ್ನಡಿಯಲ್ಲಿ ಸದಾಶಿವ ತನ್ನನ್ನು ನೋಡೋದು ಕಾಣುತ್ತದೆ.

ಕಾರು ಸಂಜೆಯ ಚಲುವನ್ನೆಲ್ಲ ಸರಸರನೆ ಅವಳ ಕಣ್ಣೆದುರು ತಿರುಗಿಸುತ್ತಾ ಹೊರಟಿದೆ. ಬೇಬಿ ಸದಾಶಿವನ ಕೊರಳಿಗೆ ತೋಳು ಸುತ್ತಿ ಹಾಕಿ ಮಾತಾಡುತ್ತಿದ್ದಾಗಲೆಲ್ಲ ಅವಳಿಗೆ ಹೇಳಬೇಕೆನಿಸುತ್ತದೆ. "ನಿನ್ನ ಅಂಕಲನ್ನ ಮಾತಿಗೆಳೆಯಬೇಡ ಬೇಬಿ—ರೋಡು, ಬಸ್ಸು, ಜನ! ನಿನ್ನ ಮಾತಿನಲ್ಲಿ ಅವರು ನಕ್ಕು ಫಕ್ಕನೆ ತಿರುಗಿ ಬಿಟ್ಟರೆ........ ಕೈಯಲ್ಲಿದ್ದ ......."

ಅವಳಿಗೆ ಯಾಕೋ ತುಂಬಾ ಭಯವಾಗಿದೆ. ಕಾರು ಕೊರಕಲಲ್ಲಿ ಬಿದ್ದಿದೆ. ತನಗೆ - ಜಯಾಗೆ ಪೆಟ್ಟಾಗಿಲ್ಲ ಕುಸಿದು ಬಿದ್ದ ನೋವು ಮಾತ್ರ! ನಾಲ್ಕು ಹೆಜ್ಜೆ ದೂರದಲ್ಲಿ ಸದಾಶಿವ ನೆತ್ತರ ಮಡುವಿನಲ್ಲಿ ಬಿದ್ದಿದ್ದಾರೆ, ಆ ನರಳುವಿಕೆ ಹೊಟ್ಟೆಯ ಕರುಳು ಕಿತ್ತಿ ಬರುವಂತೆ, ಇನ್ನೇನು ತಾನು ಮೂರ್ಛೆ ಹೋಗಬೇಕು ಎನ್ನುವಂತೆ ಸದಾಶಿವನ ತಲೆ ಪಕ್ಕಕ್ಕೆ ವಾಲಿದಾಗ, ಬೇಬಿ ತನ್ನನ್ನು ಬಿಗಿಯಾಗಿ ಅಪ್ಪಿ "ಆಂಟಿ ಅಂಕಲ್—"ಎಂದು ಕಿರುಚಿಕೊಂಡಾಗ, ತಾನು ತೆವಳಿಕೊಂಡು ಸದಾಶಿವನ ಸಮೀಪಕ್ಕೆ ಹೋಗಿ ಅವನೆದೆಯಲ್ಲಿ ಕೈಯಿಟ್ಟು ನೋಡಿ ಉಸಿರು ನಿಂತ ದೇಹ—ಮುಚ್ಚಿದ ಕಣ್ಣೆವೆಯಲ್ಲಿ ಮುಖವಿಟ್ಟುಕೊಂಡಾಗ "ಇಲ್ಲ .... ಇಲ್ಲ .... ಸದಾಶಿವ ಬದುಕಬೇಕು .. ನೀಲೂ ಅಫಘಾತದಲ್ಲಿ ಸಾಯಬೇಕು. ಆ ಮಗು ತನ್ನ ಕೈಯಲ್ಲಿ ಎದೆ ಹಾಲು ಕುಡಿದು, ಮುಖದಲ್ಲಿ ಪುಟ್ಟ ಬೆರಳುಗಳನ್ನು ಆಡಿಸುವಾಗ ಸದಾಶಿವ ತನ್ನ ಹಿಂದೆ ನಿಂತು ಎರಡೂ ಬಲಿಷ್ಠ ತೋಳುಗಳನ್ನು ಕುತ್ತಿಗೆಯ ಸುತ್ತ ತಂದು ಮಗುವನ್ನು ಮುದ್ದು ಮಾಡುವ ಮೊದಲು ಈ ಗಲ್ಲಕ್ಕೆ ತುಟಿ ಸಾಗಿಸಿ, ಕಿವಿಯಲ್ಲಿ ಪಿಸುನುಡಿದಂತೆ... ಅವಳ ಮೈಯಲ್ಲಿ ಕಾವೇರುತ್ತದೆ. ಸದಾಶಿವ ಈಗ ತನ್ನವನು! ನೀಲೂ ಇನ್ನಿಲ್ಲ, ಆ ಮನೆ, ಅಲ್ಲಿಯ ಎಲ್ಲಾ ವಸ್ತುಗಳ ಸ್ವಾಮಿತ್ವ ತನ್ನದು.

"ಆಂಟಿ .... ಕಾರೆಂದ್ರೆ ನಿಮಗೆ ಅಷ್ಟು ಹೆದರಿಕೇನಾ?" ಬೇಬಿ ಮೈ ಅಲುಗಿಸಿ ಕೇಳಿದಾಗ ಅವಳು ಎಚ್ಚರಗೊಂಡು ಕಣ್ಣುಜ್ಜಿಕೊಳ್ಳುತ್ತಾಳೆ.

ಕಾರು ನೇರಾಗಿ ಹೊರಟಿದೆ. ಬೇಬಿಯ ಮುಂಗುರುಳು ಗಾಳಿಯಲ್ಲಿ ಚಲ್ಲಾಪಿಲ್ಲಿಯಾಗಿ ಹಾರಾಡುತ್ತಿತ್ತು. ಎದುರಿಗೆ ಸದಾಶಿವ ಕಾರು ಡ್ರೈವ್ ಮಾಡುತ್ತಿದ್ದಾರೆ. ಅಫಘಾತ—ನೆತ್ತರು .... ಇದೆಲ್ಲ ಭಯಗೊಂಡು ತನ್ನ ಯೋಚನೆಗಳು!

ಅವಳು ಕರ್ಚಿಫ್‌ನಿಂದ ಮುಖ ಒರೆಸಿಕೊಂಡಾಗ ಕೈ ನಡಗುತ್ತಿದೆಯಲ್ಲಾ ಎಂದುಕೊಂಡಳು. ಮನಸ್ಸಿಗೆ ತುಂಬ ಹೇಸಿಕೆಯಾಗುತ್ತಿದೆ. ನೀಲೂ ತನ್ನನ್ನು ಎಷ್ಟೊಂದು ಪ್ರೀತಿಸುತ್ತಿದ್ದಾಳೆ! ತನ್ನ ಬಗೆಗೆ ಅವಳಿಗೆ ಎಂಥ ಅಭಿಮಾನ! ತಾನೇಕೆ ಇಲ್ಲಿ ಹೊಲಸು ಮಾಡಲು ಅಪೇಕ್ಷಿಸಿದೆ? ಎಂದುಕೊಂಡಾಗ ಎದೆಯ ತಳಮಳದಲ್ಲಿ ಮುಖ ಕಿವುಚಿಕೊಂಡಾಗ - ಸಿಗರೇಟಿನ ಹೊಗೆ ಅವಳ ಮುಖಕ್ಕೆ ಮುತ್ತಿಟ್ಟಾಗ ಮತ್ತೆ ಅವಳು ಸದಾಶಿವನ ಸೈಡ್‌ಬರ್ನ್ಸ್‌ನಲ್ಲಿ ಕಣ್ಣೋಡಿಸುತ್ತಾಳೆ. ಎದುರಿನ ಕನ್ನಡಿಯಲ್ಲಿ ಅವನ ಕಣ್ಣುಗಳು ಅವಳನ್ನ ದೃಷ್ಟಿಸೋದು ತಿಳಿದಾಗ - ಅವಳು ಮೆಲ್ಲನೆ ತಲೆತಗ್ಗಿಸುವಂತೆ "ಸಿಗರೇಟು ನಿಮಗೆ ಇಷ್ಟ ಇಲ್ವೆ? ನಿಮ್ಮಂಥ ಮಾಡರ್ನ್ ಹೆಣ್ಣುಗಳು ಇದಕ್ಕೆಲ್ಲ ಅಡ್ವಾನ್ಸ್ ಆಗಿರ್ತೀರಿ ಅಂದುಕೊಂಡಿದ್ದೆ. ಆಫೀಸಿನಲ್ಲಿ ಕೆಲ್ಸ ಮಾಡುವಾಗ ಸಿಗರೇಟಿನ ಹೊಗೆ ನಿಮಗೆ ಅಭ್ಯಾಸವಾಗಲೇಬೇಕು. ಇವಳು ಮಾತ್ರ ಒಂದು ಕ್ಲಬ್ಬು ಒಂದು ಪಾರ್ಟಿ—ಉಹೂಂ—ಒಂದೂ ಇಲ್ಲ. ಪೂರಾ ಗುಗ್ಗು!" ಹೀಗೆಂದು ಸದಾಶಿವ ತಿರುಗಿ ಅವಳನ್ನು ನಿಟ್ಟಿಸಿ

ದಾಗ ಆ ಕಣ್ಣುಗಳು ಅವಳಿಗೆ ಕಚುಕುಳಿ ಇಟ್ಟಹಾಗೆ ನಾಚಿಕೆಯಲ್ಲಿ ಮುಖವೆಲ್ಲ ಬಿಸಿಬಿಸಿಯಾಗಿ ಏನೂ ಮಾತಾಡಲೂ ನಾಲಗೆ ಒಳಗೊಳಗೆ ಆತುರಪಟ್ಟು, ಶಬ್ದ ಹೊರಡದೆ ತೊಳಲಾಡಿ ಸೋತು ಸುಮ್ಮನಾದಾಗ ಅವಳು ಅವನನ್ನ ನೋಡಿ ಜೇಬಿಯು ಜೋಡು ಜಡೆಯಲ್ಲಿ ಕೈ ಯಾಡಿಸುತ್ತಾಳೆ.

ತನ್ನನ್ನು-ನೀಲೂನ್ನ ಅಚೆ-ಈಚೆ ಇಟ್ಟು ತೂಗಿ ನೋಡಿ, ತಂಗಿಯನ್ನ ಗುಗ್ಗು ಎಂದುದಕ್ಕೆ ಸದಾಶಿವನ ಮೇಲೆ ಕೋಪ ಬಾರದೆ—ಏನೋ ಒಂದು ಬಗೆಯ ಖುಷಿ ಆಗ್ತದಲ್ಲಾ? ಎಂದು ತನ್ನಲ್ಲೇ ಪ್ರಶ್ನಿಸಿಕೊಂಡಳು.

ಎದುರಿಗೆ ಹಾರಿ ಬರುತ್ತಿದ್ದ ಕೂದಲನ್ನು ಎಡಗೈ ಯಿಂದ ಹಿಂದಕ್ಕೆ ಸರಿಸಿದಂತೆ ಇದೂ ತನ್ನ ಮನಸ್ಸಿನಂತೆ ಹಿಡಿತ ತಪ್ಪಿ ಜಾರುತ್ತಿದೆಯಲ್ಲಾ ಅಂದುಕೊಂಡಳು.

ಇನ್ನೆರಡು ದಿನಕ್ಕೆ ನೀಲೂನ್ನ ಮಗೂನ್ನ ಕರ್ಕೊಂಡು ಊರಿಗೆ ಹೋಗಬೇಕು. ಹೊಸ ಮಗೂನ್ನ ಎತ್ತಿಕೊಂಡು ಬರುವ ಮಗಳನ್ನ ಅಪ್ಪ-ಅಮ್ಮ ಸಂಭ್ರಮ ದಿಂದ್ಲೇ ಎದುರುಗೊಳ್ತಾರೆ. ಬರುವ ಜನಕ್ಕೆಲ್ಲಾ ನೀಲೂ ಮಗೂ ಹೆಚ್ಚಿನ ಆಕರ್ಷಣೆ. ಆಗೆಲ್ಲ "ಗಣಪತಿಯ ಮದುವೆ ಹಾಗೆ ನಮ್ಮ ಮಾಲೂನ ಮದುವೆ ಗತಿಯೇನು? ತಂಗಿಗೆ ಆಗಲೇ ಮಗೂ ಆಯ್ತು .... ಪ್ರಾಯದಲ್ಲೇ ಮದುವೆ ಆದ್ರೆ ಅದೊಂದು ಚಂದ...." ಹೀಗೆ ಆಡೋ ಅವರಿಗೆಲ್ಲಾ ಕಣ್ಣಿಗೆ ಬಿಡದೆ ಎಲ್ಲಿಯಾದ್ರೂ ದೂರ ಓಡಿ ಹೋಗಬೇಕೆಂದುಕೊಳ್ಳುತ್ತಾಳೆ ಅವಳು. ಊಹೂಂ ... ಪ್ರದೀಪಗೆ ಇಲ್ಲಿಂದ ಹೋದ ಕೂಡ್ಲೆ ಹೇಳಿಬಿಡಬೇಕು. ನಂತರ ಸದಾಶಿವ ನೀಲೂನ ತಳ್ಳಿ ಕೂತ್ಕೊಂಡ ಹಾಗೇ ಅವನ ಜೊತೆಯಲ್ಲಿ ಇವರಿಬ್ಬರೂ ಸುತ್ತಾಡದ ಊರಿಗೆಲ್ಲ ಹೋಗಿ ಪ್ರತಿಗಲ್ಲಿ ಕಾಗದ ಗೀಚಬೇಕು. ನೀಲೂಗೆ ಹಾಗೇ ಆಗಬೇಕು—ಕೈಯಲ್ಲೊಂದು ಮಗೂನ್ನ ಎತ್ತಿ ಮಾಳಿ ಸೇರಲಿ. ಸದಾಶಿವನಿಗೆ - ನೀಲೂ ಒಂದು ಗುಗ್ಗು ಅವಳಿಗೆ ಎಂಥದೋ ಒಂದು ಬಗೆಯ ತೃಪ್ತಿ, ಓ ಎಂದು ತಿಳಿಯದೆ ಕೂಗಿಕೊಂಡಾಗ ಜೇಬಿ ಅವಳ ಕೈ ಹಿಡಿದು "ತಣ್ಣಗಿನ ಗಾಳಿ - ಏಸಿನ ಹನಿ ಉದುರಿದಂತೆ ಆಯಿತು" ಎಂದಾಗ ಅವಳು ನೆನಪಿನ ಸುಳಿಯಿಂದ ಹೊರಬಂದರೆ ಕಾರು ಮನೆ ಎದುರಿಗೆ ನಿಂತದ್ದೂ - ಜೇಬಿ ಓಡಿ ನೀಲೂನ ಕೈಯಲ್ಲಿದ್ದ ಮಗೂನ್ನ ಬರಸೆಳೆದು ಮುದ್ದಿ ಡೋದು ಕಾಣುತ್ತದೆ.

ರಾತ್ರಿಯೆಲ್ಲ ಅವಳಿಗೆ ಏನೇನೋ ಯೋಚನೆಗಳು. ಬೆಳಿಗ್ಗೆ ನೀಲೂ ಬಂದು ಎಬ್ಬಿಸಿದಾಗಲೇ ಅವಳು ಗಡಿಬಿಡಿ ಯಲ್ಲಿ ಎದ್ದು ಕೂತು "ನಂಗೆ ಬೆಳಿಗ್ಗೆನಲ್ಲಿ ಗಡದ್ದಾಗಿ ನಿದ್ದೆ ಬಂದದ್ದೂ. ಮೈಮೇಲೆ ಹೊರಗಿನ ಬಿಸಿಲು ಬಿದ್ರೂ ಎಚ್ಚರಾಗದೆ ಇದ್ದದೆಂದ್ರೆ?" ನಾಚಿಕೆಯಲ್ಲಿ ಕಣ್ಣುಜ್ಜಿ ಎದ್ದು ನಿಂತಾಗ—ನೀಲೂ ಹೇಳುತ್ತಾಳೆ. "ಒಂದಿ ನಾದ್ರೂ ನಂಗೆ ನಿನ್ನನ್ನೆಬ್ಬಿಸೋ ಛಾನ್ಸ್ ಸಿಕ್ತಲ್ಲ? ಅಲ್ಲಿ ಮನೇಲಿಯೂ ನಾನು ಏಳೋದು ಲೇಟು ! ಆದ್ರೆ ಇಲ್ಲಿ ಅದರಲ್ಲೂ ಕಂಠೀರವನ ಒಂದು ಗುಡುಗಿಗೇ ..."

ಅವಳಿಗೆ ತಂಗಿಯ ಮುಕ್ತಮನಸ್ಸಿನ ಮಾತಿಗೆ ತುಂಬ ಸಂತೋಷವಾಗುತ್ತದೆ. ಇಂಥ ತಂಗಿ ತನ್ನವಳಲ್ಲಾ ಎಂದು ಅಭಿಮಾನದಲ್ಲೇ ಕಣ್ಣಿಗೆ ಕಣ್ಣಿಟ್ಟು ನೋಡಿ "ಊರಿಗೆ ಹೋಗ್ತೇವಲ್ಲಾ? ಆಗ ನಾನೇ ನಿನ್ನ ಕಂಠೀ ರವನ್ನ ನೋಡಿಕೊಳ್ತೇನೆ. ನೀನು ಕಣ್ತುಂಬ ನಿದ್ದೆ ಮಾಡು."

ನೀಲಿಮಾ-ಕಿಟಕಿಯ ಲೀಲಾ ಲೇಸಿನ ಪರದೆಯನ್ನ ಎಳೆದು "ತಿಂಡಿ ರೆಡಿ ಇದೆ...ಬೇಗ ಬಂದು ಬಿಡು. ಮನೇಲಿ ಈಗ ನಾವಿಬ್ಬರೇ ಅವರು ಅರ್ಜೆಂಟಾಗಿ ೩ ದಿನದ ಮಟ್ಟಿಗೆ ಟೂರಿಗೆ ಹೋಗಬೇಕಾದ್ದರಿಂದ ಹೋದ್ರು ... ನೀನು ಮಲಗಿದ್ದಿ....ಎಬ್ಬಿಸಬೇಡಾ ಎಂದು ಹಾಗೇ ಹೋದದ್ದು...."

ಅವಳಿಗೆ ಸದಾಶಿವ ಟೂರಿಗೆ ಹೋದದ್ದು....ತಾನಿ ನ್ನೂ ಹಾಸಿಗೆಯಲ್ಲಿ ಮಲಗಿದ್ದು....ಯಾರೋ ತನ್ನ ಬರಿ ಮೈ ಕಂಡ ಹಾಗೆ ಅವಳಿಗೇ ಒಂದು ಬಗೆಯ ಸಂಕೋಚ ವೆನಿಸಿತು.

ಮಧ್ಯಾಹ್ನದವರೆಗೂ ಅಡಿಗೆ-ಊಟ ಕೆಲಸದಲ್ಲಿ ಹರಟೆ ಕೊಚ್ಚುವಾಗ—ಸ್ಕೂಲಿನ ದಿನಗಳಲ್ಲಿ ಅವಳು ನೀಲಿ ಮಾನೊಟ್ಟಿಗೆ ಜುಬಿಲಿ ಆಡಿದ ನೆನಪಾಗಿ ನಕ್ಕಾಗ, ನೀಲಿಮಾ ಅವಳ ಪಕ್ಕದಲ್ಲೇ ಕೂತವಳು "ನಿಂಗೆ ನಾವು ಚಿಕ್ಕೋರಿರುವಾಗ ಆಡಿದ ಆಟ ನೆನಪಾಗ್ತದಾ ?" ಎನ್ನುವಾಗ, ಅವಳು ಅಚ್ಚರಿಯಲ್ಲ "ನಿಂಗೆ ಹ್ಯಾಗೆ ಗೊತ್ತು ? ನಿಜವಾಗ್ಲೂ ನಾನು ಯೋಚಿಸಿದ್ದು....

ಜುಬ್ಬಿಯಲ್ಲಿ ನೀನು ಜಾರಿಬಿದ್ದು ಅಪ್ಪಯ್ಯನ ಕೈಯಲ್ಲಿ ನಾನು ಏಟು ತಿನ್ನೋಹಾಗೆ ಮಾಡಿದ್ದಿಯಿಲ್ಲ? ನಿಂಗೆ ನೆನಪುಂಟಾ?"

ನೀಲಿಮಾ ತಲೆ ಅಲ್ಲಾಡಿಸಿ ಮೊಣಕಾಲವರೆಗೆ ಸೀರೆ ಏರಿಸಿ, "ಇಲ್ಲಿ ನೋಡಕ್ಕ ಜುಬಿಲಿಯ ನಿಶಾನಿ! ಈ ಗಾಯಿ ನೋಡಿದಾಗಲೆಲ್ಲ.. ನಿಂಗೆ ಪೆಟ್ಟು ತಿನ್ನೊ ಹಾಗೆ ಮಾಡಿದೆನಲ್ಲಾ ಎಂದು ಬೇಸರವಾಗುತ್ತದೆ." ಅವಳು ಅದೇ ಗಾಯವಾಗಿ ನೆತ್ತರು ಸೋರುತ್ತಿರಬೇಕು ಎನ್ನುವಂತೆ ನೀಲಿಮಾನ ಕಾಲಲ್ಲಿ ಬೆರಳಾಡಿಸುತ್ತಾಳೆ.

o o o o

ರಾತ್ರಿಯಲ್ಲಿ ಅವಳಿಗೆ ನಿದ್ದೆ ಕಣ್ಣಲ್ಲಿ ತೂಗಿದರೂ ಅದನೋ ಆತಂಕ. ತೊಟ್ಟಿಲನ್ನ ಎಡಗೈಯಲ್ಲಿ ತೂಗುತ್ತಿದ್ದಾಳೆ. ಮಗು ನಿದ್ದೆ ಮಾಡಿದೆ ಎಂದು ತಿಳಿದಿದ್ದರೂ ನಿದ್ದೆಯಲ್ಲಿ ಮೈಮರೆಯಲು ಭಯ! ಕೈಯಲ್ಲಿದ್ದ ಪುಸ್ತಕದಲ್ಲಿ ಕಣೋಡಿಸುತ್ತಿದ್ದಾಳೆ.

ನೀಲಿಮಾ, ಮೂರು ತಿಂಗಳಲ್ಲಿ ಪಂಜರದ ಹಕ್ಕಿಯಂತೆ ಮನೆಯ ಹೊಸಲು ದಾಟಿಲ್ಲ. ಸದಾಶಿವ ಊರಿಗೆ ಹೋದ ಧೈರ್ಯದಲ್ಲಿ "ಲಾಸ್ಟ್ ಶೋಗೆ ಹೋಗಿ ಬರೋಣವೇ?" ಎಂದದ್ದೂ, ಅವಳು "ನಾನು ಬೇಕಾದಾಗ ಪಿಕ್ಚರ್ ನೋಡ್ತೇನೆ ನೀಲೂ.. ನಿಂದು ಪಾಪ ಈಗಾಗಲೇ ಜವಾಬ್ದಾರಿ ಬಿದ್ದಿದೆ. ಎಳೆ ಮಗೂನ್ನ ಹೊರಗೆ ತಕ್ಕೊಂಡು ಹೋದ್ರೆ ಅದಕ್ಕೆ ಶೀತ ಆದೀತು. ನಾನು ಅದರೊಟ್ಟಿಗೆ ಇರ್ತೇನೆ, ನೀನು ಬೇಬಿ ತಾಯಿಯೊಟ್ಟಿಗೆ ಹೋಗಿ ಬಾ. ನೀನು ಬರೋವರೆಗೆ ನಾನು ಕಣ್ಣಿಗೆ ಕಣ್ಣು ಹಚ್ಚೋದಿಲ್ಲ ಆಯಿತಲ್ಲಾ?" ಆಗ ಹೇಳಿದ್ದು ಅವಳಿಗೆ ನೆನಪಿದೆ, ಆದ್ರೆ ನಿದ್ರೆ ಕಣ್ಣಲ್ಲಿ ಸೇರಿ ಕಣ್ಣಿವೆ ಮುಚ್ಚಿಕೊಳ್ಳುವಾಗ, ತಟ್ಟನೆ ಬಡಿದೆಬ್ಬಿಸಿದಂತಾಗಿ ಅವಳು ಬೆಚ್ಚಿ ಬಿದ್ದು ಕಣ್ದೆರೆಯುತ್ತಾಳೆ. ಒಂದೆರಡು ನಿಮಿಷಕ್ಕೆ ಕೈಯಲ್ಲಿದ್ದ ಪುಸ್ತಕ ಹಾಗೆ ಬದಿಯಲ್ಲಿ ಕೈ ಜಾರಿ ಕೆಳಕ್ಕೆ ಬಿದ್ದಾಗ ಅದನ್ನವಳು ಮತ್ತೆ ಎತ್ತಿಕೊಳ್ಳೋದಕ್ಕೆ ಕೈ ಚಾಚೋದಿಲ್ಲ.

ಮಂದ ಬೆಳಕು-ಮಲಗಿದ್ದ ಮಗು-ಅವಳಿಗಿನ್ನೂ ನಿದ್ದೆಯ ಮಂಪರು.. ಕಿವಿಗೆ ಹೆಜ್ಜೆಯ ಸದ್ದೂ ತೀರ ಹತ್ತಿರವಾಗುತ್ತಿದೆ ಅವಳಿಗೆ ತುಂಬ ಭಯವಾಗಿ ಕಿರುಚಿಕೊಳ್ಳಬೇಕು ಎನ್ನುವಾಗ-ಅದು ಸದಾಶಿವ! ಅದೇ ಬೆಳಿಗ್ಗೆ ಟೂರಿಗೆ ಹೋದದ್ದು....ಅವಳು ತನ್ನನ್ನೂ ಯೋಚಿಸುವ ಮೊದಲೇ ಅವಳ ಹತ್ತಿರದಲ್ಲಿ ಕೂತು ಜೆನ್ನ ಮೇಲೆ ಕೈ ಬಿದ್ದದ್ದೂ... ಅವಳು ಇನ್ನಷ್ಟು ಕಣ್ಮುಚ್ಚಿ.... ಉಸಿರು ಬಿಗಿ ಹಿಡಿದು ನಿದ್ದೆ ಬಂದಂತೆ ನಟಿಸುವಾಗ ಅವಳೆದೆ ಜೋರಾಗಿ ಬಡಿದು ಕೊಳ್ಳುತ್ತದೆ. ಅವನ ಸೈಡ್ ಬರ್ನ್ಸ್, ಸಿಗರೇಟು ತುಟಿಯ ಮಧ್ಯಕ್ಕಿಟ್ಟು ಸೇದುವಾಗ ಎಡಗಣ್ಣು ಚಿಕ್ಕದಾಗಿ ಹೊಗೆ ಬಿಡುವ ಅವನ ಚೆಲುವಿನ ಮುಖ-ಅವಳ ಮುಚ್ಚಿದ ಕಣ್ಣಲ್ಲೂ ತುಂಬಿಕೊಂಡು-ಅವಳ ಹೃದಯ ಅರಳಿಕೊಳ್ಳುತ್ತಿದ್ದಂತೆ, ಅವಳಿಗೆ ಯೋಚನೆಯಾಗುತ್ತದೆ.

ಇದು ನೀಲಿಮಾನ ಹಾಸಿಗೆ! ಇಲ್ಲಿ ನೀಲೂ ಮಲಗಿದ್ದು! ತಾನೆಂದೂ ತಿಳಿಯದೆ ಬಂದ ಸದಾಶಿವನ ಬಗ್ಗೆ ಅನುಕಂಪ—ಆದರೆ ಅವಳಲ್ಲಿ ಅದುಮಿಟ್ಟ ಆಸೆ ಅವಳನ್ನು ಏಳಲು ಬಿಡದಿದ್ದಾಗ ಮತ್ತೆ ಅವಳಿಗೆ ಹೆದರಿಕೆಯಾಗುತ್ತದೆ.

ಮಗು ...ಯಾವ ಕ್ಷಣಕ್ಕೂ ಏಳಬಹುದು, ಒಂದೇ ಬಾರಿಗೆ ಅಳುತ್ತದೆ! ಆಗ ತಾನು ಏಳಲೇ ಬೇಕು. ರೂಮಿನಲ್ಲಿ ಬೆಳಕು ಬೀಳುತ್ತದೆ. ಸದಾಶಿವನಿಗೆ ಆಗ ಅಲ್ಲಿ ಇದ್ದದ್ದೂ ನೀಲೂ ಅಲ್ಲ....ತಾನು ಎಂದು ಗೊತ್ತಾದರೆ! ಅವಳು ಭಯದಲ್ಲಿ ಇನ್ನಷ್ಟು ನಡುಗಿ ಕೈ ಎಳೆದುಕೊಂಡಾಗ ಸದಾಶಿವ ಅವಳನ್ನು ಮತ್ತಷ್ಟು ಸಮೀಪಕ್ಕೆ ಜೋರಾಗಿ ಎಳೆದುಕೊಳ್ಳುವುದು ತಿಳಿಯುತ್ತದೆ, ಅವನ ಉಸಿರು....ಅವಳ ಮೂಗಿಗೆ ತಾಗುತ್ತದೆ. ಅವಳು ಬಿಸಿಯೇರುತ್ತಿದ್ದಾಳೆ ...ಇನ್ನೂ....ಇನ್ನೂ ಅವಳನ್ನೇ ಮರೆಯುತ್ತಿದ್ದಾಳೆ!

ತೊಟ್ಟಿಲು ಕಿರ್ ಎಂದಿತು. ಇನ್ನೇನು ಮಗು ಅರಚಿಕೊಳ್ಳುತ್ತದೆ, ಅದರ ಬಾಯನ್ನ ಬಿಗಿಯಾಗಿ ಹಿಡಿದು ಅದು ಅಳದಂತೆ ಮಾಡಬೇಕು.. ಸದಾಶಿವನ ತೋಳಲ್ಲಿ ಸುತ್ತಿಕೊಂಡ ಅವಳಿಗೆ ಮಗು ಒಂದೇ ಬಾರಿಗೆ ಅಳೋದು ಕೇಳುತ್ತದೆ ...ಇನ್ನೂ ಅವಳು ಹಾಗೇ ಮಲಗುವಂತಿಲ್ಲ....ಅವಳು ಒಂದೇ ಬಾರಿಗೆ ಬೆಚ್ಚಿ ಬಿದ್ದವಳಂತೆ ಎದ್ದು ಕೂತು ನಿದ್ದೆಯ ನಟನೆಯಲ್ಲಿ ಕಣ್ಣುಜ್ಜುವಾಗ ತನ್ನನ್ನು ಅಪ್ಪಿಕೊಂಡಿದ್ದ ಕೈಗಳು ಸರಕ್ಕನೆ ಹಿಂದೆಗೆದಿದ್ದು ತಿಳಿದು ಸೆಲ್ಲನೆ ಎದ್ದು ಸ್ವಿಚ್ ಒತ್ತುತ್ತಾಳೆ.

ಸದಾಶಿವ ಗಾಬರಿಯಲ್ಲಿ ಎದ್ದು ನಿಂತು, "ಓ.... ನೀವಾ ಮಾಲು ? ಸಾರಿ....ಇಲ್ಲ .... ನೀಲೂ ಅಂತ್ಲೆ ಮಾಡಿದ್ದೆ....Excuse me..." ಎಂದು ಗಡಿಬಡಿಸಿ ಕೊಂಡು ಏನನ್ನೂ ಹೇಳದೆ ರೂಮಿನಿಂದ ಹೊರಕ್ಕೋಡಿ ದಾಗ, ಅವಳಿಗೆ ಗೋಡೆಗೆ ತಲೆ ಜಜ್ಜಿಕೊಂಡು ಅಳಬೇಕು ಇಷ್ಟಗಲ ಬಾಯಿ ತೆರೆದು ಅಳುತಿದ್ದ ಮಗೂನ್ನ ಕುತ್ತಿಗೆ ಹಿಚುಕಿಬಿಡಬೇಕು ಎನಿಸುತ್ತದೆ. ಜಾರಿದ ಸೆರಗನ್ನ ಎದೆಯ ಮೇಲೆ ಎಳೆದುಕೊಂಡು ಸೋತ ಕಾಲಿನಲ್ಲಿ ಥರ್ಮಾಪ್ಲಾಸ್ಕಿನಲ್ಲಿಟ್ಟ ಹಾಲನ್ನು ಬಾಟ್ಲಿಗೆ ಹಾಕಿ ಮಗು ವಿನ ಬಾಯಿಗಿಡುತ್ತಾಳೆ. ಅದು ಜೋರಾಗಿ ಚೀಪಿ ಹಾಲು ಕುಡಿಯುವಾಗ ಅವಳ ಕಣ್ಣಲ್ಲಿ ನೀರಾ ಡುತ್ತದೆ.

ಅವಳು ಮಲಗಿದ್ದ ಮಗೂನ್ನ ಮತ್ತೆ ತೊಟ್ಟಿಲ ಲ್ಲಿಟ್ಟು ಹಾಸಿಗೆಯಲ್ಲಿ ಬಿದ್ದುಕೊಂಡು ಕಣ್ಣನ್ನು ಮುಚ್ಚು ತ್ತಿದ್ದಂತೆ ಹೊರಗಡೆ ಬೇಬಿಯ ತಾಯಿಯ ಧ್ವನಿ ಕೇಳಿ ದಾಗ-ಅವಳು ತಟ್ಟನೆ ಎದ್ದು ಬಾಗಿಲಿನ ಚಿಲುಕ ಹಾಕಿ ಮತ್ತೆ ಬಂದು ಹಾಸಿಗೆಯಲ್ಲಿ ಕೂತು ಬಿಟ್ಟಳು.

ಬಾಗಿಲು ತಟ್ಟಿತು, ಅವಳು ನೆಲ್ಲನ್ನೆದ್ದು ಬಾಗಿಲು ತೆರೆದು, "ನಿನ್ನ ಮಗ ಒಳ್ಳೆ ನಿದ್ದೆ ಕೋರ-ಒಂದ್ಸಲ ಮಾತ್ರ ಎದ್ದಿದ್ದ, ಬಾಟ್ಲಿ ಬಾಯಿಗಿಟ್ಟೆ, ಮತ್ತೆ ನಿದ್ದೆ. ನಂಗೂ ಒಳ್ಳೆ ನಿದ್ದೆ ಮಾಡ್ಸಿದ, ನೀನು ಚಿಂತೆ ಇಲ್ದೆ ನೋಡಿದಿಯಲ್ವೆ ? ಹ್ಯಾಗಿತ್ತು ಪಿಕ್ಚರ್ ?" ಎಂದು ಅವಳೇ ಉದ್ದಕ್ಕೆ ಉಸಿರು ಬಿಡದೆ ಕೇಳ್ತಾಳೆ.

ನೀಲಿಮಾ ಉಸ್ಸೆಂದು ಹೊದ್ದಿದ್ದ ಶಾಲನ್ನ, ತೆಗೆದು ಸ್ಟ್ಯಾಂಡಿಗೆ ಹಾಕಿ ಹಾಸಿಗೆಯಲ್ಲಿ ಮೈ ಚೆಲ್ಲಿ, "ಪಿಕ್ಚರ್ ತುಂಬ ಚಂದ ಇತ್ತಕ್ಕಾ....ಎಷ್ಟು ಆಸೆ ಇತ್ತು ಅಂಥ ಒಂದು ಪಿಕ್ಚರ್ ನೋಡ್ಬೇಕೆಂದು ! ಆದ್ರೆ... ಯಾರ ಕಣ್ಣ ತಪ್ಪಿಸಿ ನಾನು ಹೋಗಿದ್ದೆನೋ....ಅವರೇ ಫ್ರೆಂಡ್ಸ್ ಜೊತೆ ಮಾತಾಡ್ತಾ ಇದ್ರು. ನನ್ನ ನ್ನ ನೋಡಿದ್ರು .. ನಾನೂ ನೋಡಿದೆ....ಬಂದದ್ದೂ ಬರಲಿ.... ಅಂತ್ಲೆ ನಾನು ಥಿಯೇಟರ್ ಒಳಕ್ಕೆ ಹೋಗಿ ಬಿಟ್ಟೆ. ಅವರ ಟೂರ್ ಕ್ಯಾನ್ಸಲ್ ಆಗಿರಬೇಕು...." ಅವಳು ಮಂಜುಗಡ್ಡೆಯ ಮೇಲೆ ಕುಳಿತಂತೆ ಗಡಗಡನೆ ನಡುಗಿ ಬಿಟ್ಟಳು.

---

# ಕನ್ನಡ ಸಾಹಿತ್ಯಕ್ಕೆ ತ್ರಿವೇಣಿಯವರ ಕೊಡುಗೆ

—ಪಂಕಜ ಶ್ರೀನಾಥ್

ಕಳೆದ ಎರಡು ದಶಕಗಳ ಅವಧಿಯಲ್ಲಿ ಕನ್ನಡ ಲೇಖಕಿಯರು ಪ್ರಕಟಪಡಿಸುವ ಕಾದಂಬರಿಗಳ ಸಂಖ್ಯೆ ಗಮನಾರ್ಹವಾಗಿದ್ದು, ಕಾದಂಬರಿ ಕ್ಷೇತ್ರದಲ್ಲಿ ಮಹಿಳೆಯರ ಭವಿಷ್ಯದ ಬಗೆಗೆ ಆಶಾಭಾವನೆಯನ್ನು ಮೂಡಿಸಿದೆ. ಆದರೆ ಸುಮಾರು ಮೂವತ್ತು ವರ್ಷಗಳ ಹಿಂದೆ, ಕಾದಂಬರಿಗಾರ್ತಿಯರ, ಕತೆಗಾರ್ತಿಯರ ಸಂಖ್ಯೆಯನ್ನು ಬೆರಳಿನಲ್ಲಿ ಎಣಿಸಬಹುದಾಗಿತ್ತು. ಇತರ ಎಲ್ಲ ಕ್ಷೇತ್ರಗಳಂತೆಯೇ ಸಾಹಿತ್ಯ ರಂಗದಲ್ಲೂ ಮಹಿಳೆಯ ಪಾತ್ರ ಬಹಳ ಕಿರಿದಾಗಿತ್ತು. ಅಂತಹ ಕಾಲದಲ್ಲೂ ಬರೆದು, ಬರೆದುದನ್ನು ಹೊರತಂದು "ಭಲೆ" ಎನಿಸಿಕೊಂಡವರು ಇಲ್ಲದಿರಲಿಲ್ಲ. ಆ ಯುಗದ ಬರಹಗಾರ್ತಿಯರಲ್ಲಿ ಮೊದಲು ನೆನಪಿಗೆ ಬರುವುದು ತ್ರಿವೇಣಿಯವರ ಹೆಸರಾದರೂ, ಅವರಿಗಿಂತಲೂ ಮೊದಲಿಗೆ ಸಾಹಿತ್ಯ ಸೇವಾ ದೀಕ್ಷೆ ಕೊಟ್ಟ ಮಹಿಳೆಯರು ಇದ್ದರು. ಅವರಲ್ಲಿ ಅನೇಕರು ಇಂದು ನಮ್ಮ ಮಧ್ಯದಲ್ಲಿಲ್ಲ. ಅದು ನಮ್ಮ ದುರ್ದೈವ. ಕಾದಂಬರಿಗಳನ್ನೂ, ನಾಟಕಗಳನ್ನೂ ಬರೆದುದಲ್ಲದೆ, ಪತ್ರಿಕೋದ್ಯಮಿಯಾಗಿಯೂ ಯಶಸ್ವಿಯಾಗಿ ದುಡಿದವರು ದಿ॥ ಆರ್. ಕಲ್ಯಾಣಮ್ಮನವರು ಕನ್ನಡ ಶಿಶು ಸಾಹಿತ್ಯಕ್ಕೆ ಆಕೆಯ ಕೊಡುಗೆ ಅತ್ಯಮೂಲ್ಯ. ಅದೇ ಕಾಲಕ್ಕೆ ಸೇರಿದ, ಶ್ರೀಮತಿ ತಿರುಮಲೆ ರಾಜಮ್ಮನವರು, ತಮ್ಮ ಕವನಗಳು, ನಾಟಕಗಳು ಮತ್ತು ಗೀತ-ನಾಟಕಗಳಿಂದ ಹೆಸರು ಪಡೆದಿದ್ದರು. ಅವರ ಹಿರಿಯ ಮಾರ್ಗದರ್ಶನ ಕನ್ನಡತಿಯರಿಗೆ ಒಂದಲ್ಲ ಒಂದು ರೂಪದಲ್ಲಿ ಇಂದಿಗೂ ದೊರೆಯುತ್ತಿರುವುದು ನಮ್ಮ ಸುದೈವ. ಹೆಚ್ಚು ಕೃತಿಗಳನ್ನು ಬರೆಯುವ ಮೊದಲೇ ವಿಧಿವಶರಾದ ಕೊಡಗಿನ ಗೌರಮ್ಮನವರು (ಮಿಸೆಸ್ ಬಿ. ಟಿ. ಜಿ. ಕೃಷ್ಣ) ತಮ್ಮ ಒಂದೆರಡು ಕಥಾ ಸಂಕಲನಗಳಲ್ಲೇ ತಮ್ಮ ಪ್ರತಿಭೆಯನ್ನು ತೋರಿದ್ದಾರೆ.

ಮಹಿಳೆಯರಿಗೆ ಕಾದಂಬರಿ ಹಾಗೂ ಕಥಾ ಜಗತ್ತಿನಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿಕೊಟ್ಟ ಕೀರ್ತಿ ತ್ರಿವೇಣಿಯವರದು. ಕನ್ನಡ ಸಾಹಿತ್ಯ ದಿಗಂತದಲ್ಲಿ ಬಹು ಸ್ವಲ್ಪ ಕಾಲ ಉಜ್ವಲವಾಗಿ ಮಿನುಗಿ ಮರೆಯಾದ ಧೃವತಾರೆ ತ್ರಿವೇಣಿ, ಅವರಂತೆಯೇ ಅಕಾಲ ಮೃತ್ಯುವನ್ನಪ್ಪಿ, ಸಾಹಿತ್ಯಸೇವೆಯಿಂದ ವಂಚಿತರಾದ ಮತ್ತೋರ್ವ ಸೋದರಿ ಎಂ. ಕೆ. ಜಯಲಕ್ಷ್ಮಿ. ತಮ್ಮ ನಾಲ್ಕೈದು ಕಾದಂಬರಿಗಳು ಹಾಗೂ ಹಲವಾರು ಸಣ್ಣ ಕಥೆಗಳಿಂದ ಭರವಸೆ ಮೂಡಿಸಿದ್ದ ಜಯಲಕ್ಷ್ಮಿ, ಅಂದಿನ ಹಲವಾರು ಸಮಸ್ಯೆಗಳನ್ನು ಯಶಸ್ವಿಯಾಗಿ ನಿರೂಪಿಸಿದ್ದರು. ಆದರೆ ತಮಗಿಂತ ಮುಂಚಿನಿಂದಲೂ ಬರೆಯುತ್ತಿದ್ದ, ಮುಂದೆ ಬರೆದ ಎಲ್ಲ ಲೇಖಕಿಯರಿಗಿಂತ, ತಮ್ಮದೇ ಆದ ವಿಶಿಷ್ಟ ಸ್ಥಾನ ಪಡೆದವರು ತ್ರಿವೇಣಿ. ಸಾಹಿತ್ಯರಂಗದಲ್ಲಿ ಅವರ ಸಾಧನೆ ನಿಜಕ್ಕೂ ಶ್ಲಾಘನೀಯ.

ತ್ರಿವೇಣಿ — ಅವರ ನಿಜ ನಾಮಧೇಯ ಅನುಸೂಯ — ಸಾಹಿತಿಗಳ ವಂಶದಲ್ಲಿ ಜನಿಸಿದವರು. ಕನ್ನಡ ಸಾಹಿತ್ಯಾಚಾರ್ಯ ಬಿ. ಎಂ. ಶ್ರೀ ಅವರು ಅವರ ದೊಡ್ಡಪ್ಪ, ಮೈಸೂರು ಮಹಾರಾಜಾ ಕಾಲೇಜಿನ ಬಿ.ಎ., ಪದವೀಧರೆ. ಮನಃಶಾಸ್ತ್ರ ಅವರ ಒಂದು ಐಚ್ಛಿಕ ವಿಷಯ. ಮನೋವಿಕಲರು ಹಾಗೂ ಹಲವು ಸಮಸ್ಯೆಗಳ ಬಗ್ಗೆ ಅವರಿಗೆ ವಿಶೇಷ ಆಸಕ್ತಿ. ಪರಿಶೋಧನೆ ನಡೆಸಿ ಬೆಂಗಳೂರಿನ ಮಾನಸಿಕ ಚಿಕಿತ್ಸಾಲಯದಲ್ಲಿ ವಿಷಯ ವಿವರ ಸಂಗ್ರಹಿಸಿ, ಕನ್ನಡ ಸಾಹಿತ್ಯದಲ್ಲಿ ಒಂದು

ಹೊಸ ಪ್ರಕಾರವನ್ನು ಆರಂಭಿಸಿದರು. 'ಬೆಕ್ಕಿನ ಕಣ್ಣು' 'ಮುಚ್ಚಿದ ಬಾಗಿಲು' 'ಶರಪಂಜರ' 'ದೂರದ ಬೆಟ್ಟ' ಮುಂತಾದ ಕಾದಂಬರಿಗಳಿಗೂ, ಅವರ ಹಲವಾರು ಸಣ್ಣ ಕಥೆಗಳಿಗೂ, ಮನಶ್ಶಾಸ್ತ್ರಕ್ಕೆ ಸಂಬಂಧಿಸಿದ ಸಮಸ್ಯೆಗಳೇ ಆಧಾರ.

ತ್ರಿವೇಣಿಯವರ ವಿಶೇಷ ಜನಪ್ರಿಯತೆಗೆ ಕಾರಣ, ಅವರ ಸಾಹಿತ್ಯ ಜೀವನಕ್ಕೆ ಹೊರತಾಗಿರಲಿಲ್ಲ. ನಿತ್ಯ ಜೀವನದ ಹಲವು ಹತ್ತು ಸರಳ ಸಂಗತಿಗಳನ್ನು ಅವರ ಅದ್ಭುತ ಕಥನಶಕ್ತಿ, ಸುಂದರ ಕೃತಿಗಳನ್ನಾಗಿ ರೂಪಿಸುತ್ತಿತ್ತು. ಅವರ ಕಥೆಗಳು ಮತ್ತು ಪಾತ್ರಗಳೆಲ್ಲ ನಿತ್ಯ ಜೀವನದ ನೈಜ ವ್ಯಕ್ತಿಗಳು. ನಮ್ಮ ಸಮಾಜದಲ್ಲಿನ— ಅನೇಕ ಸಮಸ್ಯೆಗಳನ್ನು ಅವರು ತಮ್ಮ ಕೃತಿಗಳಲ್ಲಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಅವರ ಸಾಹಿತ್ಯ ಧಾರೆ ಪ್ರತಿಭೆ, ವಿದ್ವತ್ತು ಹಾಗೂ ಕಲಾವಂತಿಕೆಯ ತ್ರಿವೇಣಿಸಂಗಮವಾಗಿತ್ತು. ಹೆಣ್ಣು ಮತ್ತು ಹೆಣ್ಣಿನ ಸಮಸ್ಯೆಗಳನ್ನು ಚರ್ಚಿಸಿ, ಅವುಗಳಿಗೆ ಪರಿಹಾರವನ್ನೂ ಸೂಚಿಸುತ್ತಿದ್ದರು. ಇದರಲ್ಲಿ ಅವರು ಬಹುಮಟ್ಟಿಗೆ ಯಶಸ್ವಿಯಾಗಿದ್ದರೆಂದೇ ಹೇಳಬೇಕು. ಏಕೆಂದರೆ ಹೆಣ್ಣಿನ ಸಮಸ್ಯೆಗಳನ್ನು ಲೇಖಕರಿಗಿಂತ ಲೇಖಕಿಯರು ಹೆಚ್ಚು ಸೂಕ್ಷ್ಮವಾಗಿ ಅರ್ಥಮಾಡಿಕೊಳ್ಳಲು ಸಾಧ್ಯ. ತ್ರಿವೇಣಿಯವರ ಮಾತುಗಳಲ್ಲೇ ಹೇಳುವುದಾದರೆ "ಪುರುಷರು ಮಹಿಳೆಯರ ಸಮಸ್ಯೆ, ಜೀವನ ಮತ್ತು ಅಂತರಂಗವನ್ನು ವಿಧವಿಧವಾಗಿ ವರ್ಣಿಸಬಹುದು, ಆದರೆ ಸ್ತ್ರೀ ಜೀವನವನ್ನು ತನ್ನದೇ ಆದ ದೃಷ್ಟಿಯಿಂದ ನೋಡುತ್ತಾಳೆ. ಹೆಂಗಸಿನ ಮನಸ್ಸಿನ ಸೂಕ್ಷ್ಮತೆಯ ಅರಿವು ಹೆಂಗಸಿಗೆ ಮಾತ್ರವಿರುತ್ತದೆ. ಆಕೆಯ ಮನಸ್ಸು, ಬದುಕಿನ ಆದರ್ಶ, ಜೀವನವನ್ನು ನೋಡುವ ರೀತಿ ಸಂಪೂರ್ಣವಾಗಿ ಭಿನ್ನವಾದುದರಿಂದ ಪುರುಷರು ಮಾತ್ರ "ಸಾಹಿತ್ಯಸೇವೆ ಮಾಡಿದರೆ ನಾವು ಜೀವನದ ಒಂದು ಮುಖವನ್ನು ಮಾತ್ರ ನೋಡಬಹುದು. ಜೀವನದ ಮತ್ತೊಂದು ಕೋಮಲ, ಸುಂದರ ಮುಖವನ್ನು ಸ್ತ್ರೀಯರು ಮಾತ್ರ ಜಗತ್ತಿಗೆ ತೋರಿಸಬಲ್ಲರು." [1955ರಲ್ಲಿ ರಾಯಚೂರಿನಲ್ಲಿ ನಡೆದ 38ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಮಹಿಳಾ ಗೋಷ್ಠಿಯಲ್ಲಿ ಸ್ತ್ರೀಯರ ಸಾಹಿತ್ಯ ಸೇವೆ ಮತ್ತು ಅವರ ಸಮಸ್ಯೆಗಳನ್ನು ಕುರಿತು ತ್ರಿವೇಣಿಯವರು ಮಾಡಿದ ಭಾಷಣದಿಂದ]

ತ್ರಿವೇಣಿಯವರ ವೈಶಿಷ್ಟ್ಯ, ಅವರ ಕೃತಿಗಳಲ್ಲಿನ ವೈವಿಧ್ಯತೆ. ಮರ್ಯಾದೆಯಿಂದ ಬಾಳ್ವೆ ನಡೆಸಲು ಸಮಾಜ ವಿಧವೆಯೊಬ್ಬಳಿಗೆ ಅವಕಾಶ ನೀಡದಿದ್ದಾಗ, ತನ್ನ ಮಗಳಿಗಾಗಿ ವೇಶ್ಯೆಯಾಗುತ್ತಾಳೆ. ತನ್ನ ಮಗಳನ್ನು ಆ ಜೀವನದಿಂದ ದೂರವಿರಿಸಲು ಅವಳಿಂದ ತಾನೇ ದೂರವಾಗುತ್ತಾಳೆ. ಕೊನೆಗೆ ಮಗಳಿಂದಲೇ ಅವಮಾನಿಸಲ್ಪಡುತ್ತಾಳೆ. ಇದು ಹೂವು-ಹಣ್ಣುವಿನ ವಸ್ತು. ತನಗೆ ಯಾವ ವಿಧದಲ್ಲೂ ಸರಿಹೊಂದದ ಶಾಮಣ್ಣನನ್ನು ಪರಿಸ್ಥಿತಿಯ ಒತ್ತಡಕ್ಕೆ ತಲೆಬಾಗಿ, ಮದುವೆಯಾದ ಮೀರಳ ಮನಸ್ಸಿನ ಹೋರಾಟ 'ಅಪಸ್ವರ' ಮತ್ತು 'ಅಪಜಯ'ದ ವಸ್ತು. ಹೋರಾಟದಲ್ಲಿ ಕೊನೆಗೂ ಸೋತವಳು ಮೀರ. ಕಲಿತ ಹುಡುಗಿಯರ ಸಮಸ್ಯೆ "ಕಂಕಣ" ಮತ್ತು "ಮುಕ್ತಿ"ಗೆ ವಸ್ತುವಾಗಿದೆ.

ರಮ, ಅಂಬಿಕ, ಅಮೃತ, ಸುಶೀಲ ಇವರೆಲ್ಲರ ಬದುಕಿಗೆ ಒಂದು ಅರ್ಥವನ್ನು ಕಲ್ಪಿಸಿದ್ದಾರೆ. ಇವರ ರೀತಿ-ನೀತಿ ತೀರ ವಿಭಿನ್ನ. ಜೀವನದಲ್ಲಿ ನಿರಾಶೆಯ ಆಘಾತಕ್ಕೆ ಒಳಗಾದ ಸುಶೀಲ, ಜೀವನವನ್ನು ತನ್ನದೇ ಆದ ರೀತಿಯಲ್ಲಿ ಎದುರಿಸುತ್ತಾಳೆ. ಜನ ಆಡಿಕೊಂಡರೂ, ಆ ಬಗ್ಗೆ ಅವಳಿಗೆ ಯಾವ ವ್ಯಥೆಯೂ ಇಲ್ಲ, ಪಶ್ಚಾತ್ತಾಪವೂ ಇಲ್ಲ. ತಾನು ಪ್ರೇಮಿಸಿದಾತ ಮೋಸ ಮಾಡಿದುದರಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ ಕಸ್ತೂರಿ. ಆದರೆ ರಮ ಈ ಪರಿಹಾರವನ್ನು ಒಪ್ಪುವುದಿಲ್ಲ. ಅವಳು ತನ್ನ ತಂಗಿ, ತಮ್ಮಂದಿರಿಗಾಗಿ ಕುರುಡನನ್ನು ಮದುವೆಯಾಗಿ, ತನ್ನ ಪ್ರೇಮಿಯನ್ನೂ ತೊರೆಯುವಷ್ಟು ತ್ಯಾಗಶೀಲತೆ ತೋರುತ್ತಾಳೆ. ತನ್ನ ಬದುಕನ್ನು ಆಹುತಿ ಕೊಟ್ಟು, ಇತರರಿಗಾಗಿ ಶ್ರಮಿಸುವ ಉದಾರ ಹೃದಯ ಅವಳದು. ಅಂಬಿಕ ಸ್ಥಿತಪ್ರಜ್ಞೆ. ಅವಳು ಬದುಕಿನಿಂದ ಏನನ್ನೂ ಬಯಸುವುದಿಲ್ಲ. ಜೀವನ ಏನು ನೀಡಿದರೂ ಸ್ವೀಕರಿಸುತ್ತಾಳೆ. ಆದುದರಿಂದಲೇ ಅವಳು ಸುಖಿ. ಆಸೆಯೇ ಇಲ್ಲದಿರುವುದರಿಂದ ಅವಳಿಗೆ ನಿರಾಸೆಯ ಹೆದರಿಕೆಯೂ ಇಲ್ಲ. ಪ್ರೇಮಕ್ಕಾಗಿ ತನ್ನ ತಂದೆಯ ವಯಸ್ಸಿನ ಓರ್ವನನ್ನು ಮದುವೆಯಾಗುತ್ತಾಳೆ, ಪದ್ಮಿನಿ. ಅವಳ ಮನಸ್ಸಿನ ಏರು-ಪೇರುಗಳು ಹೃದಯ ಗೀತೆಯ ಸುಂದರ ಚಿತ್ರ. ಇವಳ ಪಾತ್ರಕ್ಕೆ ತದ್ವಿರುದ್ಧ ಬೆಳ್ಳಿಯ ಮೋಡದ ಮೋಹನನ ಪಾತ್ರ, ಹಣದಾಸೆಗಾಗಿ ಮದುವೆಯಾಗುವೆನೆಂದು ವಾಗ್ದಾನ ಮಾಡಿ, ಆಸ್ತಿ ದೊರೆಯುವು

ದಿಲ್ಲವೆಂದು ತಿಳಿದಾಗ, ಇಂದಿರೆಯನ್ನು ಆತ ತಿರಸ್ಕರಿಸುತ್ತಾನೆ. ಇಂದಿರೆಯ ಪುಟ್ಟ ಹೃದಯಕ್ಕಾದ ನಿರಾಶೆ, ಆಘಾತ, ಆದರೂ ಅವಳ ಹೃದಯ ವೈಶಾಲ್ಯ ತ್ರಿವೇಣಿಯವರ ನುರಿತ ಲೇಖನಿಯಿಂದ ಸುಂದರವಾಗಿ ಮೂಡಿಬಂದಿದೆ. ಒಮ್ಮೆ ಒಂದು ತಪ್ಪು ಮಾಡಿದರೆ ಮತ್ತೆ ಸರಿಹೋಗುವುದು ಸಾಧ್ಯವೇ ಇಲ್ಲವೇ ? ಇದು ಮೊದಲ ಹೆಜ್ಜೆಯ ವಸ್ತು. ಕಾಶೀಯಾತ್ರೆ ಮಾಡುವ ಹಂಬಲ ಕೊಟ್ಟು, ಕಾಸು ಕಾಸಿಗೆ ಗಂಟು ಹಾಕಿದ ಅಜ್ಜಿ, ಒಂದು ಬಡ ಸಂಸಾರದ, ಒಬ್ಬ ಬಡ ಕನ್ಯೆಯ ಉದ್ಧಾರಕ್ಕಾಗಿ ಆ ಹಣವನ್ನೆಲ್ಲ ಖರ್ಚು ಮಾಡಿ, ಅದರಿಂದಲೇ ಕಾಶೀಯಾತ್ರೆ ಮಾಡಿದಷ್ಟು ತೃಪ್ತಿ ಪಡೆಯುವ ಹೃದಯಂಗಮ ಚಿತ್ರ "ಕಾಶೀಯಾತ್ರೆ". ಮಲತಾಯಿಯ ಧೋರಣೆಯಿಂದ ಮನೋವಿಕಲ್ಪಕ್ಕೆ ಒಳಗಾಗುವ ಓರ್ವ ಹುಡುಗಿಯ ಚಿತ್ರ " ಬೆಕ್ಕಿನ ಕಣ್ಣು ". ಕಾರಣಾಂತರಗಳಿಂದ ಮನೋರೋಗಿಯಾಗಿ, ಸಂಪೂರ್ಣವಾಗಿ ಗುಣ ಹೊಂದಿದ ನಂತರವೂ, ತನ್ನ ಸುತ್ತ-ಮುತ್ತಲಿನ ಪರಿವರ್ತನೆಯಿಂದ, ಮಿಂಚಿನಂತೆ ಬದುಕಲು ವಿಫಲಳಾದ ಕಾವೇರಿ ನಿಜಕ್ಕೂ "ಶರಪಂಜರ"ದಲ್ಲಿ ಬಂಧಿ.

ತ್ರಿವೇಣಿಯವರ ಪುಸ್ತಕಗಳನ್ನು ಓದುವಾಗ, ಓದುಗರು ಪಾತ್ರಗಳೊಂದಿಗೆ ತಾವೂ ಒಂದಾಗುತ್ತಾರೆ. ಅವರ ಸುಖದುಃಖಗಳಲ್ಲಿ ಭಾಗಿಯಾಗುತ್ತಾರೆ. ಅವರ ಸಮಸ್ಯೆ ತಮ್ಮದೇ ಸಮಸ್ಯೆಯೆಂಬಂತೆ ಚಿಂತಿಸುತ್ತಾರೆ. ಸಾಹಿತಿಗೆ ಇದಕ್ಕಿಂತ ಹೆಚ್ಚಿನ ಪ್ರತಿಫಲವೇನಿದೆ!

ತ್ರಿವೇಣಿಯವರದು ಮನಮುಟ್ಟುವ ಸಹಜ ಸುಂದರ ಸರಳ ಶೈಲಿ, ಮಾತನಾಡುವ ರೀತಿಯಲ್ಲೇ ಬರೆಯುತ್ತಿದ್ದುದ್ದರಿಂದ ಅವರ ಕೃತಿಗಳು "ಮುಗಿಲ ಮಲ್ಲಿಗೆ" ಯಾಗದೆ ನಿಜಜೀವನದ ಸುಂದರ ಚಿತ್ರಗಳಾಗಿದ್ದವು.

" ವಸಂತ ಗಾನ " ಪ್ರತಿಯೊಬ್ಬರ ಮನೆಯಲ್ಲೂ ಒಂದಲ್ಲ ಒಂದು ಬಾರಿ ನಡೆದಿರಬಹುದಾದ ನಡೆಯಬಹುದಾದ ವಸ್ತು ! ಆದರೆ ತ್ರಿವೇಣಿಯವರ ಲೇಖನಿಯಿಂದ ಎಂತಹ ಸುಂದರ ಚಿತ್ರ ! ಹಿಂದೊಮ್ಮೆ ಅನುಸೂಯ ತಾಯಿಯಾಗಲಿದ್ದಾಗ ಮಗು ಬದುಕಲಿಲ್ಲ. ಆಗಿನ ತಮ್ಮ ಅನುಭವವನ್ನು ಅವರು 'ಅತಿಥಿ ಬರಲಿಲ್ಲ' ಸಣ್ಣ ಕತೆಯಲ್ಲಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ. "ವಸಂತ ಗಾನ" ಸಿಹಿತಿಂಡಿಯಂತೆ ಈ ಗಾನವನ್ನು ಹಿತವಾಗಿ ಮಿತವಾಗಿ ಅನುಭವಿಸಿದ ದಂಪತಿಗಳ ಕಥೆ ಇದು. "ನನ್ನೀ ವಸಂತ ಗಾನ ಓದುಗರ ಪಾಲಿಗೆ ಹೇಮಂತಗಾನವಾಗದಿದ್ದರೆ ನನ್ನ ಪುಣ್ಯ" ವಸಂತಗಾನದ ಅರಿಕೆಯಲ್ಲಿ ತ್ರಿವೇಣಿಯವರ ಮಾತುಗಳಿವು. ಓದುಗರಿಗೇನೋ ಆ ಕೃತಿ ವಂಸತಗಾನವೇ ಆಯಿತು. ಆದರೆ ನೈಜ ಜೀವನದಲ್ಲಿ ತ್ರಿವೇಣಿಯವರ ಪಾಲಿಗೆ ವಸಂತಗಾನ, ಹೇಮಂತಗಾನವಾಗಿ, ಮೃತ್ಯುಗೀತೆ ಯಾದುದು ಕನ್ನಡಿಗರ ದೌರ್ಭಾಗ್ಯ.-

ಸುಮಾರು 13 - 14 ವರ್ಷಗಳ ಅವಧಿಯಲ್ಲಿ ತ್ರಿವೇಣಿಯವರು ಕನ್ನಡ ಜನತೆಗೆ ನೀಡಿದುದು ಇಪ್ಪತ್ತಕ್ಕೂ ಹೆಚ್ಚು ಕಾದಂಬರಿಗಳು ಮತ್ತು ಕಥಾಸಂಕಲನಗಳು (22 ಕಾದಂಬರಿಗಳು ಮತ್ತು ಎರಡು ಕಥಾಸಂಕಲನಗಳು) ಇವುಗಳಲ್ಲಿ "ಅವಳ ಮನೆ" ಕಾದಂಬರಿಗೂ, "ಸಮಸ್ಯೆಯ ಮಗು" ಸಂಕಲನಕ್ಕೂ ರಾಜ್ಯ ಸರ್ಕಾರದ ಸಾಹಿತ್ಯ ಅಕೆಡಮಿ ಪ್ರಶಸ್ತಿ ದೊರೆತಿದೆ. ಅವರ ಮರಣಾನಂತರ ಅವರ "ಬೆಳ್ಳಿಮೋಡ", "ಹಣ್ಣೆಲೆ ಚಿಗುರಿದಾಗ", "ಶರಪಂಜರ" ಯಶಸ್ವೀ ಚಲನಚಿತ್ರಗಳಾಗಿವೆ. ಸಾಹಿತ್ಯಕ್ಕೆ ಸಂಬಂಧಿಸಿದಂತೆ ಯಾವ ಪ್ರಸ್ತಾಪ ಬಂದರೂ, ತ್ರಿವೇಣಿಯವರ ಹೆಸರಿನ ಪ್ರಸ್ತಾಪವು ತಪ್ಪದೆ ಬರುತ್ತದೆ.

ತ್ರಿವೇಣಿ ತಮ್ಮ ಕೃತಿಗಳ ಪ್ರಶಂಸೆಯನ್ನು ಎಷ್ಟು ಸಂತೋಷದಿಂದ ಸ್ವಾಗತಿಸುತ್ತಿದ್ದರೋ ಅಷ್ಟೇ ಸಂತೋಷದಿಂದ ಅವುಗಳ ರೋಷ ದೋಷಗಳನ್ನೂ, ಕುಂದು ಕೊರತೆಗಳನ್ನೂ, ಕುರಿತ ವಿಮರ್ಶೆಗಳನ್ನೂ ಸ್ವಾಗತಿಸುತ್ತಿದ್ದರು. ಅಲ್ಲದೆ ಸ್ವಯಂ ಪ್ರತಿಭಾಸ್ವಿತರಾದ ಅವರು ಇತರರ ಪ್ರತಿಭೆಯನ್ನೂ ಬಹು ಬೇಗ ಗುರುತಿಸುತ್ತಿದ್ದರು.

ಅವರಿಂದ ಇನ್ನೂ ಹಲವಾರು ಮೇರು ಕೃತಿಗಳು ರಚಿತವಾಗುವ ಮೊದಲೇ ಅವರು ನಮ್ಮಿಂದ ದೂರವಾದುದು, ಕನ್ನಡ ಸಾರಸ್ವತಲೋಕಕ್ಕೆ ನಿಜಕ್ಕೂ ತುಂಬಲಾಗದ ನಷ್ಟ.

---

# ನಾನು - ಕವಿತೆ - ನೀನು

ನಾನು ಹಲವು ಸಲ ಸೋತಿದ್ದೇನೆ
ಸೋಲುತ್ತ ಸೋಲುತ್ತ ಮೆಟ್ಟಲು ಹತ್ತಿದ್ದೇನೆ
ನಿನ್ನನ್ನು ದೂರ ನಿಲ್ಲಿಸಿ—ನಿರ್ಲಿಪ್ತಳಾಗಿ
ಹೊರಳಿ ಹೊರಳಿ—ಹೃದಯ ಕೊಡದೆ
ಹತ್ತು ದಿಕ್ಕುಗಳನ್ನು ನೋಡಲು
ಪ್ರಯತ್ನಿಸಿದ್ದೇನೆ
ನಾನು–ನೋಡುತ್ತಿರುವಂತೆಯೇ ನೀನು,
ನನ್ನಲ್ಲಿ ಒಂದಾಗುವಿ—ಅಲ್ಲ,
ನನ್ನನ್ನು ಕಬಳಿಸಿಬಿಡುವಿ—
ಮುತ್ತಿಕೊಳ್ಳುವಿ—ದ್ವಂದ್ವವನ್ನು ಬದಿಗೊತ್ತಿ ;
ನಿನ್ನ ತಾಳ ಲಯಕ್ಕೆ ತಕ್ಕಂತೆ
ಕುಣಿಸುವಿ—ನಾನು ಎಚ್ಚರವಿದ್ದೂ
ಸ್ವಾಧೀನ ಇಲ್ಲವಾಗುತ್ತೇನೆ ;
ಕೈಯಲ್ಲಿ ಲಗಾಮು ಹಿಡಿದೂ—ನಿನ್ನ ವಶಳಾಗುತ್ತೇನೆ.
'ಹೀಗಾಗಬಾರದು'
ಹೀಗಾಗಬಾರದು—ಎಂದು
ಉಬ್ಬರವಿಳಿದಾಗ ನೆನಪಿಗೆ ಬರುತ್ತದೆ ;
ನನ್ನ ದೌರ್ಬಲ್ಯಕ್ಕೆ ನೆರವಾಗುತ್ತದೆ ;
ಕವಿಯ ಹೊಟ್ಟೆಯಲ್ಲಿ ವಿಮರ್ಶಕ
ವಿಮರ್ಶಕನ ಹೊಟ್ಟೆಯು ಕವಿ ಎಂಬುದು.
ಬೆಲೆ ಬಂದಾಗ ಮಾತ್ರ ಬಿಚ್ಚಬೇಕೆಂದಿದ್ದ
ಈ ಪೊಟ್ಟಣದಿಂದ ಯಾವಾಗಲೋ ನುಸುಳಿಕೊಂಡು
ಪುಟ್ಟ ಪುಟ್ಟ ತಪ್ಪಡಿಯಿಡುತ್ತ ಮನೆ ತುಂಬ
ಅಡ್ಡಾಡುತ್ತ ಮಕ್ಕಳು—ಆ ಮಾಟದ ಹೆಜ್ಜೆಯ
ಮೋಹ ತರವಲ್ಲ ವಿಮರ್ಶಕ ನಾಮುನಿಗೆ ಎನಿಸಿದರೂ
ಅಳಿಸಲು ಮನಸ್ಸುಬಾರದೇ—ಕಣ್ಣಲ್ಲಿ ತುಂಬಿ
ಕೊಳ್ಳುತ್ತೇನೆ, —ಕ್ಷಣ ತನ್ಮಯಳಾಗುತ್ತೇನೆ.
ಕವಿತೆ ಸತ್ತಿದೆ ಎಂದು
ಇತ್ತೀಚೆಗೆ ಯಾರ್ಯಾರೋ ಹೇಳುತ್ತ ಬಂದರು
ಸತ್ತಿದೆ—ಸತ್ತಿಲ್ಲ ಯೋಚಿಸ ಹತ್ತಿದೆ.
ಬದುಕಿಲ್ಲ—ಬದುಕಿದ್ದೇನೆ ಗೊತ್ತಾಗಲಿಲ್ಲ
ಅಮ್ಮ, ಅಪ್ಪ, ನೀರು, ನೆಲ, ಗಾಳಿ
ಇವರು ಮಕ್ಕಳು ನಾನು–ನೀನು
ಎಲ್ಲರೂ ಕೊಟ್ಟ ತೊಟ್ಟು ತೊಟ್ಟು ಹನಿ
ನಾಲಿಗೆಯಲ್ಲಿ ಬಿದ್ದಾಗ—ಉಪ್ಪು ಸಪ್ಪೆ
ಜ್ವರ ಬಂದಿದೆಯಾ ?
ಸ್ವಾಸ್ಥ್ಯಉಂಟಾ ಯಾರನ್ನು ಕೇಳಲಿ ?
ಎದೆ ಮುದುಡುತ್ತ ನಡೆದಿದೆ
ತಲೆಗೆ ಕಿರೀಟ ಭಾರವಾಗಿದೆ
ಸತ್ತಿಲ್ಲ ಸಾಯುುವದರಲ್ಲಿದೆ !
ಎಂದಾದರೂ ಬದುಕಿತ್ತೆ ? ಬದುಕಿನ ಹತ್ತಿರ ಬಂದಾಗ
ಸಾವು, ಸಾವಿನೊಳಗೆ ಬದುಕು ತಲೆ ಬಾಲಕ್ಕೆ
ಸೀಮಿತ ನನಗೆ ಸದಾ ತ್ರಿಶಂಕು ಮಧ್ಯಮ ಹಾದಿ
ಜಗತ್ತಿನ ಈ ಕಾವ್ಯದಲ್ಲಿ
ಅಂದಿಗೂ ಇಂದಿಗೂ ಪುಟ ಪುಟಗಳಲ್ಲಿ
ನನ್ನದೇ ಚಡಪಡಿಕೆ—ಕವಿತೆ
ಸತ್ತಿರಬಹುದು ಸಾಯುತ್ತಿರಬಹುದು
ನೀರೆರವ ಕೆಲಸ ನಾನು ಮಾಡುತ್ತೇನೆ—

ಕಾರಣವಿಷ್ಟೆ ನಾನು ಬದುಕಲಪೇಕ್ಷಿಸಿದ್ದೇನೆ
ಪ್ರಾಸ ಪ್ರಾಮಾಣಿಕ ಅನುಭೂತಿಯ ಶಸ್ತ್ರಕ್ರಿಯೆ
ಪ್ರತೀಕ ಅವ್ಯಕ್ತ ಅವನಾರ್ತವನ್ನೂ ಕಬಳಿಸಲು ಬಂದ
ಕರಿ ನೆರಳು
ಶೈಲಿ ನನ್ನ ಹರಿವ ನೀರಿಗೆ ನಿಲ್ಲಿಸಲು ಬಂದ ಮೋಡಿಕಾರ
ಕ್ಷಣದ ಏರಿಳಿತ, (ನಾನೂ ಹನಿ) ಹಿಡಿಯಲು ಹೋದಾಗ
ಸಮಗ್ರನಲ್ಲವೆಂಬ ಅಳುಕು,
ಸಮಗ್ರತೆಯ ತುಂಬಿಕೊಳ್ಳುವಾಗ ನಕ್ಕ ಹನಿ ನಗೆಯ
ಭಾವ-ಚಿತ್ರದ ಪಡಿನೆಳಲಿಗೆ ಸದಾ focusನ ಚಿಂತೆ
ಬೆಳಗಿನ Rolling shieldನ
ತಟ್ಟನೆ ಸವೆದ ದಾರಿಯಲ್ಲಿ ಜಾರುತ್ತಿರುವ ವೈಗಳ್ಳನಿಗೆ
ಎಚ್ಚರದ ಲಗಾಮು, ಆದರೂ

ಭೋರ್ಗರೆದು ಹರಿಯಬಲ್ಲ ನೀರಿಗೆ ದಡಂ ಎಂದು
Block ಮಾಡುತ್ತದೆ Shutter,
ತುಸು, ತುಸು ಜಿನುಗುವ ರಂಗು ರಂಗು
ಲುಟು ಲುಟು ಹರಿವ ಮಂಜುಳ ಬೆಡಗು
ತುಂಬಿ ತಿದಿಯೊತ್ತಿ ನಿಂತಿರುವ ಕೃಷ್ಣರಾಜಸಾಗರದ—
ಸಣ್ಣಮಗು—ಬೆಟ್ಟ ಕೊರೆದು ಇಲಿ ಬಂದ ಅನುಭವ
ಅಕ್ಕ-ಪಕ್ಕದ ಕುಸುರಿನ ಬೃಂದಾವನವನೇ ಕಣ್ಣಲ್ಲಿ
ಹಲವರಿಗೆ
ಅದನ್ನು ನೋಡುತ್ತ-ನೋಡುತ್ತ ಗಂಭೀರಳಾಗಿ
ಹರಿಯುತ್ತಿದ್ದಾಳೆ — ನನ್ನ ಕಾವೇರಿ.

—ಶೈಲಜಾ ಉಡಚಣ.

---

# ಮಹಿಳೆ ಮತ್ತು ಅಲಂಕಾರ

— ಅನುಸೂಯ ಶ್ರೀನಿವಾಸರಾವ್

ಮಹಿಳೆಗೂ ಅಲಂಕಾರಕ್ಕೂ ಬಹಳ ನಿಕಟ ಸಂಬಂಧವಿದೆ. ಯಾವ ಮಹಿಳೆಗೆ ತಾನೇ ತಾನು ಚೆನ್ನಾಗಿ ಕಾಣಬೇಕೆಂಬ ಆಸೆ ಇರುವುದಿಲ್ಲ? ಎಲ್ಲರಿಗೂ ಎಲ್ಲರಿಂದಲೂ ತಾನು ಸೌಂದರ್ಯವತಿ ಎಂದು ಹೊಗಳಿಸಿ ಕೊಳ್ಳಬೇಕೆಂದು ಆಸೆ ಇದ್ದೇ ಇರುತ್ತದೆ. ದೇವರು ಕೊಟ್ಟಿರುವ ಸೌಂದರ್ಯದ ಜೊತೆ ಅಲಂಕರಣ ಸಾಧನಗಳಿಂದ ಮೆಚ್ಚುವಂತೆ ಕಾಣಲು ಪ್ರಯತ್ನಿಸುತ್ತಾಳೆ. ಇದು ಪುರಾಣ ಕಾಲದಿಂದಲೂ ನಡೆದು ಬಂದಿದೆ. ವರಮಹಾಲಕ್ಷ್ಮಿ ಪೂಜೆ ಮಾಡುವಾಗ ಅದರಲ್ಲಿ ಹೇಳುವ ಹಾಡಿನಲ್ಲಿ ಲಕ್ಷ್ಮೀದೇವಿಯು ಅಲಂಕರಿಸಿಕೊಂಡು ಬರುವ ವರ್ಣನೆಯನ್ನು ಕೇಳಿ ನಮಗೂ ಅಷ್ಟೆಲ್ಲ ಆಭರಣ ವಸ್ತ್ರಗಳಿದ್ದರೆ ಎಷ್ಟು ಚೆನ್ನ ಎನಿಸದೆ ಇರದು. ಆಭರಣದ ಆಸೆಗಾಗಿ ಚರಿತ್ರೆಯಲ್ಲಂತೂ ಅನೇಕ ಘಟನೆಗಳು ನಡೆದಿವೆ.

ಕಿಲಿಮಾಲದ ರಾಣಿ ಪಚ್ಚೆಯ ಆಭರಣಕ್ಕಾಗಿ ಗಂಡನನ್ನು ತಿರಸ್ಕರಿಸಿ ತಂದೆಯ ಮನೆಗೆ ಹಿಂತಿರುಗಿ ಅನೇಕ ಜನರ ಮಾರಣ ಹೋಮಕ್ಕೆ ಕಾರಣಳಾಗುತ್ತಾಳೆ. ತಂದೆ ತಾಯಿಯನ್ನೂ ಗಂಡನನ್ನೂ ಕಳೆದುಕೊಂಡು ತನ್ನ ತಪ್ಪಿನ ಪ್ರಾಯಶ್ಚಿತ್ತಕ್ಕಾಗಿ ತನ್ನನ್ನೇ ಬಲಿಗೊಡುತ್ತಾಳೆ. ನಮ್ಮ ಭಾರತದೇಶದ ಅತುಳೈಶ್ವರ್ಯದ ಆಸೆಗಾಗಿಯೇ ಹೊರದೇಶದ ಜನ ದಂಡೆತ್ತಿ ಬಂದು ಕದನಮಾಡಿ ಐಶ್ವರ್ಯ ಸಾಗಿಸಿಕೊಂಡು ಹೋದದ್ದನ್ನು ಚರಿತ್ರೆಯುದ್ದಕ್ಕೂ ಕಾಣಬಹುದು.

ಅಜಂತಾ, ಎಲ್ಲೋರ, ಬೇಲೂರು, ಹಳೇಬೀಡು ಮೊದಲಾದ 'ಶಿಲ್ಪಕಲಾ' ದೇವಸ್ಥಾನಗಳಲ್ಲಂತೂ ಮೂಡಿರುವ ಅದರ ಅಲಂಕರಣ ಜಗತ್ ಪ್ರಸಿದ್ಧಿ ಹೊಂದಿವೆ. ಆಗಿನ ಕಾಲದಲ್ಲಿಯೇ ಎಂಥೆಂತಹ ಕೇಶಾಲಂಕಾರ, ಆಭರಣಗಳ ಮಾದರಿ! ಉಡುಪುಗಳ ವೈಖರಿ ಎಲ್ಲವನ್ನೂ ಕಂಡರೆ ಬಹಳ ಆಶ್ಚರ್ಯವಾಗುತ್ತದೆ. ಈಗ ನಾವು 20ನೇ ಶತಮಾನದಲ್ಲಿ ಏನು ಹೊಸ ಫ್ಯಾಶನ್ ಎಂದು ಕರೆಯುತ್ತೇವೆಯೋ ಅವೆಲ್ಲವನ್ನು ಅಲ್ಲೇ ಮೂಡಿರುವುದನ್ನು ಇಂದು ನಾವು ಕಾಣಬಹುದು.

ಈಗಂತೂ ಹಳೆಯ ಕಾಲದ್ದೆಲ್ಲಾ ಮತ್ತೆ ಪುನರಾವರ್ತಿಸಿ ಹೊಸ ಫ್ಯಾಶನ್ ಆಗುತ್ತಿದೆ. ಮುಂದಲೆಯನ್ನು ಕತ್ತರಿಸಿ ಬಾಚಿಕೊಳ್ಳುವುದು, ಹುಬ್ಬು ತೀಡಿಕೊಳ್ಳುವುದು, ಮುಂಗುರುಳು ಸುರುಳಿ ಸುತ್ತುವುದು, ವಿಚಿತ್ರ ರೀತಿಯ ಕೇಶವಿನ್ಯಾಸ ಇವುಗಳನ್ನು ಕಾಣುವುದಲ್ಲದೆ ದೊಡ್ಡ ಅಂಚಿನ ಸೀರೆ, ಇಳಕಲ ಸೀರೆ, ಪಟ್ಟೆ ಪಟ್ಟೆ ಬಣ್ಣದ ಸೀರೆ, ರವಿಕೆ, ತೋಳಿಲ್ಲದ ರವಿಕೆ ಹಾಗೂ ಚಿತ್ರದಲ್ಲಿ ಮೂಡಿದುದ್ದು ಈಗ ನವ್ಯತೆಯ ಭಿತ್ತಿ ಪತ್ರ ಪಡೆದು ಮತ್ತೆ ಉದಯಿಸಿದೆ.

ಮಹಿಳೆ ಅಲಂಕರಿಸಿಕೊಳ್ಳುವ ಮುನ್ನ ತನಗೆ ಈ ಅಲಂಕಾರ ಒಪ್ಪುವುದೇ ಇಲ್ಲವೇ ಎಂಬುದನ್ನು ತುಸು ಆಲೋಚಿಸಿ ನಿರ್ಧರಿಸಿ ನಂತರ ಅಲಂಕರಿಸಿಕೊಂಡರೆ ಹೆಚ್ಚು ಸಮಂಜಸ. ಕೆಲವರ ದೇಹಾಕೃತಿಗೆ ಕೆಲವು ಅಲಂಕಾರ ಒಪ್ಪುತ್ತದೆ, ಕೆಲವು ಒಪ್ಪುವುದಿಲ್ಲ. 16 ವರ್ಷದ ಷೋಡಶಿಯಂತೆ 50 ವರ್ಷದ ಮಹಿಳೆಯೂ ಅಲಂಕರಿಸಿಕೊಂಡರೆ ನಗೆಪಾಟಲಾಗುತ್ತದೆ. ಆ ವಯಸ್ಸಿನ ಘನತೆಗೆ ತಕ್ಕಂತೆ ಅಲಂಕರಿಸಿಕೊಂಡರೆ ಗಂಭೀರವೂ ಸಮಂಜಸವೂ ಆಗಿರುತ್ತದೆ. ಅಲಂಕರಿಸಿಕೊಂಡು ಹೋಗುವ ಮುನ್ನ ನಾವು ಸಮಾರಂಭಗಳಿಗೆ ಹೋಗುವ ಪರಿಸರವನ್ನು ಅಲ್ಲಿಯ ವಾತಾವರಣವನ್ನು ಮುಖ್ಯವಾಗಿ

ಯೋಚಿಸಬೇಕು. ಒಂದು ಸಾಧಾರಣ ಸ್ಥಿತಿಯಲ್ಲಿರುವ ಕುಟುಂಬದವರ ಮನೆಯಲ್ಲಿ ಸರಳ ಸಮಾರಂಭಕ್ಕಾಗಿ ನಮ್ಮನ್ನು ಆಹ್ವಾನಿಸಿದಾಗ ಅಲ್ಲಿಗೆ ಬರುವ ಆಹ್ವಾನಿತರೆಲ್ಲಾ ಸಾಧಾರಣವಾಗಿ ಸಿಂಗರಿಸಿ ಕೊಂಡಿರುವಾಗ ನಾವು ಮಾತ್ರ ಇದ್ದ ಬದ್ದ ಆಭರಣಗಳನ್ನೆಲ್ಲಾ ಆಡಂಬರದ ರೀತಿಯಲ್ಲಿ ಅಲಂಕರಿಸಿಕೊಂಡು ಹೋದರೆ ಘನತೆ ಗೌರವಕ್ಕೆ ಬದಲಾಗಿ ಆಡಂಬರಪ್ರಿಯೆ ಎಂಬ ಅವಹೇಳನಕ್ಕೆ ಗುರಿಯಾಗಬೇಕಾಗುತ್ತೆ.

ನಾವು ಅಲಂಕರಿಸಿಕೊಂಡಿರುವುದು ಇನ್ನೊಬ್ಬರಿಂದ ಮೆಚ್ಚಿಗೆಯ ಜೊತೆ ಗೌರವವೂ ಸಿಗುವಂತಿರಬೇಕು. ನೋಡಿದ ಕೂಡಲೇ ಸದಭಿಪ್ರಾಯ ಬರುವಂತಿರಬೇಕು. ಅಲಂಕರಣ ಸಾಮಾಗ್ರಿಗಳಿಂದ ದೇಹದ ಸೌಂದರ್ಯ ಹೆಚ್ಚುವಂತಿರಬೇಕೇ ಹೊರತು ಅದರಿಂದ ಅಪಾಯವಾಗುವಂತಿರಬಾರದು. ಕಣ್ಣಿಗೆ ಹಚ್ಚುವ ಕಾಡಿಗೆಯಿಂದ ಇರುವ ಕಣ್ಣುಗಳು ಬಟ್ಟಲ ಕಣ್ಣಿನಂತೆ ದೊಡ್ಡದಾಗಿ ಮುಖದ ಸೌಂದರ್ಯ ಹೆಚ್ಚುತ್ತದೆ ನಿಜ, ಮನೆಯಲ್ಲಿ ಮಾಡಿದ ತಂಪಾದ ಕಾಡಿಗೆಯಿಂದ ಒಳಿತಾಗುವಂತೆ ಅಗ್ಗದ ಅಂಗಡಿಯಲ್ಲಿ ಲಾಭಕ್ಕಾಗಿ ಮಾರುವ ಕಾಡಿಗೆಯಿಂದ ಕಣ್ಣಿನ ಅಪಾಯ ಹೆಚ್ಚು. ಸೌಂದರ್ಯ ಸಾಮಾಗ್ರಿಯಿಂದ ತಾತ್ಕಾಲಿಕವಾಗಿ ಸೌಂದರ್ಯವತಿಯಾಗಿ ಕಂಡರೂ ಅದರ ಅತಿ ಬಳಕೆಯಿಂದ ಚರ್ಮ ಸುಕ್ಕು ಗಟ್ಟಿ ಬೇಗ ವಯಸ್ಸಿಗಿಂತ ಹೆಚ್ಚು ವಯಸ್ಸಾದವರಂತೆ ಆಗುವುದರಿಂದ ಅದರ ಬಳಕೆಯಲ್ಲಿ ಮಿತವ್ಯಯ ಒಳ್ಳೆಯದು. ಅಲಂಕಾರ ಸಾಮಾಗ್ರಿಯಿಂದ, ಆಭರಣಗಳಿಂದ ಮಹಿಳೆ ಮನಮೆಚ್ಚಿಸಬೇಕಾದುದು ಎಷ್ಟು ಅಗತ್ಯವೋ ಅಷ್ಟೇ ಆರ್ಥಿಕ ಸ್ಥಿತಿಯೂ ಗಮನಿಸಬೇಕಾದುದು ಅತ್ಯಗತ್ಯ. ಈಗಂತೂ ದಿನೇ ದಿನೇ ಅಲಂಕಾರ ಸಾಮಗ್ರಿಗಳ ಬೆಲೆ ಗಗನ ಮುಟ್ಟುತ್ತಿವೆ. ಆರ್ಥಿಕ ಸ್ಥಿತಿಯನ್ನು ಕಡೆಗಣಿಸಿ ಅಲಂಕಾರ ಸಾಮಾಗ್ರಿ ಒಡವೆಗಳಿಗಾಗಿ ಹೆಚ್ಚು ವ್ಯಯಿಸುವುದು ಸಾಧುವಾದುದಲ್ಲ. ಇದರಿಂದ ಮೆಚ್ಚಿಗೆ ಗಳಿಸುವುದು ಅಸಾಧ್ಯ. ನಮ್ಮ ಆರ್ಥಿಕಾನುಕೂಲಕ್ಕೆ ತಕ್ಕಂತೆ ವ್ಯಯಿಸಿ ನಮ್ಮ ಸರಳ ಅಲಂಕಾರ ಸುಗುಣಗಳಿಂದ ಮನವನ್ನು ಮೆಚ್ಚಿಸಬಹುದು.

ನೈಜ ಸೌಂದರ್ಯಕ್ಕೆ ಪೋಷಕವಾದದ್ದು ಶುಭ್ರತೆ ಹಾಗೂ ಸರಳತೆಯೇ ಹೊರತು ಢಾಂಬಿಕತೆ ಅಥವಾ ಕೃತಕ ಪರಿಕರಗಳಲ್ಲ.

ಸೌಂದರ್ಯ ಮತ್ತು ಮಹಿಳೆ ಇವರ ಬಾಂಧವ್ಯ ಪ್ರಕೃತಿ ಹಾಗೂ ಮಾನವನಿದ್ದಂತೆ. ಎಂದೂ ಹೊಸದು, ಎಂದೂ ರಮಣೀಯ, ವಿಭಿನ್ನವಾದದ್ದು, ವೈವಿಧ್ಯಪೂರ್ಣವಾದದ್ದು, ಸೌಂದರ್ಯದ ಓರೆಗಲ್ಲು ಮೆಚ್ಚಿಗೆ. ಮೆಚ್ಚಿಗೆ ಗಳಿಸಿದಾಗ ಸೌಂದರ್ಯಗೆದ್ದಿತೆಂದು ಹೆಣ್ಣು ನಲಿಯುತ್ತಾಳೆ. ಪ್ರಕೃತಿ ನಿರ್ವಿಕಾರ ಭಾರದಿಂದ ಹೊಸ ರಸ ಉಣಿಸಲು ಸಿದ್ಧಳಾಗುತ್ತಾಳೆ.

---

**ಕಾಚಲೋ ಮಾಚ್ಛ ತಾಯಿ ಸರು ಮೋದಿನ**
**ಅಹ್ಯ ದೆಂಗುರಾ ಬಾಜಿ ಹೇವು ಮರಣ.**

'ನನ್ನ ಕೈಯಲ್ಲಿರುವ ಬಳೆಗಳೇ! ನೀನು ತಿನ್ನುತ್ತ ನನ್ನ ದಿನಗಳು ಕಳೆದು ಹೋಗಲಿ.
ಪುಣ್ಯ ಸ್ತ್ರೀ ವಾದ್ಯಗಳು ಮೊಳಗುತ್ತ ನನಗೆ ಮರಣ ಬರಲಿ!

—ಒರಿಯಾ ಕವಯಿತ್ರಿ

# ನಾಟಕ ಹಾಗೂ ಚಿತ್ರರಂಗದಲ್ಲಿ

— ಭಾರ್ಗವಿ

ಮೂಲತಃ ನನಗೆ ನಾಟಕದ ಬಗ್ಗೆಯೇ ಒಲವು—ನಾಟಕದವಳು ಎಂದು ಕರೆಸಿಕೊಳ್ಳುವುದೇ ಇಷ್ಟ ಮತ್ತು ಹೆಮ್ಮೆ ಕೂಡ. ಚಿತ್ರರಂಗದಲ್ಲಿ ಮೇಧಾವಿಗಳೆನಿಸಿಕೊಂಡವರೂ, ಉತ್ತಮ ಕಲಾವಿದರೂ ಇದ್ದಾರೆ. ನಾನು ಐದು ಚಿತ್ರಗಳಲ್ಲಿ ಭಾಗವಹಿಸಿದ್ದರೂ ನನಗೆ ನಾಟಕವೇ ಹೆಚ್ಚು ಪ್ರಿಯ. ಯಾರು ಏನೇ ಹೇಳಿವರೂ ನಾಟಕ ಜೀವಂತ-Living. ಉತ್ತಮ ನಿರ್ದೇಶನ ಇರಲಿ, ಇಲ್ಲದಿರಲಿ-ಅದೆಲ್ಲಾ ಪರದೆ ಏಳುವವರೆಗೆ. ಒಮ್ಮೆ ಪರದೆ ಎದ್ದು ರಂಗ ಬೆಳಗಿದೊಡನೆ ರಂಗಭೂಮಿಯ ಕಲಾವಿದನ ಅಳಿವು-ಉಳಿವು. ಅವನ/ಅವಳ ಕೈಯಲ್ಲೆ. ಅಲ್ಲಿಂದ ಮುಂದೆ ಪ್ರೇಕ್ಷಕರುಂಟು, ಕಲಾವಿದರುಂಟು. ಪ್ರೇಕ್ಷಕರಿಂದ ಚಪ್ಪಾಳೆ ಗಿಟ್ಟಿಸಬಹುದು, ಬೈಗುಳ ತಿನ್ನಬಹುದು. ಕಲಾವಿದರಿಗೆ ತನ್ನ ಸಾಧನೆಯ ಸಾರ್ಥಕತೆಯ ನಿಜವಾದ ಅನುಭವ ಆಗುವುದೂ ಈ ಪ್ರೇಕ್ಷಕರ ಪ್ರತಿಕ್ರಿಯೆಯಿಂದಲೇ. ಕೆಟ್ಟ ನಾಟಕ ಆಡಿ 'ವಿಮರ್ಶಕ'ರಿಂದ ಬೈಯಿಸಿಕೊಂಡರೂ ನಾಟಕದಲ್ಲಿ ಒಂದು ಥ್ರಿಲ್-ಖುಷಿ ಇದೆ. ಎಂತಹ ಪ್ರಚಂಡ ಯಶಸ್ಸು ಗಳಿಸಿದ ಚಿತ್ರದಲ್ಲಿ ಭಾಗವಹಿಸಿದರೂ ಈ ಖುಷಿ ಬರೋದಿಲ್ಲ ಅಂತ ನನ್ನ ಅಭಿಪ್ರಾಯ. ಒಂದು 'ಸಿನಿಮಾ' ಯಶಸ್ವಿಯಾಗಬೇಕಾದರೆ ನಟನ ಪಾತ್ರ ನಿರ್ವಹಣೆಯೊಂದೇ ಅಲ್ಲದೆ ಜೊತೆಗೆ ಅದರಲ್ಲಿ ಅನೇಕ ಪಾತ್ರಧಾರಿಗಳಿರುತ್ತಾರೆ. ಕ್ಯಾಮರಾಮನ್, ನಿರ್ದೇಶಕ–ಸಂಕಲನಕಾರ–ಕಲಾವಿದನ ಅಳಿವು-ಉಳಿವು ಇವರ ಕೈಯಲ್ಲಿ.

ನಿಮಗೆ ಅನ್ನಿಸಬಹುದು—ಹೀಗೆ ಒಂದು ನಿರ್ದಿಷ್ಟವಾದ ಅಭಿಪ್ರಾಯ ಚಿತ್ರರಂಗದ ಬಗ್ಗೆ ಕೊಡೋ ಅಷ್ಟು ಆ ರಂಗದ ಪರಿಚಯ ಇದೆಯೇ ನಿಮಗೆ ಅಂತ—ನಾಟಕದಷ್ಟು ಪರಿಚಯವಿಲ್ಲ ನಿಜ. ಆದರೂ ಭಾಗವಹಿಸಿದ ಐದು ಚಿತ್ರಗಳಿಂದಲೇ (ಸುಬ್ಬಾಶಾಸ್ತ್ರಿ, ಸಂಸ್ಕಾರ, ವಂಶವೃಕ್ಷ, ಪ್ರೊ. ಹುಚ್ಚುರಾಯ, ಎರಡು ಕನಸು) ಈ ಮಾಧ್ಯಮದ ಬಗ್ಗೆ ನನ್ನ ಅನುಭವ ಅಥವಾ ಅಭಿಪ್ರಾಯ ರೂಪುಗೊಂಡಿದೆ. ಸಿನಿಮಾ ಚಿತ್ರೀಕರಣ ಕಥೆಯ ಬೆಳವಣಿಗೆಗೆ ಅನುಗುಣವಾಗಿ ನಡೆಯುವುದಿಲ್ಲ. ಒಂದು Setting ನಲ್ಲಿ ಏನೇನು ಘಟನೆಗಳು ನಡೆಯುತ್ತೋ ಅದನ್ನೆಲ್ಲಾ ಒಟ್ಟಿಗೆ ಚಿತ್ರಿಸುತ್ತಾರೆ. ಹಾಗಾಗಿ ನಾಯಕಿಯ ಮರಣದ ಸನ್ನಿವೇಶ, ಅವಳ ಮದುವೆಯ ಸನ್ನಿವೇಶಕ್ಕಿಂತ ಮುಂಚೆ ಚಿತ್ರೀಕರಣ ಆಗುತ್ತೆ. ಒಂದು Continuity ಅಂತಾರಲ್ಲಾ ಅದು ಇರೋದಿಲ್ಲ. ಯಾವುದಾದರೂ ಒಂದು ಭಾವಪೂರ್ಣ ಸನ್ನಿವೇಶದ ಚಿತ್ರೀಕರಣ ಅಗಬೇಕು ಅಂತ ಇಟ್ಟುಕೊಳ್ಳಿ. ಕಲಾವಿದ ಮೊದಲನೆ ಟೇಕ್‌ನಲ್ಲೇ ಬಹಳ ಚೆನ್ನಾಗಿ ನಟಿಸಿರಬಹುದು. ಆದರೆ ಆಗ ಕ್ಯಾಮರಾನೇ ಚಲಿಸದೆ ನಿಂತು ಹೋಗಬಹುದು ಅಥವಾ ಧ್ವನಿ ಸರಿಯಾಗಿ Record ಆಗದೆ ಹೋಗಬಹುದು-ಎರಡೂ ಸರಿಯಾಗಿದ್ದರೆ Shooting ನ ನೋಡೋದಿಕ್ಕೆ ಅಂತ ಬಂದಿರೋ ಉತ್ಸಾಹೀ ಮಂದಿ ಮಧ್ಯೆ ಕೆಮ್ಮಿ, ಸೀನಿ, ಶಬ್ದಮಾಡಿ ಆ ಸನ್ನಿವೇಶನ ಹಾಳು ಮಾಡಬಹುದು. ಹೀಗೆ ನಾನಾ ಕಾರಣಗಳಿಂದ ಒಂದೇ ಸನ್ನಿವೇಶದ ಹತ್ತಾರು ಸಾರಿ ನಟಿಸಬೇಕಾಗೆ ಬಂದರೆ ಮೊದಲಿನ ಭಾವಪೂರ್ಣ ಅಭಿನಯದ ಬದಲು ಒಂದು ಯಾಂತ್ರಿಕವಾದ ಭಾವ ಮೂಡಿ ಬರೋ ಸಾಧ್ಯತೆ ಇದೆ ಕಲಾವಿದನ ನಟನೆಯಲ್ಲಿ. ಹಾಗಾಗಿ ಕಲಾವಿದನ ಪ್ರತಿಭೆಯ ಸಂಪೂರ್ಣ ಪರಿಚಯ ಪ್ರೇಕ್ಷಕನಿಗೆ ಆಗದೆ ಹೋಗಬಹುದು.

ಎಷ್ಟೋ ಬಾರಿ ನಾಟಕ ಪ್ರದರ್ಶನದಲ್ಲಿ ಇಲ್ಲದೇ ಇರೋ Drama ಪರದೆ ಹಿಂದೋ, ಗ್ರೀನ್ ರೂಂನಲ್ಲೋ

Stageನಲ್ಲೋ ಆಗಿ ನಮಗೆ ಖುಷಿ—ಒಂದೊಂದು ಸಲ ಫಜೀತೀನೂ ಅನ್ನಿಸಿ ಕೊಟ್ಟಿದೆ.

ಒಂದು ಸಲ ಲಾಲ್‌ಬಾಗಿನಲ್ಲಿ ನಾವು ನಾಟಕ ಆಡಿದಿವಿ. 1963ರಲ್ಲಿ ಅಂತ ಕಾಣುತ್ತೆ. ಶ್ರೀ ಪರ್ವತವಾಣಿಯವರ ಪ್ರೊಫೆಸರ್ ಮಕರಂದ್ರು ನಾಟಕ. ನಾನು ಸರಸ್ವತಿ ಬಾಯಿ ಪಾರ್ಟು ಮಾಡಿದ್ದೆ. ಬೆಂಚುಗಳನ್ನೆಲ್ಲಾ ಸೇರ್ಸಿ Stage ಕಟ್ಟಿದ್ದರು. ಗಾಜಿನ ಮನೆ ಹತ್ತಿರ ಆ ಕಡೆ ಈ ಕಡೆ ಟಾರ್‌ಪಾಲ್ ಹಾಕಿ ಗ್ರೀನ್‌ರೂಂ ಕಟ್ಟಿದ್ದರು. ಆಫೀಸ್‌ನಿಂದ (ಅಂದ್ಹಾಗೆ ನಾನು ಒಂದು ಸರ್ಕಾರಿ ಕಛೇರೀಲಿ ಕೆಲಸ ಮಾಡ್ತೀನಿ) ನೇರ ಗ್ರೀನ್ ರೂಂಗೆ ಬಂದೆ. ಇನ್ನೇನು ನಾಟಕ ಶುರು ಆಗಬೇಕು ಆಗ ನಮ್ಮಮ್ಮನ ಜೊತೇಲಿ ನನ್ನ ಮಗಳು ಸುಜಾತ 3½ ವರ್ಷದವಳು ಆಗ ಬಂದಿದ್ದಳು. ಅವಳನ್ನ ಮಾತಾಡ್ಸಿದೆ. ಆಮೇಲೆ Stageನ ಇನ್ನೊಂದು ಕಡೆ ಇದ್ದ Green ರೂಂಗೆ (ಆ ಕಡೆ ಎಲ್ಲಾ ಗಂಡಸರು ಇದ್ದರು) ನಾನೂ, ಲೀಲೂ ಪಾತ್ರಧಾರಿ ಮತ್ತು ನನ್ನ ಮಗಳೂ ಹೋದಿವಿ. 5ನೇ ದೃಶ್ಯ, ನಾನೂ ಮತ್ತು ಲೀಲೂ ಪ್ರವೇಶ, Stageಗೆ ಹೋದಿವಿ. ಅಲ್ಲಿ ಗೋಪಿ ಪಾತ್ರ ಶಿವರಾಂ (ಈಗ ಶರಪಂಜರ ಶಿವರಾಮು) ಮಾಡಿದ್ದರು. ಅವರ ಪ್ರವೇಶ ಆಯ್ತು. ಯಾವಾಗಲೂ ಶಿವರಾಂ ತಮಾಷೆ ಮಾಡೋದೂ, ನಗಸೋದು ಜಾಸ್ತಿ. ರಂಗದ ಮೇಲೆ ನನಗೆ ಅವರನ್ನ ನೋಡಿದರೇನೆ ನಗು ಬರೋ ಹಾಗೆ ಆಗೋದು. ಆಗ ಇದ್ದಕ್ಕಿದ್ದ ಹಾಗೆ Stageನ ಕೆಳಗಡೆಯಿಂದ ಮಾತು ಕೇಳಿಸೋದಕ್ಕೆ ಶುರು ಆಯ್ತು. ಮೊದಲೇ ಹೇಳಿದ್ದೆ ನಲ್ಲಾ—ಬೆಂಚುಗಳನ್ನ ಜೋಡಿಸಿದ್ದರು ಅಂತ, ಬೆಂಚುಗಳ ಮಧ್ಯ ಅಲ್ಲಲ್ಲಿ ಸ್ವಲ್ಪ ಜಾಗ ಬಿಟ್ಟಿತ್ತು. ಅದರ ಮೇಲೆ ಜಮಖಾನ ಹಾಸಿತ್ತು. ನಾನು ಹೇಳಬೇಕಾದ ಮಾತು ಕೆಳಗಡೆಯಿಂದ ಜೋರಾಗಿ ಕೇಳಿಸ್ತಾ ಇತ್ತು. ಯಾವುದಪ್ಪಾ ಇದು ಅಶರೀರವಾಣಿ ಅಂದ್ರೆ—ಧ್ವನಿ ನನ್ನ ಮಗಳದು. ಅಲ್ಲಿದ್ದ ಜಮಖಾನ ಅಲ್ಲಲ್ಲಿ ಏಳುತಾ ಇತ್ತು. ಸರಿ, ಗೊತ್ತಾಯ್ತು ವಿಚಾರ. ಅವಳಿಗೆ ಒಬ್ಬಳೇ Greenroom ನಲ್ಲಿ ಕೂತು ಬೇಜಾರಾಯ್ತು. Stage ಮೇಲೆ ಹೋಗಬಾರದೂ ಅನ್ನೋ ಸಮಯ ಪ್ರಜ್ಞೆಯಿಂದ ಆ ಬೆಂಚುಗಳ ಸಂದೀಲಿ, ಕತ್ತಲೇಲಿ ತೂರಿ ಇನ್ನೊಂದು ಕಡೆಗೆ ಹೋಗಬೇಕು ಅಂತ ಅವಳ ಪ್ರಯತ್ನ. ರಿಹರ್ಸಲ್ ಎಲ್ಲಾ ನೋಡಿ ನೋಡಿ ನನ್ನ ಮಾತುಗಳು ಬರ್ತಾ ಇತ್ತು ಅವಳಿಗೆ. ಅವಳ ಪಾಡಿಗೆ ಅವಳು ಮಾತುಗಳನ್ನು ಹೇಳ್ಕೊಂಡ್ತಾ ಬೆಂಚು ಜಾಗ ಬಿಟ್ಟಿದ್ದ ಕಡೆ ಎಲ್ಲಾ ನಿಂತ್ಕೊಂಡು ಅವಳ ಓಡಾಟ Stage ಕೆಳಗೆ, ಮೇಲೆ ನಾನು ನನ್ನ Linesನ ಸಹಜವಾಗಿ ಹೇಳೂದಿಕ್ಕೆ ಪ್ರಯತ್ನ. ಅವಳು ಮಧ್ಯೆ ಬೇಜಾರಾಗಿ 'ಅಮ್ಮ' ಅಂತ ಕೂಗಿ ಮಧ್ಯೆ ಜಮಖಾನ ಹರಿದಿರೋ ಕಡೆ ಹತ್ತಿ Stage ಮೇಲೆ ಬರ್ತಾಳೇನೋ ಅಂತ ಆತಂಕ ಒಂದು ಕಡೆ ಅಥವಾ ಹುಳು ಹುಪ್ಪಟೆ ಕಚ್ಚಿ ಅತ್ತು ರಂಪ ಮಾಡ್ತಾಳೇನೋ ಅಂತ ಯೋಚನೆ ಇನ್ನೊಂದು ಕಡೆ—ಇದರ ಮಧ್ಯೆ ಶಿವರಾಂ ಅವರು ಈ ಸನ್ನಿವೇಶನ Enjoy ಮಾಡ್ತಾ ಬರ್ತಾ ಇರೋ ನಗುವನ್ನು ಪ್ರಯತ್ನ ಪೂರ್ವಕವಾಗಿ ತಡೆ ತಡೆ ಹಿಡೀತಾ ಇದ್ದರೂ ಅಲ್ಲಿ ಇಲ್ಲಿ ತಪ್ಪಿಸಿಕೊಂಡು ಸುಳಿದಾಡೋ ನಗುವನ್ನು ನೋಡಿ ನನಗೂ ಉಕ್ಕಿ ಬರ್ತಾ ಇರೋ ನಗು—ಇವುಗಳ ಮಧ್ಯೆ ಆ ದೃಶ್ಯನ ಹೇಗೆ ಮುಗಿಸಿದ್ನೋ ಆ ದೇವರಿಗೇ ಗೊತ್ತು.

ಇನ್ನೊಂದು ಸಾರಿ—ಸಧ್ಯ ಈ ಸಲ ನಾನು ಒಬ್ಬ ಪ್ರೇಕ್ಷಕಳಾಗಿ ಹೋಗಿದ್ದೆ—ಗೆಳೆಯರು ಯಾವುದೋ ಪೌರಾಣಿಕ ನಾಟಕ ಆಡಿದರು. ಅದರಲ್ಲಿ ಒಬ್ಬರು ಆಂಜನೇಯನ ಪಾತ್ರಧಾರಿಗಳು ಬಂದರು. ಲಕ್ಷಣವಾಗಿ ಹಾಡಿದರು—ಪೀಠ ಕೈಯಲ್ಲಿ ಗದಾ ಹಿಡಿದು ಸನ್ನಿವೇಶವೂ ಗಂಭೀರವಾದ ಸನ್ನಿವೇಶ—ಹನುಮಂತ ಸಹಜವಾಗಿ ಹನುಮಂತರಾಯನ ತರಹಾನೇ ಆಡೋದಿಕ್ಕೆ ಶುರು. ಒಂದು ಕಡೆ ನಿಲ್ಲದೆ ಅತ್ತಲಾಗಿ ಇತ್ತಲಾಗಿ ಹಾರುತ್ತಾ ನಾಲಿಗೆ ಹೊರ ಚಾಚ್ತಾ ಕಾಡಿ ಕಾಪ್ಲುಲಿ ಮೋಜು ಕೂಡ್ತಾ ಆಡ್ತಾ ಇದ್ದರು. ಪಾಪ ಏನಾಗಿದೆಯೋ ಅವರಿಗೆ ವಿಚಾರಿಸೋಣ ಅಂತ Green room ಕಡೆ ಹೋದೆ. ಆ ದೃಶ್ಯ ಮುಗಿದ ಸ್ವಲ್ಪ ಹೊತ್ತಿಗೆ ಹನುಮಂತ ವೇಷಧಾರಿ Green ರೂಂಗೆ ನುಗ್ಗಿ ಹಾಕ್ಕೊಂಡು Costume ಅನ್ನೆಲ್ಲ ತೆಗೆದು ನೋಡ್ತಾರೆ—ಆ Costume ನಿಂದಾಗಿಗೆ ಬಂದ Green ರೂಂ ತುಂಬೋಷ್ಟು ದೊಡ್ಡ Size ನ ಇರುವೆಗಳ ಸೈನ್ಯ. ಕೆಲಸದಿಂದ ನೇರ ಬಂದವರೇ ನಾಟಕಕ್ಕೆ ಹೊತ್ತಾಯ್ತು ಅಂತ ಬಾಡಿಗೆಗೆ ತಂದಿದ್ದ ಹನುಮಂತನ Costume ಬೇಗ ಹಾಕ್ಕೊಂಡು Stage ಮೇಲೆ ಹೋದಾಗ—ಒಳಗೆ ಯಾವ ಕಾಲದಿಂದಲೋ ಆರಾಮಾಗಿ

ಕೂತಿದ್ದ ಕೊಂಡಂಗಿಗಳಿಗೆ ಸ್ವಲ್ಪ ದಿಗ್ಭ್ರಮೆ ಆಗಿ, ಅವು ಚೆಲ್ಲಾ ಪಿಲ್ಲಿಯಾಗಿ ಇವರ ಬೆನ್ನು ಕೈ ಕಾಲುಗಳ ಮೇಲೆ ಆಚೆಗೆ ಹೋಗೊದಿಕ್ಕೆ ದಾರಿ ಸಿಗದೆ ಇದ್ದದ್ದರಿಂದ (ಹನುಮಂತನ Costume ಹಾಗೆ ಬಹಳ ಬಿಗಿಯಾಗಿರುತ್ತೆ) –ಸಿಕ್ಕಾ ಪಟ್ಟೆ ಓಡಾಡಿದೆ-ಪಾಪ–ಅವರ ಓಡ್ದಾಟದ ಕಾರಣ ಗೊತ್ತಾಯ್ತು.

ಹೋದ ನವೆಂಬರ್ ತಿಂಗಳಲ್ಲಿ 'ಬಾಲ ಭವನದಲ್ಲಿ' ಸ್ಕೂಲ್ ಮಕ್ಕಳು 'ಅಲ್ಲಾಉದ್ದೀನ' ನಾಟಕ ಮಾಡಿದ್ದರು. ಅದರಲ್ಲಿ ನನ್ನ ಚಿಕ್ಕ ಮಗಳು (ನನಗೆ ಇಬ್ಬರು ಹೆಣ್ಣು ಮಕ್ಕಳು–ಇಬ್ಬರು ಗಂಡು ಮಕ್ಕಳು–ಎಲ್ಲರೂ ಪಾತ್ರ ವಹಿಸಿದ್ದರು ಈ ನಾಟಕದಲ್ಲಿ) ಸುಧಾ- 'ಕಾಡು' 'ಅಯ್ಯು' ಚಿತ್ರಗಳಲ್ಲಿ ಪಾರ್ಟು ಮಾಡಿದ್ದಾಳೆ. ಅವಳು ಒಬ್ಬಳು ಸಖಿ. ರಾಜಕುಮಾರಿ ಸಖಿ ಅಂದಮೇಲೆ ಒಂದು ಸಿಲ್ಕಿನ ಲಂಗ ಜೇಡವೆ. ನಾಲ್ಕುಜನ ಸಖಿಯರಿಗೂ ಒಂದೇ ತರಹದ ಲಂಗ ಬಾಡಿಗೆಗೆ ತಂದಿದ್ದರು. ಸ್ವಲ್ಪ ದೊಡ್ಡ Size ಉ ಪಾಪ. Green room ನಲ್ಲಿ ಮಕ್ಕಳಿಗೆಲ್ಲಾ ಬಟ್ಟೆ ಉಡಿಸಿ ನಾಟಕ ಹೇಗೆ ಬರ್‍ತಾ ಇದೆ ನೋಡೋಣ ಅಂಲ್ಲ ಆಡಿಟೋರಿಯಂಗೆ ಬಂದೆ. ರಾಜಕುಮಾರಿ-ಸಖಿಯರು ಬಂದರು. ನೃತ್ಯ ಪ್ರಾರಭವಾಯ್ತು. ನಮ್ಮ ಸುಧಾ ವಿಚಿತ್ರವಾಗಿ Dance ಮಾಡ್ತಾ ಇದ್ದಳು. ಮೊಣ ಕೈನಿಂದ ಮೇಲೆ ಕೈ ಅಲ್ಲಾಡಿಸ್ತಾನೆ ಇಲ್ಲಾ– ಸೊಂಟದ ಹತ್ತಿರ ಬಲವಾಗಿ ಮೊಣಕೈ ಊರಿಕೊಂಡು ತನ್ನದೆ ಒಂದು ಪ್ರತ್ಯೇಕ ರೀತಿಯ ನೃತ್ಯ ಮಾಡ್ತಾ ಇದ್ದಳು. ನಾನು ರಿಹರ್ಸಲ್ ನೋಡಿದ್ದೆ. ಚೆನ್ನಾಗಿ ಮಾಡ್ತಾ ಇದ್ಧಳು. —ಈವತ್ತು ಯಾಕೆ ಹೀಗೆ ಅಂತ ಯೋಚಿಸಿದೆ. ಆ ದೃಶ್ಯ ಮುಗಿದ ಮೇಲೆ ಹೋಗಿ ನೋಡಿದರೆ ಗೊತ್ತಾಯ್ತು. Stage ಪ್ರವೇಶಿದ ಎರಡು ನಿಮಿಷದಲ್ಲೋ ಲಂಗದ ಲಾಡಿ ಕಿತ್ತುಕೊಂಟು ಬಿಟ್ಟದೆ. ಇಡೀ ದೃಶ್ಯನ ಹೇಗೋ ನಾಜೋಕಾಗಿ ನಿಭಾಯಿಸಿದಳು ಪಾಪ.—ಹೇಗೇ ನಾಟಕದಲ್ಲಿ ನಮ್ಮನ್ನೇ ಸಂತೋಷ–ನಗು–ಪೇಚಿಗೆ ಸಿಕ್ಕಿಸುವ ಸನ್ನಿವೇಶಗಳು ಅ ನೇ ಕ. ಇನೊಂದ್ಸಲ National College ನಲ್ಲಿ ಪರ್ವತವಾಣಿಯವರ 'ವಾರ್ಷಿಕೋತ್ಸವ' —ಎಲ್ಲಾ ಮನೆಯವರೇ ಇದ್ವಿವಿ ನಾಟದಲ್ಲಿ—ನಾನು ಪಾರ್ವತಮ್ಮ—ಸನುತ್ತಿಗೆ ಲೀಲಾ-ರತ್ನ-ಸೀತಾರಾಂ (ಉಪಾಸನೆಯ ಖ್ಯಾತಿ) ವಿಕ್ರಮ್, ನಮ್ಮಣ್ಣ ಚಿ ಂ ತಾ ಮ ಣಿ— ಸರದಾರಜೀ ಪಾತ್ರ. ರಂಗಣ್ಣನ ಪಾತ್ರ ನಮ್ಮ ಯಜಮಾನರು. (Make-up ನಾಣಿ ಅಂತ ನಾಟಕ ರಂಗಕ್ಕೆ ಪರಿಚಿತರಾದವರು) ಮಾಡಿದ್ದರು. ನಾಟಕ ಚೆನ್ನಾಗಿ ಬಂತು. ಮುಗಿಯೋಕೆ ಬಂದಿತ್ತು. ಆಗ ಇದ್ದಕ್ಕಿದ್ದ ಹಾಗೆ ಕರಡಿ ಹಾಗೆ ಅಲಂಕಾರಮಾಡಿಕೊಂಡಿದ್ದ ಒಂದು ಮನುಷ್ಯ— "ಅತ್ತೆ, ಅತ್ತೆ, ನಂಗೆ ಕೆಲಸ ಕೊಡಿಸಿ" ಅಂತ ನನ್ನ ಕಡೆಗೆ ನುಗ್ಗಿತು. ಗಾಬರಿಯಾಗಿ ನಾವೆಲ್ಲಾ ದೂರ ಸರಿದಾಗ— ಮೇಜಿನ ಮೇಲೆ ಹತ್ತಿ ನಿಂತ್ಕೊಂಡು—ಈ ಮನುಷ್ಯ ಒಂದು ಭಯಂಕರ ನೃತ್ಯ ಶುರು ಮಾಡಿದರು. ಯಾವುದಪ್ಪಾ ಈ ಪಾತ್ರ ನಾನು ನೋಡೆ ಇಲ್ಲಾ' ಅಂತ ಮೊದಲು ಕಕ್ಕಾ ಬಿಕ್ಕಿಯಾದರೂ-ಆ ಅಲಂಕಾರ ವೇಷ ಭೂಷಣ, ನೃತ್ಯ ನೋಡಿ ಹುಚ್ಚು ನಗು ಬಂದು, ಇದ್ದ ಒಂದೋ ಎರಡೋ ಮಾತುಗಳನ್ನೂ ಹೇಳೋಕೆ ಆಗಲಿಲ್ಲಾ-ಎಲ್ಲರಿಗೂ ಈ ರೀತಿ ಸಂದಿಗ್ದ ಪರಿಸ್ಥಿತಿ ತಂದಿಟ್ಟವರು ಇನ್ನೂ ಯಾರೂ ಅಲ್ಲಾ—ಕಾ ನ ಕಾ ನ ಹ ಳ್ಳಿ ಗೋಪಿನಾಥ—ಗ್ರೀನ್ ರೂಂಗೆ ಹೋದ್ರಂತೆ—ಅಲ್ಲಿ ಯಾರೋ fancy drees ಗೆ ಅಂತ ತಂದಿಟ್ಟಿದ ವೇಷ ನೋಡಿದ್ರಂತೆ—ಹಾಕ್ಕೊಂಡ್ರು- Stage ಗೆ ಬಂದು ದೇವರ ದಯದಿಂದ ನಾಟಕ ಮುಕ್ತಾಯ ಘಟ್ಟಕ್ಕೆ ಬಂದಿತು.

ಹೀಗೇ ಹಲವಾರು ಅನುಭವಗಳು, ಸನ್ನಿವೇಶಗಳು ಇವೆ. ಹೇಳುತ್ತಾ ಹೋದರೆ ಈ ರಂಗದ ಇಪ್ಪತ್ತಾರು ಇಪ್ಪತ್ತೇಳು ವರ್ಷಗಳ ನಿಕಟ ಪರಿಚಯದಿಂದ ನನಗೆ ಅನಿಸೋದು ಇಷ್ಟೆ. Stage ನಮಗಂತೂ ಬಹಳ ಸಂತೋಷ ಕೊಟ್ಟಿದೆ– ಆದರೆ ಅದಕ್ಕೆ ಪ್ರತಿಯಾಗಿ ನಮ್ಮಿಂದ ಇದಕ್ಕೆ ಯತ್ಕಂಚಿತ್ ಸೇವೆ ನಡೆದಿದ್ದರೆ ಅದು ನನ್ನ ಸೌಭಾಗ್ಯ.

---



ಅವಳು ಚಪ್ಪಲಿ ಹಾಕಿಕೊಳ್ಳುತ್ತಿರುವುದನ್ನು ಕಂಡು ಹೊರಗೆ ಹೊರಟಳು ಎಂದು ಅವನಿಗೆ ಗೊತ್ತಾಯಿತು. ಆದರೆ ಕೇಳಲಿಲ್ಲ. ಅವಳು ಹೇಳಿ ಹೋಗುವ ಅಭ್ಯಾಸ ತಪ್ಪಿಸಿ ಎಷ್ಟೋ ದಿನಗಳಾಗಿವೆ. ಉದಾಸೀನವಾಗಿ ಪೇಪರ್ ಬಿಚ್ಚಿದ, ಚಪ್ಪಲಿಯ 'ಚರಕ್ ಚರಕ್' ಗೇಟು ತೆರೆದ ಮೇಲೆ ಎರಡು ಹೆಜ್ಜೆ ಕೇಳಿಸಿತು. ಅವಳು ವ್ಯಾನಿಟಿ ಬ್ಯಾಗನ್ನು ಕೈಯಲ್ಲಿ ತೂಗಾಡಿಸುತ್ತಾ ಅವಸರವಾಗಿ ಮುಂದೆ ಹೆಜ್ಜೆ ಇಡುತ್ತಿದ್ದವಳು ಒಂದು ಗಳಿಗೆ ತಡೆದು ನಿಂತಳು. "ತನಗ್ಯಾಕಿಷ್ಟು ಆತುರ, ಈಗಲೇ ಅರ್ಜೆಂಟಾಗಿ ಹೋಗಲೇಬೇಕಾದ ಜಾಗ ತಾನೇ ಯಾವುದು ? ತಲುಪಬೇಕಾದ ಗುರಿ? "ಏನೂ ಹೊಳೆಯಲಿಲ್ಲ. ಇದ್ದರಲ್ಲವೇ ಹೊಳೆಯುವುದು ! ಅವಳು ಮನೆ ಬಿಡುವಾಗ ಇಂಥ ಕಡೆ ಹೋಗಬೇಕೂ ಎಂದೇನೂ' ಹೊರಟಿರಲಿಲ್ಲ. ಅವನು ಎರಡನೇ ಶನಿವಾರ ಎಂದು ಮನೆಯಲ್ಲಿದ್ದ. ಮನೆಯ ಯಾವುದೋ ಒಂದು ರೂಮಿನಲ್ಲಿ ಅವನು ಪೇಪರ್ ಓದುತ್ತಲೋ, ಬೇರೇನೋ ಕೆಲಸ ಮಾಡುತ್ತಲೋ ಇರಬಹುದು. ಆದರೆ ಅವಳಿಗೇಕೊ ಮುಜುಗರ. ಅವನ ಕಣ್ಣು ಮುಂದೆ ತನ್ನ ದೇಹವನ್ನು ಆಚೀಚೆ ಓಡಾಡಿಸುವುದಕ್ಕೆ ಓಕರಿಕೆ. ಭಾನುವಾರ ಒಂದು ಬಿಟ್ಟು ಉಳಿದ ಆರು ದಿನಗಳೇ ಅವಳಿಗೆ ಹೆಚ್ಚು ಇಷ್ಟ. ಭಾನುವಾರ ಯಾಕಾದರೂ ಬರುತ್ತದೋ ಎಂದು ಬೈದುಕೊಳ್ಳುತ್ತಾಳೆ. ಬೇಗ ಎದ್ದು ಕಾಫಿ, ತಿಂಡಿ, ಅಡಿಗೆ ಮಾಡಿ ಮುಚ್ಚಿಟ್ಟು ಇಂಥ ಕಡೆ ಹೋಗ್ತೀನಿ ಎಂದು ಸಹ ಹೇಳದೆ ಮನೆಯಿಂದ ಒಂದು ಫರ್ಲಾಂಗ್ ದೂರದಲ್ಲಿರುವ ಬಸ್‌ಸ್ಟಾಪಿಗೆ ಬರುತ್ತಾಳೆ. ಅಲ್ಲಿಂದ ಹಳೆಯ ಗೆಳತಿಯರನ್ನು ಹುಡುಕಿಕೊಂಡೋ ಅಥವಾ ತಾಯಿಯ ಮನೆಗೊ ನಡೆಯುತ್ತಾಳೆ. ಅವಳು ಹೇಳದೇ ಇದ್ದರೂ ಅವಳು ಪ್ರತಿ ಭಾನುವಾರ ಎಲ್ಲಿ ಹೋಗುತ್ತಾಳೆ ಎಂದು ಅವನಿಗೆ ಗೊತ್ತು. ಪ್ರತಿ ವಾರವೂ ತಪ್ಪದೇ ಹಾಜರಾಗುವ ಮಗಳನ್ನು ಕಂಡರೆ ಅವಳ ತಾಯಿಗೆ ಸಿಡಿ-ಮಿಡಿ. ಬುದ್ಧಿ ಹೇಳುತ್ತಾರೆ. ಮನೆಗೆ ವಾಪಸ್ಸು ಬಿಟ್ಟು ಬರಲು ಪ್ರಯತ್ನಿಸುತ್ತಾರೆ, ಕಡೆಗೆ ಮೊಂಡಾಗಿ ಕುಳಿತ ಅವಳನ್ನು ಏನೂ ಮಾಡಲಾಗದೆ ಬಯ್ಯುತ್ತಾರೆ, ಗದರಿಸುತ್ತಾರೆ. ಅವಳು ಯಾವುದನ್ನೂ ಲೆಕ್ಕಿಸದೆ ಆಕೆಗೆ ಕೋಪ ಉಕ್ಕುವಂತೆ ಜೋರಾಗಿ ನಕ್ಕು



—ವೈ. ಕೆ. ಸಂಧ್ಯಾ

"ಹೋಗಮ್ಮ ನಿಂಗೊಂದು ಹುಚ್ಚು" ಎಂದು ಜಡೆಯ ತುದಿಯನ್ನು ಎದೆಯ ಮೇಲಿಂದ ಬೆನ್ನಿಗೆ ರಭಸವಾಗಿ ಎಸೆದು ತಂಗಿಯರ ಕೋಣೆಗೆ ನುಗ್ಗುತ್ತಾಳೆ. ಅವರಿಗೂ ಅಕ್ಕನ ವಿಚಿತ್ರ ನಡತೆಯೇ ಒಂದು ದೊಡ್ಡ ಆಶ್ಚರ್ಯ! ಒಂದೊಂದು ವಾರ ದಿನವೆಲ್ಲಾ ನಗುತ್ತ ತುಂಬ ಆಸಕ್ತಿಯಿಂದ ಸಿಂಗರಿಸಿಕೊಂಡು ಅವರೊಡನೆ ಹೆಚ್ಚು ಮನರಂಜಕವಾಗಿರುವ ಸಿನೀಮಗಳನ್ನೇ ಆರಿಸಿಕೊಂಡುಹೊರಡುತ್ತಾಳೆ. ಕತ್ತಲೆಯಲ್ಲಿ ಕಳೆದ ಮೂರು ಗಂಟೆಗಳೂ ಖುಷಿಯಾಗಿ ಮಾತು ಮಾತಿಗೂ ನಕ್ಕು, ನಗಿಸಿ ತಂಗಿಯ ಬೆನ್ನನ್ನು ಆಗಾಗ ಗುದ್ದುತ್ತಲೇ ಇರುತ್ತಾಳೆ. ಬರುವಾಗ ಹೋಟೆಲ್‌ನಲ್ಲೂ ಅನೇಕ ಜೋಕುಗಳನ್ನು ಹಾರಿಸುತ್ತಾಳೆ. ಮೈಯಿನ ಸಂದಿ ಸಂದಿಗಳಲ್ಲೂ ಸಂತೋಷ ತುಳುಕಿಸುತ್ತಾಳೆ. ತಂಗಿಯರ ಮನಸ್ಸಿಗೂ ಅಕ್ಕನ ಮುದ್ದು ಮುಖದ ನಗು ಇನ್ನಷ್ಟು ಕೇಳಬೇಕು, ನೋಡಬೇಕು ಎನಿಸುತ್ತದೆ. ಸಂತಸದ ಮುದ್ದೆಗಳಾಗುತ್ತಾರೆ. ಇನ್ನು ಕೆಲವು ವಾರಗಳಲ್ಲಿ ಅವಳು ಬಂದ ತತ್‌ಕ್ಷಣ ಯಾರನ್ನೂ ಮಾತನಾಡಿಸದೇ ಮುಸುಕಿನ ಸುರುಳಿಯಾಗಿ ಮಂಚದ ಮೇಲೆ ಬಿದ್ದುಕೊಂಡು ಬಿಡುತ್ತಾಳೆ. ಊಟದ ಹೊತ್ತಾದರೂ ಹೇಳುವುದಿಲ್ಲ, ಯಾರು ಮಾತಾಡಿಸಿದರೂ ಉತ್ತರ ಕೊಡಬೇಕೆನಿಸುವುದಿಲ್ಲ. ಉಂಡೆಯಾಗಿ ಮೊಣಕಾಲಿಗೆ ತಲೆಯನ್ನು ಪೋಣಿಸುತ್ತ ಮಲಗಿರುತ್ತಾಳೆ. ಅವಳನ್ನು ಎಬ್ಬಿಸಿ ಹೊರಗೆ ಕರೆದೊಯ್ಯುವ ಧೈರ್ಯ ಯಾರಿಗೂ ಆಗ ಇರುವುದಿಲ್ಲ. ದಿನವಿಡೀ ಹಾಗೇ ಅವಳು ಬಟ್ಟ ಗಾಳಿಯನ್ನೇ ಸೇವಿಸುತ್ತ, ತಲೆಯನ್ನು ಕಾಯಿಸುತ್ತ ಮೈಯಲ್ಲಿ ಹಬೆಗೂಡಿಸುತ್ತ ಬಿಸಿ ಬಿಸಿಯಾಗುತ್ತಾಳೆ. ಅವಳ ಪರಿಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ ತಾಯಿ ತಂಗಿಯರಿಗೆ ಗೂಡು ಗೂಡುಗಳಾಗುತ್ತಾಳೆ.

ಬಿರುಸಾಗಿ ನಡೆಯುತ್ತಿದ್ದ ಅವಳು ತನ್ನ ಆತರಕ್ಕೆ ಕಾರಣವಿಲ್ಲವೆಂದು ವೇಗ ಕಡಮೆ ಮಾಡಿದಾಗ ಮೊಣಕಾಲಿನ ಹಿಂಬಾಗದಲ್ಲಿ ನರಗಳ ನೋವು ಮೇಲೆದ್ದಿತು. ಅದನ್ನು ಗಮನಿಸದೆ ಮೆಲ್ಲಗೆ ಸಾಗಿದಳು. ಅವನು ಮನೆ ಬೀಗ ಹಾಕಿಕೊಂಡು ಎಲ್ಲಾದರೂ ಹೋದರೆ ಅವಳು ಬೀಗದ ಮುಂದೇನೇ ನಿಂತು ಕಾಯುತ್ತಿರಬೇಕಿಲ್ಲ. ಅವಳ ಬಳಿ ಅದರ ಡೂಪ್ಲಿಕೇಟ್ ಕೀ ಇದೆ. ರಾತ್ರಿ ತಾಯಿಯ ಮನೆಯಲ್ಲಿ ಉಂಡೇ ಬಂದರಾದೀತು. ಆದರೆ ಅವಳ ತಾಯಿ ಅಲ್ಲಿ ಅಡಿಗೆ ಮಾಡಿಡಲು ಕತ್ತಲಾಗುವುದರಲ್ಲಿ ಅವಳ ಮನೆಗೆ ಅಟ್ಟಿ ಬಿಡುತ್ತಾರೆ. ದೂರದಲ್ಲಿ ಬಸ್ಸಿನ ಮೂತಿ ಕಾಣಿಸಿತು. ಅವಳು ಹೆಜ್ಜೆಯನ್ನು ದೊಡ್ಡದು ಮಾಡಿದಳು. ಬಸ್ಸಿಗೂ ಅವಳಿಗೂ ಇನ್ನೇನು ಸ್ವಲ್ಪ ದೂರವೇ ಇರೋದು ಅನ್ನುವುದರಲ್ಲಿ ಎರಡರ ನಡುವೆ ದೊಡ್ಡ ಮಣ್ಣಿನ ಗುಡ್ಡ, ಮೂತಿ ತೋರಿಸಿದ ಬಸ್ಸು ಬಾಲ ಮುಸುರಿಕೊಂಡು ಹಿಂತಿರುಗುವ ನಾಯಿಯಂತೆ ಸರಕ್ಕನೆ ಮೂತಿಯನ್ನು ಪಕ್ಕಕ್ಕೆ ತಿರುಗಿತು. ಬಸ್ಸಿಗಾಗಿ ದಿಣ್ಣೆಯ ಸೊಂಟದವರೆಗೂ ಏರಿದವಳು ಮುಂದೆ ಅಡ್ಡಕ್ಕಿಟ್ಟಿದ್ದ ಪುಟ್ಟ ಗುಹೆಯಂತಿದ್ದ ಪೈಪ್‌ಗಳಿಂದ ಹಿಂದೆ ಬಂದಳು. ಪಕ್ಕದ ರಸ್ತೆಯಲ್ಲೂ ರೋಡ್ ರೀಪೇರಿಗಾಗಿ ಉದ್ದಕ್ಕೆ ಅಗದಿದ್ದರು. ಸ್ವಲ್ಪ ಹಳ್ಳ ದಿಣ್ಣೆಯಾಗಿದ್ದ ಅಲ್ಲಲ್ಲಿ ಕಜ್ಜಿ ಬಂದಂತೆ ಜಲ್ಲಿ ಕಿತ್ತು ಹೋಗಿದ್ದ, ರಸ್ತೆ ಕಿರಿದಾಗಿದ್ದ, ತೆಳುವಾಗಿದ್ದ ಜಾಗಗಳನ್ನೆಲ್ಲ ಅಗೆದು ಸಮವಾದ, ವಾಹನಗಳು ಸಲೀಸಾಗಿ ಚಲಿಸಬಲ್ಲ ಹೊಸ ರಸ್ತೆಗಳನ್ನು ಮಾಡಲು ಸರ್ಕಾರದವರು ಅಗೆಸಿ ಹಾಕಿದ್ದಾರೆ. ಬಸ್ಸು ತಪ್ಪಿದ್ದಕ್ಕೆ, ಮತ್ತೆ ಬಳಸಿ ನಡೆಯಬೇಕಾದ್ದಕ್ಕೆ ಗೊಣಗುಟ್ಟಿಕೊಂಡು ಅವಳು ಮೈ ಎಳೆದಳು.

ಈ ಹಾಳು ಸರ್ಕಾರಕ್ಕೆ ಮಾಡಕ್ಕೆ ಬೇರೆ ಕೆಲಸವೇ ಇಲ್ಲವೇನೋ? ಕೆಟ್ಟು ಹೋದ ರಸ್ತೆಗಳನ್ನೇ ನೋ ರಿಪೇರಿ ಮಾಡೋದು ಸರಿ. ಸುಮಾರಾಗಿದ್ದ ರಸ್ತೆಗಳನ್ನೂ ಅಗೆದು ಹಾಕಿ ಬಿಟ್ಟಿದ್ದಾರೆ, ಅಗೆದಷ್ಟೇ ಬೇಗ ತುಂಬಿಸಿದರೆ ಸರಿ. ತಿಂಗಳುಗಟ್ಟಲೆ ಅದರ ವಿಷಯಾನೇ ಮರೆತು ಬೇರೆ ರಸ್ತೆಗಳನ್ನೂ ತೂತು ಮಾಡಿ ಮುಂದಿನ ರಸ್ತೆಗೆ ದೃಷ್ಟಿ. ಒಂದು ಕಡೆಯಿಂದ ಇದು ಮುಗಿದರೆ ಮತ್ತೆ ನೀರಿನವರು, ವಿದ್ಯುಚ್ಛಕ್ತಿಯವರು ಇನ್ನು ಯಾರ್‍ಯಾರೋ ಸಂಬಂಧಪಟ್ಟವರು, ಪಡದವರೂ ಎಲ್ಲರೂ ಒಂದೊಂದು ಗುದ್ದಲಿ ಪೆಟ್ಟು. ಫುಟ್‌ಪಾತಿನ ಅಂಚಿಗೆ ಒಂದು ಸೀರೆಗೆ ಟಾರು, ಮಣ್ಣು ಮೆತ್ತೀತೆಂದು ಸೀರೆಯ ಅಂಚನ್ನು ಮೇಲಕ್ಕೆ ಎತ್ತಿ ಹಿಡಿಯುತ್ತ ಪಕ್ಕದ ಚರಂಡಿಗೆ ಜಾರದಂತೆ ಎಚ್ಚರಿಕೆ ವಹಿಸುತ್ತ ತುದಿಗಾಲಲ್ಲಿ ನಡೆಯುತ್ತಿದ್ದಳು. ಆದರೂ ತಲೆ ಟಾರಿನ ಡ್ರಮ್ಮಿನೊಳಗೆ ಅದ್ದಿದಂತಾಯಿತು. ಪಕ್ಕದಲ್ಲಿ ಜಲ್ಲಿ ರಾಶಿ, ಸೊಟ್ಟಗೆ ಹರಿದ ಕೊರಕಲನ್ನು ಕಂಡಾಗ ಅನಿಸುತ್ತದೆ. ಟಾರಿನಲ್ಲಿ ಕಲೆಸಿದ ಜಲ್ಲಿ ಹಾಕಿ ಯಾವಾಗ ದಂಬಸ್ ಮಾಡುವರೋ? ಸಮ ಮಾಡುತ್ತೇವೆ ಎಂಬ ಭ್ರಮೆ ಅವರಿಗೆ. ಅಷ್ಟು

ಅವಲಕ್ಷಣವಾಗಿರದ ನೆಲದ ಒಡಲನ್ನು ಚೂರು ಚೂರಾಗಿ ಕಿತ್ತು ಹಾಕಿದ್ದಾರೆ ಎಂದುಕೊಂಡಳು, ನೆನಪು ಕಡಿಯುತ್ತದೆ, ತುರಿಸಿಕೊಳ್ಳುತ್ತಾಳೆ. ಅಷ್ಟು ಸಾಪಾಗಿ ನೇರವಾಗಿಲ್ಲದ ನನ್ನ ಬಾಳನ್ನು (ಹಾಗೆಂದು ಅಮ್ಮನ ಭಾವನೆ) ತಿದ್ದುತ್ತೇನೆಂದು ಅಮ್ಮ ಹೊರಟಿದ್ದ ಭ್ರಮೆಯಲ್ಲವೇ? ಗಟ್ಟಿ ಮಾಡುತ್ತೇನೆಂದು ಅವಳು ಭಾವಿಸಿರಬಹುದು. ಆದರೆ ಟೊಳ್ಳಾಗಿದ್ದರಲ್ಲವೇ ಬಲಗೊಳಿಸುವುದು, ಗೆದ್ದಲು ಹತ್ತಿ ನುಸಿಯಾಗಿದ್ದರೆ? ಹೊಸದನ್ನೇ ಕಟ್ಟಿಕೊಡುತ್ತೇನೆಂಬ ಸಾಹಸವೋ? ಏನೋ ಒಂದು ಎಲ್ಲ ಸುಭದ್ರವಾಗಿ ಸುಖವಾಗಿರಬೇಕೆಂದು ಅಮ್ಮ ಪದೇ ಪದೇ ಹೇಳುತ್ತಲೇ ಇರುತ್ತಾಳೆ.

ಹಳೆಯದನ್ನು ನೆನಸಿಕೊಳ್ಳಲು ಅವಳಿಗೆ ಆಸೆ, ಆಸಕ್ತಿ ಇರಲಿಲ್ಲ. ಸಣ್ಣ ವಯಸ್ಸಿನಲ್ಲೇ ಮುಂದೆ ಹೀಗಿರಬೇಕು ಇದೇ ದಾರಿಯಲ್ಲಿ ನಡೆದು ಈ ಗುರಿ ಸಾಧಿಸಬೇಕು ಇತ್ಯಾದಿ ಇತ್ಯಾದಿಗಳನ್ನು ಕಂಡರೆ, ಕೇಳಿದರೆ ಪಿಚಕಾರಿಯಂತೆ ನಗು ಧುಮುಕಿಸುತ್ತಾಳೆ. ಸ್ವಲ್ಪ ಹೊತ್ತಾದ ಮೇಲೆ 'I don't like it. ಅದರಲ್ಲೇನು ಲೈಫ್ ಇರುತ್ತೆ. ಮೊದ್ಲೇ ಗೊತ್ತಾದ ಅಚ್ಚಿನಲ್ಲಿ ಬದುಕನ್ನು ಹೊಯ್ದು ಬಿಟ್ಟರೆ ಒಂದೇ ರೀತಿ, ಒಂದೇ ಪಾತ್ರದಲ್ಲಿ ಹರಿದರೆ ಅದರಲ್ಲೇನೂ ಮಜ ಇರಲ್ಲ ಥ್ರಿಲ್ಲಿಂಗ್ಸೆಲ್ಲ ಸಿಕ್ಕಾಪಟ್ಟೆ, ದಿಕ್ಕು ದಿಕ್ಕಿಗೂ ಮನಸ್ಸು ಬಂದ ಹಾಗೆ ಅದು ಎಳೆದುಕೊಂಡು, ಕೊರೆದುಕೊಂಡು, ಸೆಳೆದ್ಹಾಗೆ ಹೋದರೆ ಅದರ ಗಮ್ಮತ್ತು, ಖುಷಿ ಅಂತ ಗಂಭೀರವಾಗೇ ನುಡಿಯುತ್ತಾಳೆ. ನಾನಂತೂ ಲಗಾಮು ಕೈಯಲ್ಲಿ ಹಿಡಿದು ಸವಾರಿ ಮಾಡಲ್ಲ. ಅದನ್ನ ಬಿಸಾಕಿ ಕೈ ಎರಡು ಸಡಿಲವಾಗಿ ಬಿಟ್ಟು ಆರಾಮವಾಗಿ ಕೂತ್ಕೋತ್ತಿನಿ. ಅದೇ ಇಷ್ಟ ಬಂದ ದಾರಿಗೆ ನಡೀಲಿ. ಅದು ಹೋದಂತೆ ನಾನು. ನಾನು ಅದರ ವಶವೇ ಹೊರತು ನನ್ನ ವಶ ಅದಲ್ಲ ಅಂತಾಳೆ ಹಾಗೇ ಅವಳು ಇದ್ದಳು ಕೂಡ. ಅಂದರೆ ಅವಳು ಕೇವಲ ಸಡಿಲ ಜೀವನದಲ್ಲಿ ತೇಲಾಡುತ್ತಿದ್ದವಳು ಅಂತಲ್ಲ. ಭಾವನೆಗಳ ಉಗ್ರಾಣವೇ ಅವಳೆದೆಯಲ್ಲಿ ಒಂದು ಕಡೆ ಕುಳಿತಿದ್ದರೂ ಅದಕ್ಕೆ ವಶವಾಗಿ ಕಲ್ಪನೆಯಲ್ಲಿ ಹೊರಳಿ ಹೂವಿನಿಂದ ಮುಳ್ಳಿಗೆ ಹಾರಿ ಅಂಗಾಲನ್ನು ರಕ್ತ ಮಾಡಿಕೊಳ್ಳಬೇಕಾಗುತ್ತೆ ಎಂದೇನೂ ಅವಳು ತಿಳಿಯದೇ ಇರಲಿಲ್ಲ. ಅದಕ್ಕೇ ಒಂದು ಪ್ರತ್ಯೇಕ ಕೋಣೆ. ಅದಕ್ಕೆ ಮನಬಂದಂತೆ ಹಾರಾಡಲು ಮಾತ್ರ ಸೀಮಿತ ಆವರಣ, ಪರಿಸರ. ಹೃದಯದ ಗೋಡೆಗಳಿಗೆ ಕುಣಿಯುತ್ತ ಡಿಕ್ಕಿಕೊಡುತ್ತ ಹೊರ ಬರುವ ಕದವನ್ನು ತಡವರಿಸುತ್ತ ದೆವ್ವದಂತೆ ಕುಣಿಯಬೇಕಷ್ಟೆ. ಒಮ್ಮೊಮ್ಮೆ ಅವಳೂ ಸೋಲುವುದುಂಟು ಕಿಂಡಿಯನ್ನು ಕೆಲಗಳಿಗೆ ಸರಿಸಿ ರಪ್ಪನೆ ಮುಚ್ಚಿಬಿಡುತ್ತಾಳೆ. ಕೆಲವು ಅರ್ಧ ಹೊರಬಂದ ಭಾವನೆಗಳು ಚಟ್ಟನೆ ಅಪ್ಪಚ್ಚಿಯಾಗಿ, ಹೋಳಾಗಿ ಜೋಗುತ್ತವೆ. ರಕ್ತವನ್ನು ಕಾರುತ್ತವೆ. ಆದರೆ ಅವಳು ಕಾಲೇಜಿನಲ್ಲಿ ಓದುತ್ತಿದ್ದಾಗ ಹೀಗೆ ಎಷ್ಟೋ ಬಾರಿ ಆಟವಾಡಿದ್ದುಂಟು. ಕೆಲವು ವೇಳೆ ಮೋಜೆನಿಸುತ್ತಿತ್ತು. ಅವಳು ಆಡಿಸಿದಂತೆ ಅವೂ ಕೂಡ ಅವಳನ್ನು ಎಷ್ಟೋ ಸಲ ಆಡಿಸಿವೆ. ಕೆಲವು ಬಾರಿ ಗಾಳಿಯ ಅಪ್ಪಳಿಸುವಿಕೆಗೋ, ಅಗಳಿ ಕಳಚಿದ್ದರಿಂದಲೋ ಬಾಗಿಲನ್ನು ಹಾರು ಹೊಡೆದು ಅವು ಹೊರಗೆ ಪ್ರತ್ಯಕ್ಷವಾಗಿ ಅನೇಕ ಬಯಲಾಟಗಳನ್ನಾಡಿ ಅವಳನ್ನು ನೋಯಿಸಿ ಕಡೆಗೆ ಒಳಸೇರಿವೆ.

ಗೆಳತಿಯರ ಮಧ್ಯೆ ಕುಳಿತಾಗ ಮಾತು ಏಳುತ್ತಿತ್ತು. ಅವರಿವರು ತಮಗೆ ಮದುವೆ ನಿಶ್ಚಯವಾದ ಬಗ್ಗೆ, ಇನ್ನು ಕೆಲವರು ತಮ್ಮ ಪ್ರಣಯ - ಪ್ರಣಯಗಳ ಬಗ್ಗೆ ಅಂಥದೇ ಸಮಾಚಾರದ ಬಗ್ಗೆ ಹೇಳಿದಾಗಲಂತೂ ಅವಳು ಹೆಣದಂತೆ ಸ್ವಲ್ಪ ಹೊತ್ತು ಕುಕ್ಕರಿಸುತ್ತಿದ್ದಳು. ಐದು ನಿಮಿಷದ ಬಳಿಕ ಅಂಥ ಸುಂದರ ಗಳಿಗೆ ಪಡೆಯುವಂತೆ ಮಾಡದ ತನ್ನ ಬಳಕು ಬಿನ್ನಾಣವಿಲ್ಲದ ಬಿಗಿ ವ್ಯಕ್ತಿತ್ವದ ಬಗ್ಗೆ ಕೋಪ. ತಾನೆಂದೂ ಅನುಭವಿಸದ ಅವರ ಸಂತೋಷ ಕಂಡ ಅಸೂಯೆ. ತನಗ್ಯಾಕೆ ಇಂಥ ಘಟನೆಗಳೇ ಒದಗಿಲ್ಲ ಎಂಬ ಮರುಕ ಅವಳನ್ನು ರುಬ್ಬುತ್ತದೆ. ನಿಜ ಹೇಳುವುದಾದರೆ ಅವಳಿಗೆ ಅಂಥ ನಿಮಿಷಗಳೇ ಎದುರಾಗಿಲ್ಲ ಎಂದು ಅವಳು ಹೇಳಿದರೆ ಅದು ಶುದ್ಧ ಸುಳ್ಳು. ಅವಳ ಸುತ್ತುವರಿದ ಹುಡುಗರಿಗೆ ಸಲುಗೆ ಕೊಟ್ಟಿದ್ದರೆ ಆ ರೀತಿ ಘಟನೆಗಳು ಅವಳಿಗೇನೂ ಸಂಭವಿಸದೆ ಇರುತ್ತಿರಲಿಲ್ಲ. ತನಗೇಕೆ ಆ ಸುಖ ಇಲ್ಲ ಎಂದು ಮರಗುವುದಕ್ಕೆ ತಾನೇ ಅವಕಾಶ ಕೊಟ್ಟಿಲ್ಲ, ತಾನೇ ಕಾರಣ ಎಂದು ಅವಳಿಗೆ ಗೊತ್ತಿಲ್ಲ. ಅವಳೇನು ಕಟ್ಟಿಗೆ ಬೊಂಬೆಯಲ್ಲ. ನೋಡುವವರು ಮತ್ತೊಮ್ಮೆ ಕಣ್ಣನ್ನು ಹೊರಳಿಸುವಂಥ ಮುದ್ದಾದ ಮುಖ. ಎಷ್ಟೋ ಜನ ಅವಳ ಸ್ನೇಹ ಬಯಸಿ ಬಂದದ್ದೂ ಉಂಟು. ನಿಮ್ಮನ್ನು ಪ್ರೀತಿಸುತ್ತೇನೆ ಎಂದದ್ದೂ ಉಂಟು. ಆಗ ಅವಳಿಗೆ ಹಿಂದೆ ಓದಿದ್ದ ಅನೇಕ

ಕಥೆ, ಕಾದಂಬರಿಗಳಲ್ಲಿ ಮೊದಲ ನೋಟದ ಪ್ರೇಮ ಸಂದರ್ಭ ತಟ್ಟನೆ ನೆನಪು. ಆದರೆ ಅವಳಿಗೆ ಮಾತ್ರ ಯಾರಲ್ಲೂ ಪ್ರೀತಿ ಹುಟ್ಟಲೇ ಇಲ್ಲ. ಓಹ್! ಕಾದಂಬರಿಗಳಲ್ಲೇ ಇದು ಸಲೀಸು ಅಂದುಕೊಳ್ಳುತ್ತಾಳೆ. ಫ್ರೀಯಾಗಿ ನಡೆದುಕೊಳ್ಳುವುದು ಹೇಗೆ ಎಂಬುದು ಅವಳ ಸಮಸ್ಯೆ. ಸ್ನೇಹದಿಂದ ಸಕ್ಕು ವಿಷಯಗಳ ಚರ್ಚೆಗಳಿದ್ದಾಗ ಮಾತ್ರ ತುಸುವೇ ಅಲುಗಾಡಿದ ಬೆಲ್ಲದ ಅಚ್ಚಿನಿಂದ ದೂರ ಸರಿಯುವ ಗೊದ್ದಗಳಂತೆ ಅವಳನ್ನು ಆವರಿಸಿದ'''ಹಿಂಡು ಕ್ರಮೇಣ ಹಿಂದಾಗುತ್ತದೆ. ಅಂದರೆ ಅವಳು ಅಷ್ಟು ಕಲ್ಲು ಹೃದಯದವಳು, ಪ್ರೇಮದ ಸೊಂಕೇ ಅರಿಯದವಳು ಎಂದರ್ಥವಲ್ಲ. ಆದರೆ ಅವಳಿಗೆ ಯಾರನ್ನೂ ಪ್ರೀತಿಸಲಾಗಲೇ ಇಲ್ಲದ್ದು ಅವಳ ತಪ್ಪಲ್ಲ. ಅವಳ ಮನಸ್ಸಿನ ಎಲ್ಲ ಕವಲುಗಳಿಗೂ ತೃಪ್ತಿ ಕೊಟ್ಟ ಹುಡುಗ ಸಿಗಲಿಲ್ಲವೇನೋ ? ಆದರೂ ಅವಳಲ್ಲಿ ನಿರಾಶೆ ಬುಗ್ಗೆ ಒಡೆದಿಲ್ಲ.

ಅವಳು ಎಷ್ಟೋ ಹುಡುಗರನ್ನು ಇಷ್ಟಪಡುತ್ತಾಳೆ. ಅಂದರೆ ಮದುವೆಯಾಗಲಲ್ಲ, "ಮನೆಯವರ ಇಷ್ಟ, ನಾನು ಅವರ ಮಾತಿಗೆ ಅಡ್ಡಿ ಬರೊಲ್ಲ" ಎಂದೂ ಅನ್ನುತ್ತಾಳೆ. ಅವಳೇನು ತಂದೆ ತಾಯಿಗಳ ವಿಧೇಯ ಮಗಳಲ್ಲ, ಸುಮ್ಮನೆ ಹಾಗೆ ಹೇಳಬಹುದು, ಅದು ಅವಳು ಮನಃಪೂರ್ವಕವಾಗಿ ಅಂದದ್ದೋ ಅಥವಾ ಸುಮ್ಮನೇ ವಿಧೇಯಳಂತೆ ನಟಿಸಲೋ ಅಥವಾ ಅವಳೇ ಯಾರನ್ನೂ ಆರಿಸಿಕೊಳ್ಳಲು ಅಶಕ್ತಳಾದದ್ದಕ್ಕೋ ಅಂತೂ ಹಾಗೇ ಹೇಳುವುದಂತೂ ನಿಜ.

ಕಡೆಗೂ ಒಬ್ಬ ಸಿಕ್ಕ. ಅವಳ ಕಾಲಂಗಳಲ್ಲಿ ಹೆಚ್ಚು ಸಲ ರೈಟ್ ಮಾರ್ಕ್ ಕಂಡವನು. ಅವಳಿಗೆ ಏನೋ ದೂರದ ಸಂಬಂಧಿ. ಇವನನ್ನೇ ಮದುವೆಯಾಗಲೇ ? ಎಂದು ಒಂದೆರಡು ಬಾರಿ ಹಗುರವಾಗೇ ಯೋಚಿಸಿದ್ದಳು. ಹಲವು ದಿನಗಳಲ್ಲಿ ಅವನು ಓವರ್ ಸೋಷಿಯಲ್ ಎನಿಸಿ ಬೇಡವೆನಿಸಿತು. ಅಂತೂ ಅವಳ ಮನದಲ್ಲೇ ಅಳೆದು ಸುರಿದು ಅನೇಕರನ್ನು ತಿಕ್ಕಿ ತೀಡಿ ಅಭಿಪ್ರಾಯಗಳನ್ನು ಹೊರಕ್ಕೆ ನೂಕುವುದಕ್ಕೆ ಮುಂಚೆಯೇ ಮನಸ್ಸಿನಲ್ಲೇ ತೀರ್ಮಾನ ಹೊಸೆದು ಬಿಡುತ್ತಿದ್ದಳು. ಆದರೆ ಅವಳ ಜೊತೆ ಇದ್ದವರಿಗೆ ಅವಳಲ್ಲಿ ಮೂಡಿದ ಅನಿಸಿಕೆ ನಡೆದ ಯೋಚನೆ, ತೀರ್ಮಾನ ಒಂದೂ ಗೊತ್ತಾಗುತ್ತಲೇ ಇರಲಿಲ್ಲ. ಎಂದಿನಂತೆ ಮಕ್‌ಮಲ್ ನಗು ತೋರಿಸುತ್ತ ಸ್ನೇಹಿರಂತೆ ಉಳಿದುಬಿಡುತ್ತಾಳೆ.

ಒಮ್ಮೆ ಅವಳು ಒಬ್ಬನನ್ನು ಪ್ರೀತಿಸಿದೆ ಅಂದುಕೊಂಡಳು. ಅಷ್ಟೇ, ಹೇಳಲಿಲ್ಲ. ಅಜ್ಜನಿಗೆ ಜ್ವರ ಬಂದಾಗ ಬಾಟಲ್ ಹಿಡಿದು ಶಾಪ್‌ಗೆ ಹೋದಾಗ ಅಲ್ಲಿಯ ಹೊಸ ಡಾಕ್ಟರ್ ಪರಿಚಯ ಮಾಡಿಸಿದ. ದಾರಿಯಲ್ಲಿ ಹೋಗಿ ಬರುವಾಗ ಮುಗುಳ್ನಕ್ಕ. ಅವನು ತನ್ನನ್ನು ಪ್ರೀತಿಸುತ್ತಿರಬೇಕೆಂದು ಅಂದುಕೊಂಡಳು. ತಾನೂ-ನಕ್ಕಳು. ನಾನೂ ಪ್ರೀತಿಸಬೇಕು ಇನ್ಮೇಲೆ ಅಂದುಕೊಂಡಳು. ಮುಂದೆ ಮನೆಯಲ್ಲಿ ಯಾರಿಗೆ ಮೈಸರಿಯಾಗಿದಿದ್ದರೂ ಅವಳೇ ಶಾಪಿಗೆ ಹೋಗುವುದಾಯಿತು. ಬಿಹಳ ಸರಸಿ ಎಂದು ಅವನು ಅವಳಿಗೆ ಮೆಚ್ಚಿಕೆಯಾದ ಇವನನ್ನೇ ಯಾಕೆ ಮದುವೆಯಾಗರಹು ಎಂದು ಒಂದು ದಿನ ಇದ್ದಕ್ಕಿದ್ದ ಹಾಗೆ ಹೊಳೆಯಿತು. ಹೌದಲ್ಲ ಅಂದುಕೊಂಡಳು. ಆಗಬಹುದು ಎನಿಸಿತು. ಆದರೆ ಅದೊಂದು ದಿನ ಅವಳಿಗೆ ತಿಳಿದ ವಿಷಯವಾದ ಶಾಕ್ ಆಯಿತು. 'ನಾನು ಹೊಲೆಯ ನಾನು ಕೊಟ್ಟ ಬಣ್ಣದ ನೀರನ್ನೇ ನಿಮ್ಮಜ್ಜ ಕುಡೀತಾರಲ್ಲ. ನಿಮ್ಮ ಬ್ರಾಹ್ಮಣಿಕೆ ಎಲ್ಲಿ ಯೋಯ್ತು ?' ಅಂತ ಅವನು ತಮಾಷೆ ಮಾಡುತ್ತ ಮುಖವನ್ನು ನಗುವಿನ ಬಟ್ಟಲಾಗಿ ಮಾಡಿಕೊಂಡು ಕೇಳಿದಾಗ ಒಂದು ನಿಮಿಷ ಅವಳು ಬೆಚ್ಚಿದಳು. ಕಕ್ಕಸು ತೊಳೆಯಲು ಬರುವ ಮಾದಿ ನೆನಪಿಗೆ ಬಂದಳು. ನೀರು ಹಾಕುವಾಗ ಅವಳು ಹಿಡಿದ ಡಬ್ಬದಿಂದ ನೀರು ಎಲ್ಲಿ ಸಿಡಿದೀತೋ ಎಂದು ದೂರಕ್ಕೆ ನಿಂತು ಹಾಕುತ್ತಿದ್ದುದು. ಅವಳು ಬಚ್ಚಲು ಮನೆಯ ಒಳಗೆ ನುಗ್ಗಿ ಒಳಕಕ್ಕಸು ಮನೆಯನ್ನು ತೊಳೆದು ಹೊರಕ್ಕೆ ಬಂದನಂತರ ಅವಳ ಹೆಜ್ಜೆಗಳನ್ನು ನೀರಿನಲ್ಲಿ ನೆನೆಸುತ್ತಿದ್ದುದು. ತಾವು ಅಸ್ಪೃಶ್ಯರು ಎಂದು ದೂರ ಇಟ್ಟ ಗುಂಪಿನವನೇ ಒಬ್ಬ ತನ್ನ ಪ್ರಿಯ ಎಂದು ಗೊತ್ತಾಗಿ ಮೈಯಲ್ಲಿ ಮಂಜು ಚುಮುಕಿಸಿತು.

ಮಾದಿಯನ್ನು ಮುಟ್ಟಿಕೊಂಡರೆ ದೋಷ, ಮೈಲಿಗೆಯಾಗದಾತ ಎನಿಸಿದ್ದು ಒಂದೇ ಕ್ಷಣ. ಛೇ.... ಅವಳು ದಿನಾ ಸರಿಯಾಗಿ ಸ್ನಾನ ಮಾಡದೆ ಕೊಳಕಾಗಿವುರುದರಿಂದ ನಾವು ಅವಳನ್ನು ಮುಟ್ಟಲ್ಲ ಅಷ್ಟೇ ಎಂಬ ಸಮಾಧಾನ. ನಾವೇನು ಜಾತಿ ಭೇದ ಮಾಡಲ್ಲ ಅಂದುಕೊಂಡಿಳು. ಅವಳು ಅಷ್ಟು ಹೊಲಸಾಗಿದ್ದು ನಾವು ಒಳ ಸೇರಿಸದಂತೆ ಅವರೇ ಮಾಡಿಕೊಂಡಿರುವವರು. ಇದರಲ್ಲಿ ತಪ್ಪೆಲ್ಲ ಅವರದೇ ಹೊರತು ತಮ್ಮದಲ್ಲ ಎನಿಸಿತು.

ಡಾಕ್ಟರ್ ಮಾವಿಯ ಜಾತಿಯವನಾದರೇನು ? ಶುದ್ಧವಾಗಿ, ನೀಟಾಗಿ ಟಿಪ್ ಟಾಪಾಗಿದ್ದಾನೆ. ಆಣೆ ಮಾಡಿ ಹೇಳಿದರೂ ಆವನನ್ನು ಹೊಲೆಯ ಎಂದು ನಂಬಕ್ಕಾಗಲ್ಲ. ಜಾತಿ ಎಲ್ಲಿದೆ ಎಲ್ಲ ನಾವು ಮಾಡ್ಕೊಂಡಿದ್ದಲ್ವೇ. ಎಲ್ಲರೂ ಮನುಷ್ಯ ಜಾತಿ. ಇದರಲ್ಲೇನು ಮೇಲು ಕೀಳು. ಅವನ್ನು ಒಂದುಗೂಡಿಸಿ ಸಮ ಮಾಡಬೇಕು. ಆ ಭಾವನೇನ ಕಿತ್ತೊಗೆಯಬೇಕು. ಇನ್ನೂ ಏನೇನೋ ಅನಿಸಿತು ಅವಳಿಗೆ. ಮುಂದೆಯೂ ಏನೂ ಆಗದವಳಂತೆಯೇ ಇದ್ದಳು. ಅವನನ್ನು ಮದುವೆಯಾಗುವ ವಿಚಾರವನ್ನೇನೂ ಹೊಸಕಲಿಲ್ಲ. ಮನೆಯಲ್ಲೂ ಆಗಾಗ ಸಂದರ್ಭ ನುಸುಳಿದಾಗ ಜಾತಿ ನಿರ್ಮೂಲನದ ಬಗ್ಗೆ ಭಾಷಣಕೊಟ್ಟು ಇನ್ನು ಮುಂದೆ ಸಂಭವಿಸಬಹುದಾದ ಘಟನೆಗೆ ಪರಿಸರವನ್ನು ಹದ ಮಾಡುವ ಪ್ರಯತ್ನ. ತಾನು ಅವನನ್ನು ಮದುವೆಯಾಗುವ ವಿಷಯವನ್ನು ಮನೆಯಲ್ಲಿ ತಿಳಿಸಿದರೆ ಎಲ್ಲರೂ ಸ್ವಲ್ಪ ಸ್ಪ್ರಿಂಗ್ ಕಿತ್ತ ಬೊಂಬೆಗಳಂತೆ ಪುಟ ನೆಗೆಯಬಹುದು. ಅವನ ವಿದ್ಯೆ, ರೂಪು, ಮಾತು ಕ್ರಮೇಣ ಮೆತ್ತಗಾಗಿಸಬಹುದು. ಅಂದುಕೊಂಡಳು. ಈಗಲೇ ಯಾಕೆ ಹೇಳೋದು ಅಂತ ಕೆಲವು ದಿನ ಸುಮ್ಮನಿದ್ದಳು. ಅವನಿಗೂ ತಾನು ಪ್ರೀತಿಸೋದು ಗೊತ್ತಾಗದೆ ಇರೋ ಹಾಗೆ ನಡೆದುಕೊಂಡಳು. ಅವನ ಸ್ವಂತ ವಿಚಾರ ದೃಷ್ಟಿ ವಾದದ ರೀತಿ ಪ್ರಿಯವಾಗಿದ್ದರೂ ಏಕೋ ಏನೋ ಅವಳಿಗೆ ಅವನ ಜೊತೆ ಹೊಂದಿಕೊಳ್ಳೋದು ಕಷ್ಟ ಎನಿಸಿತು. ಅವನ ದರ್ಪ, ಕ್ರಾಂತಿ ಮಾಡಬೇಕು ಅನ್ನೋ ಬೋಲ್ಡ್‌ನೆಸ್ಸು ತನ್ನ ಅಭಿರುಚಿ ಅವನ ಅಭಿರುಚಿ ತುಂಬ ಬೇರೆ ಅಂತ ಈಚೆಗೆ ಅನಿಸಲು ಪ್ರಾರಂಭ. ಜೀವನದಲ್ಲಿ ಒಮ್ಮೆ ಸಿಗಬಹುದಾದ ಸಂಸಾರ ಸುಖವನ್ನು ತಾನೇ ಕೈಯಾರೆ ಯಾಕೆ ಹಾಳು ಮಾಡಿಕೊಳ್ಳುವುದು ಎಂದು ಅವನ ವಿಚಾರವನ್ನು ದೂರ ಸರಿಸಿದಳು. ಎಷ್ಟೋ ಬಾರಿ ಅವಳು ಒಬ್ಬಳೇ ಕೂತಿರುವಾಗ ಯೋಚಿಸುತ್ತಾಳೆ. ಈ ಮನುಷ್ಯ ಪ್ರಾಣಿಗಳು ಸ್ವಾರ್ಥಿಗಳು ! ಉದಾಹರಣೆಗೆ ತನ್ನನ್ನೇ ತೊಗೊಂಡ್ರೆ ಅಂತ ಸ್ವಂತ ವ್ಯಕ್ತಿತ್ವದ ವಿಶ್ಲೇಷಣೆಗೆ ತೊಡಗುತ್ತಾಳೆ. ಅವನು ಹೊಲೆಯ ಅಂತ ಗೊತ್ತಿದ್ರೂ ಮೋಹದ ಸೆಳೆತದಿಂದ ಜಾತಿ ಎನ್ನೋದೇ ಇಲ್ಲ, ಸುಳ್ಳು, ಅದಕ್ಕೆ ನಾನು ಮಹತ್ವ ಕೊಡಲ್ಲ ಅಂತಿದ್ದೆ. ಆದರೆ ಈಗ ಪ್ರೀತಿಯ ಕಾವು ಆರಿದ್ದಕ್ಕೋ ಮದುವೆಯಾಗಲಾರೆ ಎಂದು ಅನಿಸಿದ್ದಕ್ಕೋ ಜಾತಿ ಎನ್ನೋದು ದೊಡ್ಡ ಪೆಡಂಭೂತವಾಗಿ ಎದುರು ಕಣ್ಣರಳಿಸಿ ನಿಂತ ಹಾಗೆ, ಮೈಯೆಲ್ಲ ನೀರಾದ ಹಾಗೆ ಏನೇನೋ ಆಗಿ ಅಷ್ಟೆಲ್ಲ ಸುಲಭವಾಗಿ ಜಾತಿ ಬಿಡೋಕೆ ಸಾಧ್ಯವಿಲ್ಲ. ನನ್ನ ಕೈಯಿಂದಂತೂ ಕ್ರಾಂತಿ ಅಸಾಧ್ಯ. ನನ್ನ ಪಾಡಿಗೆ ನಾನು ಲಕ್ಷಣವಾಗಿ ನನ್ನ ಜನದ ಹುಡುಗನ್ನೇ ಮದುವೆಯಾಗ್ತೀನಿ ನೂರೆಂಟು ಭಾವನೆಗಳು ಮಾತಾಡಿದ್ದು ಈ ಸ್ವಾರ್ಥದ ಮುಖವೇ. ವಸ್ತು ಬೇಕಾದಾಗ ಅಡ್ಡಿಯನ್ನು ನಿವಾರಣೆ ಮಾಡೋದು ಗೊತ್ತು. ಬೇಡಾದಾಗ ಅದನ್ನೇ ಗೋಡೆಯಾಗಿ ನಿಲ್ಲಿಸೋದು ಉಂಟು. ಅಂತೂ ಇದು ಒಂದು ಒಳ್ಳೆಯ ಸಾಧನ ಎಂದೆನಿಸಿತು ಅವಳಿಗೆ.

ಮತ್ತೊಮ್ಮೆ ಅವಳ ತಂದೆ ತಾಯಿಗಳೇ ಸೂಚಿಸಿದ ಹುಡುಗ ಲಕ್ಷಣವಾಗಿದ್ದ. ಅವಳೂ ಹೂಂಗಟ್ಟಿದ್ದಳು. ಅವನಿಗೆ ಅವಳ ಮೇಲೆ ಮನಸ್ಸಿದ್ದರೂ ಕಾಮಣ್ಣನಂತೆ ಅವಳ ಹಿಂದೆ ಮುಂದೆ ಸುತ್ತಾಡುತ್ತಿರಲಿಲ್ಲ. ಒಂದು ಮದುವೆಯಲ್ಲಿ ಸಿಕ್ಕ ಅವನು ಅವಳನ್ನು ಕುಶಲಪ್ರಶ್ನೆ ಮಾಡಿ ಹುಡುಗರ ತಂಡದಲ್ಲಿ ಮುಳುಗಿದ. ಅವಳಿಗೆ ಅವನನ್ನು ಗುದ್ದಿ ಹಾಕಿ ಬಿಡುವಷ್ಟು ಕೋಪ. ತನ್ನ ಬಗ್ಗೆ ಅವನ ಪ್ರೀತಿ ತೀವ್ರವಾಗಿಲ್ಲವೆಂಬ ಗುಮಾನಿ. ತನ್ನ ಗೆಳತಿಯರ ಪ್ರಿಯಕರಂತೆ ಅವನು ಹಾದು ಹೋಗುವಾಗಲೆಲ್ಲ ಪ್ರೇಮವನ್ನು ಕಣ್ಣಿಂದ ಎರಚುತ್ತ ದೂರದಿಂದಲೇ ತನ್ನನ್ನು ಮುದ್ದಿಸುತ್ತ ಹೋಗಬಾರದೆ. ಎನಿಸಿತ್ತು. ಹಾಗೇನೂ ನಡೆಯಲಿಲ್ಲ. ಅವಳಿಗೆ ಒಂದುಕ್ಷಣ 'ಬಾಬ್ಬಿ' ಸಿನಿಮಾದಲ್ಲಿ ನೋಡಿದಂತೆ ಅವನೊಡನೆ ಮೋಟರ್ ಬೈಕಿನಲ್ಲಿ ಆತು ಕುಳಿತು ಮೈ ಮರೆತು ಗಾಳಿಯಲ್ಲಿ ತೇಲುತ್ತಿರುವಷ್ಟು ವೇಗವಾಗಿ ಹೋಗುತಲೇ ಇರಬೇಕು ಎಂಬ ಬಯಕೆ. ಮರುಕ್ಷಣವೇ ಅವನು ಕಾಣದಾಗ ಬೇರೆ ಹುಡುಗಿಯೊಡನೆ ಏತಕ್ಕೋ ತನಗೆ ಗೊತ್ತಿರದ ಕಾರಣಕ್ಕೆ ಮಾತನಾಡಿದ್ದಕ್ಕೋ ಈಗಲೇ ತಾನು ನೇಣುಹಾಕಿಕೊಂಡು ಬಿಡಬೇಕು ಎನಿಸಿದ್ದು. ಕಡೆಗೆ ತನಗೆ ಬದುಕಲೋ, ಸಾಯಲೋ ಇಷ್ಟ ಎಂಬುದು ಅವಳಿಗೆ ಬಗೆಹರಿಯದ ಪ್ರಶ್ನೆ. ಆದರೆ ಅವಳು ಅದನ್ನು ಬಿಡಿಸುವ ಗೋಜಿಗೆ ಹೋಗುವುದಿಲ್ಲ. ಅವನ ಗಂಭೀರ ನಡುವಳಿಗೆ ಏಕೋ ಒಣಕಲೆನಿಸಿ, ಸಿನಿಕ ಎನಿಸಿ ಅವನನ್ನು ಮದುವೆಯಾಗುವುದರಲ್ಲಿ ಆಸಕ್ತಿ ಬತ್ತಿ, ಕಡೆಗೆ ತಂದೆ

ತಾ  ಗೊತ್ತು ಮಾಡಿದ ಇನ್ನಾರನ್ನೋ ವಿರೋಧಿಸದೆ ಮದುವೆಯಾಗಿದ್ದಳು.

ಮದುವೆಯಾದ ನಾಲ್ಕಾರು ತಿಂಗಳು ಅವರದು ಅನ್ಯೋನ್ಯ ಸಂಸಾರ. ಅತ್ತೆ-ಮಾವ ಬೇರೆ ಮಗನ ಮನೆಗೆ ಹೋದ ಮೇಲೆ ಅವಳಿಗೆ ಗಂಡನ ನಡುವಳಿಕೆ ನೈಗೆ ಜಿಡ್ಡನ್ನು ಸವರಿದ ಹಾಗಾಗುತ್ತಿತ್ತು. ಒಳ್ಳೆಯವನು ಎಂದು ತಾಯಿ ಹೇಳಿದ್ದು, ವಿದ್ಯಾವಂತ ಇನ್ನೂ ಏನೇನೋ ಗುಣಗಳ ಪಟ್ಟಿ ಅಪ್ಪ ಹೇಳಿದ್ದು, ಅವಳು ಗೋಣು ಆಡಿಸಿದ್ದು. ಈಗ ಸದಾ ಹಿಂದೆ ಮುಂದೆ ತಿರುಗುವ, ಅಸಹ್ಯ ಸೋರುವಷ್ಟು ಪ್ರೀತಿ ತೋರಿಸುವ ಅವನನ್ನು ಕಂಡರೆ ಅವಳಿಗೆ ರೇಜಿಗೆ, ಕೋಪವೇ ಬಾರದ, ಯಾವಾಗಲೂ ನಗು-ನಗುತ್ತಲೇ ಇರುವ ಅವನ ಕಪಾಳಕ್ಕೆ ಎರಡು ಬಿಗಿದು ಅಳಿಸುವಾಸೆ. ತಾನು ಹುಸಿಗೋಪ ನಟಿಸಿ ಮುಸುಕೆಳೆದು ಮಲಗಿದಾಗ, ಅವನೂ ಹಾಗೆ ನಟಿಸಿದರೆ ಅವಳಿಗೆ ಹಾಯೆನಿಸುತ್ತದೆ. ಇನ್ನು ಮುಂದಕ್ಕೆ ನಾಟಕ ಆಡುವ ಸರದಿ ಅವಳಿಗೆ ಬೇಕು. ಅವನ ಕೋಪವನ್ನು ಕರಗಿಸಿ ತನ್ನಲ್ಲಿ ಒಂದಾಗಿಸಿ ಲಲ್ಲೆಗರೆಯುವ ಆಸೆ. ಆದರೆ ಅವಳ ಪ್ರಯತ್ನಕ್ಕೆ ಭಂಗದಂತೆ ಅವನೇ ಬಂದು ಗೋಗರೆಯುತ್ತಾನೆ, ಸಮಾಧಾನಿಸುತ್ತಾನೆ. ಈಗ ಅವಳ ಕೋಪ ನಿಜವಾಗಿ ಅವನನ್ನು ಒರಟಾಗಿ ತಳ್ಳಿ ದೂರಾಗುತ್ತಾಳೆ. ಹೆಂಗಸಿನಂತೆ ನುಣುಪಾದ ಅವನ ಕೈ ಎದೆಗಳನ್ನು ಕಂಡು, ನಯವಾದ ಅವನ ಹಿಡಿತದಲ್ಲಿ ತೃಪ್ತಿ ಕಾಣದೆ ಹತ್ತಿರ ಬಂದ ಅವನನ್ನು ಸಿಡುಕುತ್ತಾಳೆ, ಅವನು ಪೆಪ್ಪಾಗುತ್ತಾನೆ. ಅವಳ ಮನಸ್ಸಿನ ಪದರ ಪದರ ಅವನ ಮುಂದೆ ಕ್ರಮೇಣ ಬಿಚ್ಚಿಕೊಳ್ಳುತ್ತದೆ.

ಎಂಥಾ ಗಂಡ್ಸು ... ನನ್ನನ್ನ ಅರ್ಥ ಮಾಡಿಕೊಳ್ಳೋಕ್ಕೆ ಒಂದು ಚೂರೂ ಪ್ರಯತ್ನಿಸಲ್ಲ. ನಿಜವಾಗ್ಲೂ ಇವರು ಗಂಡ್ಸೇ ಅಲ್ಲ. ಸ್ವಲ್ಪನಾದ್ರೂ ಪೌರುಷಾನೇ ಇಲ್ಲ .... ತಾನು ಹೇಳಿದಂತೇ ಕೇಳುವವನು ಅವನು. ಹೋರಾಟ ನಡೆದು ಜಗ್ಗಾಡಿ ತಾನು ಸೋತು ದೊರಕುವ ಆನಂದದ ಸುಖ ಅವರಿಗೇನು ಗೊತ್ತು ? ಸ್ವಲ್ಪವೂ ಸ್ವತಂತ್ರ ಯೋಚನೆ ಅನ್ನೋದೇ ಇಲ್ಲ. ತನ್ನ ದಾಸನ ಹಾಗೆ ಕಾಲಿಗೆ ತೊಡರಿ ಸುತ್ತಿಕೊಳ್ಳುತ್ತದೆ. ದರ್ಪ, ಕೋಪ, ಬಲವಂತ ಇವು ಗಂಡ್ಸು ಹೆಣ್ಣಪ್ಪಿ.... ಇಂಥವರ ಜೊತೆ ಹೇಗೆ ಬಾಳೋದು ? ಅಂತ ಸಿಟ್ಟು ಹತ್ತಿ ಅವನು ಮೃದುವಾಗಿ ಹಾಕಿದ ಕೈಯನ್ನು ಚಟ್ಟನೆ ಎತ್ತಿ ಎಸೆಯುತ್ತಾಳೆ ಈ ಕೈಗೆ, ಈ ಮೈಗೆ ಒರಟುತನ ಬರೋದೇ ಇಲ್ಲವೇನೋ ಅನಿಸಿ ಆ ಜಾಗ ಬಿಟ್ಟು ಓಡುತ್ತಾಳೆ. ದುಃಖ ನುಗ್ಗಿ ಬಂದಾಗ ದಿಂಬಿಗೆ ಮುಖ ಒತ್ತಿ ಮುಸು ಮುಸು ಅಳುತ್ತಾಳೆ. ರಾತ್ರಿ ಅವನಿಂದ ದೂರ ಉರುಳಿಕೊಂಡು ಮುಸುಕಿನಲ್ಲೇ ತನ್ನ ತೀರದ ಆಸೆಗೆ ನಿಶ್ಶಬ್ದವಾಗಿ ಬಿಕ್ಕಳಿಸುತ್ತಾಳೆ. ಬರು ಬರುತ್ತ ಇದು ಹೆಚ್ಚಾಗಿ ಅವನಿಗೂ ಬಿಸಿ ತಗುಲಿತು. ಅವಳು ನೊಂಡಾದಳು. ಒಂದೇ ಮನೆಯಲ್ಲಿ ಅಪರಿಚಿತರಂತೆ ಆದರು. ಒಮ್ಮೊಮ್ಮೆ ಅವಳ ಫಲಿಸದ ಆಸೆಗಳು, ಬಯಕೆಗಳು ಮೈ ಬಿಚ್ಚಿ ಕುಣಿಯುತ್ತವೆ. ಆಗ ಹುಚ್ಚು ಹಿಡಿದವಳಂತೆ ತಾಯಿಯ ಮನೆಗೆ ನುಗ್ಗುತ್ತಾಳೆ. ತಂಗಿಯೊಡನೆ ಸಿನಿಮಾ, ಹೋಟೆಲ್ಲುಗಳಲ್ಲಿ ಗಸ್ತಿ ತಿರುಗುತ್ತಾಳೆ, ಎಷ್ಟು ದಿನ ಹೀಗಿರಲು ಸಾಧ್ಯ ? ಈ ಯೋಚನೆ ಅವಳಿಗೆ ಬೇಕಿಲ್ಲ, ಅಂದಂದಿನ ಸುಖ-ದುಃಖ ಭರ್ತಿಯಾಗಿ ಉಂಡು ಬಿಡುತ್ತಾಳೆ. ಒಮ್ಮೊಮ್ಮೆ ಹುಣಿಸೆ ಬರಲಿನಿಂದ ಪೆಟ್ಟು ತಿಂದವಳಂತೆ ನೋವಿನಿಂದಲೋ, ಇನ್ನೇತರಿಂದಲೋ ಕಣ್ಣೀರು ಸುರಿಸುತ್ತಲೇ ಇರುತ್ತಾಳೆ.

ಈ ದಿನ ಗಂಡ ಮನೆಯಿಲ್ಲಿರುತ್ತಾನೆಂಬ ಭಾವನೆಯೇ ವವಳನ್ನು ಮನೆಯಿಂದ ಹೊರಗೆ ತಳ್ಳಿದೆ. ರಸ್ತೆಯ ರಿಪೇರಿಯಿಂದ ಇನ್ನೊಂದು ಸುತ್ತು ಹೆಚ್ಚಾಯಿತು. ದಾರಿಯ ಮಧ್ಯಕ್ಕೆ ಕೆಂಪು ಬಾವುಟ ಕಟ್ಟಿ ಪಿಕಾಸಿ, ಗುದ್ದಲಿಯಿಂದ ನೆಲವನ್ನು ಬಗೆಯುತ್ತಿದ್ದಾರೆ. ಎಷ್ಟು ನಿಷ್ಕರುಣೆಗಳು ಎಂದೆನಿಸಿತು ಅವಳಿಗೆ ಜೋರಿನ ಪೆಟ್ಟುಗಳು, ಹೆಕ್ಕಳಿಕೆ ಹೆಕ್ಕಳಿಕೆಗಳು ಕಿತ್ತು ಬರುತ್ತಿವೆ. ಆಶ್ಚರ್ಯ ! ಅಲ್ಲಿಂದ ರಕ್ತ ಒಸರುತ್ತಿಲ್ಲ. ಸಿಟ್ಟುಸಿರು ಎದ್ದಿಲ್ಲ. ಇನ್ನು ಗುದ್ದಲಿ ಹಿಡಿದವನ ಹೊಳೆಯುವ ಕಪ್ಪು ಮಾಂಸಖಂಡಗಳಲ್ಲಿ ಬೆವರು ಹೆಜ್ಜೆ ಎತ್ತದೆ ಪರವಶಳಾಗಿ ಅವನ ತುಂಬಿದ ಎದೆಯನ್ನೇ ದಿಟ್ಟಿಸುತ್ತಾಳೆ. ಉಸಿರಿನ ಏರಿಳಿತದಿಂದ ಅದು ಉಬ್ಬಿ ಇಳಿಯುತ್ತದೆ. ತುಂಡು ಬಟ್ಟೆ ಅಡ್ಡಡ್ಡವಾಗಿ ಮೊಣಕಾಲಿನ ಸ್ವಲ್ಪ ಮೇಲಿನವರೆಗೂ ಬಿಗಿಯಾಗಿ ತಬ್ಬಿದೆ. ಅವನ ಕಾಲ ಹಿಮ್ಮಡಿಯನ್ನೇ ಅವಳ ದೃಷ್ಟಿ ನುಂಗುತ್ತಿರುವಾಗ ಅವನ ಕಾಲ ಬುಡದಲ್ಲಿ ರಾಶಿಯಾಗಿ ಬಿದ್ದಿರುವ ನೆಲದ ಬಸಿರನ್ನು ಕಂಡು ಅವಳ ಬಸಿರು ಹುಚ್ಚೆದ್ದು ಆವೇಶದಲ್ಲಿ ಕುಣಿಯುತ್ತದೆ. ಕರುಳುಗಳ ಹೊಸೆದಾಟದ ಅನು  ತೀವ್ರ

ವಾಗಿ ಅಲ್ಲಿ ನಿಲ್ಲಲಾಗದೆ ವಿಚಿತ್ರ ಸಂಕಟದಿಂದ ಅವಳು ಹೆಜ್ಜೆ ಕೀಳುತ್ತಾಳೆ. ಎಷ್ಟೊಂದು ಜನ! ಕೆಲವರು ಅಗೆಯುತ್ತಿದ್ದಾರೆ. ಕೆಲವು ಹೆಂಗಸರು ದಾರಿಯಲ್ಲಿ ಹರಡಿರುವ ಮರಳನ್ನು ಸರಿಸುತ್ತಿದ್ದಾರೆ. ಎಲ್ಲೆಲ್ಲೂ ರಿಪೇರಿ, ಅವಳಿಗೂ ಈ ರೀತಿ ಕೂಲಿಯಾಗಬೇಕು ಅನಿಸುತ್ತದೆ. ಯಾರೋ ಅಗೆದ ನೆಲವನ್ನು ಇನ್ಯಾರೋ ತುಂಬಿಸಿ ಸರಿ ಮಾಡುತ್ತಿದ್ದಾರೆ. ತಾನು ಅ ಕೊರಕಲನ್ನು ತುಂಬಿ ಹಳ್ಳವನ್ನು ಇನ್ನಿಲ್ಲವಾಗಿಸಿ ಮೇಲೆ ದಪ್ಪಗೆ ಟಾರ್ ಬಳಿಯಬೇಕು. ನುಣುಪು ಬೀದಿ, ಐಬು ಕಾಣದ ಸಮನಾದ ರಸ್ತೆ ಮಾಡಬೇಕು. ಇನ್ನೆಂದೂ ನೆಗ್ಗಿ ಹೋಗದಂತೆ, ಸಂದು ಬಿಡದ ಹಾಗೆ ಮಾಡಲು ಉದ್ಯುಕ್ತಳಾಗುತ್ತಾಳೆ.

ಅವಳು ದೃಷ್ಟಿಯನ್ನು ಹರಿತಗೊಳಿಸಿದಂತೆ ದೃಷ್ಟಿ ತೂರುವವರೆಗೂ ತೂರಿಸಿ ನೋಡಿದಾಗ ಉದ್ದನೆಯ ಫರ್ಲಾಂಗ್ ಉದ್ದಕ್ಕೂ ಮೀರಿದ ಕಪ್ಪು ರಸ್ತೆಯ ತುಂಬ ಅನೇಕ ಸಣ್ಣ, ದೊಡ್ಡ, ಅಗಲ ಡೊಗರುಗಳು ತನ್ನ ಕಣ್ಣನ್ನು ದಾಟದ, ಮೀರಿದ ಇನ್ನೂ ಉದ್ದನೆಯ ರಸ್ತೆಯಲ್ಲಿ ಇದರಂತೆ ಇನ್ನೆಷ್ಟು ಹಳ್ಳ ಕೊರಕಲುಗಳೋ ಎನಿಸಿತು. ಅವಳ ತೆರೆದ ಕಣ್ಣಿಗೆ ಹರಿದು ಬಿದ್ದಿದ್ದ ರಸ್ತೆಯ ಹಳ್ಳ ತೂತುಗಳು ದೊಡ್ಡದು ದೊಡ್ಡದಾಗುತ್ತ ಒಂದು ಹತ್ತು, ಹತ್ತು ನೂರಾಗುತ್ತ ಬರೀ ಡೊಗರುಗಳೇ ಕಂಡಂತಾಗಿ ಅವೆಲ್ಲ ಬರಬರುತ್ತ ಒಂದಾದಂತೆ ಗೋಚರವಾಯಿತು.

---

# ಸಮಸ್ಯೆಯ ಸೃಷ್ಟಿ

— ಲೀಲಾ ಶೇಖರ್

ಏನು ಬರೆಯಲಿ ? ಈಗಂತೂ ಯಾರು ನೋಡಲಿ ಏನಾದರೂ ಬರೆಯೋರೆ. ಕತೆ, ಕಾದಂಬರಿ, ಲೇಖನ, ಹರಟೆ, ಅಂತ ಏನೇನೋ ಪೇಪರ್‌ಗಟ್ಟಲೆ ಬರೆದು ತಮ್ಮ ಹೆಸರು ಅಚ್ಚಾದಾಗ ಎಲ್ಲರಿಗೂ ಹೇಳ್‌ಕೊಂಡು ಅವರು ಪಡೋ ಸಂಭ್ರಮ ನೋಡಿದಾಗ, ನಾನೂ ಯಾಕೆ ಬರೆಯಬಾರದು, ಹೀಗೆ ಎಲ್ಲರ ಮುಂದು ಹೆಮ್ಮೆಯಿಂದ ಬೀಸಬಹುದಲ್ಲ ಅಂತ ಒಂದು ದುರ್ಮುಹರ್ತದಲ್ಲಿ ದೃಢನಿಶ್ಚಯ ಮಾಡೇಬಿಟ್ಟೆ....ಆಲ್ಲಾ ಬರೀ ಕತೆ–ಕಾದಂಬರಿ ಬರೆದು ಜನರು ಸುಮ್ನೆ ಕಾಲಹರಣಕ್ಕೆ ಓದಿ ಬೀದಿಗೆಸೆಯುವ ಬದಲು ಈಗ ಎಂತೆಂಥಹ ಜಟಿಲವಾದ ಸಮಸ್ಯೆಗಳನ್ನು ನಿತ್ಯ ಜೀವನದಲ್ಲಿ ಬಡಪಾಯಿ ಪ್ರಜೆಗಳು ಅನುಭವಿಸುತ್ತಿದ್ದಾರೆ.. ಅದಕ್ಕೆಂದೂ ಪರಿಹಾರ ಸೂಚಿಸಿ, ಉಪಕರಿಸುವಂಥಹ ಲೇಖನ ಬರೆದರೆ ! ಓದಿದವರು, ಕೇಳಿದವರು ಎಷ್ಟು ಮೆಚ್ಚಿಕೊಂಡು ಅದೇ ಪತ್ರಿಕೆಗೆ "... ಇವರ ಲೇಖನ ತುಂಬಾ ಉಪಯುಕ್ತವಾಗಿದೆ... ಪ್ರಸ್ತುತ ಪರಿಸ್ಥಿತಿಯಲ್ಲಿ ನಮಗೆ ಇಂತಹ ಲೇಖನಗಳೇ ಬರಬೇಕು ಅಂತ ನೂರಾರು ಮೆಚ್ಚುಗೆ ಪತ್ರಗಳು ಬಂದರೆ ಅಚ್ಚು... ತಮ್ಮ 200 ಪುಟದ ಕತೆ – ಕಾದಂಬರಿಗಿಂತ ನಾಲ್ಕು ಪುಟದ ಲೇಖನ ಇಷ್ಟು ಮೆಚ್ಚುಗೆ ಗಳಿಸಿತಲ್ಲ ಅಂಥ ಬಾಕಿ ಲೇಖಕ–ಲೇಖಕಿಯರೆಲ್ಲ....ಹೊಟ್ಟೆಕಿಚ್ಚು ಪಟ್ಟಾಗ ನೆರಿಗುಡ್ ಐಡಿಯಾ.. ರಿಯಲ್ಲಿ ಆ ತರಹ ಐಡಿಯಾ ಹೊಳೆಯೋಕು ತಲೆ ಬೇಕು... ಅಲ್ವಾ ..."

ಅಂದಹಾಗೆ ಈಗ ನಾವು ಮುಖ್ಯವಾಗಿ ಎದುರಿಸುತ್ತಿರುವುದು ಅಧಿಕ ದರ....ಹಾಗೂ ಆಹಾರ ಸಮಸ್ಯೆ ದಿನ ದಿನಕ್ಕೆ ಬೆಟ್ಟಕ್ಕೆ ಏರುತ್ತಿರುವ ಬೆಲೆಯನ್ನು ಇಳಿಸೋದು ಹೇಗೆ? ದುಡ್ಡು ಕೊಟ್ಟರೂ ಕೆಲವು ಸಾಮಾನು ಸಿಕ್ಕೊಲ್ಲವಲ್ಲ ನೀವು ನಂಬ್ತಿರೋ, ಇಲ್ಲವೋ ...ಮೊನ್ನೆ ಇದ್ದಕ್ಕಿದ್ದಹಾಗೆ ಪೂರಿ-ಸಾಗು ತಿನ್ನಲೇಬೇಕು ಅನ್ನಿಸಿತು.... ಮೈದಾ ಹಿಟ್ಟಿನ ಪೂರಿ ಬಿಸಿಬಿಸಿಯಾಗಿ ಇಷ್ಟುದಪ್ಪ ಉಬ್ಬಿದರೆ ಎಷ್ಟು ಚೆನ್ನಾಗಿರುತ್ತೆ ಅಲ್ವಾ.. ಊರೆಲ್ಲಾ ಹುಡುಕಿದರೂ ಮೈದಾಹಿಟ್ಟು ಸಿಕ್ಕಲಿಲ್ಲ.. ಆಸೆಯನ್ನು ಹತ್ತಿಕ್ಕಲಾರದೆ ಮಕ್ಕಳು ಮರಿ ಎಲ್ಲಾ ಹೋಟೆಲ್ ಹೋಗಿ ತಿಂದು ಬಂದೆವು ಅನ್ನಿ. ಮನೆ ಅಡಿಗೆ ಸಮ ಬರುತ್ತೆಯೆ. ಒಂದಕ್ಕೆರಡು ದುಡ್ಡು ತೆತ್ತರೂ ಸುಖವಿಲ್ಲ. ಎಲ್ಲರೂ ಸಾಮಾನುಗಳನ್ನು ತಗೊಳ್ಳೋದೆ ಬಿಟ್ಟುಬಿಡ್ತಾರೆ ಹೇಗೆ? ಸರಿಹೋಯಿತು ಉಪವಾಸ ಸಾಯಬೇಕು ಅಂತೀರ

ಮೊನ್ನೆ ಏಳು ರೂಪಾಯಿ ಪಡಿ ಕೊಟ್ಟಾದರೂ ಒಂದು ಪಡಿ ಅಕ್ಕಿ ತಂದು ಅಚ್ಚುಕಟ್ಟಾಗಿ ಮೂರು ಹೊತ್ತು ಊಟ ಮಾಡಿದರೂ ಸಾಯಂಕಾಲದ ಹೊತ್ತಿಗೆ ಹೊಟ್ಟೆ ಹಸಿವು ಅಂತ ಓಡಿ ಬರುವ ಮಕ್ಕಳ ಜೊತೆ, ನನ್ನ ಹೊಟ್ಟೆಯೇ ಹಸಿವು ಹಸಿವು ಅಂತ ತಾಳ ಹಾಕುತ್ತಿತ್ತು ! 'ದರಿದ್ರಕ್ಕೆ ಅಧಿಕ ಮಾಸ' ಅಂತಾರಲ್ಲ ಹಾಗೆ ಬೆಲೆ ಜಾಸ್ತಿಯಾದಷ್ಟು ಹೊಟ್ಟೆ ಹಸಿವು ಜಾಸ್ತಿಯಾಗುತ್ತೆ, ಅಥವ ಅದೇನೋ ಕಲಬೆರಕೆ ಅಂತಾರಲ್ಲ.. ಅದೇನಾದರೂ ಇರಬಹುದು ತಿಂದಾಗ ತುಂಬಿದ ಹಾಗಿರುವ ಹೊಟ್ಟೆ ಅರ್ಧ ಗಂಟೆಗೆ ಖಾಲಿಯಾಗಿರುತ್ತೆ.. ಮತ್ತೆ ಬ್ಲಾಕೋ ವೈಟೋ ಯಾವುದರಲ್ಲೋ ರವೆ, ಗೋಧಿ, ಮೈದಾ ತಿಂದು ಅಚ್ಚುಕಟ್ಟಾಗಿ ಏನಾದರೂ ಮಾಡಿ ತಿಂದರೇನೇ ತೃಪ್ತಿ ನೀವು ಏನೇ ಹೇಳಿ ಮನುಷ್ಯ ಬದುಕಿರೋದೇ ತಿನ್ನೋಕೋಸ್ಕರ....ಬೆಲೆ ಜಾಸ್ತಿಯಾಯ್ತೂಂತ ತಿನ್ನೋದನ್ನ ಬಿಡೋಕಾಗುತ್ತೇನು ? ಎಂಥೆಂಥಹ ದೊಡ್ಡ ದೊಡ್ಡ ತಲೆಗಳು (ತಲೆ ಇರೋರು) ಈ ವಿಷಯದಲ್ಲಿ ಎಷ್ಟೋ ಭಾಷಣ ಬಿಗಿದು, ಚಳುವಳಿಯಾಗಿ, ಉಪವಾಸ

ಸತ್ಯಾಗ್ರಹ (ಜನಗಳ ಎದುರಿಗೆ ಮಾತ್ರ, ಒಳಗೆ ರವೆ ಸಜ್ಜಿಗೆ, ಬಾದಾಮಿ ಹಾಲು ಗುಟ್ಟಾಗಿ ಹೊಡೀತಾರೆ) ಮಾಡಿದರೂ ಸಾಲ್ವ್ ಆಗದೆ ಇರೋ ಈ ಪ್ರಾಬ್ಲಂ ನನ್ನ ಪುಟ್ಟಗೋಸಿ ಲೇಖನದಿಂದ ಆಗುತ್ತೇ....! ಲೀವ್ ಇಟ್ ಸುಖವಾಗಿ ತಿಂದು ಹಾಯಾಗಿರೋಣ.

ಹೋಗಲಿ ಬೇರೆ ಯಾವ ಸಮಸ್ಯೆ ತಗೊಳ್ಳೋಣ? ಆ ...ಗೊತ್ತಾಯ್ತು ಅಧಿಕ ಜನಸಂಖ್ಯೆ, ಸರ್ಕಾರ ಬೀದಿ ಬೀದಿಯಲ್ಲಿ, ಪೇಪರ್, ರೇಡಿಯೋ, ಗೋಡೆಗಳು, ಕಸದ ತೊಟ್ಟಿ ಎಲ್ಲೆಲ್ಲೂ ಪ್ರಚಾರ ಮಾಡಿದ್ದೂ ಮಾಡಿದ್ದೆ... ಆದರೆ ದಿನದಿನಕ್ಕೆ ಜನಸಂಖ್ಯೆ ಏರುತ್ತಲೇ ಇದೆ. ಅಧಿಕ ಧರ, ಆಹಾರ ಕೊರತೆ ಎಲ್ಲಕ್ಕೂ ಈ ಅಧಿಕ ಜನಸಂಖ್ಯೆಯೇ ಮೂಲ ಕಾರಣ... ಸರ್ಕಾರ ಒದರೋ ಹಾಗೆ ಆರತಿಗೊಬ್ಬ ಮಗಳು, ಕೀರ್ತಿಗೊಬ್ಬ ಮಗ ಅಂತ ಎಲ್ಲರ ಮನೇಲೂ ಎರಡೇ ಮಕ್ಕಳಿದ್ದರೆ ಎಷ್ಟು ಚೆನ್ನಾಗಿರುತ್ತೆ .. ಜನಗಳಿಗೆ ಯಾಕೆ ಅರ್ಥವಾಗೋದಿಲ್ವೋ, ತಮ್ಮ ಆರ್ಥಿಕ ಪರಿಸ್ಥಿತಿ ಆಲೋಚಿಸಬಾರದೆ? ಬೇರೆ ಕೆಲಸವೇ ಇಲ್ಲವೇ? ವರ್ಷಕ್ಕೊಂದು ಇಳಿಸುತ್ತಿರೋದು .. ಛೀ.... ಛೀ .... ತಿಳ್ಕೋಬೇಕಪ್ಪ ...

"ಅಂದಹಾಗೆ ನಿಮಗೆ ಎಷ್ಟು ಮಕ್ಕಳೂರೀ. " ಅಂದ್ಕೊಂಡೆ, ನೀವ್ಯಾರಾದರೂ ಈ ಪ್ರಶ್ನೆ ಕೇಳೇ ಕೇಳ್ತೀರಿ ಅಂತ .... ಯಾಕೆ ಅಂದ್ರೆ ದೊಡ್ಡದಾಗಿ ಕುಟುಂಬ ಯೋಜನೆ ಬಗ್ಗೆ ಲೆಕ್ಚರ್ ಕೊಡ್ತಿದ್ದಾಳೆ, ಇವಳಿಗೆ ಆ ಅರ್ಹತೆ ಇದೆಯೋ ಅಂತ ನೀವು ಯೋಚಿಸುತ್ತಾ ಇದ್ದೀರಿ ಅಲ್ಲವಾ.., ಒಪ್ಪಿದೆ... ಸರಿಯಾದ ಸಮಯಕ್ಕೆ ಆ ಪ್ರಶ್ನೆ ಹಾಕಿ ಬಿಟ್ಟರೆ .. ಉತ್ತರಿಸಲೇ ಬೇಕಾ....ನೋಡಿ, ನಿಮಗೆ ಗೊತ್ತೇ ಇಲ್ಲವೋ ! ಯಾವಾಗಲೂ ಉಪದೇಶ ಮಾಡೋರು ಅದನ್ನು ಆಚರಿಸಲೇ ಬೇಕು ಅಂತ ರೂಲ್ಸ್ ಇಲ್ಲ .. ನಮ್ಮ ದೇಶದಲ್ಲಿ ದೊಡ್ಡ ದೊಡ್ಡ ಮನುಷ್ಯರು ಹೇಳಿದ್ದೆಲ್ಲಾ ಮಾಡ್ತಾನೇ ಇದ್ದಾರು....ಅವರು ಉಪದೇಶ ಕೊಡ್ತಾರೆ, ನೀವು ಪಾಲಿಸಬೇಕು. ಅವರೂ ಹಾಗೇ ಇರಬೇಕು ಅಂತ ಅನ್ನೋದೇನು ಕರ್ಮ ಅದೂ ಅಲ್ಲದೆ ಈ ಮಕ್ಕಳು ಆಗೋದು ಭಗವಂತನ ಇಚ್ಛೆ ... ಅದನ್ನು ತಡೆಯೋಕೆ ನಾವ್ಯಾರು (ನಾಚಿಕೆಯಾಗೊಲ್ಲ, ಏನೂ ತಿಳಿಯದ ಮೂಢರ ಹಾಗೆ ಭಗವಂತನ ಕೃಪೆ ಅಂತ ಅನ್ನೋಳು ಬೇರೆ ಯಾರಿಗೆ ಹೇಳ್ತೀಯಾ ? ಬಾಯಿ ಮುಚ್ಚಿಕೊಂಡು ಬಿದ್ದಿರು ಅಂತಿರೇನೋ ಅಲ್ವೆ? ನೋಡಿ, ಮದುವೆಯಾದ ಹೊಸದು ಕುಟುಂಬ ಯೋಜನೆ ಬಗ್ಗೆ ಯೋಚಿಸೋ ಅಷ್ಟು ಪುರುಸೊತ್ತು ಎಲ್ಲಿರುತ್ತೆ ಹನಿಮೂನ್ ಮುಗಿಸ್ಕೊಂಡು ಬಂದ 9 ತಿಂಗಳಿಗೆ ಹುಟ್ಟಿದಳು ಸುಪುತ್ರಿ ಗಂಡಾಗಬಾರದಿತ್ತೇ ಅಂತ ಅಂದ್ಕೊಂಡರೂ, ಕಾಲ ಮಿಂಚಿಲ್ಲ "ಬೆಟರ್ ಲಕ್ ನೆಕ್ಸ್ಟ್ ಟೈಂ" ಅಂತ ಮತ್ತೆ ಪ್ರಯತ್ನಿಸಿದಾಗಲೂ ಮಗಳೇ ಹುಟ್ಟಿದಳು. ಮರಳಿ ಯತ್ನವಮಾಡು, ಮರಳಿ ಯತ್ನವಮಾಡು ಅಂತ ದೃಡ ನಿಶ್ಚಯದಿಂದ ವಂಶೋದ್ಧಾರಕನಿಗಾಗಿ ಮತ್ತೆ ಮೂರು ಸಾರಿ ಪ್ರಯತ್ನಿಸಿ ಪಂಚಮಹಾ ಪಾತಕಿಯರನ್ನು ಹೆತ್ತಿದ್ದಾಯಿತು ಅಯ್ಯೋ ಪಾಪ ಅಂತ ಸಿಂಪತಿ ತೋರಿಸುತ್ತೀರಾ ? ಸಾರಿ, ನಿಮ್ಮ ಸಿಂಪತಿ ನನಗೇನು ಅವಶ್ಯವಿಲ್ಲ. ಯಾಕೆ ಅಂದ್ರೆ ನಮ್ಮ ಹಠದಿಂದ ಈಗ ಗಂಡು ಮಗನೇ ಹುಟ್ಟಿದ್ದಾನೆ. ಕುಟುಂಬ ನಿಯಂತ್ರಣ ಅಂತ ಎರಡಕ್ಕೆ ಫುಲ್ ಸ್ಟಾಪ್ ಹಾಕಿದ್ದರೆ ಈ ಮಗ ಹುಟ್ಟುತ್ತಿದ್ದನೇನು ? ನನ್ನಂಥ ಒಬ್ಬೊಬ್ಬರಿಗೆ ರಿಯಾಯಿತಿ ಕೊಟ್ಟುಬಿಡಿ. ಬಾಕಿಯೋರು ಒಂದು ಗಂಡು, ಒಂದು ಹೆಣ್ಣು ಇರೋರು ಕುಟುಂಬ ಯೋಜನಾ ಸೂತ್ರ ಪಾಲಿಸಲೇ ಬೇಕು ...

ಆರು ಮಕ್ಕಳ ತಾಯಿಯಾದ ನಿನಗೆ ಈ ಪ್ರಾಬ್ಲಂ ಸಾಲ್ವ್ ಮಾಡೋಕೆ ಹಕ್ಕಿಲ್ಲ ಅಂತೀರಾ ? ಹೋಗ್ಲಿ ಬಿಟ್ಟು ಬಿಡಿ.... ಬೇರೆ ಯಾವುದಾದರೂ ಸಮಸ್ಯೆ ಸಾಲ್ವ್ ಮಾಡಲೇ ಬೇಕು....ಮಾಡೋಣ. ನಿರುದ್ಯೋಗ ಮಕ್ಕಳ ವಿದ್ಯಾಭ್ಯಾಸ, ಅನೀತಿ, ಲಂಚಗುಳಿತನ ಯಾವುದು ಮುಖ್ಯ ?

ಮೊನ್ನೆ ನನ್ನ ಹಿರೀ ಮಗಳಿಗೆ ಪಿ.ಯು.ಸಿ.,ಗೆ ಸೇರಿಸಲು ಪ್ರಿನ್ಸಿಪಾಲರಿಗೆ ಲಂಚ, ರೆಕಮೆಂಡ್ ಮಾಡಿದವರಿಗೆ ಲಂಚ ತೆತ್ತು ಸೀಟು ದೊರಕಿಸಿಕೊಂಡ ನಾನು " ಲಂಚ ಕೊಡಬೇಡಿ " ಅಂತ ಯಾವ ಬಾಯಲ್ಲಿ ಹೇಳಲಿ ?

"ಅಮ್ಮಾ , ಅಮ್ಮಾ ನಾನು ಪರೀಕ್ಷೆಗೆ ಅಂತ ಇಟ್ಟಿದ್ದ ಪೇಪರ್ ತಗೊಂಡ್ಯಾ ..." ಥತ್ ಏನಮ್ಮ.... ನಾನು ಈಗ ಏನು ಮಾಡಲಿ ? ಮೊದಲೇ ಪೇಪರ್ ಬೆಲೆ ಜಾಸ್ತಿಯಾಗಿದೆ. ನೀನ್ಯಾಕೆ ಬರೆದು ಬರೆದು ಹಾಳು ಮಾಡ್ತಿ ... ಅಂತ ನನ್ನ ಎರಡನೇ ಮಗಳು ನನ್ನ ಪಕ್ಕ

ಟ್ಟುಕೊಂಡಿದ್ದ ಪೇಪರ್ ಕಿತ್ತುಕೊಂಡು ೇದಳು.

" ಅಮ್ಮಾ ನನ್ನ ಪೆನ್ ತಗೊಂಡಿದ್ದೀಯಾ " ಪ್ಟ ಸಾರ್ತಿ ನಿಂಗೆ ಹೇಳೋದು, ನನ್ನ ಪೆನ್ ಮುಟ್ಟೇ ಂತ ಹೇಗೇಗೋ ಬರೆದು ಹಾಳು ಮಾಡ್ತೀಯಾ.... ಢಿಲ್ಲಿ ..."

"ಅಯ್ಯೋ .. ಸ್ವಲ್ಪ ಇರೇ ಆಗಿ ಹೋಯಿತು, ನ್ನೊಂದು ಪೇಜು ... ಯಾವುದಾದರೂ ಒಂದು ಪ್ರಾಬ್ಲಂ...."

"ಏನೇ ಅದು ನಿನ್ನ ಪ್ರಾಬ್ಲಂ ? ಅಡಿಗೆ ಮನೇಲಿ ಹುಳಿ ಸೀದು ಹೊಕ್ಕರಿ ಎದ್ದು ಹೋಯಿತು. ಬೇರೆ ಏನಾದರೂ ಮಾಡೋ ಪ್ರಾಬ್ಲಂ ಬಂದಿದೆ. ಮೊದಲು ಅದನ್ನು ಸಾಲ್ವ್ ಮಾಡು, ನನಗೆ ಆಫೀಸಿಗೆ ಹೊತ್ತಾಯಿತು" ಅಂತ ನನ್ಮೆಜಮಾನ್ರು ಬಂದರು.

ಥತ್.... ನನಗೆ ಬರೆಯೋಕೆ ಆಗುತ್ತ್ಯೆ ? ಈ ಗಂಡ, ಮಕ್ಕಳು ಸಂಸಾರ ಇದೇ ದೊಡ್ಡ ಪ್ರಾಬ್ಲಂ ಬೆಳಗಾಗೆದ್ದರೆ ಅಡಿಗೆ, ಊಟ, ತಿಂಡಿ, ಕಾಫೀ ಇದು ಸರಿಯಾಗಿ ಮಾಡಿ ಮುಗಿಸೋಕೆ ದಿನಾ ಪೂರ್ತಿ ಬೇಕು. ಇನ್ನು ನಾನು ಏನು ದೇಶದ ಸಮಸ್ಯೇನ ಪರಿಹರಿಸುತ್ತೀನಿ, ಥತ್ ಒಳ್ಳೆ ರುಚಿಯಾಗಿತ್ತು ಹುಳಿ .... ಬರೆಯೋಕೆ ಕೂತ್ಕೊಂಡು ಹಾಳ್ಮಾಡಿದೆ.. ಯಾರಿಗೆ ಬೇಕಾಗಿದೆ.... ತಗೊಳ್ಳೆ ನಿನ್ನ ಪೆನ್ನು...." ಅಂತ ಬಿಸಾಕಿ ಮೇಲೆದ್ದೆ.

---

# 'ಎಮ್ಮೆಯ ಖೆಡ್ಡಾ'

—ಲಲಿತಮ್ಮ ಡಾ. ಚಂದ್ರಶೇಖರ

ಖ್ಯಾತಿಪ್ರಾಪ್ತಾರ್ಹವಾದ 'ಆನೆಯ ಖೆಡ್ಡಾದ' ಬಗ್ಗೆ ಪ್ರತಿಯೊಬ್ಬರೂ ಕೇಳಿ ಬಲ್ಲರು. ಆನೆಯ ಖೆಡ್ಡಾದ ಬಗ್ಗೆ ದೇಶ ವಿದೇಶದ ಪ್ರವಾಸಿಗಳೆಲ್ಲರೂ ಆಕರ್ಷಿತರಾದ್ದಾರೆ. ಅದರ ಬಗ್ಗೆ ತಿಳಿದುಕೊಳ್ಳಲು ಅನೇಕ ಜನರು ಕುತೂಹಲಿಗಳಾಗಿದ್ದಾರೆ.

ಆದರೆ ನಮ್ಮ ಭಟ್ಟರ ಮನೆಯ 'ಎಮ್ಮೆಯ ಖೆಡ್ಡಾ' ವಿಚಾರವನ್ನು ಕೇಳಿ ಬಿಟ್ಟರೆ ..! ಎಲ್ಲರ ಕುತೂಹಲ ಕೆರಳುತ್ತದೆ. ಬಹಳ ಸ್ವಾರಸ್ಯಕರವಾದ ಸಂಗತಿ ಇದು.

ಭಟ್ಟರ ಕುಟುಂಬ ದೊಡ್ಡದು. ಆರುಜನ ಗಂಡು ಮಕ್ಕಳು , ಆರುಜನ ಹೆಣ್ಣುಮಕ್ಕಳು. ಒಟ್ಟು ಸಂತಾನ ಡಜನಗೆ ಮುಟ್ಟಿತ್ತು. ಅವರ ಕಾಲದಲ್ಲಿ ಇಂದಿನಂತೆ ಮಾತೆತ್ತಿದರೆ.... 'ಮಿತಸಂತಾನ ..., ಮಿತಸಂತಾನ' ಎಂದು ಬೊಬ್ಬೆ ಇಡುವ ಮಂದಿ ಇರಲಿಲ್ಲ.

'ಫ್ಯಾಮಿಲಿಪ್ಲಾನಿಂಗ್' ಎಂದು ಬೋಧಿಸುವ ವಿಲೇಜ್ ವರ್ಕರುಗಳೂ ಇಲ್ಲಿ. ಇಂಗ್ಲೀಷು ಅಷ್ಟಾಗಿ ಪ್ರಚಾರದಲ್ಲಿ ಇರಲಿಲ್ಲ.

ಹೋಗಲಿ ಭಟ್ಟರ ಹೆಂಡತಿ ಮಾಲಕ್ಷಮ್ಮನವರಾದರೂ ಮಹಿಳಾ ಕಾರ್ಯಕ್ರಮದಲ್ಲಿ ಮಧ್ಯಾಹ್ನದ ರೇಡಿಯೋ ಕಾರ್ಯಕ್ರಮದಲ್ಲಿ 'ಕುಟುಂಬ ಯೋಜನೆ' ಕೇಳೋಕೆ... ಆಗ ಹಳ್ಳಿಯಲ್ಲಿ ಇನ್ನೂ ಎಲೆಕ್ಟ್ರಿಕ್‌ಸಿಟಿ ಬಂದಿರಲಿಲ್ಲ. ಇನ್ನೂ ರೇಡಿಯೋ ವಿಚಾರ ದೂರವಾಯ್ತು.

ಪೇಪರ್ ಓದೋಷ್ಟು ಮಾಲಕ್ಷಮ್ಮನವರು ಅಕ್ಷರಸ್ಥೆಯಲ್ಲ. ಆ ಛತ್ರದಂತಹ ಮನೆಯಲ್ಲಿ ಪುರಸೊತ್ತೆಲ್ಲಿ?

ಭಟ್ಟರು ಶುದ್ಧ ಸಾತ್ವೀಕರು. ಮೇಲಾಗಿ ಆಚಾರವಂತರು. "ಈ ಜಗತ್ತಿನಲ್ಲಿ ಪರಮಾತ್ಮನು ತಮ್ಮನ್ನು ಏತಕ್ಕಾಗಿ ಸೃಷ್ಟಿಸಿದ್ದಾನೆ!" ಎಂಬುವುದರ ಅಂತರಾರ್ಥವನ್ನು ಅವರು ಬಹು ಚೆನ್ನಾಗಿ ಬಲ್ಲವರಾಗಿದ್ದರು. ಮೈ ಮುರಿದು ಕೆಲಸ ಕಾರ್ಯ ಮಾಡುವುದೆಂದರೆ ಭಟ್ಟರಿಗೆ ಆಗದು. ಮೂರುತಲೆಮಾರುಗಳಷ್ಟು ಕುಳಿತು ತಿಂದರೂ ಸವೆಯದಷ್ಟು ಆಸ್ತಿ, ಪಾಸ್ತಿಯನ್ನು ಭಟ್ಟರ ತಂದೆ ಸಂಪಾದಿಸಿಟ್ಟಿದ್ದರು.

ಬಹುಶಃ ಭಟ್ಟರ ತಂದೆ ತ್ರಿಕಾಲ ಜ್ಞಾನಿಗಳಾಗಿರಬಹುದು. ಇಲ್ಲವಾದರೆ 'ತಮ್ಮ ಮಗ ಮುಂದೆ ಸುಖ ಜೀವನ ನಡೆಸುವ ಆಸಾಮಿ' ಎಂದು ತಿಳಿದು ಆಸ್ತಿ ಮಾಡಿಡಲಾಗುತ್ತಿತ್ತೇ ?

ತಂದೆ ಕಾಸಿಗೆ ಕಾಸು ಗಂಟು ಹಾಕಿ, ತಲೆಯ ಮೇಲೆ ಮೂಟೆ ಹೊತ್ತು ಸಂಪಾದಿಸಿದ ಆಸ್ತಿಯನ್ನು ಸುಖವಾಗಿ ಕರಗಿಸುವ ದಾರಿಯನ್ನು ಭಟ್ಟರು ಬಲ್ಲವರಾಗಿದ್ದರು. ಸಣ್ಣ ಅಕ್ಕಿ ಅನ್ನ, ಬೆಣ್ಣೆ ಕಾಯಿಸಿದ ತುಪ್ಪ, ಕೆನೆ ಮೊಸರು, ಎರಡು-ಮೂರು ತರಕಾರಿಗಳ ಪಲ್ಯ, ಹಪ್ಪಳ, ಗೊಜ್ಜು, ಇಲ್ಲದೆ ಭಟ್ಟರ ಊಟ ಸಾಗುವಂತೆಯೇ ಇಲ್ಲ. ಬರೀ ಅನ್ನ ಸಾರನ್ನು ತಿಂದ ಆಸಾಮಿಯೇ ಅಲ್ಲ. ಬಿಸಿ ನೀರನ್ನು ಬಿಟ್ಟು ತಣ್ಣೀರಿನಲ್ಲಿ ಕೈ ತೊಳೆದ ಪ್ರಾಣಿಯೇ ಅಲ್ಲ.

ಕೊಟ್ಟಿಗೆಯ ತುಂಬಾ ಕರೆಯುವ ಎಮ್ಮೆಗಳು, ಹಸುಗಳು, ಮನೆಯ ತುಂಬಾ ಮಾಡಲು ಮಂದಿ, ಭಟ್ಟರಿಗೆ ಇನ್ನೇನು ಬೇಕು. ಸೂರ್ಯ ಪಶ್ಚಿಮದಲ್ಲಿ ಹುಟ್ಟಿದರೂ ಎರಡು ವರ್ಷಗಳಿಗೊಮ್ಮೆ ಗಡವು ತಪ್ಪದೆ ಭಟ್ಟರ ಹೆಂಡತಿ ಬಾಣಂತಿ.

ಒಟ್ಟಿನಲ್ಲಿ ಭಟ್ಟರ ಸಂಸಾರ ಸ್ವರ್ಗದ ಸೋಪಾನವಾಗಿತ್ತು. ಯಾರು ನೋಡಿದರೂ ಕರಬುವಂಥಹ ಸಂಸಾರ ಅವರದು. ಆದರೆ ! ಅಂತಹ ನಂದನವನದ ಸಂಸಾರದಲ್ಲಿ "ಧೂಮಕೇತು"ವಿನಂತೆ ಒಂದು ಕಾರ್ಮೋಡದ ನೆರಳು ಕಾಣಿಸಿಕೊಂಡು ಮನೆಯಲ್ಲಿ ಗ್ರಹಣ ಬಡಿದಂತಾಯ್ತು.

ಭಟ್ಟರು ಬಹಳವಾಗಿ ಆಸೆಪಟ್ಟು, ನಾನೂರು ರೂಪಾಯಿ ಕೊಟ್ಟು ಕೊಂಡು ತಂದಿದ್ದ ಸೀಮೆ ಎಮ್ಮೆ ನಾಲ್ಕು ದಿನಗಳಿಂದ ಮಂಗರಮಾಯವಾಗಿತ್ತು. ಹೊತ್ತಿಗೆ ಹತ್ತು ಸೇರು ಹಾಲು ಕೊಡುವ ಎಮ್ಮೆ. ಯಾರಿಗೆ ಉಂಟು ಯಾರಿಗಿಲ್ಲ. ಭಟ್ಟರ ಮನೆಯಿಂದ ಬಿಟ್ಟಿಯಾಗಿ ಎಳೆ ಮಕ್ಕಳಿಗೆ, ಬಾಣಂತಿಯರಿಗೆ, ರೋಗಿಗಳಿಗೆ ಹಾಲು ಸಪ್ಲೈ ಆಗುತ್ತಿತ್ತು. ಅದೆಲ್ಲಾ ನಿಲ್ಲುವ ಸ್ಥಿತಿ ಬಂದಾಗ ಭಟ್ಟರಿಗೆ ಹೇಗಾಗಬೇಕು? ನೀವೆ ಯೋಚಿಸಿ. ಎಮ್ಮೆಯ ಯೋಚನೆಯಿಂದ ಭಟ್ಟರು ಚಿಂತಾಕ್ರಾಂತರಾದರೂ.

ಬಂಗಾರದಂತಹ ಸೀಮೆಯ ಎಮ್ಮೆಯನ್ನು ಹುಡುಕುವುದಕ್ಕಾಗಿ ಹತ್ತು ದಿಕ್ಕಿಗೂ ಜನಗಳು ಹೊರಟರು. ಕಾಡು, ಮೇಡು, ಕೆರೆ, ಬಾವಿ, ಬೆಟ್ಟ-ಗುಡ್ಡ ಎನ್ನದೆ ಅಷ್ಟಮೂಲೆಗಳನ್ನೂ ತಡಕಾಡಿದರು. ಯಾರಾದರೂ ಕದ್ದು ಒಯ್ದಿರುವರೇನೋ ? ಎಂದು ಹಳ್ಳಿ ಹಳ್ಳಿಯಲ್ಲಿಯೂ, ಮೂಲೆ ಮೂಲೆಯಲ್ಲಿಯೂ ಶೋಧಿಸಿ ಹುಡುಕಿದರು.

ಉಹುಂ ! ಎಲ್ಲೆಲ್ಲಿಯೂ ಎಮ್ಮೆಯ ಸುಳಿವೇ ಇಲ್ಲ ಶಾಸ್ತ್ರ, ಜ್ಯೋತಿಷ್ಯಗಳನ್ನೆಲ್ಲಾ ದಕ್ಷಿಣೆ ಇಟ್ಟು ಕೇಳಿ ಅದು ಸಿಕ್ಕದಾಗ ನಿರಾಶರಾದರು. ಚೌಡಮ್ಮ, ದುರ್ಗಮ್ಮನಿಗೆಲ್ಲಾ ಹರಕೆ ಕಟ್ಟಿ, ಎಮ್ಮೆ ವಾಪಸ್ಸು ಬಂದರೆ ಪೂಜೆ ಮಾಡಿಸುವುದಾಗಿ ಹರಕೆಯನ್ನು ಹೊತ್ತರು.

ಉಹುಂ ! ಎಮ್ಮೆ ಸಿಕ್ಕಲಿಲ್ಲ. ಆಸೆ ಪಟ್ಟು ತಂದ ಅಂತಹ ಎಮ್ಮೆ ಹೋದಮೇಲೆ ತಾವಿನ್ನು ಬದುಕಿರಬಾರದು ಎಂದು ಹಸುಳೆಯ ಮನಸ್ಸಿನಂತಹ ಭಟ್ಟರು ಗಟ್ಟಿ ಮನಸ್ಸು ಮಾಡಿ ನಿರಶನ ವ್ರತವನ್ನು ಹೂಡಿ ಹಾಸಿಗೆ ಹಾಸಿ ಮಲಗಿದರು.

ಭಟ್ಟರಿಗೆ ಬೇಕಾಗಿದ್ದ ನಾಲ್ಕಾರು ಮಂದಿ ಹಿತೈಷಿಗಳೂ ಸಹ ಬಂದು ಅವರ ಹಾಸಿಗೆಯ ಸುತ್ತ ಸುತ್ತಿಕೊಂಡು ಸಮಜಾಯಿಸಿ ಹೇಳಿ "ಭಟ್ಟರೇನಾದರೂ ನಿರಶನ ವ್ರತ ಮಾಡಿದರೆ, ತಾವು ಉಪವಾಸ ಮಾಡುವುದಾಗಿ ಆಣೆ, ಪ್ರಮಾಣ, ಪ್ರತಿಜ್ಞೆಗಳನ್ನು ಮಾಡಿ ಮೊಸಳೆಯಂತೆ ಕಣ್ಣಿರನ್ನು ಇಟ್ಟರು. ಅವರೆಲ್ಲರೂ ದಿನಬೆಳಗಾದರೆ ಭಟ್ಟರ ಮನೆಯಲ್ಲಿ ಪೊಗದಸ್ತಾಗಿ ಬೆಣ್ಣೆದೋಸೆ, ಕಾಯಿಚಟ್ನಿ ಪಾವು ಲೋಟದ ಕಾಫಿಗೆ ವಕ್ರಿಸುತ್ತಿದ್ದವರೇ ಆಗಿದ್ದರು.

ಪಾಪ ! ಭಟ್ಟರು ನಿರಶನ ವ್ರತ ಮಾಡಿದರೆ ! ಅವರಿಗೂ ನಿರಶನ ವ್ರತ, ಅವರಿಗೂ ಸಂಕಟವಲ್ಲವೆ ! ಪಾಪ !

ಗೆಳೆಯರ ಹಿತಾಕಾಂಕ್ಷಿಗಳ ಮಾತನ್ನೂ ಮೀರಲಾರದೆ ಭಟ್ಟರು ಸ್ನಾನ ಆಹ್ನಿಕಗಳನ್ನು ಪೂರೈಸಿ ಎಲೆಯ ಮುಂದೆ ಗೆಳೆಯರ ಸಮೇತ ಕುಳಿತರು. ಎಮ್ಮೆಯ ನೆನಪಿನಿಂದಾಗಿ ಅವರ ಗಂಟಲೊಳಕ್ಕೆ ಅನ್ನ ಇಳಿಯದಂತಾಯ್ತು. ಅಂತೂ ಎಂಜಲು/ಶಾಸ್ತ್ರ ಮಾಡಿ ಎದ್ದರು.

ಎಮ್ಮೆಯ ಅನ್ವೇಷಣೆಯಲ್ಲಿ ಮತ್ತೊಂದು ದಿನ ಕಳೆಯಿತು.

ಸಂಜೆಗೆ ಹಿತ್ತಿಲ ಕಡೆಯಿಂದ ಜೋರಾಗಿ ಗಾಳಿ ಬೀಸಿವಾಗ .. ಸಹಿಸಲಾರದಂಥಹ ಕೆಟ್ಟವಾಸನೆಯೊಂದನ್ನು ಹೊತ್ತುತಂದು ಭಟ್ಟರ ಮೂಗಿಗೆ ತಲುಪಿಸಿತು.

"ಎಲಾ ಇದೇನು ? ಕೆಟ್ಟವಾಸನೆ .. ! ಎಲ್ಲಿಂದ ಬಂತು ಈ ದುರ್ನಾತ !" ಭಟ್ಟಕು.... ತಮ್ಮ ಕೂದಲಿನ ಗಂಟನ್ನೆಲ್ಲಾ ಕೆರೆಯುತ್ತಾ ಚಿಂತಿಸಿದರು. ಏನೂ ಹೊಳೆಯಲಿಲ್ಲ.

ಮನೆಯಲ್ಲಿದ್ದ ... ಆಳು ಕಾಳುಗಳನ್ನೆಲ್ಲಾ 'ಗುಟುರು, ಹಾಕಿ ಕೂಗಿ....! ಲ್ರೋ "ಹಿತ್ತಲಕಡೆಯಿಂದ ಗಬ್ಬು ವಾಸನೆ ಬರ್‍ತಾಇದೆ. ಅದೇನು ನೋಡ್ರೋ !" ಎಂದು ಆಜ್ಞಾಪಿಸಿದರು.

ಒಡೆಯನ ಅಪ್ಪಣೆಯನ್ನು ಶಿರಸಾವಹಿಸಿ ಎಲ್ಲರೂ ಹಿತ್ತಲಿನ ಮೂಲೆ ಮೂಲೆಯಲ್ಲಿಯೂ ತಡಕಾಡಿದರು. ಎಲ್ಲೂ ಏನೂ ಕಾಣಲಿಲ್ಲ. ಆದರೇ .. ಎಲ್ಲಿಂದಲೋ ವಾಸನೆ ಬಡಿಯುತ್ತಿದೆ. ಎಲ್ಲಿಂದ ಇರಬಹುದು ? ಎಲ್ಲರಿಗೂ ಸಮಸ್ಯೆಯಾಯ್ತು.

ಪುನಃ ಮತ್ತೊಮ್ಮೆ ಗಾಳಿ ಬೀಸಿದಾಗ....ಹಿತ್ತಿಲ ಕೊಟ್ಟಕೊನೆಯಲ್ಲಿ.... 'ಕಕ್ಕಸು' ಎಂದು ಕರೆಸಿಕೊಳ್ಳು

ತ್ತಿದ್ದ ಮೂಲೆಯ ಹಳ್ಳದ ಕಡೆಯಿಂದ ಆ ಸುವಾಸನೆ ಬಡಿಯುತು.

'ಎಲಾ! ಇಲ್ಲಿಯೇ ಏನೋ ಆಗಿದೆ!' ಎಂದು ಎಲ್ಲರೂ ಅತ್ತ ಹೋದರು. ಅದು ಭಟ್ಟರ ತಾತನ ಕಾಲ ದಿಂದಲೂ.. ಮನೆಯಲ್ಲಿ ನಡೆಯುವ ಮದುವೆ.. ಮುಂಜಿ ಕಾಶಿ ರಾಮೇಶ್ವರ ಸಮಾರಾಧನೆಗಳಲ್ಲಿ...ಮನೆಗೆ ಫೇರಾ ಯಿಸಿದ ಬಂಧು ಬಳಗಗಳು ಲಾಡು ಚಿರೋಟಿಯ ಸಮಾರಾಧನೆಯ ಊಟವನ್ನು ಪೊಗದಸ್ತಾಗಿ ಉಂಡು ತೇಗಿದನಂತರ....ಬಹಿರ್ದೆಶೆಗಾಗಿ ...ಹೋಗುವ ಹಳ್ಳ ಅದಾಗಿತ್ತು.

ಈಗಿನಂತೆ ನವೀನವಾದ ಫ್ಲಷ್‌ಗಳಿಲ್ಲದ ಕಾಲ ಅದು. ಎಲ್ಲಾ ಸಾರವನ್ನೂ ಹೀರಿ ಪುಟ್ಟ ಹಳ್ಳವಾಗಿದ್ದ ಅದರ ಮೇಲೆ ಸೊಂಪಾಗಿ ಸೊಪ್ಪುಸದೆ ಗಿಡಗಳು ಚೆನ್ನಾಗಿ ಬೆಳೆದಿತ್ತು. ಆಳುಗಳೆಲ್ಲಾ ಮಂಗು ಮುಚ್ಚಿ ಕೊಂಡು ಅತ್ತ ಹೋಗಿ ನೋಡಿದಾಗ....ಎಮ್ಮೆಯ ಕೊಂಬುಗಳೆರಡು ಮಾತ್ರ ಮೇಲೆ ಕಾಣುತ್ತಿತ್ತು. ಭಟ್ಟರ ಮನೆಯ ಪುರಾತನವಾದ ವೈತರಣಿ ಹಳ್ಳದಲ್ಲಿ ಬೆಳೆದಿದ್ದ ಸೊಪ್ಪನ್ನು ಸೊಂಪಾಗಿ ಮೇಯಲು ಹೋಗಿದ್ದ ಎಮ್ಮೆ ವೈತರಣಿ ಬಿದ್ದು....ಅದರಿಂದ ಈಜಿ ಬರಲಾರದೆ ಒದ್ದಾಡಿ ಎಮ್ಮೆ ಸ್ವರ್ಗಸ್ಥವಾಗಿತ್ತು.

ಗಾಳಿ ಬೀಸಿದಾಗಲೆಲ್ಲಾ ವೈತರಣಿಯಲ್ಲಿ ಬಿದ್ದು ಸತ್ತು ಕೊಳೆತ ಎಮ್ಮೆಯಿಂದ ಹೊರಟ ಕೆಟ್ಟ ನಾತ... ಸುತ್ತ ಎಲ್ಲಾ ಬಡಿದು ವಾಕರಿಕೆ ಬರುವಂತಾಯ್ತು.

ಆ ಕೆಟ್ಟ ವಾಸನೆಯಿಂದಾಗಿ ಸುತ್ತಮುತ್ತಲಿನ ಯಾರಿಗೂ ಊಟ ಬಾಯಿಯ ಹತ್ತಿರಕ್ಕೆ ಬರದಂತಾಯ್ತು ಅಕ್ಕ ಪಕ್ಕದವರೆಲ್ಲರೂ ಬಂದು "ಭಟ್ಟರೇ! ನೀವು ವೈತ ರಣೀ ನದಿಯಿಂದ ಈಚೆಗೆ ಎಮ್ಮೆಯನ್ನು ತೆಗೆಸುವವರೆಗೆ ನಾವೆಲ್ಲಾ ಉಪವಾಸ ಇರಬೇಕಾಗಿದೆ..! ಆ ಗಬ್ಬು ವಾಸನೆ ತಡೆಯೋಕೆ ಆಗೊಲ್ಲ! ನಾವೆಲ್ಲಾ ಉಪವಾಸ ಸತ್ತರೆ ನಿಮಗೆ ಮಹಾಪಾಪ ಸುತ್ತಿಕೊಳ್ಳುತ್ತದೆ. ಈಗ ಏನು ಮಾಡ್ತಿರಿ" ಎಂದು ಭಟ್ಟರ ಮನೆಯಲ್ಲಿ ಮುಷ್ಕರ ಹೂಡಿದರು.

ಅಕಸ್ಮಾತ್ ಯಾರಾದರೂ ಕೈಲಾಗದೆ ಆ ವೈತರಣಿ ನದಿಯೊಳಕ್ಕೆ ಬಿದ್ದು ಬಿಟ್ಟರೆಂದರೆ.... ಅದ್ಯಾವ ಮನುಷ್ಯನೇ ಆಗಲಿ...ಅದರೊಳ್ಳಕ್ಕೆ ಇಳಿಯುವ ಸಾಹಸವನ್ನು ಮಾಡಲಾರ. ಅಕಸ್ಮಾತ್ ಮೂಗಿಗೆ ಬಟ್ಟೆ ಇಟ್ಟುಕೊಂಡು ಇಳಿದರೂ ಅಂಥಹ ಮನುಷ್ಯನಿಗೆ ಸಚೇಲಸ್ನಾನ ಮಾಡಿಸಿ ಪಂಚಗವ್ಯ ಪ್ರಾಯಶ್ಚಿತ್ತವನ್ನ ಮಾಡಿಸಿದರೂ ಸಾಧ್ಯವಿಲ್ಲ.

ಭಟ್ಟರು ಏನು ಮಾಡಿಯಾರು? ಎಷ್ಟು ಚಿಂತಿಸಿ ದರೂ ಆ ಎಮ್ಮೆಯ ದೇಹವನ್ನು ಹೊರಕ್ಕೆ ಖೆಡ್ಡಾದಿಂದ ಎಳೆಸಿ ಹಾಕುವ ಉಪಾಯ ಹೊಳೆಯಲಿಲ್ಲ. ಏನು ಮಾಡಬೇಕು? ಅವರು ಚಿಂತೆಯಿಂದ ಹಣ್ಣಾದರು. ಅವರಿಗೆ ಮಾತನಾಡಲೂ ಸಹ ಶಕ್ತಿ ಇಲ್ಲದಂತಾಯ್ತು. 'ಏನಾದರೂ ಒಂದಿಷ್ಟು ಹೊಟ್ಟೆಗಾದರೂ ತಿನ್ನೋಣ' ಎಂದರೆ ಆ ಹಾಳು ವಾಸನೆ, ವಾಕರಿಕೆ ಬರುತ್ತದೆ.

ಕೊನೆಗೆ ಭಟ್ಟರಿಗೆ ಏನೂ ತೋರದೆ ಅಲ್ಲಿ ನೆರೆ ದಿದ್ದ ಸಮಸ್ತ ಜನರತ್ತ ತಿರುಗಿ, "ಅಯ್ಯೋ! ನಾನು ಏನೂ ಮಾಡಲಾರೆ! ಯಾರನ್ನು ಎಷ್ಟು ಕೇಳಿಕೊಂ ಡರೂ "ಹಳ್ಳದೊಳಕ್ಕೆ ಇಳಿಯಲಾರೆವು?" ಎನ್ನುತ್ತಾರೆ. ನೀವೆಲ್ಲಾ ಸೇರಿ ಯಾರ ಕೈಯಿಂದಲಾದರೂ ಆ ಎಮ್ಮೆ ಯನ್ನು ತೆಗೆಯಿಸಿ, ಆ ಪುಣ್ಯಾತ್ಮನಿಗೆ ನಾನು ಒಂದು ಎಕರೆ ಗದ್ದೆಯನ್ನು ಮನಃಪೂರ್ವಕವಾಗಿ ಕೊಡುತ್ತೇನೆ" ಎಂದರು.

"ಸರಿ! ಆಗಲಿ!" ಎಂದು, ಎಮ್ಮೆಯ ದೇಹವನ್ನು ವೈತರಣೀ ನದಿಯಿಂದ ಈಚೆಗೆ ತೆಗೆದಂಥಹ ಮಹಾನು ಭಾವನಿಗೆ ಒಂದು ಎಕರೆ ಗದ್ದೆಯನ್ನು ಭಟ್ಟರು ಕೊಡು ತ್ತಾರೆ" ಎಂದು ಎಲ್ಲಾ ಕಡೆ ತಮಟೆ ಬಡಿಸಿ ಡಂಗೂರ ವನ್ನು ಸಾರಿ.

ಅಯ್ಯೋ! ಅದಕ್ಕೆನಂತೆ ಮಹಾಕಷ್ಟ! ಒಂದು ಲಾಜಾದಲ್ಲಿ ತೆಗೆದು ಹಾಕ್ತೀವಿ!" ಎಂದು ಮೀಸೆ ಹುರಿ ಮಾಡಿಕೊಂಡು ಹಾರಾಡುತ್ತಾ ಬಂದ ಹುರಿಯಾಳುಗ ಳೆಲ್ಲಾ ಆ ಎಮ್ಮೆಯ ಖೆಡ್ಡದ ಬಳಿಗೆ ಸಾರಿದಂತೆಲ್ಲಾ ಆ ಕೆಟ್ಟ ನಾತವನ್ನು ತಡೆಯಲಾರದೆ ಅಲ್ಲಿನ ದೃಶ್ಯವನ್ನು ಕಣ್ಣಿಂದ ನೋಡಿ ಸಹಿಸಲಾರದೆ ಬಟ್ಟೆಯಿಂದ ಮೂಗು ಮುಚ್ಚಿಕೊಂಡು, "ಅಪ್ಪಾ...! ಅಪ್ಪ....ಒಂದಲ್ಲ ಹತ್ತು ಎಕರೆ ಜಮೀನು ಕೊಟ್ಟರೂ ಈ ಅಸಹ್ಯ ಸಹಿಸಿಕೊಂಡು, ಆ ಹಳ್ಳದೊಳಕ್ಕೆ ಇಳಿದು ಎಮ್ಮೆಯನ್ನು ತೆಗೆಯಲಾರೆವು. ಆ ವೈಕರಣೀ ನದಿಯಲ್ಲಿ ಇಳಿದು ಬಿಟ್ಟರೆ ಸಾಕು! ಇನ್ನು ಸಾಯುವವರೆಗೆ ಇದರ ಜ್ಞಾಪಕ ಬಂತು ಅಂದ್ರೆ ಅನ್ನದ

ವಾಸನೇನೂ ಹತ್ತಿರಕ್ಕೆ ಸೇರೋಲ್ಲ ಬ್ಯಾಡಪ್ಪಾ...! ಬ್ಯಾಡ! ನಮಸ್ಕಾರ!" ಎಂದು ಮೆಲ್ಲನೆ ಜಾರಿಕೊಂಡು ಮಂಗರ ಮಾಯವಾದುದು.

ಎಷ್ಟು ಹಣದ ಆಸೆಯನ್ನು ತೋರಿಸಿದರೂ ಏನು ಮಾಡಿದರೂ ವೈತರಣಿಯೊಳಕ್ಕೆ ಇಳಿದು ಎಮ್ಮೆಯ ಪಾರ್ಥಿವ ಶರೀರವನ್ನು ಹೊರಕ್ಕೆ ಎಳೆಯಬಲ್ಲ ಮಹಾ ವೀರರ್‍ಯಾರೂ ಮುಂದಕ್ಕೆ ಬರುವ ಸಮರ್ಥರು ಸಿಕ್ಕಲಿಲ್ಲ. ಭಟ್ಟರು ಇಂಗು ತಿಂದ ಮಂಗನಂತೆ ಪೆಚ್ಚಾಗಿ, ಆಕಾಶ ತಲೆಯ ಮೇಲೆ ಬಿದ್ದಂತೆ ತಲೆಯ ಮೇಲೆ ಕೈ ಹೊತ್ತು ಕುಳಿತರು.

ಈಗಿನ ಕಾಲದಲ್ಲಿಯಾಗಿದ್ದರೆ ಒಳ್ಳೇ ಗೊಬ್ಬರ ಎಂದು ಯಾರಾದರೂ ಕೊಳ್ಳುತ್ತಿದ್ದರೇನೋ. ಆದರೆ ಆಗ ಇನ್ನೂ ಹಳೇ ಕಾಲ, ಅಂಥಹ ನವ ವಿಧಾನಗಳ ಬಳಕೆಗಳೇನೂ ಇರಲಿಲ್ಲ.

ಹುಚ್ಚು ಬಿಡುವವರೆಗೆ ಮದುವೆ ಆಗುವಂತಿಲ್ಲ, ಮದುವೆ ಆಗುವವರೆಗೆ ಹುಚ್ಚು ಬಿಡುವಂತಿಲ್ಲ ಎಂಬಂತೆ ಆ ಎಮ್ಮೆಯನ್ನು ಹೊರಕ್ಕೆ ಎಳೆದು ಸಾಗಿಸುವವರೆಗೆ, ಆ ವಾಸನೆಯಿಂದ ಯಾರೂ ಊಟ ಮಾಡುವಂತಿಲ್ಲ. ಆದರೆ ಅದನ್ನು ಹೊರಕ್ಕೆ ಎಳೆದು ಹಾಕುವ ಭೂಪರಿಲ್ಲ! ಹೀಗಾಗಿ ಕೊನೆಗೆ ಭಟ್ಟರಿಗೆ ಏನೂ ತೋರದೆ ಚಿಂತಿಸಿ, ಕಂದಿ, ಕುಂದಿ, ಬಳಲಿ, ಬೆಂಡಾಗಿ ಇನ್ನೇನೂ ಸಾಧ್ಯವಿಲ್ಲದೆ ಎಮ್ಮೆಯ ಖೆಡ್ಡಾದ ವೈತರಣೀ ಹಳ್ಳದ ತುಂಬಾ ಗಾಡಿಗಳಲ್ಲಿ ಮಣ್ಣು, ಕಲ್ಲುಗಳನ್ನು ತರಿಸಿ, ತುಂಬಿಸಿ ಮುಚ್ಚಿಸಿ ಬಿಟ್ಟು ಎಮ್ಮೆಯನ್ನು ನೆಲಸಮಾಧಿ ಮಾಡಿಸಿ, ಅವಕ್ಕೆ ಅಶ್ರು ತರ್ಪಣವನ್ನು ಅರ್ಪಿಸಿ, ಕೈ ತೊಳೆದುಕೊಂಡು ಲಕ್ಷಣವಾಗಿ ಒಂದು ದೊಡ್ಡ ಹಂಡೆ ನೀರನ್ನು ಸ್ನಾನ ಮಾಡಿ, ಸಂಧ್ಯಾವಂದನೆ ಮಾಡಿ, ತಮ್ಮ ಆಶ್ರಿತ ಜನರನ್ನೆಲ್ಲಾ ಪಂಕ್ತಿಯಲ್ಲಿ ಕೂರಿಸಿಕೊಂಡು ಪುಷ್ಕಳವಾಗಿ ಊಟ ಮಾಡಿ, ತೃಪ್ತಿಯಿಂದ ತೇಗಿ, ಹೊಟ್ಟೆ ಸವರಿಕೊಂಡರು.

ನಂತರ ಇದಾದ ಎಷ್ಟೋ ವರ್ಷಗಳ ನಂತರ, ಮೊನ್ನೆ ಭಟ್ಟರ ಮೊಮ್ಮಗಳ ಮದುವೆಗಾಗಿ ಗ್ರಾಮಕ್ಕೆ ಹೋಗಿದ್ದಾಗ ಭಟ್ಟರ ಹಿತ್ತಿಲ ಕಡೆ ನೋಡಿದಾಗ ನನಗೆ ನಗು ಬಂತು. ಅಷ್ಟರಲ್ಲಿ ಅಲ್ಲಿಗೆ ಬಂದ ಭಟ್ಟರು ಹಲ್ಲಿಲ್ಲದ ಬೊಚ್ಚು ಬಾಯಿ ಬಿಟ್ಟು, "ಯಾಕೆ ಲಲಿತ ನಗ್ತಾ ಇದೀಯಾ?" ಎಂದರು.

ಭಟ್ಟರು ಹೊಸದಾಗಿ ಕಟ್ಟಿಸಿದ ಫ್ಲಷ್ ಕಡೆ ತೋರಿಸಿ, "ಎಮ್ಮೆ ಖೆಡ್ಡ ಎಂದಾಗ, 'ಹುಚ್ಚು ಹುಡುಗಿ, ಇನ್ನೂ ಜ್ಞಾಪಕ ಇಟ್ಕೊಂಡಿದ್ದೀಯಾ? ಎಂದು ವೃದ್ಧರಾದ ಅವರೂ ಮನಸಾರೆ ನಕ್ಕು ಕೋಲೂರಿಕೊಂಡು, ಫ್ಲಷ್ ಕಡೆಗೆ ನೋಡಿದರು. ಬಹುಶಃ ಎಮ್ಮೆಯ ಸಮಾಧಿಯನ್ನು ಜ್ಞಾಪಿಸಿಕೊಳ್ಳುತ್ತಿದ್ದರೇನೋ ಇದು ಎಮ್ಮೆಯ ಖೆಡ್ಡಾದ ಕಥೆ.

---

ಹೇ ಪುರುಷೇ! ಯದಿನ ಉಠ ಏಧರ
ಅಮೇ ರಣರೇಶೇ ಹಬು ಅಗ್ರ ಸರ
ತುಮೆ ಯದಿ ಭಯೇದಿಯೆ ಪಚ್ಚಿಗುಂಚಾ
ಅಮೆ ನಾರಿಗಣ ಕೋನರು ಬಾಹಾರಿ
ಧರಿಬು ಅಸಹ ಯೋಗ ತರವಾರಿ

(ಹೇ ಪುರುಷರೇ! ಈ ಸಲ ನೀವು ಏಳದಿದ್ದಲ್ಲಿ ನಾವು ರಣಾವೇಶದಿಂದ ಹೋರಾಡುತ್ತೇವೆ. ನೀವು ಭಯದಿಂದ ಹಿಂಜರಿದಲ್ಲಿ ನಾವು ಲಜ್ಜೆ ತೊರೆದು ಮುಂದಕ್ಕೆ ಬರುತ್ತೇವೆ. ನಾವು ನಾರೀಜನ ಶಸ್ತ್ರ ಹಿಡಿದು ಸಿದ್ಧವಾಗುತ್ತೇವೆ.)

—ಕುಂತಲ ಕುಮಾರಿ ಸಾಬತ (ಒರಿಯಾ ಕವಯಿತ್ರಿ)



# ನಾರಿನ ಕಸೂತಿ

—ಇ. ಪಿ. ಅಲವೇಲು

ಕಲೆ ಮಾನವ ಜೀವನಕ್ಕೆ ಅತ್ಯಗತ್ಯ. ಕಲೆಯ ಸಾಧನೆಯಿಂದ ಮಾನವ ದೈವ ಸಾನಿಧ್ಯ ಹೊಂದ ಬಲ್ಲ. ಇದು ನನ್ನ ಅನುಭವದ ಮಾತು.

ನನಗೆ ಚಿಕ್ಕಂದಿನಿಂದಲೇ ಚಿತ್ರಕಲೆ, ಕಸೂತಿ ಇವೇ ಮೊದಲಾದ ಕಲೆಗಳಲ್ಲಿ ಅಭಿರುಚಿ, ಸುಮಾರು ಮೂರು ವರ್ಷಗಳ ಕಾಲ ಕಲಾಮಂದಿರದಲ್ಲಿ ಶ್ರೀ ಅ. ನ. ಸುಬ್ಬರಾಯರಲ್ಲಿ ಚಿತ್ರಕಲೆಯ ಸೂಕ್ಷ್ಮವನ್ನು ಅರಿತೆ. ಆಗಲೇ ಯಾವ ಚಿತ್ರ ಪದರ್ಶನಲಾದರೂ ನೋಡುವ ಕೌತುಕ ನನಗಿತ್ತು. ಒಂದು ಚಿತ್ರ ಪದರ್ಶನಕ್ಕೆ ಹೋಗಿದ್ದಾಗ ಒಂದು ರಾಮ ದೇವರ ಚಿತ್ರ ನನ್ನ ಮನಸೆಳೆಯಿತು. ಹತ್ತಿರ ನೋಡಿದಾಗ ಅದು ಕೂದಲೆಳೆಗಳಿಂದ ಬಿಡಿಸಿದ ಒಂದು ಸುಂದರ ರೇಖಾ ಚಿತ್ರವಾಗಿತ್ತು. ಶ್ರೇಷ್ಟವೆಂದು ಪರಿಗಣಿಸಲಾಗದ ಕೂದಲೆಳೆಗಿಂತ ಶ್ರೇಷ್ಟವಾದ ದಾರವಲ್ಲದೆ ಬೇರೊಂದು ವಸ್ತುವಿನಿಂದ ಚಿತ್ರ ತಯಾರಿಸಬೇಕೆಂಬ ಕಲ್ಪನೆ ತಕ್ಷಣ ನನ್ನ ಮನಸ್ಸಿಗೆ ಬಂತು. ಶ್ರೇಷ್ಠ ಎಂಬ ಭಾವ ಮನಸ್ಸಿಗೆ ಬಂದಕೂಡಲೇ ದೇವರು, ಹೂವು ಹಾರ ಈ ಮೊದಲಾದ ನೆನಪು ನನಗೆ ಬಂತು. ಈ ಶ್ರೇಷ್ಠವಾದ ಬಾಳೆಯ ನಾರಿನಿಂದಲೇ ಯಾಕೆ ದೇವರ ಚಿತ್ರಗಳನ್ನು ಬಿಡಿಸಬಾರದು ಎಂದು ದಾರಿಯುದ್ದಕ್ಕೂ ಯೋಚಿಸುತ್ತಾ ಮನೆಗೆ ಬಂದ ಕೂಡಲೇ ನಮ್ಮ ತೋಟದ ಬಾಳೆಯ ಗಿಡದಿಂದಲೇ ಹಸಿಯಾದ ಬಾಳೆ ನಾರನ್ನು ಕಿತ್ತು ನುಣ್ಣಗೆ ಮಾಡಲು ಉಗುರಿನಿಂದ ಎಳೆದೆ, ಏನು ಆಶ್ಚರ್ಯ! ಹೊಳೆಪಾದ, ಸ್ವಚ್ಛ ಬಿಳಿಯ, ಕೂದಲೆಳೆಗಳಿಗಿಂತ ತೆಳುವಾದ ನಾರುಗಳು ಹೊರಬಂತು. ನಾರು ಗಟ್ಟಿಯಾಗಿಯೂ ಇತ್ತು, ತಕ್ಷಣವೇ ಬಣ್ಣ ಹಾಕಿ ನೋಡಬೇಕೆಂಬ ಹಂಬಲ. ತೋಟದಲ್ಲೇ ಇದ್ದ ಬಸಳೆ ಸೊಪ್ಪಿನ ಊದಾ ಬಣ್ಣದ ಬೀಜ ಕಣ್ಣಿಗೆ ಬಿತ್ತು. ಅದನ್ನೆ ಯಾಕೆ ಬಣ್ಣಕ್ಕಾಗಿ ಉಪಯೋಗಿಸಬಾರದೆಂದು ಯೋಚಿಸಿ ಆ ಕಾಯಿಗಳನ್ನು ಜಜ್ಜಿ ನೀರಿನಲ್ಲಿ ಸ್ವಲ್ಪ ಉಪ್ಪು ಹಾಕಿ ಕುದಿಸಿ, ಈ ನಾರುಗಳನ್ನು ಅದರಲ್ಲಿ ಹಾಕಿದ್ದಾಗ ನಾರು ಊದಾ ಬಣ್ಣವಾಗಿ ತಿರುಗಿತು. ಸಾಬೂನಿನಿಂದ ತೊಳೆದರೂ ನಾರಿನ ಬಣ್ಣ ಬಿಡಲಿಲ್ಲ. ನನ್ನ ಸಂತೋಷಕ್ಕೆ ಪಾರವಿಲ್ಲವಾಯಿತು. ಆ ನಾರುಗಳಿಂದ ಒಂದು ಕರವಸ್ತ್ರದಲ್ಲಿ ಒಂದು ಚಿಟ್ಟೆಯ ಚಿತ್ರವನ್ನು ಮೊದಲು ತಯಾರಿಸಿದೆ. ನಾರು ನನ್ನ ಚಿತ್ರಕ್ಕೆ ತಕ್ಕಂತೆ ಬಗ್ಗದ ಕಾರಣ ಸ್ವಲ್ಪ ಆಗಾಗ್ಗೆ ನೀರು ಮುಟ್ಟಿಕೊಂಡು ಹೊಲಿದೆ. ಮುದ್ದಿನ ಚಿಟ್ಟೆ ಕರವಸ್ತ್ರದಲ್ಲಿ ಬಣ್ಣ ಚಿತ್ರದಂತೆ ಕಾಣಿಸಿತು. ಈ ಕರವಸ್ತ್ರವನ್ನು ನಾಜೋಕಾಗಿ ಒಗೆದು ಇಸ್ತ್ರಿ ಮಾಡಿದೆ. ಚಿಟ್ಟೆ ಎಲ್ಲವನ್ನೂ ಎದುರಿಸಿ ಹೊಳೆಪಾಗಿ ನಿಂತಿತು. ನಂತರ ವಿವಿಧ ಬಣ್ಣದ ಪುಡಿಗಳನ್ನು ತಂದು ಮೇಲೆ ಹೇಳಿದಂತೆ ವಿವಿಧ ಬಣ್ಣದ ನಾರುಗಳನ್ನು ತಯಾರಿಸಿ ನನ್ನ ಕಲೆಯನ್ನು ಮುಂದುವರೆಸಿದೆ. ನನ್ನ ಎರಡನೆಯ ಚಿತ್ರ ಒಂದು ಬಾಳೆಯ ಮರವಾಗಿಯೇ ಹೊರಬಂತು. ನಂತರ ದೇವರ ಚಿತ್ರಗಳನ್ನು ಹೊಲಿಯಲು ಪ್ರಾರಂಭಿಸಿದೆ ಕೆಲವು ಸಮಯದನಂತರ ಬಾಳೆಯ ನಾರಿಗೆ ಅಭಾವವಾಯಿತು. ಆಗ ಬೇರೆ ಮರಗಳಿಂದ ನಾರನ್ನು ತಯಾರಿಸಲು ಪ್ರಾರಂಭಿಸಿ ಈಗ ಬಾಳೆಯ ನಾರಲ್ಲದೆ, ತೆಂಗು, ಅನಾನಸು, ಎಕ್ಕದ ಗಿಡ, ಸೀತಾಫಲ ಮರ, ಹೊಂಗೇ ಮರ, ಸೆಣಬು, ಕತ್ತಾಳೆ ಇವೆ ಮೊದಲಾದ ಇಪ್ಪತ್ತೊಂದು ವಿಧ ನಾರುಗಳಿಂದ ಐವತ್ತು ಕಲಾ ರಚನೆಗಳನ್ನು ಮಾಡಿದ್ದೇನೆ. ಇನ್ನೂ ಅನೇಕ ನಾರುಗಳನ್ನು ಶೋಧಿಸುತ್ತಲೂ ಇದ್ದೇನೆ. ಈ ಕಲೆಗೆ ಚಿತ್ರ ಕಲೆಯ ಪರಿಚಯವಿದ್ದರೆ ಉತ್ತಮ ನಾರಿನ ಬಣ್ಣವನ್ನು ನಾವೇ ತಯಾರಿಸಬೇಕಿದ್ದರಿಂದ ಬಣ್ಣದ ಮಿಶ್ರಣದ ಬಗ್ಗೆ ನಮಗೆ ಸೂಕ್ಷ್ಮ ತಿಳಿದಿರಬೇಕು. ನಾರಿನಿಂದ ಚಿತ್ರಗಳಲ್ಲದೆ, ಕೈ ಚೀಲಗಳು,

ಕ್ರಾಸ್ ಸ್ಟಿಚ್, ಮೊದಲಾದ ದಾರದಿಂದ ಮಾಡುವ ಎಲ್ಲಾ ಕಸೂತಿಯನ್ನೂ ಮಾಡಬಹುದು. ನನ್ನ ಎಂಟು ದೇವರ ಚಿತ್ರಗಳು ವಿವಿಧ ಮಠಗಳನ್ನು ಅಲಂಕರಿಸಿವೆ. ಆ ಚಿತ್ರಗಳಿಗೆ ಪೂಜಾದಿಗಳು ನಡೆಯುತ್ತಿವೆ. ನಾನು ರಚಿಸಿದ ಕಲಾಕೃತಿಗಳಲ್ಲಿ ನನಗೆ ಅತಿ ಪ್ರಿಯವಾದದ್ದು ಶೃಂಗೇರಿ ಶ್ರೀ ಶಾರದಾಂಬೆಯ ಚಿತ್ರ. ನನ್ನ ಚಿತ್ರಗಳು ಮೈಸೂರು ದಸರಾ ವಸ್ತು ಪ್ರದರ್ಶನ, ದೆಹಲಿ ಅಖಿಲಭಾರತ ಕಸೂತಿ ಪ್ರದರ್ಶನ ಮೊದಲಾದ ಪ್ರದರ್ಶನಗಳಲ್ಲಿ ವಿಶೇಷ ಬಹುಮಾನಗಳನ್ನು ಗಳಿಸಿದೆ. ಈಗ ಕೆಲವು ತಿಂಗಳ ಕೆಳಗೆ "ಕರ್ನಾಟಕ ಲಲಿತ ಕಲಾ ಅಕಾಡಮಿ"ಯವರಿಂದ ನನ್ನ ಏಕ ವ್ಯಕ್ತಿ ಪ್ರದರ್ಶನ ಏರ್ಪಡಿಸಲಾಗಿತ್ತು. ಸಾವಿರಾರು ಜನರು ಬಹಳ ಆಸಕ್ತಿಯಿಂದ ಪ್ರದರ್ಶನವನ್ನು ವೀಕ್ಷಿಸಿದರು. ವೀಕ್ಷಕರ ಮತಕ್ಕಾಗಿ ಇಟ್ಟಿದ್ದ ಪುಸ್ತಕದಲ್ಲಿ ಈ ಕಲೆಗಾಗಿ ತರಗತಿಗಳನ್ನು ನಡೆಸಬೇಕೆಂದೂ ಕೆಲವರೂ, ಈ ಪ್ರದರ್ಶನ ವಿದೇಶಗಳಲ್ಲಿ ನಡೆಯಬೇಕೆಂದು ಕೆಲವರೂ, ಇದು ದೈವದತ್ತವಾದ ಕಲೆ ಎಂದು ಕೆಲವರೂ, ಕಸದಿಂದ ಕಣ್ಮನ ತಣಿಸುವ ರಸ ಎಂದು ಕೆಲವರೂ, ಈ ವಿಷಯವಾಗಿ ಭಾಷಣಗಳನ್ನು ಮಾಡಬೇಕೆಂದು ಕೆಲವರೂ, ಇನ್ನೂ ಹೆಚ್ಚಿನ ಕೃತಿಗಳನ್ನು ಎದುರು ನೋಡುತ್ತಿರುವುದಾಗಿ ಕೆಲವರು ತಮ್ಮ ಅಭಿಪ್ರಾಯವನ್ನು ಬರೆದಿದ್ದಾರೆ. ಎಷ್ಟು ಬೆಲೆಯಾದರೂ ಕೊಳ್ಳಲು ಇಚ್ಛಿಸಿದ ಕಲಾಪ್ರೇಮಿಗಳು ನಾನು ಮಾರಲಿಚ್ಛಿಸದ ಕಾರಣ ನಿರಾಶರಾಗಿದ್ದು ಉಂಟು. ಈ ಕಲಾಕೃತಿಗಳಿಗೆ ಒಳ್ಳೆಯ ಬೆಲೆ ಇದೆ. ಇದಕ್ಕಾಗುವ ವೆಚ್ಚ ಅತಿ ಕಡಿಮೆ. ಆಶಕ್ತಿ, ತಾಳ್ಮೆ, ಶ್ರದ್ಧಾಭಕ್ತಿ ಇವುಗಳಿಂದ ಈ ಕಲಾಕೃತಿಗಳನ್ನು ರಚಿಸಿದಲ್ಲಿ ಉನ್ನತ ಮಟ್ಟದ ಕೃತಿ ರಚನೆಯಾಗುವುದರಲ್ಲಿ ಸಂಶಯವಿಲ್ಲ. ಪೈಂಟಿಂಗ್, ಡ್ರಾಯಿಂಗ್ ಮತ್ತು ಕಸೂತಿ ಕಲೆಯಲ್ಲಿ ನುರಿತವರು ಅತಿ ಉನ್ನತ ಮಟ್ಟದ ಚಿತ್ರಗಳನ್ನು ತಯಾರಿಸಬಹುದು. ಸಾಮಾನ್ಯ ಜ್ಞಾನವಿರುವವರೂ ತಕ್ಕಮಟ್ಟಿಗೆ ಚಿತ್ರಗಳನ್ನು ತಯಾರಿಸಬಹುದು. ನಾವೇ ನಾರುಗಳನ್ನೆಳೆದು, ಬಣ್ಣ ಹಾಕಿ ಚಿತ್ರ ತಯಾರಿಸುವುದು ಹೆಮ್ಮೆಯಲ್ಲವೇ ? ಆಹ್ಲಾದಕರವಲ್ಲವೇ ?

---



# ಉತ್ಸವ ಮೂರ್ತಿ

—ವನಮಾಲಾ ಆಚಾರ್

'ಅಮ್ಮಾ, ಮಲ್ಲಿಗೆ ಮೊಗ್ಗು ತುಂಬಾ ಕಿತ್ತಿದೀನಿ. ಎರಡೂ ಮಾಲೆ ನನಗೇ"

"ಎರಡು ಮಾಲೆ ಏನು ಮಾಡ್ತೀಯೆ ಮಣೀ, ಹಟ ಮಾಡಿ ಒಂದೇ ಚೆತ್ತದ ಜಡೆ ಹಾಕ್ಕೊಂಡು ? ಒಂದು ಮಾಲೇನ್ನ ವಿಜಯಾ ಆಂಟಿಗೆ ಕೊಡೋಣ"

ಪಕ್ಕದ ಮನೆಯ ತಾಯಿ ಮಗಳ ಸಂಭಾಷಣೆ ಅನ್ಯ ಮನಸ್ಕಳಾಗಿ ಮುಳುಗುವ ಸೂರ್ಯನನ್ನು ವೀಕ್ಷಿಸು ತ್ತಿರುವ ನನ್ನ ಕಿವಿಗೆ ಬಿತ್ತು. ಕಾಲೇಜಿನಲ್ಲಿ ಮನೆ ಶಾಸ್ತ್ರದ ಪಾಠ ಹೇಳುವ ನಳಿನಾದೇವಿಗೂ ನಾನು ಉತ್ಸವ ಮೂರ್ತಿಯೇ !

ಪ್ರತಿನಿತ್ಯ ಶ್ರೀನಾಥ ಬರುವ ವೇಳೆಗೆ ನಾನು ಅಲಂಕರಿಸಿಕೊಂಡು ಸಿದ್ಧವಾಗಿರೋದನ್ನ ಆಕೆ ನೋಡಿದಾರೆ. ಈಗಲೂ ಬಹುಶಃ ಕಿಟಕಿಯಿಂದ ನಾನಿಲ್ಲಿ ನಿಂತಿರೋದನ್ನ ನೋಡಿರಬೇಕು. ಇಲ್ಲಿಂದಲೇ ಅವರ ಭಾವನೆಗಳನ್ನ ಊಹಿಸಬಲ್ಲೆ.

"ಸಂಧ್ಯಾಕಾಲದ ನಸುಗೆಂಪು ಛಾಯೆ ವಿಜಯಾ ಮುಖದ ಮೇಲೆ ಬಿದ್ದು ಅವಳ ಚೆಲುವನ್ನು, ತಾಯ್ತನದ ಎದುರು ನೋಡುತ್ತಿರುವ ಆ ಪ್ರಶಾಂತ ಚೆಲುವನ್ನ ಇನ್ನೂ ಹೆಚ್ಚಿಸಿದೆ. ಸಂಜೆಗೆಂಪಿನ ಆ ಹೊಂಗಿರಣದ ಕಾಂತಿ, ಅವಳ ಮುಖಕ್ಕೆ ಅಪೂರ್ವ ಮೆರಗು ಕೊಟ್ಟಿದೆ.

ಸಂಜೆ ಆಫೀಸಿನಿಂದ ದಣಿದು ಬರುವ ಇನಿಯನಿಗಾಗಿ ಅವನ ಮನತಣಿಸಲು ಸಿಂಗರಿಸಿಕೊಂಡು ನಿಂತಿರುವ ಅವಳಿಗೆ ಹೂ ಮಾಲೆ ಕೊಡೋಣ." ಎಂದುಕೊಂಡಿರಬೇಕು ಎಂದು ಅವರ ಭಾವನೆಗಳನ್ನು ಊಹಿಸಿ ನನ್ನ ಸೌಂದರ್ಯದ ವಿಮರ್ಶೆ ಮಾಡಿಕೊಂಡು ನಾ ನೇ ನಸುನಕ್ಕೆ. ನಳಿನಾ ನೋಡಿದ್ದರೆ ಅದರಲ್ಲಿರುವ ವಿಷಾದದ ಛಾಯೆಯನ್ನು ಗುರುತಿಸುತ್ತಿದ್ದರೋ ಇಲ್ಲವೋ.

ಹೌದು. ನನ್ನವರಿಗಾಗಿ ನನ್ನದೇ ಆದ ಜಗತ್ತನ್ನ ಸಂಪೂರ್ಣ ಮರೆತು ಈಗ ನಾನು ಅವರ ಜಗತ್ತಿನ ಒಂದು ಅಸ್ತಿತ್ವಹೀನ ಬಿಂದುವಾಗಿದ್ದೇನೆ. ನನ್ನ ಸ್ವಂತ ಭಾವನೆ–ವಿಚಾರಗಳಿಗೆ ಪೂರ್ಣ ವಿ ರಾ ಮ ಕೊಟ್ಟಾಗ ದಾಂಪತ್ಯ ಜೀವನದಲ್ಲಿ ಸಾಮರಸ್ಯ ಬಾರದೆ ಇನ್ನೇನು.

"ಅಮ್ಮಾ, ಈ ತರಹ ಮೂರು ಮೂರು ಮೊಗ್ಗು ಸೇರಿಸಿ ಪೋಣಿಸಲಾ ?"

ಮಣಿ ಹೂ ಪೋಣಿಸುವ ತರಹವೇ ಹಿಂದಿನ ಒಂದೊಂದೇ ಕಹಿ–ಮಧುರ ಘಟನೆಗಳು ನನ್ನ ಕಣ್ಣ ಮುಂದೆ ಸುಳಿದು ಮಾಲೆಯಾಗಿ ಹೊಂದಿಕೊಂಡವು.

ಬಿ.ಎಸ್ಸಿ. ಮುಗಿದು ಎರಡು ತಿಂಗಳು ಕಳೆದಿರಲಿಲ್ಲ.

"ಅಮ್ಮಾ, ಫಸ್ಟ್‌ನಿಂದ join ಆಗಬೇಕಂತೆ ನೋಡಮ್ಮಾ. ಬ್ಯಾಂಕ್ ಕೆಲಸಕ್ಕೆ ಆರ್ಡರ್ ಬಂದಿದೆ.

"ಹೌದೇ ವಿಜೂ, ಅದೆಷ್ಟು ಬೇಗ ತಿಳಿಸಿದ್ದಾರೆ. ನೀನು ಹೆಣ್ಣಾಗದೇ ಗಂಡಾಗಿದ್ದರೆ......."

"ಗಂಡಾಗಿದ್ದರೆ ಇಷ್ಟು ಬೇಗ ಕೆಲಸ ಸಿಕ್ಕುತಿತ್ತು ಅಂತ ತಿಳಿದಿದ್ದೀಯೇನಮ್ಮ. ಇನ್ನೂ ಎಷ್ಟು ದಿವಸ ನಿರುದ್ಯೋಗಿಯಾಗಿ ಇರತಿದ್ದೇನೋ. ಅಮ್ಮಾ, ನನ್ನ ಮೊದಲನೇ ಸಂಬಳದಲ್ಲಿ ನಿನಗೊಂದು ಒಳ್ಳೇ ಸೀರೆ Present ಮಾಡ್ತೇನಮ್ಮ" ಎಂದೆ.

ಅಮ್ಮನಿಗಿದ್ದದ್ದು ಎರಡೇ ಒಳ್ಳೆಯ ಸೀರೆ. ಪ್ರತಿ ಸಲ ಮನೆಯ ವೆಚ್ಚಕ್ಕೆಲ್ಲ ಕಾಸು ಕೇಳಿದಾಗ, ಬಟ್ಟೆಬರೆ ಬೇಕಾದಾಗ ಮನೆಯಲ್ಲಿ ಅಪ್ಪನಿಗೂ ಅಮ್ಮನಿಗೂ ನಡೆಯುವ ರಾದ್ಧಾಂತ ರೋಸಿಹೋಗುತ್ತಿತ್ತು. ಪ್ರತಿಯೊಂದಕ್ಕೂ ಅಪ್ಪನನ್ನ ಕಾಸು ಕೇಳಬೇಕಾದರೆ, ಅವರು ದರ್ಪದಿಂದ ನಮ್ಮೆಲ್ಲರ ಮೇಲೆ, ಅಮ್ಮನ ಮೇಲೆ ಒಂದು ಮಹಾ ಉಪಕಾರ ಮಾಡಿದ ಹಾಗೆ ಹಣ ಕೊಡುವಾಗ ಅಮ್ಮನ ಮನಸ್ಸು ಮುದುಡಿ ಹೋಗುತ್ತಿತ್ತು. ನಾವು ನಾಲ್ಕು ಜನ ಹೆಣ್ಣಾಗಿ ಹುಟ್ಟಿದ್ದೇ ಅಪರಾಧವಾದಂತೆ ಈಗಿನ ಕಾಲದಲ್ಲೂ ಕೊರಗುವ ಭಾವನೆ ತಂದಿಟ್ಟ ಮಹಾನುಭಾವರು ನಮ್ಮ ತಂದೆ.

ನನಗೆ ಕೆಲಸ ಸಿಕ್ಕು ಹಣ ಎಲ್ಲಿ ಅಮ್ಮನ ಕೈಗೆ ಕೊಟ್ಟಾಗ ಸಾರ್ಥಕತೆ ಅನಿಸುತ್ತಿತ್ತು. ಅಪ್ಪ ಅವಳ ಮೇಲೆ ದಬ್ಬಾಳಿಕೆ ನಡೆಸೋದಕ್ಕೂ ಹೆಚ್ಚು ಆಸ್ಪದ ಇರುತ್ತಿರಲಿಲ್ಲ. ಆರ್ಥಿಕ ಅವಲಂಬನೆಯಿಂದಾಗಿ ಹೆಣ್ಣು ನಮ್ಮ ದೇಶದಲ್ಲಿ ಅದೆಷ್ಟು ಸೋತು ನಡೆಯಬೇಕಲ್ಲ. ಅಥವಾ, ನಮ್ಮ ಮನೆ ಒಂದರಲ್ಲೇ ಹೀಗೆಯೇ ಅನಿಸುತ್ತಿತ್ತು.

ಬ್ಯಾಂಕಿನಲ್ಲಿ ನನ್ನ ಪಕ್ಕದಲ್ಲೇ ಇರುತ್ತಿದ್ದ ವಾಸುದೇವನ್‌ನ ನೋಡೋದಕ್ಕೆ ಒಂದು ದಿನ, ಹುಡುಗಿಯರು ಕನಸಿನ ಸೌಧ ಕಟ್ಟಲು ಪ್ರೇರಕನಾದಂಥವನು ಎಂದು ಹೇಳಬಹುದಾಂಥ ಸ್ಫುರದ್ರೂಪಿ ತರುಣ ಒಬ್ಬ ಬಂದ. ಆಗ tea break ಅದ್ದರಿಂದ ವಾಸುದೇವನ್ ನನ್ನನ್ನೂ ಲಲಿತಾಳನ್ನೂ ಪರಿಚಯ ಮಾಡಿಕೊಟ್ಟರು. ಒಟ್ಟಿಗೇ ಎಲ್ಲರೂ ಹೊಗಿ ಕ್ಯಾಂಟೀನಲ್ಲಿ ತಿಂಡಿ ತಿಂದು ಬಂದೆವು. ವಾಸು ಅವರನ್ನ ಮನವೊಲಿಸಿ ನಮ್ಮ ಬ್ಯಾಂಕಿನಲ್ಲಿ ಅಕೌಂಟ್ ತೆಗೆಯೋದಕ್ಕೆ ಹೇಳಿದಾಗ ಲಲಿತಾಳೇ ಎಲ್ಲ forms ತುಂಬಿ ಕೊಟ್ಟಳು.

ಶ್ರೀನಾಥ ಆಗಾಗ ಹಣ ಡ್ರಾ ಮಾಡಲು ಬರುತ್ತಿದ್ದರು. ಬಂದಾಗಲೆಲ್ಲ ಬರೀ ಒಂದು ಮುಗುಳ್ನಗೆ ಬೀರುತ್ತಿದ್ದರಷ್ಟೇ ನನ್ನ ಕಡೆಗೆ. Token ತೆಗೆದುಕೊಳ್ಳಲು ನನ್ನ ಹತ್ತಿರವೇ ಚೆಕ್ ಬರೆದು ಇಲ್ಲವೆ ಫಾರಂ ತುಂಬಿ ಕೊಡಬೇಕಾಗಿತ್ತು. ಬರಬರುತ್ತ ವಾರದಲ್ಲಿ ಐದುದಿನ ಹಣ ತೆಗೆದುಕೊಳ್ಳಲು ತಪ್ಪದೆ ಒಂಬತ್ತೂವರೆಗೆ ಬಂದಾಗ ನಮಗೆಲ್ಲ ತಮಾಷೆ ಎನಿಸುತ್ತಿತ್ತು. ವಾಸುದೇವನ್ ಹತ್ತಿರ, 'ಒಂದೇ ಸಲಕ್ಕೆ ಹಣ ಡ್ರಾ ಮಾಡಲು ನಿಮ್ಮ ಗೆಳೆಯರಿಗೆ ಹೆದರಿಕೆಯೇನೋ' ಎಂದು ಗೇಲಿ ಮಾಡಿದ್ದೆ. ಮುಂದೆ ಮದುವೆಯಾದ ಮೇಲೆ ಆ ವಿಷಯವಾಗಿ ಶ್ರೀನಾಥಗೆ ತಮಾಷೆ ಮಾಡಿದಾಗ,

"ನಾನು ಏಕೆ ಹಾಗೆ ಬರುತ್ತಿದ್ದೆ ಗೊತ್ತೆ ? ಕೌಂಟರಿನಲ್ಲಿದ್ದು ಚೆಕ್ ಸ್ವೀಕರಿಸಿ ಒಂದು disarming Smile

ಕೊಡತಿದ್ದೆಯೆಲ್ಲ ಅದಕ್ಕೋಸ್ಕರ ಬರತಿದ್ದೆ. ನೀನು ಆ ತರಹದ ಆತ್ಮೀಯತೆಯ ನಗು ನಕ್ಕು ಚೆಕ್ ತೆಗೆದು ಕೊಳ್ಳುವ ವೈಖರಿ ಎಷ್ಟೋ ಜನರನ್ನು ನಿಮ್ಮ ಬ್ಯಾಂಕಿಗೆ ಆಕರ್ಷಿಸುತ್ತಿತ್ತು ವಿಜಯಾ" ಎಂದು ಹೇಳಿದರು.

ಅವರು ನನ್ನಲ್ಲಿ ಮೆಚ್ಚಿಕೊಂಡದ್ದು ನನ್ನ ಕಾರ್ಯ ದಕ್ಷತೆಯನ್ನು, ನನ್ನ ಸೌಂದರ್ಯವನಲ್ಲ. ಉಳಿದ ತರು ಣಿರಿಗಿಂತ ಎಲ್ಲ ತದ್ವಿರುದ್ಧವೇ. ಮದುವೆಯಾದ ನಂತರ ನನ್ನ ಸೌಂದರ್ಯದ ಕಡೆಗೆ ಗಮನ. ಅವರು ತಂದಿಟ್ಟ ಸೀರೆಗಳೆಷ್ಟೋ, ಆ ಮೆಚ್ಚುಗೆಯ ನೋಟ–ನುಡಿ ಸಾಕು ಜೀವನ ಸಾರ್ಥಕ ಎನ್ನಿಸೋದಕ್ಕೆ.

ಆಗ ಒಂದೆರಡು ಒಲುಮೆಯ ಮಾತನ್ನಾಡಿದ್ದರೆ ಹರೆಯದ ಕನಸಿನ ಪ್ರಪಂಚದಲ್ಲಿ ಓಲಾಡಿ ರಸಾಸ್ವಾದ ಮಾಡಬಹುದಿತ್ತೇನೋ ನಾನು. ಹೃದಯದಲ್ಲಿನ ಮಧುರ ತಾನದ ಕಂಪನದಲ್ಲಿ ಮೈಮರೆಯುವ ಆ ಸುಂದರ ಗಳಿಗೆಗಳನ್ನು ಆ ಜೀವ ಸ್ಮರಿಸುತ್ತಿದ್ದೆಯೋ ಏನೋ. ಶ್ರೀನಾಥ್‌ನದು ಒಂದು ವಿಚಾರ ಸರಣಿ. ಹುಡುಗಿಯ ರೆಂದರೆ ನೆರಳಿನಂತೆ ಹಿಂಬಾಲಿಸಿದರೆ ದೂರ ಓಡುತ್ತಾರೆ, ದೂರ ಓಡಿದರೆ ಹಿಂಬಾಲಿಸುತ್ತಾರೆ ಎನ್ನುವ ಸಿನಿಕಲ್ ತತ್ವ ಬೇಕೆಂದೇ ನನಗೆ ಬರೀ ಸವಿನಯದ ಮುಗುಳ್ನಗೆ ಸಲ್ಲಿಸಿ ಲಲಿತ ಹತ್ತಿರ ಹೆಚ್ಚು ಮಾತನಾಡುತ್ತಿದ್ದರು. ಆದರೂ ಅವರು ಬರುವ ವೇಳೆಗೆ ನನಗರಿವಿಲ್ಲದಂತೆಯೇ ಬಾಗಿಲೆಡೆ ಗಮನ ಹರಿಯುತ್ತಿತ್ತು. ಅದೊಂದು 'ಅನು ರಾಗ' ಉತ್ಕಟ ಪ್ರೇಮದ ಸೊಂಕಿಲ್ಲದ ಸಂಭ್ರಮ ಮಾತ್ರ. ನಡುವೆ ಒಂದೂವರೆ ವರ್ಷ ಜರ್ಮನಿಗೆ ಹೋಗಿ ಬಂದಾಗ ಲಲಿತಗೂ ನನಗೂ Presents ತಂದಾಗಲೇ ನನ್ನ ಬಗೆಗಿರುವ ಅವರ ಒಲವಿನ ಸೂಚನೆ ನನಗೆ ಸಿಕ್ಕಿದ್ದು. ಲಲಿತಳ ವಿವಾಹ ನಿಶ್ಚಯದ ಸುದ್ದಿ ತಿಳಿದು ಆವಳಿಗೆ ಜೋಡಿ ಫೋಟೋದ ಫ್ರೇಮನ್ನೂ ನನಗೆ ಸುಂದರವಾದ ಮುತ್ತಿನ ಹಾರವನ್ನೂ ತಂದಾಗಲೇ ಅವರ ಕಲಾತ್ಮಕ ಅಭಿರುಚಿಯ ಅರಿವಾದದ್ದು.

ಅವರಿಗೆ ಸರಿಯಾಗಿ ವಾಸುದೇವನ್ ಇನ್ನೊಬ್ಬ ಘಾಟಿ. ಶ್ರೀನಾಥ ಜರ್ಮನಿಗೆ ಟ್ರೇನಿಂಗ್‌ಗೆ ಹೋದಾಗ ನಮ್ಮ ವಿಷಯವನ್ನೆಲ್ಲ ಬರೆದು ತಿಳಿಸುತ್ತಿದ್ದನಂತೆ. ಅವರು ನನ್ನನ್ನು ಪ್ರೇಮಿಸುತ್ತಿದ್ದುದು ತಿಳಿದಿದ್ದು ಅವನೊಬ್ಬನಿಗೇ ಆದರೂ ನನಗೆ ಅದರ ಸುಳಿವು ಕೊಡದೆ ಅವರ ಗುಟ್ಟನ್ನು ಕಾಪಾಡಿಕೊಂಡು ಬಂದಿದ್ದ. ಅವರ ಪತ್ರ ಬಂದಾಗ ಬರೀ ನಿಮ್ಮನ್ನು ವಿಚಾರಿಸಿದ್ದಾರೆ ಎಂದು ಮೊಟಕಾಗಿ ಹೇಳುತ್ತಿದ್ದ. ಒಮ್ಮೊಮ್ಮೆ ಬರೀ ಲಲಿತಾಗೆ ಮಾತ್ರ ತಿಳಿಸುತ್ತಿದ್ದ.

ಜರ್ಮನಿಯಿಂದ ಹಿಂತಿರುಗಿದ ಮೇಲೆ ನಾನು ಆ ಕೌಂಟರಿನಲ್ಲಿ ಇಲ್ಲದಿದ್ದರೂ ವಾರಕ್ಕೆ ಐದು ಸಲ ಡ್ರಾ ಮಾಡೋದನ್ನು ನಿಲ್ಲಿಸಲಿಲ್ಲ. ಅವರು ಮದುವೆ ಬೇಡಿಕೆ ಇಟ್ಟದ್ದೂ ಮಧುರ ಸನ್ನಿವೇಶವೇ. ಬಾಳಿನಲ್ಲಿ ಒಂದೇ ಒಂದು ಸಲ ಬರುವ ಒಮ್ಮನಸ್ಸಿನ ಉತ್ತರದ ಮಹತ್ತರ ವಾದ ಮೈಲುಗಲ್ಲು. ಟೀಗೆ ನಮ್ಮಿಬ್ಬರನ್ನು ಕರೆದು, ಚಿಕ್ಕ ಹುಡುಗನೊಬ್ಬ ಚೀಟಿ ತಂದುಕೊಟ್ಟು ವಾಸು ದೇವನ್ ನಮ್ಮಿಬ್ಬರನ್ನೇ ಬಿಟ್ಟು ಅರ್ಜೆಂಟಾಗಿ ಹೋಗಿದ್ದು ಲಲಿತ-ವಾಸುದೇವರ ಮಸಲತ್ತು.

"ವಿಜಯಾ, ವಾಸು ತಂದೆ ನಿಮ್ಮ ತಂದೆ ಹತ್ತಿರ ಮಾತಾಡಿ ಜಾತಕ ಪರಿಶೀಲಿಸಿ ನೋಡಿ ಅವರನ್ನು ಒಪ್ಪಿಸಿ ದ್ದಾರೆ. ನನ್ನ ಮದುವೆ ಆಗೋದಕ್ಕೆ ಒಪ್ತೀರಾ ?" ಎಂದು ಶ್ರೀನಾಥ ಕೇಳಿದಾಗ ಭೂಮಿ-ಆಕಾಶಗಳು ಒಂದಾಗಿ, ವಸಂತದ ಮಳೆಗರೆದು ಸಂಭ್ರಮದ ಅರಳು ಮಲ್ಲಿಗೆ ಬಿತ್ತರಿಸಿದ ಸಂವೇದನೆಯಲ್ಲಿ ಬೀಗಿದ ಹೃದಯ ಗರಿಗೆದರಿ ಕುಣಿಯಿತು. ಒಂದು ದಿನವೂ ಉದ್ವೇಗಕ್ಕೆ ಸಿಲುಕಿದ ಪ್ರೇಮಿಯಂತೆ ಪ್ರೇಮದ ಹುಚ್ಚು ಹೊಳೆಯಲ್ಲಿ ತೇಲಿ ಹೋದ ಅಪಕ್ವ ವಿಚಾರದ ಪ್ರೇಮಿಯಂತೆ ವರ್ತಿ ಸದ ಶ್ರೀನಾಥನ ಭಾವನೆಗಳ ಮೇಲಿನ ಪ್ರಭುತ್ವ ಕುಡು ಅವರ ಬಗೆಗೆ ಗೌರವ ಇಮ್ಮಡಿಸಿತು. ಮುಂದೊಮ್ಮೆ ಇಂಥ ಸಂಯಮದ ಹಿನ್ನೆಲೆಯಾದ ಅವರ ಭಗ್ನಪ್ರೇಮದ ಕಥೆ ಕೇಳಿದಾಗ ಅಸೂಯೆಯ ಬದಲು ಮರುಕ, ಪ್ರಾಂಜಲ ಮನಸ್ಸಿಗಾಗಿ ಒಲವು ಮೂಡಿಬಂತು. ನಾನು ಕಲ್ಪಿಸದ ಕನಸು ನನಸಾಗಿ ಸುಂದರ ಭವಿಷ್ಯದ ಬಾಗಿಲು ತೆರೆದು ಸ್ವಾಗತಿಸಿ ನಿಂತಿತ್ತು. ಅಪ್ಪ ಒಪ್ಪಿದ ಮೇಲೆ ಬದಲು ಹೇಳುವ ಅಗತ್ಯವೇ ಇರಲಿಲ್ಲ. ಈ ವಿಷಯದ ಲ್ಲಯೂ ಅಪ್ಪ ನನಗೂ ನನ್ನ ಅಭಿಪ್ರಾಯ ವ್ಯಕ್ತ ಪಡಿ ಸುವ ಸ್ವಾತಂತ್ರ್ಯ ಕೊಡದಿದ್ದರೂ ಎಂದಿನಂತೆ ಪ್ರತಿ ಭಟಿಸಬೇಕು ಎನ್ನುವ ಛಲ ಮೂಡಿ ಬರಲಿಲ್ಲ. ಆದರೂ ಗುರುತಿಸಲಾಗದಂಥ ಅಪಸ್ವರ ಎಲ್ಲೋ ಹೊಸೆದು ಬರು ತ್ತಿತ್ತು.

"ಇದೇನೇ ವಿಜೂ, ಯಾವಾಗಲೂ ಒಂದು ತರಹ ಯೋಚನೆಯಲ್ಲೇ ಇರತೀಯ. ಮದುವೆ ಹತ್ತಿರ ಬಂದಾಗ ನಗನಗತಾ ಗೆಲುವಾಗಿರಬೇಡವೇನೆ ?" ಅಮ್ಮ ಆತಂಕದಿಂದ ಕೇಳಿದರು,

"ಈ ತಿಂಗಳೇ ಕೆಲಸಕ್ಕೆ ರಾಜೀನಾಮೆ ಸಲ್ಲಿಸು ಅಂತಾರಲ್ಲ ಅಮ್ಮ. ಇಷ್ಟು ವರ್ಷ ಕೆಲಸ ಮಾಡಿ, ಇದೇ ವರ್ಷ ಪ್ರಮೋಷನ್ ಸಿಕ್ಕಾಗ ಒಮ್ಮೆಲೇ ಕೆಲಸ ಬಿಟ್ಟು ಮನೆಯಲ್ಲಿ ಮೂಲೆಯಲ್ಲಿ ಕುಳಿತರು ಅಂದರೆ ಏನೋ ಬೇಜಾರಮ್ಮ. ಅದೊಂದರಲ್ಲಿ ಮಾತ್ರ ತುಂಬಾ ಹಟ ಅವರಿಗೆ."

"ಅದೇನು ದೊಡ್ಡ ಸಮಸ್ಯೆ ಅಂತಾ ಮಾತಾಡ ತೀಯಾ. ಅವಶ್ಯಕತೆ ಇದ್ದಾಗ ಕೆಲಸ ಮಾಡಿದೆ. ಅವರಿಗೇನು ಸಂಬಳಕ್ಕೆ ಕೊರತೇನೇ, ಆಸ್ತೀಗೆ ಕಡಿಮೇನೆ, ಒಬ್ಬನೇ ಮಗ. ಅವರಿಗೆ ಸರಿ ಬರಲಿಲ್ಲ ಅಂದ್ರೆ ಬಿಟ್ಟು ಬಿಡು ನವಕರೀನ್ನ. ಅದನ್ನೇ ಒಂದು ದೊಡ್ಡ ಕಾರಣ ವಾಗಿ ಮದುವೆ ಮುರಿತೀಯ? ಮದುವೆಯಾದ ಮೇಲೂ ನೀನು ಕೆಲಸದಲ್ಲಿರಬೇಕು ಅಂತ ನನಗೇನೋ ಆಸೆ. ಎಷ್ಟು ಜನ ಹಾಗಿಲ್ಲ. ಆದರೆ, ಹೆಣ್ಣು ಯಾವತ್ತಿದ್ದರೂ ಸೋತು ಕೈ ಹಿಡಿದವರ ಇಚ್ಛೆಗೆ ತಲೆ ಬಾಗಲೇಬೇಕು ತಾನೆ ? ಆಗಬೇಕಾದ ವಯಸ್ಸಿಗೆ ಮದುವೆಯಾದರೆ ಚೆನ್ನಲ್ಲವೆ ? ಈಗ ನಿನಗೇನು ಯೋಚನೆ ? ಸುಶೀ ಈ ವರ್ಷ ಕೆಲಸ ಹಿಡಿದು ನಿನ್ನ ಜವಾಬ್ದಾರಿ ಹೊತ್ತು ಕೊಂಡಿದ್ದಾಳಲ್ಲ ?"

ಅಸಹಾಯಳಾಗಿ ಅಪ್ಪನ ಕೈಯ್ಯಲ್ಲಿ ದಬ್ಬಾಳಿಕೆ ಸಹಿಸುತ್ತಿರುವ ಅಮ್ಮನೂ ಇದೇ ಸತ್ತ ಹೀನ ತತ್ವಜ್ಞಾನ ಬೋಧಿಸಿದಾಗ ಅಳು ಬರುವಂತಾಯಿತು. ನನಗೆ ಸಹಾನುಭೂತಿ ತೋರಿಸುವವರು ಯಾರೂ ಇರಲಿಲ್ಲ. ಸುಶೀ ಈಗ ನನ್ನ ಸ್ಥಾನದಲ್ಲಿದ್ದುವರಿಂದ ಅವರಿಗೆ ನನ್ನ ದುಡಿಮೆಯ ಅವಸ್ಯಕತೆಯೂ ಇರಲಿಲ್ಲ. ಮದುವೆ ಆಯಿತು. ಅತ್ತೆ ಮನೆಯಲ್ಲಿ ಒಬ್ಬರೇ ಎನ್ನುವ ಕಾರಣ ದಿಂದ ಕೆಲಸಕ್ಕೆ ರಾಜೀನಾಮೆ ಸಲ್ಲಿಸಿಯೂ ಆಯಿತು.

ನಿಷ್ಕ್ರಿಯ ಜೀವನ ಹೆಸರಿಲ್ಲದ ಶೂನ್ಯತೆಯನ್ನು ತಂದೊಡ್ಡಿದೆ. ಕೆಲಸದಲ್ಲಿದ್ದಾಗ ಶನಿವಾರದ ಮಧ್ಯಾಹ್ನ ರವಿವಾರಗಳಿಗೆ ಎದುರು ನೋಡಿ ಅದೊಂದು ದಿನ ಸ್ಪೆಶಲ್ ಪ್ರೋಗ್ರಾಮುಗಳನ್ನು ಹಾಕಿಕೊಂಡು ಕಾಯುವ ಆ ಉತ್ಸುಕತೆ, ಲವಲವಿಕೆಗೆ ಈಗ ಅವಕಾಶವೇ ಇಲ್ಲ. ಮನೆಯಲ್ಲಿ ಕೆಲಸವೂ ಇಲ್ಲ. ಪ್ರತಿನಿತ್ಯ ರವಿವಾರದ ಸೊಬಗು. ಆದಕ್ಕೆ ನವೀನತೆಯೆಲ್ಲಿ ಬಂತು ?

ನನ್ನ ವಿಚಾರಕ್ಕೂ ಶ್ರೀನಾಥನ ವಿಚಾರಕ್ಕೂ ಈ ವಿಷಯದಲ್ಲಿ ಹೊಂದಿದರೆ ತಾನೇ ? ಒಂದೆರಡು ಸಲ ನವಕರಿ ಬಿಟ್ಟಿದ್ದಕ್ಕೆ ಆತಂಕ ವ್ಯಕ್ತಪಡಿಸಿದಾಗ, "ಕೆಲಸ ಬಿಟ್ಟಿದ್ದಕ್ಕೆ ಪಶ್ಚಾತ್ತಾಪವೇಕೆ ವಿಜೂ. ನಿನಗೆ ಅದರ ಅವಶ್ಯಕತೆ ಇದೆಯೆ ನನ್ನ ಸಂಬಳ ಆಸ್ತಿ ಎಲ್ಲ ನಿನ್ನದೇ ಆದಾಗ ? ತಿಂಗಳಿಗೆ ನಿನಗೆ ಅದೆಷ್ಟು ಸೀರೆ ಬೇಕು ಹೇಳು ತಂದು ಕೊಡುವ. ಎಂದು ಹೇಳಿದಾಗ ಶ್ರೀನಾಥ ಮೇಲೆ ರೇಗಿ ಹೋಗುತ್ತಿತ್ತು. ದುಡಿಯುವ ಹೆಂಗಸಿನ ವಿಷಯ ದಲ್ಲಿ ಗಂಡನಿಗಿರುವ ಭಾವನೆ ಇಷ್ಟೇಯೆ ? ಪ್ರತಿಯೊಬ್ಬ ಓದಿದ ಹೆಂಗಸೂ ಕೆಲಸಕ್ಕೆ ಹೋಗಲೇಬೇಕಿಲ್ಲ, ಮನೆ ಸರಿಯಾಗಿ ತೂಗಿಸಿಕೊಂಡು ವ್ಯಕ್ತಿತ್ವದ ವಿಕಾಸ ಮಾಡಿ ಕೊಂಡರೆ ಸಾಕು, ಅವಳ ಬದಲು ಬೇರೊಬ್ಬ ನಿರುದ್ಯೋಗಿ ಗಂಡಸಿಗೆ ಕೆಲಸ ಸಿಕ್ಕುವ ಅವಕಾಶ ಲಭಿಸೀತು, ಎನ್ನುವ ಲೋಕಪ್ರಿಯ ವಾದವೂ ಹುರುಳಿಲ್ಲದ್ದಲ್ಲ ಎನಿಸಿತು. ಆದರೆ ಈ ವ್ಯಕ್ತಿತ್ವದ ವಿಕಾಸ, ಮನೆಗೆಲಸದ ದಕ್ಷತೆ ದುಡಿಯುವ ಮಹಿಳೆಗೂ ಸಾಧ್ಯವಿಲ್ಲವೆ ? ಮನೆಯ ಒಳಗೂ ಹೊರಗೂ ದುಡಿಯುವ ಆಕೆಗೆ ಒಂದು ಅಪೂರ್ವ ಚೇತನ, ಮನೋಧೈರ್ಯ ಇದೆಯಲ್ಲವೆ ?

ಅಮ್ಮಾ , ಇನ್ನೂ ನನ್ನ ಕೆಂಪು ಫ್ರಾಕಿಗೆ ಬಟನ್ ಹಾಕಲೇ ಇಲ್ಲ ನೀನು. ಒಂದು ವಾರದಿಂದ ಹೇಳತಾ ಇದ್ದೀನಿ." ಮಣಿ ಕೇಳಿದಾಗ,

"ಹೌದು ಮಣಿ, ಆಗಲೇ ಇಲ್ಲ. ಯಾವಾಗ ಬಿಡು ವಿದೆ ಹೇಳು. ನಾನೊಂದು ಯಂತ್ರದಂತೆ ಕೆಲಸ ಮಾಡ ಬೇಕು. ಈ ಮನೆಯಲ್ಲಿ ನೀನು ನಿಮ್ಮಪ್ಪ ಸ್ವಲ್ಪಾದರೂ Considerate ಆಗಿದೀರಾ ? ನಾನು ಮನುಷ್ಯಳು ಅಂತಾನೇ ತಿಳಿದಿಲ್ಲ ನೀವು...."

ನಳಿನಾದೇವಿ ಸಿಡಿಮಿಡಿಗೊಂಡದ್ದು ಕೇಳಿದಾಗ, ಈ ಯಾಂತ್ರಿಕ ದುಡಿತ ಬೇಡ ಅಂತಲೇ ಅಲ್ಲವೇ ? ಶ್ರೀನಾಥ ನನಗೆ ಮನೆಯಲ್ಲಿರಿಸುವ ದೊಡ್ಡ ಮನಸ್ಸು ಮಾಡಿದ್ದು ಅನಿಸಿತು. My kingdom for a life like this ಎಂದು King Richard ತರಹ ಕೂಗಿ ಹೇಳಿ ನಳಿನಾದೇವಿಯ ಜೊತೆ ಯಾಂತ್ರಿಕ ಜೀವನವನ್ನು ಅದಲು–ಬದಲು ಮಾಡಿಕೊಳ್ಳಬೇಕು ಎನಿಸಿತು. ಆದರೆ,

ಎಷ್ಟೇ ಸಿಡಿಮಿಡಿಗೊಂಡರೂ ಆಕೆ ಆ ಜೀವನವನ್ನು ಕೈ ಬಿಟ್ಟಾರೇ ಅನಿಸಿತು. ಉದ್ಯೋಗಸ್ಥ ಮಹಿಳೆಗೆ ಉದ್ಯೋಗವೊಂದು ಜೀವನಕ್ಕೆ ಸಾಫಲ್ಯತೆ ಕೊಟ್ಟಿದೆಯೆ ? ಈ ಧನ್ಯತೆಯೇ ಅವಳು ಶಾರೀರಿಕ ಶ್ರಮವನ್ನು ಅಲಕ್ಷಿಸುವಂತೆ ಮಾಡಿದೆಯೆ ? ಬರೀ ಮನೆಗೆಲಸವೇ ಗೃಹಿಣಿಗೆ 24 ಗಂಟೆಯ ಕೆಲಸ, ಅದಕ್ಕೇ ಸುಸ್ತು ಎನ್ನುವ ಗೃಹಿಣಿಗೂ ಮನೆಯ ಒಳಗೂ ಹೊರಗೂ ಯಂತ್ರದಂತೆ ದುಡಿಯುವ ಉದ್ಯೋಗಸ್ಥ ಗೃಹಿಣಿಗೂ ಎಷ್ಟೊಂದು ಅಂತರ ? ಅವಳ ಚೈತನ್ಯದ ಮೂಲ ಮನೋಬಲವೆ ? ಛಲವೆ ?

ನಳಿನಾದೇವಿಯ ಮನೆಗೆಲಸ ಯಾವ ಉದ್ಯೋಗವಿಲ್ಲದ ಗೃಹಣಿಯ ದಕ್ಷತೆಗೆ ಕಡಿಮೆಯಿದೆ ಎಂದೇ ಗೊತ್ತಾಗುತ್ತಿಲ್ಲ. ಈಗ ಮಗಳ ಮೇಲೆ ರೇಗಿದರೂ, ಹೊರೆಗಟ್ಟಲೆ ಪೇಪರುಗಳನ್ನು ಮುಗಿಸಿ ರಾತ್ರಿ ಹನ್ನೆರಡಾದರೂ ಸರಿ ಒಟನ್ ಹಾಕಿಯೇ ಮಲಗುತ್ತಾರೆ ಎನ್ನುವದು ನನ್ನ ಊಹೆಗೆ ನಿಲುಕದ್ದೇನಲ್ಲ.

"ಅಮ್ಮ, ಅಪ್ಪ, ಇವೊತ್ತು ಬೇಗ ಬರುತ್ತೇನೆ, ಸಿನಿಮಾಗೆ ಹೋಗೋಣ ಅಂದಿದ್ದೀರಲ್ಲಮ್ಮ ..."

"ಹೂಂ, ಬರತಾರೆ, ಎಂದು ಬಂದಿದ್ದಾರೆ ಹೇಳು. ಲೈಬ್ರರಿಯಲ್ಲಿ ಕುಳಿತರೆ ಅವರಿಗೆ ಹೊರ ಜಗತ್ತಿನ ಜ್ಞಾಪಕ ಇರುತ್ತದೆಯೇ ? ನಾವೇ ಹೋಗಿ ತರಕಾರಿ ತರೋಣ ನಡಿ, ಪೇಪರು ಮುಗೀತು ಇನ್ನೇನು. ಮಾಲೆಯಾಯ್ತೆ ? ಇರು ಅದನ್ನ ವಿಜಯಾಗೆ ಕೊಟ್ಟು ಬರತೇನೆ" ಎಂದು ನಳಿನಾದೇವಿ ಹೊರಗೆ ಬಂದಾಗ ನನ್ನ ಯೋಚನೆಯ ಮಾಲೆಯೂ ಮುಕ್ತಾಯವಾಯಿತು.

ಅವರ ಕಡೆ ತಿರುಗಿ "ನನಗೇನಾ ಆ ಮಾಲೆ ನಳಿನಾದೇವಿ, ಕೊಡಿ. ಉತ್ಸವ ಮೂರ್ತಿಗೆ ಮಾಲೆ ಕೊಡೋದಕ್ಕೆ ಬಂದಿರಾ ?" ಎಂದು ನಾನು ನಗುತ್ತಾ ಕೇಳಿದಾಗ ಅರ್ಥವಾಗದೆ ಆಕೆ ಕಣ್ಣರಳಿಸಿ ನೋಡಿ, "ಅದ್ಯಾಕೆ ಹಾಗೆ ಹೇಳಿದರಿ?" ಎಂದರು.

ಹೌದು ನನ್ನವರಿಗೆ ನಾನು ಉತ್ಸವ ಮೂರ್ತಿ ಅಲ್ಲವೆ? ನಿತ್ಯ ಪೂಜಿಸುವ ಮೂಲ ವಿಗ್ರಹಕ್ಕೆ ತಾನೇ ಅಗ್ರಸ್ಥಾನ ದೇವಸ್ಥಾನದಲ್ಲಿ? ನನ್ನ ಅಭಿಪ್ರಾಯ, ಆಶೆ, ಆಕಾಂಕ್ಷೆಗಳಿಗೆ ಬೆಲೆ ಕೊಟ್ಟಿದ್ದರೆ ನಿತ್ಯ ಮೂಲವಿಗ್ರಹಕ್ಕೆ ಸಲ್ಲುವ ಪೂಜೆ ಸಲ್ಲಿಸಿದಹಾಗಾಗುತ್ತಿತ್ತು. ನಾಸೀಗ ಅಲಂಕರಿಸಿಕೊಂಡ ಉತ್ಸವದ ಗೊಂಬೆ – ಎಂದು ಜೋರಾಗಿ ಹೇಳಿ ನನ್ನ Cynicism ವ್ಯಕ್ತಪಡಿಸಬೇಕು ಎನಿಸಿತು.

ನಾನು ಸುಮ್ಮನಿದ್ದದ್ದು ನೋಡಿ "ಅದೇಕೆ ಹಾಗೆ ಉತ್ಸವ ಮೂರ್ತಿ ಅಂತ ಹೇಳಿದಿರಿ ? ಶ್ರೀನಾಥ ಅಂಗೈಯಲ್ಲಿಟ್ಟುಕೊಂಡು ಅರಗಿಣಿಯನ್ನು ನೋಡಿಕೊಂಡ ಹಾಗೆ ನೋಡತಾರಲ್ಲ" ಎಂದು ನಳಿನಾ ಹೇಳಿದಾಗ ತಡೆಯಲಿಲ್ಲ.

"ಓs, ಅಲಂಕಾರಿಕ ಭಾಷೆಯ ಗೀಳು ನಿಮಗೂ ಇದೆಯೇ ? ಅಲಂಕಾರಿಕವಾಗಿಯೇ ಹೇಳತೇನೆ ಕೇಳಿ. ಮಹತ್ವಾಕಾಂಕ್ಷಿಯಾದ ಹೆಣ್ಣಿಗೆ ಗಂಡಸಿನ protective instinct ಬೇಡ. ಜೊತೆ ಜೊತೆಯಾಗಿ ಹಕ್ಕಿಯಂತೆ ಹಾರೋ ವೈಚಾರಿಕ ಸಾಮರಸ್ಯ ಬೇಕು ಅಂತಾ ಅನಿಸೋದಿಲ್ಲವೆ?"

"ವೈಚಾರಿಕ ಸಾಮರಸ್ಯವೇ ? ನಮ್ಮದೇ ಒಂದು ತರಹ. ಈ intellectuals ಹಣೆಯ ಬರೆಹ ಏನು ಹೇಳತೀರಾ ? ಇವರನ್ನೇ ನೋಡಿ. ಹೊರೆಗಟ್ಟಲೆ ಪುಸ್ತಕ ಹಿಡಿದು ಲೈಬ್ರರಿಯಲ್ಲಿ ಕುಳಿತು ಬಿಟ್ಟರೆ ಮನೆಯಲ್ಲಿ ತನ್ನ ದಾರೀ ಕಾಯುವ ಸಾಮಾನ್ಯ ಮಟ್ಟದ ಜೀವಿಗಳಿದ್ದಾರೆ ಎಂದು ಅರಿವಿರುತ್ತದೆಯೇ ಅವರಿಗೆ ? ನಮ್ಮವರು ನನ್ನ ಸ್ಥಾನದಲ್ಲಿದ್ದು ಯೋಚಿಸಲಾರರು ಅಂತೀರಾ ? ಸಾಮಾನ್ಯ ಆಶೆ ಆಕಾಂಕ್ಷೆಗಳೂ ಇರುವ ನನಗೆ ಒಂದೊಂದು ಸಲ ಎಷ್ಟು ಬೇಜಾರಾಗುತ್ತದೆ ಗೊತ್ತೆ? ಇವತ್ತು ಪಿಕ್ಚರಿಗೆ ಬರತ್ತೇನೆ ಎಂದವರು ಮರತೇಬಿಟ್ಟಿರಬೇಕು. ಶ್ರೀನಾಥೇ ಸರಿ ..." ಎಂದು ನಿಯತ್ತಾದ ಹೊತ್ತಿಗೆ ಸ್ಕೂಟರಿನ ಮೇಲೆ ಬಂದಿಳಿದ ಶ್ರೀನಾಥನನ್ನು ನೋಡಿ ಹೇಳಿದರಾಕೆ.

ಜೀವನ ಹೀಗಿಲ್ಲದಿದ್ದರೆ,

We look before and after,

And pine for what to not,

ಅಂತಾ ಬರೆದು ಶೆಲ್ಲಿ ಮಹಾನುಭಾವನಾಗುತ್ತಿದ್ದನೇ ?" ಎಂದು ಹೇಳಿ, ಎಂದಿನಂತೆಯೇ ಶ್ರೀನಾಥರ ಹಸನ್ಮುಖ ನೋಡಿದೊಡನೆ ಮನದ ದುಗುಡವೆಲ್ಲ ಮಾಯವಾಗಿ ಸಂಭ್ರಮದ ನಗು ಬೀರಿದೆ ಅವರ ಉತ್ಸಾಹದ ಚಿಲುಮೆಗೆ ಮಾರ್ದನಿಯಾಗಿ.

---

ಸಣ್ಣ ಕತೆ

# ತಂಗಿಯ ಮದುವೆ

— ಜಯಲಕ್ಷ್ಮೀ ಶ್ರೀನಿವಾಸನ್

ರಾಧಿಕಾಗಂತೂ ಅಮಿತಾನಂದ. ಆ ಹೊತ್ತು ಹಗಲು ಯಜಮಾನರು ಆಫೀಸಿಗೆ ಹೊರಟುಹೋದ ಕೂಡಲೇ ಮಗುವಿಗೆ ಹಾಲು ಕುಡಿಸಿ ಎಂದಿಗಿಂತ ಇಂಪಾದ ಜೋಗುಳ ಹಾಡುತ್ತಾ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿದಳು. ಬೇಗನೆ ತಾನೂ ಊಟದ ಶಾಸ್ತ್ರ ಮುಗಿಸಿ ಊರಿಗೆ ಹೋಗಲು ಸಾಮಾನು ಕಟ್ಟಲು ತೊಡಗಿದಳು. ಸೌಂದರ್ಯ ಸಾಧನಗಳು, ಜರತಾರಿ ಸೀರೆಗಳು, ಬಣ್ಣ ಬಣ್ಣದ ಚೋಳಿಗಳು ಇವೇ ಮೊದಲಾದುವು ಕೊಠಡಿಯ ತುಂಬ ಎರೆಚಾಡಿದ್ದವು. ಅವಳ ಪತಿ ದಿನೇಶ್ ಆಫೀಸಿನಿಂದ ಹಿಂದಿರುಗುವುದರೊಳಗಾಗಿ ಪೆಟ್ಟಿಗೆಯನ್ನು ಪ್ಯಾಕ್ ಮಾಡಿ ಮುಗಿಸಿಬಿಡಬೇಕೆಂದು ರಾಧಿಕಾ ಹಠ ತೊಟ್ಟಿದ್ದಳು. ನಡು ನಡುವೆ ಅಳುವ ಮಗುವನ್ನು ಸಂತೈಸಿ ಉಪಚರಿಸಿ ಗಮನಿಸುತ್ತಲೂ ಇರಬೇಕಲ್ಲಾ

ಅಮ್ಮಮ್ಮಾ.. ಊರಿಗೆ ಸಾಮಾನು ಕಟ್ಟುವುದೆಂದರೆ ಅದೇನು ಸಾಮಾನ್ಯ ಕೆಲಸವೇ ? ಗುಂಡಿ ಕಿತ್ತುಹೋದ ಉಡುಪುಗಳನ್ನು ಹಿಂದಿನ ದಿನವೇ ರಿಪೇರಿ ಮಾಡಿದುದಾಯಿತು. ಕೈಗೂಸಿಗೆ ಅವಶ್ಯಕವಾದುವುಗಳನ್ನು ಪ್ರತ್ಯೇಕವಾದೊಂದು ಪೆಟ್ಟಿಗೆಯಲ್ಲಿ ಜೋಡಿಸಿದುದಾಯಿತು. ಅಂಗಡಿಯಿಂದ ತರಬೇಕಾದವುಗಳು ಬೇರೆ, ಇನ್ನೆಷ್ಟೋ ಕೆಲಸಗಳು ತಿಳಿದೇ ಇದೆ. ಆದರೆ, ಆಗ ಅವಳಿಗಿದ್ದ ಉತ್ಸಾಹದಲ್ಲಿ ಎಲ್ಲ ಕೆಲಸವೂ ಆಟದಂತೆ ತೋರಿತೆನ್ನಿ.

"ಆ ತುಂಟಿ ಪೋಲಿ ಸೌಜನ್ಯಾ ! ನನ್ನ ಮದುವೆಯಲ್ಲಿ ನನ್ನನ್ನು ಆಪಾಟಿ ಪರಿಹಾಸ್ಯ ಮಾಡಿ ಕಾಡಿಸಿದಳಲ್ಲಾ ! ಈಗ ಅವಳನ್ನು ಬಿಟ್ಟೇನೆ ! ಹೂಂ.. ಅವಳಿಗೆ ರಿಸೆಪ್ಷನ್ ಸಮಯ ಅತೀ ಲೇಟೆಸ್ಟ್ ಸ್ಟೈಲ್‌ನಲ್ಲಿ ತಲೆಗೆ ತುರುಬು ಕಟ್ಟಿ ಸಿಂಗರಿಸುತ್ತೇನೆ. ಮಿಸಸ್ ಲಾರೆನ್ಸ್ ಹೇಳಿಕೊಟ್ಟ ತುರುಬೇ ಮದುವೆಯ ಹುಡುಗಿಗೆ ಚೆನ್ನ. ಮಿಸ್ ಅಖಿಲಾ ಹೇಳಿಕೊಟ್ಟದು ಅಷ್ಟೇನೂ ಚೆನ್ನಿಲ್ಲಪ್ಪ ವರಪೂಜೆಯೆಂದು ನನ್ನ ಬೆನಾರಸ್ ಹಸುರು ಸೀರೆ ಉಡಿಸುತ್ತೇನೆ. ರಾತ್ರಿ ಲೈಟಿಗೆ ಜಗಜ್ಯೋತಿಯಂತೆ (ಅದರಲ್ಲಿ) ಮೆರೆಯುತ್ತಾಳೆ ನನ್ನ ತಂಗಿ....ಹೂಂ....ಸೌಜನ್ಯಳಷ್ಟು ಚೆಲುವು ಯಾರಿಗುಂಟು ? ಅವಳಿಗೆ ಯಾವ ಬಣ್ಣ ಸೀರೆ ಉಡಿಸಿದರೂ ಚನ್ನವೇ, ಹೆಸರಿಗೆ ತಕ್ಕಂತೆ ಅವಳ ಗುಣವೂ ಅಪರಂಜಿಯಂತದು, ಹೌದು...." ಎಂದೆಲ್ಲ ರಾಧಿಕಾ ತನ್ನ ತಂಗಿಯನ್ನು ನೆನೆನೆನೆದು ಇಂಬುಗನಸು ಕಾಣುತ್ತಿದ್ದಳು. ಅವಳಿಗಿರುವುದು ಸೌಜನ್ಯಳೊಬ್ಬಳೇ ತಂಗಿ, ಅವಳಿಗೆ ಮದುವೆಯೆಂದು ತೌರಿನಿಂದ ಕಳೆದ ವಾರ ಆಹ್ವಾನ ಬಂದಾಗಿನಿಂದ ರಾಧಿಕಾ ಮನದಲ್ಲಿ ಆಹ್ಲಾದವೂ ಆನಂದವೂ ಪೈಪೋಟಿ ಇಟ್ಟವು. ಹಗಲಿರುಳೆನ್ನದೆ ಹೊಲಿಗೆಯ ಯಂತ್ರವನ್ನು ಚಲಿಸಿ ತನಗೂ ಮಗುವಿಗೂ ಹೊಸ ನಮೂನೆಗಳಲ್ಲಿ ಉಡುಪುಗಳನ್ನು ಹೊಲಿಯುತ್ತಿದ್ದಳು. ಈ ಮಜುಗರದಲ್ಲಿ ಪತಿಯ ಉಪಚರಣೆಯಲ್ಲಿ ಅವಳ ಆಶಕ್ತಿ ಕಡಿಮೆಯಾಯಿತೇನೋ !

---

ರಾಧಿಕಾ ಚಿಂತಿಸಿ, ಚಿಂತಿಸಿ ಮನ ಸೋತಳು. ಸೊರಗಿ ತಾನೆ ಏನು ಫಲ ? ಎಂತಹ ಎಡರು-ತೊಡರು ಬರಲಿ ತಾಳ್ಮೆ ವಹಿಸುವುದೇ ಚೆನ್ನವೆಂಬುದನ್ನು ಅರಿತಿದ್ದಳು ಆ ಜಾಣ ಹುಡುಗಿ !

---

ಎಂದಿನಂತೆ ಸಂಜೆ ಐದು ಗಂಟೆಗೆ ದಿನೇಶ್ ಆಫೀಸಿಂದ ತನ್ನ ಮನೆಗೆ ಹಿಂದಿರುಗಿದನು. ರಾಧಿಕಾ ತಂದಿತ್ತ ಕಾಫಿಯನ್ನು ಹೀರುತ್ತ "ರಾಧಿಕಾ ! ಈ ರಾತ್ರೆ ನೀನು ಮದರಾಸಿಗೆ ಹೊರಡಲು ಸಾಧ್ಯವಿಲ್ಲ. ಅಮ್ಮ ಇದೀಗ ರೈಲಲ್ಲಿ ಬರುತ್ತಾಳೆ. ಆಫೀಸಿಗೇ ಕಾಗದ ಬಂತು." ಎಂದು ಶಾಂತವಾಗಿ ನುಡಿದನು. ಆದರೆ, ಆ ನುಡಿಯು ರಾಧಿಕಳ ಮನಸ್ಸಿನಲ್ಲಿ ಬಿರುಗಾಳಿಯನ್ನೇ ಎಬ್ಬಿಸಿತೆನ್ನಿ.

ರಾಧಿಕಾ "ಏನಂದಿರಿ ? ನಾನು ಮದರಾಸಿಗೆ ಹೋಗಬೇಡವೇ ? ಈ ರಾತ್ರಿಯ ಗಾಡಿಗೆ ಮಿಸಸ್ ವೇಣುಗೋಪಾಲ್ ಹೋಗುತ್ತಾರೆ. ಕೈಯಲ್ಲಿ ನಾನು ಸಣ್ಣ ಕೂಸಿನ ಸಹಿತ ಹೋಗುವುದರಿಂದ, ಅವರ ಒತ್ತಾಸೆ ಇರುತ್ತೆ, ರಿಸರ್ವೇಷನ್ ಬೇರೆ ಏನಾಗಬೇಕು ?"

ದಿನೇಶ್ "ನೀನು ಹೋಗದಿದ್ದರೆ ಮದುವೆ ನಿಂತು ಹೋಗುವುದೇನು? ಯಾಕೆ ಹೀಗೆ ಕಿರುಚಿತ್ತೀ ? ರಿಸರ್ವೇಷನ್ ಹಾಳಾಗಲೀ ಅದೆಂತಹ ಮಹಾನಷ್ಟ ?"

ರಾಧಿಕಾ "ನಾನು ಮದುವೆಗೆ ಹೋಗಬಾರದೆಂದರೆ ಸರಿ, ಹೋಗೋಲ್ಲ ಅದಕ್ಕಾಗಿ ಏನೇನೋ ಅನ್ನಬೇಡಿ, ನಿಮಗಂತೂ ಮದುವೆಗೆ ಬರಲು ಸಾಧ್ಯವಿಲ್ಲ, ರಜ ಸಿಗುವುದು ಶ್ರಮ ಎಂದುಬಿಟ್ಟಿರಿ. ನನ್ನನ್ನೂ ಕಳುಹಿಸಬೇಡವೇ? ಬೆಳಗಾದರೆ ಸಂಜೆಯೇ ವರಪೂಜೆ, ನಮ್ಮಪ್ಪ, ಅಮ್ಮ ಏನೆಂದುಕೊಂಡಾರು ?

ದಿನೇಶ್ "ಏನಾದರೂ ತಿಳಿದುಕೊಳ್ಳಲಿ ನನಗೆ ಅಕ್ಕರೆ ಇಲ್ಲ"

ರಾಧಿಕಾ "ಆದರೆ ನಾನು ಹೋಗಬಾರದೆ .." ಎಂದೆನ್ನುವಾಗಲೇ ರಾಧಿಕಾಗೆ ಅಳು ಉಕ್ಕಿ ಬಂತು.

ದಿನೇಶ್ "ಅಮ್ಮ ಇದೀಗ ಬರುತ್ತಾಳೆ, ನೀನೀಗ ಇದೇ ಸಮಯವೆಂದು ತೌರಿಗೆ ಹೊರಟರೆ ಇದು ಬಹಳ ಚೆನ್ನವೇ ? ನಿಮ್ಮ ವಿಷಯವಾಗಿ ನಮ್ಮಮ್ಮ ತಪ್ಪಾಗಿ ತಿಳಿಯುತ್ತಾರಷ್ಟೆ, B.A. ಓದಿದರೇನು? M.A. ಓದಿದರೆ ತಾನೇನು ? ಹೆಣ್ಣಿನ ಬುದ್ಧಿ ಅಲ್ಪಬುದ್ಧಿಯೇ" ಎಂದು ಹೆಂಡತಿಯ ಮೇಲೆ ಗಂಡಸ ಜೋರನ್ನು ತೋರಿಸಿದನು.

ರಾಧಿಕಾಳ ಕಣ್ಣುಗಳಲ್ಲಿ ನಿರಾಶೆಯ ಕಣ್ಣೀರು ಇಳಿಯಲಾಗಿ, ಅಲ್ಲಿಂದ ಪಕ್ಕದ ಕೊಠಡಿಗೆ ಸರಿದಳು.

ಮಹಿಳೆಯರಿಗೆ ಸ್ವಾತಂತ್ರ್ಯ ಬೇಕಂತೆ ! ಸಮಾಜದಲ್ಲಿ ಸಮಾನತೆ, ಅಂದರೆ, ಗಂಡಸರೊಡನೆ ಸಂಸಮಾನ ಸ್ಥಾನ ಬೇಕಂತೆ. ಮಹಿಳೆಯರು ಎಲ್ಲ ಮಾರ್ಗಗಳಲ್ಲಿ ಪ್ರಗತಿ ಹೊಂದಿ ಗಂಡಸರ ಸಮಾನರೆನಿಸಲು ಈ ಗಂಡಸರಲ್ಲವೇ ತಮ್ಮ ಸೊಕ್ಕನ್ನು ಇಳಿಸಿಕೊಳ್ಳಬೇಕು. ಗಂಡಸಿನ ಸೊಕ್ಕು ಇಳಿದ ಹೊರತಾಗಿ ಮಹಿಳೆ ಅದೆಷ್ಟೇ ಪ್ರವೀಣಳಾದರೂ ಕೂಡ ವ್ಯರ್ಥವೇ. ಅವಳ ಪಾಡು ಹೇಳತೀರದು.

ರಾಧಿಕೆಗಂತೂ ಗಂಡನ ಅಜ್ಞೆಯನ್ನು ಮೀರಿಕೊಂಡು ತನ್ನ ತಂಗಿಯ ಮದುವೆಗೆ ಹೋಗಿ ಬರಲು ಸ್ವಾತಂತ್ರ್ಯವೆಲ್ಲಿಯದು? ಅದೇ ಅವಳ ಪತಿ ದಿನೇಶ್.

ಮೂರು ತಿಂಗಳ ಹಿಂದೆ ಅವಳು ಪ್ರಸವಿಸಿ 40ದಿನಗಳ ಬಾಣಂತಿಯಾಗಿರುವಾಗಲೇ ತನ್ನ ತಂಗಿ ಸವಿತಾಳ ಪ್ರಸವಕ್ಕೆ ತನ್ನ ತಾಯಿಯು ಹೋಗಬೇಕೆಂದೂ, ಹಸೀ ಬಾಣಂತಿ ರಾಧಿಕಳನ್ನು ಮೇಲಿಂದ ಮೇಲೆ ಕಾಗದ ಬರೆದು ಕರೆಸಿಕೊಂಡೆನಲ್ಲಾ, ಈಗ ಇವಳು ತನ್ನ ನೆಚ್ಚಿನ ತಂಗಿ, ಏಕಮಾತ್ರ ತಂಗಿಯ ಮದುವೆಗೆ ಹೋಗುವುದನ್ನು, ತನ್ನ ತಾಯ ಬರುವಿಕೆಯ ನಿಮಿತ್ತವಾಗಿ ತಡೆಯುತ್ತಿದ್ದಾನೆ, ಇದೇನು ನ್ಯಾಯ ? ಹಾಗೆ ಅತ್ತೆಮ್ಮ ಬಂದರೇನು ? ಅಡಿಗೆಗೆ ಆಳುಂಟು. ಆಕೆಗೆ ಎಂತಹ ಶ್ರಮವೂ ಇಲ್ಲ. ಯಾಕೆ ಇವರು ಹೀಗೆ ಇವರು ಗೋಳು ಹೊಯ್ದುಕೊಳ್ತಾರೆ .. ನಾನು ಹೆಂಗಸು, ಅವರು ಗಂಡಸು ! ಅದೇ ಮತ್ತೆ ಇಷ್ಟು ತಾರತಮ್ಯ ?

"ಅಮ್ಮಾ ! ಸೌಜನ್ಯಾಗೆ ಮದುವೆ ನಿಶ್ಚಯವಾದೊಡನೆ ನನಗೆ ಬರೆದು ಬಿಡಮ್ಮ, ಹತ್ತು ದಿನಗಳ ಮುಂಚೆಯೇ ನಾನು ಬಂದು ಮದುವೆಯ ಕೆಲಸ–ಕಾರ್ಯಗಳಿಗೆ ನೆರವಾಗುತ್ತೇನೆ, ಎಂದೆಲ್ಲ ರಾಧಿಕಾ ಜಂಭ ಕೊಚ್ಚಿಕೊಳ್ಳುತ್ತಿದ್ದಳು. ಇದೀಗ ಮದುವೆಗೆ ಸಹ ಹೋಗಲಾರದೆ ಪರಿತಪಿಸುತ್ತಿದ್ದಾಳೆ ! ಅವಳ ಅಂತಃಕರಣವನ್ನು ನಿರಾಶೆಯೂ, ದುಃಖವೂ ಒಂದೇ ಸಮನೆ ಪೀಡಿಸಿದವು.

ಅನೇಕ ವಿಧವಾಗಿ ರಾಧಿಕಾ ಚಿಂತಿಸಿ ಚಿಂತಿಸಿ ಮನಸೋತಳು. ಸೊರಗಿ ತಾನೆ ಏನು ಫಲ ? ಏನು ಕುಂದಕ ಬರಲಿ ? ಎಂತಹ ಎಡರು ತೊಡರು ಬರಲಿ, ತಾಳ್ಮೆ ವಹಿಸುವುದೇ ಚೆನ್ನವೆಂಬುದನ್ನು ಅರಿತಿದ್ದಳು ಆ ಜಾಣ ಹುಡುಗಿ.

ಆರತಿ, 1975

ಹತ್ತು-ಹದಿನೈದು ನಿಮಿಷಗಳಿಗೆಲ್ಲ ಬೀದಿಯ ಬಾಗಿಲ ಮುಂದೊಂದು ಆಟೋರಿಕ್ಷಾ ಬಂದ ಸಂತಿತು. ದಂಪತಿಯರಿಬ್ಬರೂ ಓಡಿ ಬಂದರು. ಆಟೋರಿಕ್ಷಾದಿಂದ ಇಳಿದು ಬಂದ ದಿನೇಶನ ತಾಯಿಯು, "ಇದೇನೇ ರಾಧಿಕಾ! ಮದುವೆಗೆ ಹೋಗಲಿಲ್ಲವೇ? ಸೌಜನ್ಯಳ ಮದುವೆ ನಿಶ್ಚಯವಾಯಿತಂತೇ! ನಿಮ್ಮಮ್ಮನ ಒತ್ತಾಸೆಗಾಗಿ ಮದರಾಸಿಗೆ ನೀನು ಹೋಗಿರಬಹುದು ಎಂದಲ್ಲವೇ ನಾನು ಇಲ್ಲಿಗೆ ಬರುತ್ತೇನೆಂದು ಆಫೀಸಿಗೆ ಕಾಗದ ಬರೆಯಿಸಿದೆ. ನೀನಿಲ್ಲಿರುವುದು ತಿಳಿದಿದ್ದರೆ ಮನೆಗೇ ಕಾಗದ ಬರುತ್ತಿತ್ತಲ್ಲಾ, ನಾನಿಲ್ಲಿಗೆ ಬಂದು ಮನೆಯನ್ನು ನೋಡಿಕೊಂಡು ದಿನೇಶನನ್ನೂ ಮದುವೆಗೆ ಕಳುಹಿಸೋಣವೆಂದೇ ಹಸಿ ಬಾಣಂತಿಯನ್ನು ಬಿಟ್ಟು ಅವಸರವಾಗಿ ನಾನಿಲ್ಲಿಗೆ ಬಂದುದು.

ದಿನೇಶ್: ಅವಳಿಗೇನಂತೆ ಒಂದು ವಾರದಿಂದ ಮದರಾಸಿಗೆ ಹೋಗಬೇಕೆಂದು ಕುಣಿಯುತ್ತಿದ್ದಾಳೆ. ಈ ರಾತ್ರಿಯ ಗಾಡಿಗೆ ಹೊರಟು ನಿಂತಿದ್ದಾಳೆ. ನಿನ್ನ ಕಾಗದ ನೋಡಿ ಅವಳನ್ನು ನಿಲ್ಲಿಸಿದ್ದೇನೆ.

ತಾಯಿ: ಬಹಳ ಚೆನ್ನವೋ ನಿನ್ನ ಕೆಲಸ! ತಂಗಿಯ ಮದುವೆಗೆ ಹೋಗಬೇಕು, ಅಮ್ಮನಿಗೆ ಬೇಕು ಬೇಕಾದಂತೆ ಒತ್ತಾಸೆ ಮಾಡಬೇಕು, ಮದುವೆಯ ಸಡಗರದಲ್ಲಿ ಪಾಲಾಗಬೇಕು, ಊರೆಲ್ಲ ಸುತ್ತಿ ಅರಸಿನ-ಕುಂಕುಮಕ್ಕೆ ಕರೆಯಬೇಕು....ಎಂದೆಲ್ಲ ಅವಳಿಗೆ ಅದೆಷ್ಟು ಆಸೆ ಇರಬೇಕು, ಕೊಂಚ ಯೋಚಿಸಿ ನೋಡೋ, ಅವಳ ಪ್ರಯಾಣವನ್ನು ನಿಲ್ಲಿಸಿಬಿಟ್ಟೆನೆಂದು ಹೆಮ್ಮೆ ಕೊಚ್ಚಿಕೊಳ್ಳುತ್ತೀಯಲ್ಲಾ! "ಬಾಮ್ಮಾ ರಾಧಿಕಾ, ಹೊರಡಲು ಬೇಗ ಅಣಿ ಮಾಡಿಕೋ ಮಗು ಎಲ್ಲಿ? ಮಲಗಿದ್ದಾನಾ?...ಎಂದು ಕಾವೇರಮ್ಮನು ಸೊಸೆಗೆ ಆದರದ ನುಡಿ ಅಂದಳು. ತನ್ನ ಅತ್ತೆಮ್ಮನವರನ್ನು ದೈನ್ಯದಿಂದ ಕಂಡ ರಾಧಿಕಾ ಮರುಕ್ಷಣ ತನ್ನ ಪತಿಯ ಕಡೆಗೆ ಒಲುಮೆಯ ನೋಟ ಬೀರಿದಳು.

---

# ದಾಸ ಸಾಹಿತ್ಯ

—ಸರೋಜ ನಾರಾಯಣರಾವ್

ದಾಸ ಸಾಹಿತ್ಯವು ಕನ್ನಡ ಸಾರಸ್ವತ ಪ್ರಪಂಚಕ್ಕೆ ಹರಿದಾಸರ ಅಮೂಲ್ಯವಾದ ಕೊಡುಗೆಯಾಗಿದೆ. ದಾಸ ಸಾಹಿತ್ಯದ ವಿಶೇಷ ಆಕರ್ಷಣೆಯೆಂದರೆ ಸಾಮಾನ್ಯರಿಗೂ ಅರ್ಥವಾಗುವಂತಹ ಸುಲಭ, ಸರಳ ಭಾಷೆ. ಗಹನವಾದ ವಿಷಯಗಳನ್ನು ತಿಳಿಯಾದ ಭಾಷೆಯಲ್ಲಿ ಯಾರೂ ಹಾಡಿಕೊಳ್ಳ ಬಹುದಾಂತಹ ಲಯಬದ್ಧವಾದ ಧಾಟಿಯಲ್ಲಿ ಹೇಳಲಾಗಿದೆ. ಸಂಗೀತ ಅಥವ ಸಾಹಿತ್ಯವನ್ನು ಮುಖ್ಯ ಗುರಿಯಾಗಿ ಇರಿಸಿಕೊಂಡು ರಚಿಸಿದ ಕೃತಿಗಳಲ್ಲವಾದರೂ ದಾಸಸಾಹಿತ್ಯದಲ್ಲಿ ಸಾಹಿತ್ಯಾಂಶವೂ ನಾದ ಮಾಧುರ್ಯವೂ ಹಾಸು ಹೊಕ್ಕಾಗಿ ಸೇರಿಕೊಂಡಿವೆ. ದಾಸರ ಕೃತಿಗಳೆಲ್ಲ ಅನುಭವದ ಆಳದಿಂದ ಮೂಡಿಬಂದ ಸಹಜ ಭಾವಗಳ ಅಭಿವ್ಯಕ್ತಿಯೇ ಆಗಿದೆ. ಶ್ರೀ ಪುರಂದರ ದಾಸರು, ಕನಕದಾಸರು, ಮತ್ತು ವಿಜಯದಾಸರು ಇವರ ಕೃತಿಗಳು ಹೆಚ್ಚು ಪ್ರಚಾರದಲ್ಲಿದ್ದರೂ ಈ ಪರಂಪರೆಯಲ್ಲಿ ಇನ್ನೂ ಅನೇಕ ಮಂದಿ ಹರಿದಾಸರಿದ್ದು ಅವರಲ್ಲಿ ಅನೇಕರ ರಚನೆಗಳು ಈಗ ಉಳಿದಿಲ್ಲ. ಪುರಂದರದಾಸರಿಗೆ ಮೊದಲು ಅರವತ್ತು ಮಂದಿ ಆದ್ಯರೆನ್ನುವ ಹರಿದಾಸರಿದ್ದರೆಂಬ ನಂಬಿಕೆ ಇದೆ. ಶ್ರೀಪಾದರಾಜರೇ ಹರಿದಾಸ ಪರಂಪರೆಗೆ ಪ್ರಸಿದ್ಧರಾದ ಹಿರಿಯರು. ರಂಗವಿಠಲ ನಾಮಾಂಕಿತದಿಂದ ಹಲವು ಉತ್ಕೃಷ್ಟ ಕೃತಿಗಳನ್ನು ರಚಿಸಿದ ಇವರು ದಾಸಸಾಹಿತ್ಯಕ್ಕೆ ಬುನಾದಿ ಹಾಕಿದವರೆಂದು ಹೇಳಬಹುದು. ಶ್ರೀಪಾದರಾಜರ ಶಿಷ್ಯರಾದ ವ್ಯಾಸತೀರ್ಥರು ಗುರುಗಳಿಂದ ಪ್ರಾರಂಭವಾದ ಸಾಹಿತ್ಯರಚನೆಯನ್ನು ಯಶಸ್ವಿಯಾಗಿ ಮುಂದುವರೆಸಿದರು. ಇವರ ಶಿಷ್ಯರಲ್ಲಿ ಪ್ರಮುಖರಾದವರು ಪುರಂದರದಾಸರು ಮತ್ತು ಕನಕದಾಸರು. ಹರಿದಾಸರಲ್ಲಿ ಹರಿಕೃಪೆಯಷ್ಟೇ ಗುರುಕೃಪೆಯೂ ಪ್ರಾಮುಖ್ಯತೆಯನ್ನು ಪಡೆದಿದೆ. ಇದನ್ನು ಅವರ ಕೃತಿಗಳಲ್ಲಿಯೇ ಕಾಣ ಬಹುದು.

ಗುರುವಿನ ಗುಲಾಮನಾಗುವತನಕ
ದೊರೆಯದಣ್ಣ ಮುಕುತಿ
ವ್ಯರ್ಥವಾಯಿತು ಭಕುತಿ

(ಪುರಂದರದಾಸರು)

ಗುರುಕರಣ ಪಡೆದ ಮಾನವ ಕೃತಾರ್ಥ
ಗುರುಕರಣ ಪಡೆಯದವನ ಜನ್ಮ ವ್ಯರ್ಥ
ಗುರು ಮುನಿದು ಅವಘಡಿಸೆ ಕರುಣ ತಪ್ಪುವುದು,
ಗುರು ದಯಾಕರನಾಗೆ ಹರಿಯೊಲಿದು ಸಲಹುವನು
ಗುರುದ್ವಾರವಿಲ್ಲದೆ ಸಿದ್ಧ ಸಾಧನ ನಾಗುವನೆ
ಗುರುವಾಯು ವಿಜಯ ವಿಠಲಗೆ ವಂದಿಸಬೇಕು

(ವಿಜಯದಾಸರು)

ಗುರುವಿನ ಧರ್ಮ ಕೊರಾಣದ ಭಿಕ್ಷ
ಅರಿತು ನೋಡಲು ಮೋಕ್ಷ

(ಮೋಹನದಾಸರು)

ಎಂದೆಲ್ಲಾ ಹಾಡಿರುವುದನ್ನು ನೋಡಿದರೆ ಗುರುಕಟಾಕ್ಷಕ್ಕೆ ಅವರಿತ್ತ ಮಹತ್ವ ಸ್ಥಾನವು ಗೋಚರವಾಗುವುದು. ಪುರಂದರದಾಸರೂ, ಕನಕದಾಸರೂ ತಮ್ಮ ಗುರುಗಳ ಸಂಪೂರ್ಣ ಕೃಪೆಗೆ ಪಾತ್ರರಾಗಿದ್ದರು. ಪುರಂದರದಾಸರು ವ್ಯಾಸರಾಜರಿಂದ, "ದಾಸರೆಂದರೆ ಪುರಂದರದಾಸರಯ್ಯ" ಎನಿಸಿಕೊಂಡರು. "ನೋಡಿದರೆ ಈ ಕನಕನಾಡುವ ಮಾತುಗಳ ಮೂಢ ಜನರರಿಯ ಬಲ್ಲರೆ ಮಹಿಮೆಯನು, ನಾಡಾಡಿಯಂತೆಯೇ ಮಾಡಿಬಿಟ್ಟರು ಇವಗೆ, ನಾಡೆಲ್ಲಾ ಹುಡುಕಿದರೂ ಈಡಾರ ಕಾಣೆ" ಎಂಬ ಕೃತಿಯು, ಕನಕ

ದಾಸರು ವ್ಯಾಸರಾಜರ ಪೂರ್ಣಾನುಗ್ರಹವನ್ನು ಪಡೆದಿದ್ದ ರೆನ್ನಲು ನಿದರ್ಶನವಾಗಿದೆ. ಕನಕದಾಸರು ಧಾರವಾಡ ಜಿಲ್ಲೆಯಲ್ಲಿರುವ ಕಾಗಿನೆಲೆ ಗ್ರಾಮಕ್ಕೆ ಸೇರಿದವರು, ಇವರ ಕೃತಿಗಳಲ್ಲಿ ಕಾಣುವ ಕಾಗಿನೆಲೆ ಆದಿಕೇಶವ ಸ್ವಾಮಿ ಇವರ ಇಷ್ಟದೇವತೆ. ಜಾತಿಯಿಂದ ಕುರುಬರಾದ ಇವರು ವ್ಯಾಸ ತೀರ್ಥರಿಂದ ಮಂತ್ರೋಪದೇಶನನ್ನು ಪಡೆದು ಹರಿದಾಸ ರಾಗಿ ಅನೇಕ ಉತ್ಕೃಷ್ಟ ಕೃತಿಗಳನ್ನು ರಚಿಸಿದರು. "ತಲ್ಲ ಣಿಸದಿರು ಕಂಡ್ಯ ತಾಳು ಮನವೆ" ಎಂಬ ಸುಂದರವಾದ ರಚನೆಯಲ್ಲಿ ಕಲ್ಲೊಳಗೆ ಹುಟ್ಟಿರುವ ಕಪ್ಪೆಗಳಿಗೂ ಆಹಾರ ಒದಗಿಸುವ ದೇವನು ನಮ್ಮನ್ನು ರಕ್ಷಿಸದೆ ಬಿಡುವನೇ ಎಂಬ ಸಂಪೂರ್ಣ ಭರವಸೆ ಮೂಡಿದೆ. "ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ" ಎಂಬ ಕೃತಿಯಲ್ಲಿ "ಸಮಯಾ ಸಮಯ ಉಂಟೆ ಭಕ್ತವತ್ಸಲ ನಿನಗೆ" ಎಂದು ಎಲ್ಲ ಸಮಯದಲ್ಲೂ ಭಕ್ತರನ್ನು ಪೊರೆಯುವ ದೇವನ ಕೊಂಡಾಟವಿದೆ. ಇವರು ಇನ್ನೂರ ಎಂಬತ್ತೊಂಭತ್ತು ಪದಗಳಲ್ಲದೆ, ರಾಮಧ್ಯಾನ ಚರಿತ್ರೆ, ನಳಚರಿತ್ರೆ, ಮೋಹನ ತರಂಗಿಣಿ ಕಾವ್ಯಗಳನ್ನೂ ರಚಿಸಿದ್ದಾರೆ.

ಮಹಾನುಭಾವರ ಜೀವನದಲ್ಲಿ ಒದಗಿಬರುವ ಒಂದೊಂದು ಸಂದರ್ಭದಿಂದ ಅವರ ಜೀವನದ ರೀತಿಯೇ ಬದಲಾಗುವುದು ಅಪರೂಪವಲ್ಲ. ಕನಕದಾಸರು ವಿಜಯ ನಗರದ ಅರಸರ ಸೈನ್ಯದಲ್ಲಿ ಸೇರಿಕೊಂಡಿದ್ದರು. ಒಮ್ಮೆ ನಡೆದ ಸಮರದಲ್ಲಿ ಅವರಿಗೆ ತೀವ್ರ ಗಾಯಗಳಾದುವು. ಆ ಸಮಯದಲ್ಲಿ ಅವರಿಗೆ ಸ್ವಪ್ನದಲ್ಲಿ ದೇವರು ಕಾಣಿಸಿಕೊಂಡು "ನೀನು ದಾಸನಾಗುವೆಯಾ ?" ಎಂದು ಕೇಳಿದಂತಾಯಿತು "ದಾಸನಾಗುವೆ ಈ ನೋವನ್ನು ಶಮನಮಾಡು" ಎಂದು ಬೇಡಿದರು. ಗಾಯಗಳೂ, ನೋವೂ ಗುಣವಾದುವು. ಮುಂದೆ ಅವರು ಹರಿದಾಸರಾದರು. ನಿರ್ದಿಷ್ಟ ವ್ಯಕ್ತಿಯಿಂದ ನಿರ್ದಿಷ್ಟ ಕಾರ್ಯ ನೆರವೇರುವುದಕ್ಕಾಗಿಯೇ ಇಂತಹ ಸಂದರ್ಭ ಒದಗಿ ಬರುವಂತೆ ತೋರುತ್ತದೆ.

ಶ್ರೀ ಪುರಂದರದಾಸರ ಜೀವನದಲ್ಲಿ ಜನಪ್ರಿಯ ವಾಗಿರುವ ಅಂತಹ ಪ್ರಸಂಗವೆಂದರೆ ಮೂಗುತಿಯ ಪ್ರಸಂಗ. ಸಂಸಾರದಲ್ಲಿ ಪತಿಯು ದೈವಭಕ್ತನೋ, ವೈರಾಗ್ಯ ಮನೋಭಾವದವನೋ ಆಗಿದ್ದರೆ ಅವನ ಮನ ಸ್ಸನ್ನು ಲೌಕಿಕದ ಕಡೆಗೆ ಸೆಳೆದು ಹಿಡಿದು ನಿಲ್ಲಿಸುವಂತಹ ಮಡದಿಯರು ಅಪರೂಪವೇನಲ್ಲ. ಪುರಂದರದಾಸರ ವಿಷಯ ಇದಕ್ಕೆ ತದ್ವಿರುದ್ಧವಾಗಿದೆ.

ಶ್ರೀನಿವಾಸ ನಾಯಕರ ಪತ್ನಿಯಾದ ಸರಸ್ವತೀ ಬಾಯಿಗೆ ಪತಿಯ ಲೋಭಿತನ ಸರಿಬೀಳದು, ಅತ್ಯಂತ ಲೋಭಿಯಾಗಿದ್ದು ಕಿಲುಬು ಕಾಸನ್ನೂ ದಾನಮಾಡಲು ಹಿಂದೇಟು ಹಾಕುತ್ತಿದ್ದ ಶ್ರೀನಿವಾಸ ನಾಯಕರು ಸರ್ವಸ್ವ ವನ್ನೂ ದಾನಮಾಡಿ ಪುರಂದರದಾಸರಾಗುವಲ್ಲಿ ಅವರ ಕೈ ಹಿಡಿದ ಪತ್ನಿಯ ಪಾತ್ರ ಹಿರಿದಾದುದು.

ಶ್ರೀನಿವಾಸನಾಯಕ ಮಹಾ ಜಿಪುಣ. ಮನೆಯ ಗೃಹಿಣಿಯಾದವಳಿಗೆ ಮನೆ ಎಂದಮೇಲೆ ವ್ರತ ಕಥೆ, ದಾನ ಧರ್ಮಗಳು ನಡೆಯುತ್ತಿರಬೇಕೆನ್ನುವ ಅಭಿಲಾಷೆ ಇದ್ದುದು ಸಹಜ. ಶ್ರೀನಿವಾಸನಾಯಕನು ಅದಕ್ಕೆಲ್ಲ ಆಸ್ಪದ ಕೊಡು ವವರಲ್ಲ. ಬಡ ಬ್ರಾಹ್ಮಣನೊಬ್ಬನು ತನ್ನ ಮಗನ ಉಪನಯನಕ್ಕಾಗಿ ಏನಾದರೂ ಸಹಾಯ ಮಾಡಬೇಕೆಂದು ನಾಯಕರ ಬಳಿಗೆ ಬಂದನು. ಬ್ರಾಹ್ಮಣನ ಕಾಟವನ್ನು ತಡೆಯಲಾರದೆ ನಾಯಕರು ಒಂದು ಸವಕಲು ನಾಣ್ಯವನ್ನ ಕೊಡಹೋದರು. ಬ್ರಾಹ್ಮಣನು ಅದನ್ನು ನಿರಾಕರಿಸಿ ಹೊರಟುಹೋದನು. ನಾಯಕರು ಮನೆಯಲ್ಲಿಲ್ಲದ ಹೊತ್ತಿನಲ್ಲಿ ಬಂದು ಧರ್ಮಪರಾಯಣಿಯಾದ ಸರಸ್ವತಿ ಬಾಯಿಯನ್ನು ಬೇಡಿ ಅವಳು ಕೊಟ್ಟ ಮೂಗುತಿಯನ್ನು ತೆಗೆದುಕೊಂಡು ನಾಯಕರ ಅಂಗಡಿಗೇ ಹೋದನು. ಮೂಗುತಿ ತನ್ನ ಮಡದಿಯದೆಂದು ಗುರುತಿಸಿದ ನಾಯ ಕನು ಮನೆಗೆ ಬಂದು ಮಡದಿಗೆ ಅವಳ ಮೂಗುತಿಯನ್ನು ತಂದು ತೋರಿಸುವಂತೆ ಕೇಳಿದರು. ಇಂತಹ ಪರೀಕ್ಷೆಗೆ ಒಳಗಾದ ಅವಳು ಈ ಸಂದಿಗ್ಧದಿಂದ ಪಾರಾಗಲು ಆತ್ಮ ಹತ್ಯೆ ಒಂದೇ ತನಗಿರುವ ಮಾರ್ಗವೆಂದು ನಿಶ್ಚಯಿಸಿ ವಿಷ ತೆಗೆದುಕೊಳ್ಳಲೆಂದು ಬಟ್ಟಲನ್ನು ತೆಗೆದುಕೊಂಡಳು. ತಾನು ದಾನವಾಗಿ ಕೊಟ್ಟಿದ್ದ ಮೂಗುತಿಯು ಆ ಬಟ್ಟಲಿ ನೊಳಕ್ಕೆ ಇದ್ದಿತು. ಆಶ್ಚರ್ಯ, ಸಂತೋಷಗಳಿಂದ ತನ್ನ ಕಣ್ಣುಗಳನ್ನು ತಾನೇ ನಂಬಲಾರದಂತಾಯಿತು. ಪತಿಗೆ ತಂದು ತೋರಿಸಿದಳು. ನಾಯಕರು ಇದೇನೋ ವಿಚಿತ್ರ ವಾಗಿದೆಯೆಂದು ಅಂಗಡಿಗೆ ಹೋಗಿ ಮೂಗುತಿಯನ್ನಿಟ್ಟಿದ್ದ ಪೆಟ್ಟಿಗೆಯನ್ನು ತೆಗೆದು ನೋಡಿದಾಗ ಅಲ್ಲಿ ಮೂಗುತಿ ಇರಲಿಲ್ಲ. ಈ ಪ್ರಸಂಗವು ಶ್ರೀನಿವಾಸನಾಯಕರ ಮನ ಸ್ಸನ್ನು ಸಂಪೂರ್ಣವಾಗಿ ಪರಿವರ್ತಿಸಿಬಿಟ್ಟಿತು. ತನ್ನ ಸ್ಥಿರಚರ ಆಸ್ತಿಗಳನ್ನೆಲ್ಲಾ ದಾನಮಾಡಿ ಹರಿದಾಸನಾಗಲು ನಿಶ್ಚಯಿಸಿದರು. ವಿಜಯನಗರಕ್ಕೆ ಹೋಗಿ ಅಲ್ಲಿ ವ್ಯಾಸ ರಾಜರಿಂದ ಹರಿದಾಸ ದೀಕ್ಷೆಯನ್ನು ಪಡೆದರು. ಮುಂದೆ

ಅವರು ಅನೇಕ ಕೀರ್ತನೆಗಳನ್ನು ರಚಿಸಿದರು. ಗಹನವಾದ ತತ್ವಗಳನ್ನೂ ವೇದಾಂತ ವಿಚಾರಗಳನ್ನು ಸಾಮಾನ್ಯರಿಗೆ ಅರ್ಥವಾಗುವಂತೆ ತಿಳಿಸಿರುವುದು ಇವರ ಕೃತಿಗಳ ವೈಶಿಷ್ಟ್ಯವಾಗಿದೆ. ಭಗವದ್ಗೀತೆಯ ಮೂಲ ತತ್ವಗಳಾದ ಸಮತೆ, ಅನಾಸಕ್ತಿ, ಕರ್ಮಫಲತ್ಯಾಗ, ಶ್ರೀ ಕೃಷ್ಣನಿಗೆ ಸಂಪೂರ್ಣ ಆತ್ಮ ಸಮರ್ಪಣ, ನಿಷ್ಕಾಮ ಕರ್ಮ, ಗುಣತೀತಾ-ಸ್ಥಿ ಮೊದಲಾದುವುಗಳನ್ನು ಭೋಧಿಸುವ ಕೃತಿಗಳು ಹಲವಾರು ಇವೆ.

"ಶಕ್ತನಾದರೆ ನೆಂಟರೆಲ್ಲ ಹಿತರು, ಅಶಕ್ತನಾದರೆ ಅವರೆ ವೈರಿಗಳು ಲೋಕದಲಿ...."

"ಕೆಟ್ಟು ನೆಂಟರ ಸೇರುವುದು ಬಲು ಕಠಿಣ...."

ಭಕ್ತಿ ಪ್ರಧಾನವಾದ ಸ್ತೋತ್ರ ಗೀತೆಗಳ, ವೇದಾಂತ ವಿಚಾರಗಳು, ಜೀವನವನ್ನು ತಿದ್ದಿಕೊಳ್ಳಲು ಸಹಾಯಕವಾಗುವಂತಹ ಸುವಿಚಾರಗಳಿಂದ ತುಂಬಿದ ಗೀತೆಗಳು ಹೀಗೆ ದಾಸರ ಪದಗಳಲ್ಲಿ ಅನೇಕ ಬಗೆಯ ರಚನೆಗಳಿವೆ. ಅವರ ಅನುಭವದ ರಸಪಾತ ಈ ಕೃತಿಗಳಲ್ಲಿ ಸುಂದರವಾಗಿ ಮೂಡಿ ಬಂದಿದೆ.

ಪುರಂದರದಾಸರ ವಿಶಾಲ ಮನೋಭಾವ, ಸಂಕುಚಿತ ದೃಷ್ಟಿ ಸಲ್ಲದು ಎಂಬ ಸ್ಪಷ್ಟವಾದ ನಿರೂಪಣೆ ಹಲವು ಕೃತಿಗಳಲ್ಲಿ ಕಂಡು ಬರುತ್ತದೆ. "ಹೊಲೆಯ ಹೊರಗಿಹನೆ ಊರೊಳಗಿಲ್ಲವೆ", "ಆವ ಕುಲವಾದರೇನು, ಆತ್ಮ ಭಾವ ವರಿತ ಮೇಲೆ" ಹುಟ್ಟಿನಿಂದ ಹೊಲೆತನವನ್ನು ನಿರ್ಧರಿಸಲಾಗದು ಸ್ವಭಾವವೂ ಶೀಲವೂ ಅದನ್ನು ನಿರ್ಧರಿಸುವುದು ಎಂಬ ತಾತ್ಪರ್ಯ ಈ ಕೃತಿಗಳಲ್ಲಿ ಸೂಚಿತವಾಗಿದೆ. "ಮಡಿ ಮಡಿ ಮಡಿಯೆಂದು ಮೂರ್ಮಾರು ಹಾರುತಿ, ಮಡಿ ಎಲ್ಲಿಂದ ಬಂತೇ ಬಿಕನಾಶಿ" ಎಂದು ಬಾಹ್ಯ ಆಚರಣೆಗಳಿಗೆ ಪ್ರಾಮುಖ್ಯತೆ ಇಲ್ಲ ಎಂದು ಸೂಚಿಸುತ್ತಾರೆ.

ಜೀವನ ವಿಚಾರ, ವೇದಾಂತ ಪ್ರಧಾನ ಗೀತೆಗಳಲ್ಲದೆ ಪುರಾಣದ ಕತೆಗಳನ್ನೊಳಗೊಂಡ ಕೃತಿಗಳು ಹಾಗೂ ಶ್ರೀ ಕೃಷ್ಣನನ್ನು ವರ್ಣಿಸುವ ನಾನಾ ಗೀತೆಗಳನ್ನೂ ದಾಸರು ರಚಿಸಿದ್ದಾರೆ. ಶ್ರೀಕೃಷ್ಣನನ್ನು "ಅಣೋರಣೀಯ, ಮಹತೋಮಹೀಯ"ನೆಂದು ಕರೆದಿದ್ದಾರೆ. ಬಾಲಕೃಷ್ಣನನ್ನು "ಆಕಾರವಿದ್ದೂ ನಿರಾಕಾರ ಕೂಸು ಸಾಕಾರ ದೃಷ್ಟಿಗೆ ಸಿಲುಕದ ಕೂಸು" ಎನ್ನುತ್ತಾರೆ.

ಇಂತಹ ಅರ್ಥಪೂರ್ಣವಾದ ವರ್ಣನೆಗಳಲ್ಲದೆ ಕೃಷ್ಣನ ರೂಪವು ಕಣ್ಣಿಗೆ ಕಟ್ಟಿದಂತೆ ಚಿತ್ರಿತವಾಗಿರುವ "ಕೊಳಲ ನೂದುತ್ತ ಬಂದ ನಮ್ಮ ಗೋಪಿಯ ಕಂದ", "ಮೂರುತಿಯನೆ ನಿಲಿಸೋ" ಮುಂತಾದ ಗೀತೆಗಳೂ ಉಂಟು. ಪುರಾಣದ ಕತೆಗಳನ್ನು ಸುಲಭ ಶೈಲಿಯಲ್ಲಿ ನಿರೂಪಿಸಿರುವ ಗೀತೆಗಳಿಗೂ ಕೊರತೆಯಿಲ್ಲ. ಧ್ರುವ, ಪ್ರಹ್ಲಾದರ ಚರಿತ್ರೆ, ದ್ರೌಪದಿಗೆ ಕೃಷ್ಣನು ಅಕ್ಷಯ ವಸ್ತ್ರವನ್ನಿತ್ತು ಸಲಹಿದುದು, ಅಜಮಿಳೋಪಾಖ್ಯಾನ ಇತ್ಯಾದಿ ಕತೆಗಳಲ್ಲದೆ, "ಧರೆಯನೊಯ್ದನ ಕೋರೆ ದಾಡೆಯಲ್ಲಿ ಕಾಯ್ದೆಯೋ ವೆಂಕಟೇಶಾ, ತರಳಗೊಲಿದು ನೀ ಕಂಭದಲಿ ಬಂದೆಯೋ, ಭೂಮಿದಾನವ ನೀಡಿದವನ ಬಾಗಿಲ ಕಾಯ್ದೆಯೋ ವೆಂಕಟೇಶಾ ..."ಹೀಗೆ ದಶಾವತಾರವನ್ನು ವರ್ಣಿಸುವ ಕೃತಿಗಳೂ ಇವೆ. ಪುರಾಣದ ಕತೆಗಳೂ, ಸುಲಭವಾಗಿ ಎಲ್ಲರಿಗೂ ತಿಳಿಯುವಂತಹ ಉಪಮಾನ, ಉಪಮೇಯಗಳೂ ಅನೇಕ ಕೃತಿಗಳಲ್ಲಿ ಬರುತ್ತವೆ. ಭಕ್ತಿ ಗೀತೆಗಳನ್ನು ರಚಿಸಿದ್ದಲ್ಲದೆ, ಕರ್ನಾಟಕ ಸಂಗೀತವನ್ನು ಅದು ಈಗ ಇರುವ ಸ್ಥಿತಿಯಲ್ಲಿ ಸುವ್ಯಸ್ಥಿತವಾಗಿ ರೂಪಿಸಿದವರೂ ಪುರಂದರದಾಸರೇ. ಸಂಸ್ಕೃತ ಸಾಹಿತ್ಯಕ್ಕೆ ವಾಲ್ಮೀಕಿಯಂತೆ ಕರ್ನಾಟಕ ಸಂಗೀತಕ್ಕೆ ಪುರಂದರದಾಸರು ಆದಿ ಗುರುಗಳೆಂದು ಪ್ರಖ್ಯಾತಿಯಿದೆ.

ಶ್ರೀ ವ್ಯಾಸತೀರ್ಥರು, ಕನಕದಾಸರು, ಪುರಂದರದಾಸರು ಇವರ ನಂತರ ದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದವರು ವಿಜಯದಾಸರು. ಚೀಕಲಪರವಿ ಅಥವ ಚಿಕ್ಕಬದರಿ ಎಂಬಲ್ಲಿ ಕ್ರಿ.ಶ. 1687ರಲ್ಲಿ ಜನಿಸಿದರು, ಸಂಸಾರದಲ್ಲಿ ವಿರಕ್ತರಾಗಿ ಕಾಶಿಯನ್ನು ದಾಟಿ ವ್ಯಾಸ ಕಾಶಿಗೆ ಹೋದರು. ಅಲ್ಲಿ ಪುರಂದರದಾಸರು ಸ್ವಪ್ನದಲ್ಲಿ ಬಂದು "ವಿಜಯ ವಿಠಲ" ಎಂಬ ಅಂಕಿತವನ್ನು ಕೊಟ್ಟು ಗುರೂಪದೇಶ ಮಾಡಿದರೆಂದು ಪ್ರತೀತಿ. ಪುರಂದರದಾಸರು ನಾಲ್ಕು ಲಕ್ಷ ಇಪ್ಪತ್ತೈದು ಸಾವಿರ ಪದಗಳನ್ನು ರಚಿಸಿರುವರೆಂದು ನಂಬಿಕೆ. ಉಳಿದ ಎಪ್ಪತ್ತೈದು ಸಾವಿರ ಕೃತಿಗಳನ್ನು ರಜಿಸಲು ಗುರು ಪುರಂದರರು ವಿಜಯದಾಸರಿಗೆ ಆಜ್ಞಾಪಿಸಿದರಂತೆ. ವಿಜಯದಾಸರ ರಚನೆಗಳು ತತ್ವವಿಚಾರ, ಹಾಗೂ ಭಕ್ತಿ ಪ್ರಧಾನವಾಗಿವೆ. ವಿಚಾರ ಗರ್ಭಿತವಾದ, ಅರ್ಥಪೂರ್ಣವಾದ ಕೃತಿಗಳು. ಜ್ಞಾನವಿಲ್ಲವೆ ಮೋಕ್ಷವಿಲ್ಲ ಎನ್ನುವ ವಿಜಯದಾಸರು, "ವೇದವ ನೋದಿದರೇನು ಶಾಸ್ತ್ರವನೋದಿದರೇನು, ಕಾಶಿಗೆ ಹೋದ

ರೇನು, ಕಾನನ ಸೇರಿದರೇನು, ಕಾಶಿ ಪಿತಾಂಬರ ಉಟ್ಟರೇನು, ಜಪತಪ ಮಾಡಿದರೇನು, ಔಣತನದೊಳ್ ಮೆರೆದರೇನು ?" ಎಂದು ಕೇಳುವರು. ಜ್ಞಾನವಿಲ್ಲದೆ ಮೋಕ್ಷವಿಲ್ಲ ಎನುವುದೇ ಇವರ ನಿರ್ಧಾರ.

"ಹರಿಯೇ ನಿನ್ನಾಧೀನ ಸಕಲ ಚೇತನವು, ಕುಣಿಸಿದರೆ ಕುಣಿವೆ, ನಗಿಸಿದರೆ ನಗುವೆ, ಅಳಿಸಿದರೆ ಅಳುವೆ, ಉಣಿಸಿದರೆ ಉಣುವೆ" ಎಂಬ ಹಾಡಿನಲ್ಲಿ ಪುರಂದರದಾಸರ, "ಹರಿಚಿತ್ತ ಸತ್ಯಹರಿಚಿತ್ರ" ಎಂಬ ಕೃತಿಯಲ್ಲಿರುವಂತೆಯೇ ಸರ್ವಸ್ವವೂ ದೇವನ ಅಧೀನವೆಂಬ ಸಮರ್ಪಣ ಭಾವವಿದೆ. ಪುರಂದರದಾಸರ ನಂತರ ಅತಿಹೆಚ್ಚಿನ ಸಂಖ್ಯೆಯಲ್ಲಿ ಪದ-ಸುಳಾದಿಗಳನ್ನು ರಚಿಸಿದ ಕೀರ್ತಿ ವಿಜಯದಾಸರು.

ಪುರಂದರದಾಸರು ಕನಕದಾಸರು ಹಾಗೂ ವಿಜಯದಾಸರೇ ಅಲ್ಲದೆ ಹರಿದಾಸ ಪರಂಪರೆಯುಲ್ಲಿ ಜಗನ್ನಾಥದಾಸರು, ಮೋಹನದಾಸರು ಮೊದಲಾದವರು ಸಹ ಉತ್ಕೃಷ್ಟ ಕೃತಿಗಳನ್ನು ರಚಿಸಿದ್ದಾರೆ. ಜಗನ್ನಾಥದಾಸರು ರಚಿಸಿರುವ "ಹರಿಕಥಾಮೃತಸಾರ" ಎನ್ನುವ ಮೂವತ್ತೆರಡು ಸಂಧಿಗಳ ಗ್ರಂಥವು ದಾಸಸಾಹಿತ್ಯಕ್ಕೆ ಅವರಿತ್ತ ಶ್ರೇಷ್ಠ ಕಾಣಿಕೆಯಾಗಿದೆ.

ದಾಸ ಪಂಥವು ಕನ್ನಡ ನಾಡಿಗೇ ಸೀಮಿತವಾದುದಲ್ಲ. ಭಾರತದಲ್ಲಿ ಹಾಗೂ ಪ್ರಪಂಚದ ನಾನಾ ಭಾಗಗಳಲ್ಲಿ ಆಗಿಂದಾಗ ದಾಸಪಂಥವು ರೂಪುಗೊಂಡು ಜನಸಾಮಾನ್ಯರಲ್ಲಿ ಭಕ್ತಿ-ಭಾವವನ್ನು ಹೆಚ್ಚಿಸಲು ಮತ್ತು ಓರೆಕೋರೆಗಳನ್ನು ತಿದ್ದಿಕೊಂಡು ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸಲು ಶ್ರಮಿಸಿರುವುದು, ಸಂಸ್ಕೃತದ ಪರಿಚಯವಿಲ್ಲದವರೂ, ಉದ್ಗ್ರಂಥಗಳನ್ನು ಓದಿ ಅರ್ಥಮಾಡಿಕೊಳ್ಳಲು ಚೈತನ್ಯವಿಲ್ಲದವರೂ ದಾಸರ ಪದಗಳಿಂದಲೇ ಅಪಾರ ಜ್ಞಾನವನ್ನೂ ಋಜು ಜೀವನಕ್ಕೆ ಬೇಕಾದ ಸ್ಫೂರ್ತಿಯನ್ನೂ ಪಡೆಯಬಹುದು. ಪುರಂದರದಾಸರ ಕೃತಿಗಳನ್ನು ಅವರ ಗುರುಗಳು ಪುರಂದರೋಪನಿಷತ್ ಎಂದೇ ಕರೆದು ಗೌರವಿಸಿದ್ದಾರೆ.

ಕನ್ನಡ ಸಾಹಿತ್ಯ ಹಾಗೂ ಕರ್ನಾಟಕ ಸಂಗೀತ ಎರಡೂ ಕ್ಷೇತ್ರಗಳಲ್ಲಿ ಹರಿದಾಸರ ಕೃತಿಗಳಿಗೆ ವಿಶಿಷ್ಟ ಸ್ಥಾನವಿದೆ.

---



# ಮುನ್ನ

• ಪ್ರೇಮಾಭಟ್

''ಮಗೂಗೆ ನೆಗಡಿ, ಸಂಜೆ ಸೀನುತ್ತಿದ್ದ" ಎಂದಳು ನರ್ಮದಾ.

"ಸ್ನಾನ ಸರಿಯಾಗಲಿಲ್ಲ, ಇಲ್ಲ ಗಾಳಿಗೆ ಹೊರಗೆಲ್ಲೋ ಬಿಟ್ಟಿರಬೇಕು, ಅಥವಾ ಆಹಾರದಲ್ಲಿ ಏನಾದರೂ ಹೆಚ್ಚು-ಕಮ್ಮಿಯಾಗಿರಬಹುದು. ನಿನಗೇನಿದೆ ಅನುಭವ ? ಮಗುವನ್ನು ಸರಿಯಾಗಿ ನೋಡಿಕೊಳ್ಳಲು ತಿಳಿಯುವುದಿಲ್ಲ ನಿನಗೆ" ಎಂದು ಒಮ್ಮೆಲೆ ರೇಗಿದ ರಾಜ. ಕಳೆದ ವಾರ ಮುನ್ನನಿಗೆ ಅಜೀರ್ಣವಾದಾಗಲೂ ಹಾಗೆ.

"ನಿನಗೇನು ಗೊತ್ತಿಲ್ಲ ನರ್ಮದಾ, ಮಕ್ಕಳ ಬೆಳವಣಿಗೆಯ ಕ್ರಮವನ್ನೇ ನೀನಿನ್ನು ಅರಿತಿಲ್ಲ. ಮಗುವನ್ನು ಹೇಗೆ ಬೆಳೆಸಬೇಕೆನ್ನುವ ವಿಧಾನವನ್ನು ನೀನಿನ್ನು ಕಲಿಯಬೇಕಾಗಿದೆ. ಹಳ್ಳಿಯಿಂದ ಅಮ್ಮನನ್ನು ಕರೆಸುತ್ತೇನೆ, ಇಲ್ಲ ನೀನೇ 4 ತಿಂಗಳು ಅಲ್ಲಿಗೆ ಹೋಗಿದ್ದು ಬಾ. ನೆರೆಯವರನ್ನು ನೋಡಿ ಅಥವಾ ಕೇಳಿಕೊಂಡಾದರೂ ಕಲಿಯಬಾರದೇ ? ಇಲ್ಲದಿದ್ದರೆ ನನ್ನ ಅಕ್ಕ ಮನೆಗೆ ಹೋಗಿ
ಬಾ. ಅವಳಿಗೆ ಚಿಕ್ಕ ವಯಸ್ಸಿನಲ್ಲೇ ನಾಲ್ಕು ಮಕ್ಕ
ನನಗಿಂತ ಎರಡು ವರ್ಷಕ್ಕೆ ದೊಡ್ಡವಳು, ನಿನಗಿಂತ
ವರ್ಷ ದೊಡ್ಡವಳಿರಬೇಕು. ಅದೆಂತಹ ಬುದ್ಧಿವಂ
ಅವಳಿಗೆ. ಅವಳ ನಾಲ್ಕು ಮಕ್ಕಳು ಎಷ್ಟು ದಷ್ಟ-ಪು

---

''ಮಕ್ಕಳಿಲ್ಲದವರು ಫಲ ಬಿಡದ ಬೋ
ಮರದ ಹಾಗೆ ವ್ಯರ್ಥ'' ಎಂದು ಹೇ
ತ್ತಿರಲಿಲ್ಲವೆ ?

''ಆ ಬೋಳು ಮರವೂ ಸೌದೆಯಾಗಿ ಉ
ಯೋಗಿಸಲ್ಪಡುವುದಿಲ್ಲವೆ ?'' ಎಂದು ಕೆ
ಬೇಕೆನಿಸುತ್ತಿತ್ತು ತನಗೆ.

---

…ಗಿದ್ದಾಳೆ. ಕಾಲಕಾಲಕ್ಕೆ ಅವರ ಆಹಾರವನ್ನು ಸರಿಯಾಗಿ ಪೂರೈಸುವುದು ತಿಳಿದಿದೆ ಅವಳಿಗೆ. ಒಂದು ಕಾಹಿಲೆ ಕಸಾಲೆಯನ್ನು ಅವಳ ಮಕ್ಕಳು ಕಂಡವರಲ್ಲ. ಅಕ್ಕನ ಆರೈಕೆ ಹಾಗಿದೆ" ಎಂದಿದ್ದ ರಾಜ. ತನಗಂತೂ ದುಃಖ ಉಕ್ಕಿಬಂದಿತ್ತು ರಾಜನ ಈ ಮಾತಿನಿಂದ. ಮುನ್ನನನ್ನು ನಾನೇನು ಅಲಕ್ಷ್ಯ ಮಾಡುತ್ತಿದ್ದೇನೆಯೇ ? ಮುನ್ನನಿಗಾಗಿ ಅವರಂತೆ ನಾನೂ ಹಂಬಲಿಸಿಲ್ಲವೇ ? ಎಂದುಕೊಂಡಾಗ ದುಃಖ ಉಕ್ಕಿಬಂದು ಕಣ್ಣು ಮಂಜುಗೂಡಿತ್ತು.

ತನಗೆ ನೋವಾಗಿದೆ ಎಂದು ಅರ್ಥವಾದೊಡನೆ ಸಮಾಧಾನ ಪಡಿಸಲು ಯತ್ನಿಸಿದ ರಾಜ'

"ನಿನಗಿನ್ನೂ ಹೊಸ ಅನುಭವ, ಮುನ್ನ ಈ ಮನೆಗೆ ಬಹಳ ಅಪರೂಪವಾಗಿ ಬಂದ ಮಗು; ಅವನೊಬ್ಬ ಅಪೂರ್ವ ವಸ್ತು ನಮಗೆ, ಅವನಿಗೆ ನೆಗಡಿ ಬಂದರೆ, ಅಜೀರ್ಣವಾದರೆ, ಸ್ವಲ್ಪ ಬೆಚ್ಚಗೆ ಕಂಡರೆ ಗಾಬರಿಯಾಗುತ್ತೇನೆ. ನಿನ್ನಂತೆ ನನಗೂ ಗಾಬರಿ ಎಂದುಕೋ, ಅದಕ್ಕೆ ಅನುಭವವಿರುವ ಅಮ್ಮನನ್ನು ಕರೆಸುತ್ತೇನೆ" ಎಂದಿದ್ದ. ತಾನೇನು ಹೇಳಲಿಲ್ಲ, ಮುನ್ನನಿಗೆ ನೆಗಡಿ ಕಂಡೊಡನೆ ತನಗೆ ತಿಳಿದ ಔಷಧವನ್ನೋ ಅಥವಾ ಡಾಕ್ಟರ್ ಬಳಿಯಿಂದ ಔಷಧವನ್ನೋ ಕೂಡಲೇ ತಂದು ಕುಡಿಸಿದರೂ ರಾಜನಿಗೆ ಸಮಾಧಾನವಿಲ್ಲ. ತನ್ನ ಆರೈಕೆ ಸರಿಯಾಗಿಲ್ಲವೆಂದೇ ಹೇಳುವ ರಾಜನಲ್ಲಿ ಅಸಮಾಧಾನವೆನಿಸುತ್ತದೆ. ಮೊನ್ನೆ ಮುನ್ನ ಬಿದ್ದಾಗಲೂ ರಾಜ ಸಿಡಿಮಿಡಿಗೊಂಡಿದ್ದ. ಇನ್ನೂ ನಡೆಯಲು ಬಾರದ ಮಗು ಮುನ್ನ ಕುರ್ಚಿ ಹಿಡಿದು ಒಂದೊಂದೇ ಹೆಜ್ಜೆ ಹಾಕುತ್ತಿದ್ದಂತೆ ಮುಗ್ಗರಿಸಿ ಬಿದ್ದಿದ್ದ. ತಾನೇನೋ ಒಳಗೆ ಕೆಲಸದಲ್ಲಿ ತೊಡಗಿದ್ದಳು. ಮುನ್ನ ಅಳುತ್ತಲೇ ಗಾಬರಿಯಿಂದ ಕೆಲಸ ಬಿಟ್ಟುಬಂದು ಎತ್ತಿ ರಮಿಸಲು ಯತ್ನಿಸಿದಳಾದರೂ ರಾಜ ಸುಮ್ಮನಿರಲಿಲ್ಲ.

"ಅದೆಂತಹ ಅಲಕ್ಷ್ಯ ನಿನಗೆ, ಮಗು ಬಿದ್ದನೆನ್ನೇ ಬಿಟ್ಟು ಒಳಗೇನು ಮಾಡುತ್ತಿದ್ದೆ ? ಮುನ್ನನನ್ನು ಸರಿಯಾಗಿ ನೋಡಿಕೊಂಡಿರುವುದನ್ನು ಕಲಿ" ಎಂದಿದ್ದ. ಹಾಗಾದರೆ ತನಗೇನೂ ಕೆಲಸ ಕಾರ್ಯಗಳು ಗೊತ್ತಿಲ್ಲವೆ? ಹೊತ್ತಿಗೆ ಸರಿಯಾಗಿ ಆಗದಿದ್ದರೆ ಆಗಲೂ ರಾಜ ಕೋಪಗೊಳ್ಳುತ್ತಾನೆ. ತಿಂಡಿ ಕಾಫಿ ಊಟ ಉಪಚಾರ ಎಲ್ಲಾ, ತಾನು ಮುನ್ನನ ಹತ್ತಿರವೇ ಇದ್ದುಬಿಟ್ಟರೆ ಯಾರು ಮಾಡಬೇಕು ? ಮಕ್ಕಳು ಬೀಳದೆ ದೊಡ್ಡವರಾಗುವುದಿಲ್ಲ' ಎಂದು ತಾನು ಹೇಳಲೋ ಬೇಡವೋ ಎಂದು ಅನುಮಾನಿಸುತ್ತಲೇ ಹೇಳಿದಳು. ಆಗ ರಾಜನ ಮುಖ ನೋಡಬೇಕಿತ್ತು, ಅದೆಂತಹ ಉರಿ ಅವನ ಮುಖದಲ್ಲಿ, ನೋಡಲಾರದೆ ತಲೆ ತಗ್ಗಿಸಿದ್ದಳು ತಾನು. ರಾಜ ಸಿಟ್ಟಿನಲ್ಲಿ ಊಟ ಸಹ ಮಾಡದೆ ಹೊರಟು ಹೋಗಿದ್ದ ಕಛೇರಿಗೆ. ಮುನ್ನನನ್ನು ತಬ್ಬಿಕೊಂಡು ತಾನು ತನ್ನಷ್ಟಕ್ಕೆ ಅತ್ತು ಸಮಾಧಾನ ತಂದುಕೊಂಡಿದ್ದಳು. ಈ ದಿನ ನೆಗಡಿ ಎಂದಾಗಲೂ ರಾಜ ರೇಗಿದ್ದ.

"ನಿನಗೇನೇನೂ ಅನುಭವವಿಲ್ಲ, ನೀನು ಮಗುವಿಗೆ ಸ್ನಾನ ಮಾಡಿಸುವುದೇ ಸರಿಯಲ್ಲ. ಶೀತಕಾಲದಲ್ಲಿ ಮೂಸಂಬಿ ಹಣ್ಣು ತಿನ್ನಿಸುತ್ತೀಯ; ನೀನು ಕಲಿಯುವುದು ಯಾವಾಗಲೋ" ಎಂದು ಮೂದಲಿಸಿದ ರಾಜನ ಕಡೆಗೆ ನೋಡಲಾರದೆ ತಲೆ ತಗ್ಗಿಸಿ ನುಡಿದಿದ್ದಳು ತಾನು.

"ಈಗೇನಾಯ್ತು ರಾತ್ರಿ ಹೊತ್ತಿಗೆ ಕಡಿಮೆಯಾಗಬಹುದು. ವೀಳೆಯದೆಲೆಯ ರಸ, ಈರುಳ್ಳಿ ರಸ, ಕಸ್ತೂರಿ ಮಾತ್ರೆ, ಜೇನುತುಪ್ಪದೊಂದಿಗೆ ಬೆರೆಸಿಕೊಟ್ಟಿದ್ದೇನೆ" ಎಂದಳು.

"ಈ ನಿನ್ನ ಊರ ಮದ್ದಿಗೆಲ್ಲ ಕಡಿಮೆಯಾಗುತ್ತದೆಯೇ ? ಯಾಕೆ ಡಾಕ್ಟರ್ ಬಳಿಯಿಂದ ಔಷಧಿ ತರಬಾರದಿತ್ತಾ ?" ಎಂದಾಗ ಆಶ್ಚರ್ಯದಿಂದ ಅವನ ಕಡೆಗೆ ನೋಡಿ ಹೇಳಿದಳು.

"ಹಗಲೆಲ್ಲ ಡಾಕ್ಟರ್ ಔಷಧಿ ಕುಡಿಸುತ್ತಿದ್ದರೆ ಉಷ್ಣವಾಗುತ್ತದೆಂದು ನೀವೇ ಹೇಳಿರಲಿಲ್ಲವೇ ?"

"ಅದಕ್ಕೇ ಹೇಳೋದು ಮುನ್ನನನ್ನು ಸರಿಯಾಗಿ ನೋಡಿಕೋ ಅಂತ"

ಬಿಕ್ಕುವಂತಾಗಿತ್ತು ತನಗೆ. ಎಷ್ಟು ಎಚ್ಚರಿಕೆ ವಹಿಸಿದರೂ ಮುನ್ನನಿಗೆ ನೆಗಡಿ ತಪ್ಪುವುದಿಲ್ಲ, ತನಗಂತೂ ರಾಜನಿಂದ ಬೈಗಳ ಇದ್ದದ್ದೆ.

"ಕೆಲವು ಮಕ್ಕಳ ಸ್ವಭಾವವೇ ಹಾಗೆ, ಮಹಾ ಸೂಕ್ಷ್ಮ, ನೀವ್ಯಾಕೆ ಅಷ್ಟಕ್ಕೆಲ್ಲಾ ಗಾಬರಿಯಾಗ್ತೀರಿ" ಎಂದು ನೆರೆಮನೆಯ ಸೀತಾ, ಮುನ್ನನಿಗೆ ಆಗಾಗ ನೆಗಡಿ

ತಪ್ಪುವುದಿಲ್ಲ" ಎಂದಾಗ ನುಡಿದಿದ್ದಳು. ಹಾಗಾಂತ ರಾಜನಿಗೆ ಹೇಳಿದರೆ.

"ನಿನಗೂ ಆ ಸೀತಾಗೂ ಸರಿಯಾಗಿದೆ ಜೊತೆ, ಅವಳ ಮಕ್ಕಳನ್ನು ಸಾಕಿರುವ ರೀತಿ ನೋಡಿದರೆ ಸಾಕಲ್ಲ" ಎನ್ನುತ್ತಾನೆ. ಏನು ಹೇಳಬೇಕೋ ತನಗೇ ಅರ್ಥವಾಗುವುದಿಲ್ಲ. ರಾಜನ ಈ ವಿಪರೀತ ಹುಚ್ಚಿಗೆ ಬೇಸರವಾಗುತ್ತಿದ್ದಂತೆ ಮನಸ್ಸು ಹಿಂದಿನ ವಿಚಾರವನ್ನು ಮೆಲುಕು ಹಾಕುತ್ತದೆ. ಮದುವೆಯಾಗಿ ಮನೆ ತುಂಬಿದ ಆ ಮೊದಲರಾತ್ರಿಯೇ ರಾಜ ನುಡಿದದ್ದು ನೆನಪಾಗುತ್ತದೆ ತನಗೆ.

ಮನೆಗೊಂದು ಮುದ್ದಾದ ಮಗು ಬೇಕು ನರ್ಮದಾ. ಆ ಮಗು ಅಂಬೆಗಾಲಿಟ್ಟುಕೊಂಡು ಮನೆ ತುಂಬ ಓಡಾಡುವುದನ್ನು ನಾವು ಬೇಗ ಕಾಣಬೇಕು. ತಾಯಿಗೆ ಒಬ್ಬನೇ ಮಗನಾಗಿ ಹುಟ್ಟಿ, ಒಂಟಿಯಾಗಿ ಬೆಳೆದು, ಜೀವನದಲ್ಲಿ ಬೇಸರವನ್ನೇ ಉಂಡಿದ್ದೇನೆ ನರ್ಮದಾ. ಎಲ್ಲಾ ಸುಖಕ್ಕಿಂತಲೂ ಮಕ್ಕಳ ಆನಂದವೇ ಮಿಗಿಲು ಎಂದಾಗ ತಾನಂತು ನಡುಗಿ ಹೋಗಿದ್ದಳು. ಒಂದೆರಡು ವರ್ಷ ಹಾಯಾಗಿರಬೇಕೆಂದು ಬಯಸಿದ ಆಸೆ ದೀರ್ಘಕಾಲದವರೆಗೂ ಉಳಿದಾಗ ಮಾತ್ರ ನೊಂದಿದ್ದಳು. ಎಲ್ಲರಿಗೆ ತಾನು ಕೀಳಾಗಿದ್ದ ನೆನಪು ಮರುಕಳಿಸುತ್ತದೆ. ಎಷ್ಟು ಮಂದಿ ತನ್ನನ್ನು ಬಂಜೆ ಎಂದಿರಲಿಲ್ಲ. ಆಗೆಲ್ಲ ರಾಜ ತನ್ನನ್ನು ಅದೆಷ್ಟು ರೀತಿಯಲ್ಲಿ ಸಮಾಧಾನ ಪಡಿಸುತ್ತಿದ್ದ. ಆನಾಗ ಮನಸ್ಸಿನಿಂದ ದೀರ್ಘ ಕಾಲದವರೆಗೂ ತನ್ನ ಆಸೆಯನ್ನು ಅದುಮಿರಲಿಲ್ಲವೆ, ಎಂದಕೊಳ್ಳುತ್ತಾಳೆ. ಪ್ರತಿಯೊಬ್ಬರೂ ತನ್ನ ವಿಷಯದಲ್ಲಿ ಕೀಳಾಗಿ ವರ್ತಿಸಿದಂತೆ ರಾಜ ಎಂದೂ ವರ್ತಿಸಿದವನಲ್ಲ. ಮುನ್ನ ಹುಟ್ಟುವುದಕ್ಕೆ ಮುನ್ನ ತಾನನುಭವಿಸಿದ ನೋವೇನು ಕಡಿಮೆಯದೇ ? ಎಂದು ಕೊಳ್ಳುತ್ತಾಳೆ. ಎಲ್ಲರಿಂದ ಅನ್ನಿಸಿಕೊಂಡಾಗೊಮ್ಮೆ ರಾಜನೂ ಒಮ್ಮೆ ತನ್ನನ್ನ ಅಂದು ಬಿಡಬಾರದೇ, ಎಂದುಕೊಂಡಿದ್ದಳು. ಯಾಕೋ ಅವನ ಮನಸ್ಸು ಮೃದುವಾಗಿರುತ್ತಿದ್ದುದನ್ನು ತನ್ನ ಮನಸ್ಸು ಸಹಿಸುತ್ತಿರಲಿಲ್ಲ. ಅವನ ಮೃದುತ್ವವೇ ತನ್ನನ್ನೇ ಅಣಕಿಸುತ್ತಿರುವಂತೆ ಭಾಸವಾಗುತ್ತಿತ್ತು. ಅದೆಂತಹ ನರಕ ಯಾತನೆಯನ್ನನುಭವಿಸಿದ್ದಳು ತಾನಾಗ. ಮುಂದಿನ ಬೀದಿಯಲ್ಲಿದ್ದ ಸ್ವಪ್ನಾಗೆ ತನ್ನನ್ನು ಕಂಡರೆ ಅದೆಷ್ಟೊಂದು ಜಿಗುಪ್ಸೆ ಇತ್ತು. ಒಮ್ಮೆ ಗಬ್ಬದ ದನ ಬಂದು ಹಿತ್ತಲ ತರಕಾರಿಗೆ ಬಂದಾಗ ತಾನು ಹೆದರಿ ಅದನ್ನು ಅಟ್ಟಿ ಬರುವುದಕ್ಕೆ ಓಡಿದ್ದಳು. ಆಗ ಸ್ವಪ್ನಾ ಎಂದ ನುಡಿಯನ್ನು ಮುನ್ನ ಹುಟ್ಟಿದ ಮೇಲೂ ಮರೆತಿರಲಿಲ್ಲ ತಾನು.

"ಹೆದರಬೇಡ ನರ್ಮದಾ, ಗಬ್ಬದ ದನ ಎಂದಿಗೂ ಬಂಜೆಯರ ಮನೆಯ ಮೇವನ್ನೇ ತಿನ್ನುವುದಿಲ್ಲ, ಬೇಕಾದರೆ ಪರೀಕ್ಷಿಸಿ ನೋಡು" ಎಂದಿದ್ದಳು. ಪರೀಕ್ಷಿಸುವ ಗೋಜಿಗೆ ತಾನು ಹೋಗಿರಲಿಲ್ಲವಾದರೂ ಈ ಮಾತು ಮಾತ್ರ ಎದೆಯಾಳದ ನೋವನ್ನು ಹೆಚ್ಚಿಸಿತ್ತು. ಅಂದಿನಿಂದ ಮುನ್ನನಿಗಾಗಿ ತಾನು ಹಂಬಲಿಸಿದ್ದು ಮಾತ್ರ ಹಲವು ಬಗೆಯಲ್ಲಿ ಎಂದುಕೊಂಡಾಗೊಮ್ಮೆ ಕಣ್ಣಲ್ಲಿ ನೀರಿಳಿಯಿತು. ಮುನ್ನ ಹುಟ್ಟುವುದಕ್ಕೆ ಮುನ್ನ ಏನಿತ್ತು, ಬದುಕಿನಲ್ಲಿ ಬರಿ ಶೂನ್ಯ. ಜೊತೆಗೆ ಹಲವರ ಅಪಹಾಸ್ಯ ಕೊಂಕು ನುಡಿಯನ್ನು ಕೇಳಿ ಕೇಳಿ ಕಿವಿ ಕಿವುಡಾಗದಿದ್ದುದು ದೊಡ್ಡ ಪುಣ್ಯ. ತಲೆ ಕೆಡದಿದ್ದುದಂತೂ ದೊಡ್ಡ ಲಾಭ ಎಂದುಕೊಳ್ಳುತ್ತಾಳೆ. ಅವರೆ ಮುನ್ನ ಹುಟ್ಟಿದ ಮೇಲೂ ಏಕೆ ತಳಮಳಿಸುತ್ತವೆ. ತನ್ನ ಅಂತಃರಂಗ ಬಹುಶಃ ರಾಜನ ವಿಪರೀತ ಹುಚ್ಚಿಗಿರಬಹುದೇ? ಮಕ್ಕಳಲ್ಲಿ ರಾಜನಿಗೆ ಮೊದಲಿನಿಂದಲೂ ಅಕ್ಕರಾಸ್ಥೆ ಬಹಳ. ಮುನ್ನನ ವಿಷಯದಲ್ಲಿ ತಾನೆಷ್ಟು ಎಚ್ಚರಿಕೆ ವಹಿಸಿದರೂ ಸಾಲದೆಂಬಂತೆ ಅನಿಸಿಕೆಯು ರೇಗುವಂತಾಗಿಸುತ್ತದೆ ರಾಜನಿಗೆ. ಇಷ್ಟಕ್ಕೆಲ್ಲ ತಾನೇಕೆ ಬೇಸರಗೊಳ್ಳಬೇಕು ಎಂದು ಕೊಳ್ಳುತ್ತಾಳೆ.

ಮೊನ್ನೆ ರಾಜನ ಅಕ್ಕನ ಮಗಳು ವೇಣು ಬಂದಾಗಲೂ ರಾಜ ಏನೋ ಕೋಪ ಬಂದು ಅವಳ ಮುಂದೆ ಹೇಳಿದ್ದ.

"ನೋಡು ವೇಣು ನೀನಾದರೂ ಸ್ವಲ್ಪ ಅವಳಿಗೆ ಕಲಿಸಿ ಕೊಡಬಾರದೇ ? ಮುನ್ನ ಈಗ ಎಷ್ಟು ಬಡವಾಗಿದ್ದಾನೆ ನೋಡು. ಮಕ್ಕಳನ್ನು ಹೇಗೆ ಸಾಕಬೇಕೆನ್ನುವ ವಿಧಾನ ಅವಳಿಗೆ ಸ್ವಲ್ಪವೂ ಗೊತ್ತಿಲ್ಲ" ಎಂದಾಗ ತನಗೆಷ್ಟು ನೋವಾಗಲಿಲ್ಲ ! ತನ್ನವರ ಮುಂದೆಲ್ಲ ಹೆಂಡತಿಯನ್ನು ಕ್ಷುಲ್ಲಕವಾಗಿ ಕಾಣುತ್ತಾರಲ್ಲ ಎನಿಸಿ ಅಗಲೇ ತಾನು ಸತ್ತಿದ್ದರೆ ಎನ್ನಿಸುವಷ್ಟು ದುಃಖವಾಗಿತ್ತು. ಮುನ್ನನನ್ನು ಕೆಳಗಿಟ್ಟರೆ ಶೀತವಾಗುತ್ತದೆ, ಎತ್ತಿಕೊಂಡರೆ ಉಷ್ಣವಾಗುತ್ತದೆ ಎನ್ನುವಷ್ಟು ಸೂಕ್ಷ್ಮ ಮನೋಭಾವ

ಎಂದಿನಿಂದ ಇವರಿಗೆ ಬಂತಪ್ಪ" ಎಂದು ಯೋಚಿಸುತ್ತ ತಾನು ಚಿಂತೆಗೊಳಗಾಗಿದ್ದಳು. ರಾಜ ತನ್ನ ವರ ಮುಂದೆಲ್ಲ ಬೈಯುವುದು ತನಗೆ ಬೇಡವಾಗಿತ್ತು. ಆ ವೇಣಿಯೋ ಹಿಂದೆ ತನ್ನ ಮನೆಗೆ ಬಂದಾಗಲೆಲ್ಲ ತನ್ನನ್ನು ಎಷ್ಟು ವಿಧದಲ್ಲಿ ಕಾಡಿಸಿರಲಿಲ್ಲ.

"ಮಕ್ಕಳಿಲ್ಲದವರೂ ಫಲ ಬಿಡದ ಬೋಳು ಮರದ ಹಾಗೆ ವ್ಯರ್ಥ" ಎಂದು ಬಂದಾಗಲೆಲ್ಲ ಹೇಳುತ್ತಿರಲಿಲ್ಲವೇ?

ಆ ಬೋಳು ಮರವೂ ಸೌದೆಯಾಗಿ ಉಪಯೋಗಿ ಸಲ್ಪಡುವುದಿಲ್ಲವೇ ? ಎಂದು ಕೇಳಬೇಕೆನಿಸುತ್ತಿತ್ತು ಆಗೆಲ್ಲ ತನಗೆ. ಆದರೆ ಏನಿದ್ದರೂ ಏಳುತ್ತಿದ್ದ ವಿಚಾರ ಗಳು ಅಲ್ಲಿಯೇ ಲಯವಾಗಿ ಬಿಡುತ್ತಿದ್ದುವು: ಯಾವಾ ಗಲೂ ಅಷ್ಟೆ ಯಾರು ಏನೇ ಅನ್ನಲಿ ಕೇಳಿ ಸುಮ್ಮನಾಗಿ ಬಿಡುವ ಸ್ವಭಾವ ತನ್ನದು. ರಾಜನಿಗೆ ವೇಣಿಯ ಸ್ವಭಾವ ಗೊತ್ತಿದ್ದೂ ತನ್ನನ್ನು ಅವಳ ಮುಂದೆ ಕ್ಷುಲ್ಲಕ ವಾಗಿ ಕಂಡನಲ್ಲ ಎನಿಸಿ ಆ ದಿನವೆಲ್ಲ ಅತ್ತಿದ್ದಳು ತಾನು. ಆ ವೇಣಿ ರಾಜನ ಮರೆಯಲ್ಲಿ ಮತ್ತೊಂದು ಮಾತನ್ನು ಕುಟುಕಿ ಹೋದಳಲ್ಲ.

"ಅಲ್ಲ ಅತ್ತೆ ಮಕ್ಕಳಿಲ್ಲದವರು ಮಕ್ಕಳಿಲ್ಲವೆಂದು ವ್ಯಸನ ಪಡುವುದು ಸುಮ್ಮನೆ, ಇತರರ ಮಕ್ಕಳನ್ನು ನಮ್ಮ ಮಕ್ಕಳೆಂದು ತಿಳಿಯುವ ಬುದ್ಧಿಯಾಕಿಲ್ಲ ಜನಕ್ಕೆ ? ನೂರಾರು ಹರಕೆ ಹೊತ್ತು, ಸಾವಿರಾರು ರೂಪಾಯಿ ಅನಾವಶ್ಯಕ ಖರ್ಚು ಮಾಡಿ ಕಡೆಗೂ ತಮ್ಮದೇ ಆದ ಒಂದು ಮಗುವನ್ನು ಪಡೆಯಬೇಕೆನ್ನುವ ಹುಚ್ಚು ವಿಚಾ ರವೇ ಹೆಚ್ಚು ಮುಂದಿಗೆ ಏನು ಹೇಳುತ್ತೀರಾ ?" ಎಂದ. ವೇಣಿಯ ಮಾತಿಗೆ ತಾನೇನು ಹೇಳಿರಲಿಲ್ಲ. ತನ್ನ ಬಗ್ಗೆಯೇ ?ಕುಚ್ಚು ನುಡಿ ನುಡಿದದ್ದು ವೇಣಿ ಎನ್ನುವ ಅರಿವು ಬಂತಾದರದ ಸುಮ್ಮನಾಗಿದ್ದಳು ತಾನು. ಮಕ್ಕ ಳಿಲ್ಲದ ನೋವನ್ನು ಸ್ವತಃ ಅನುಭವಿಸಿದ್ದರೆ ವೇಣಿಯ ಬಾಯಿಯಿಂದ ಇಂತಹ ಮಾತು ಬರುತ್ತಿರಲಿಲ್ಲ ಎಂದು ಕೊಂಡು ಸುಮ್ಮನಾಗಿದ್ದಳು. ಜನರ ಸ್ವಭಾವವೇ ಅಷ್ಟು ಮಕ್ಕಳಾದ ಮೇಲೆ ಒಂದು, ಮಕ್ಕಳಾಗದಿದ್ದಾಗ ಒಂದು. ಮುನ್ನ ಹುಟ್ಟಿದ ಮೇಲೆ ಪರರಿಗಿಂತ ಸ್ವಂತದ ವರಿಗೆ ಅಸೂಯೆ ಹೆಚ್ಚಾಗಿ ಹೋಗಿದೆ ಎನಿಸಿ ಮನಸ್ಸು ದುಗುಡದಿಂಗ ಭಾರವಾಗಿತ್ತು. ವೇಣಿಯ ಮತ್ಸರದ ಮಾತನ್ನು ತಾನೇನು ರಾಜನೊಂದಿಗೆ ಹೇಳಹೋಗಿರಲಿಲ್ಲ. ತಮ್ಮವರ ಮಾತನ್ನು ಉದಾರವಾಗಿ ತೆಗೆದುಕೊಂಡು ಬಿಡುವ ಸ್ವಭಾವದವನು ತನ್ನ ರಾಜ. ತನಗೇ ಸಮಾ ಧಾನ ಹೇಳಿ ಬಿಡುತ್ತಾನೆ ಯಾಕೆ ಈ ಶುದ್ಧ ಹಲ್ಕಾ ವಿಚಾರ ಎಂದುಕೊಂಡು ಸುಮ್ಮನಾಗಿದ್ದಳು ತಾನು. ಯೋಚನೆ ಹೀಗೆ ಸಾಗುತ್ತಿದ್ದ ಹಾಗೆ ತನ್ನ ಕೆಳ ಹೊಟ್ಟೆಯ ಕಡೆ ಹರಿಯಿತು ಗಮನ. ತುಸು ದಪ್ಪ ವಾಗುತ್ತಿದೆಯೇನೋ ಎನಿಸಿ, ಕಳೆದ ವಾರ ಲೇಡಿ ಡಾಕ್ಟ ರರಿಗೆ ತೋರಿಸಿಕೊಂಡು ಬಂದಿದ್ದಳು.

"ನಿಮ್ಮ ಅನುಮಾನ ನಿಜ" ಎಂದಿದ್ದರು ಡಾಕ್ಟ ರರು. ಯಾಕೋ ರಾಜನಿಗೆ ಹೇಳಿಯೇ ಇರಲಿಲ್ಲ ತಾನು. ಮುನ್ನನಿಗೆ ಇನ್ನು ವರ್ಷ ತುಂಬುತ್ತಿದೆ. ಇಷ್ಟು ಕಾಲ ಅವನಿಗಾಗಿ ಹಂಬಲಿಸಿದ ಹಾಗೆ ಆಸೆ ಇರಲಿಲ್ಲ. ಮುನ್ನ ಇದ್ದಾನಲ್ಲ ಎನ್ನುವ ನೆಮ್ಮದಿ ಮನಸ್ಸಿಗೆ ಯಥೇಚ್ಛ ವಾಗಿದೆ ಇನ್ನೇನು ? ಎನ್ನುವ ಅನಿಸಿಕೆಯಲ್ಲಿ ಯಾವ ಒಂದು ವಿಚಾರದಲ್ಲೂ ಆಸಕ್ತಿ ಇರಲಿಲ್ಲ. ಯೋಚನೆ ಹೀಗೆ ಸಾಯುತ್ತಿದ್ದ ಹಾಗೆ ಸೀತಾ ಬಂದಳು. "ಬಾಮ್ಮ ಸೀತಾ" ಎಂದರೆ ಅವಳು ಖಿನ್ನ ಮನಸ್ಕಳಾಗಿ ಹೇಳುತ್ತಾಳೆ. ಕೈ ಮಗು ಶ್ರೀಮತಿಗೆ ಹುಷಾರಿಲ್ಲ ನರ್ಮದಾ, ಕೈಲಿ ಕಾಸಿಲ್ಲ ಖರ್ಚಿಗೆ, ಇನ್ನೇನು ಇವರು ಬರುವ ಹೊತ್ತು, ಬೆಳಿಗ್ಗೆಯೇ ಹೋಗಿದ್ದಾರೆ ನಿನ್ನೊಂದಿಗೆ ವಿಚಾರಿಸುವಂತೆ ಎಂದಳು.

"ಏನಾಗಿದೆ ಶ್ರೀಪತಿಗೆ ?"

"ಫ್ಲೂ" ಅಂತ ಕಾಣುತ್ತದೆ."

"ಹಾಗಿದ್ದರೆ ಬೇಗ ಔಷಧಿ ಮಾಡು" ಎಂದವಳೇ ತಿಂಗಳ ಕೊನೆಗಿರಲಿ ಎಂದು ಮಿಗಿಸಿದ ಹಣವನ್ನು ತಂದು ಅವಳ ಕೈಗಿಡುತ್ತಾಳೆ ತಾನು. ಸೀತಾ ಹೊರಟುಹೋದ ಅವಳನ್ನೇ ಕುರಿತು ಯೋಚಿಸುತ್ತಾಳೆ ತಾನು. ನಿನಗೂ ಸೀತಾಳಿಗೂ ಜೊತೆ ಸರಿಯಾಗಿದೆ ಎನ್ನುತ್ತಾನೆ ತನ್ನ ರಾಜ. ನಾಲ್ಕು ಮಕ್ಕಳನ್ನು ಅವಳಾದರೂ ಹೇಗೆ ಸುಧಾ ರಿಸಬೇಕು. ಗಂಡನಿಗೆ ಬರುವ ಸಂಬಳ ಕಡಿಮೆ, ಮಕ್ಕಳಿಲ್ಲ ತಿನ್ನಲು ಸರಿಯಾಗಿದ್ದರೆ ಚೆನ್ನಾಗಿಯೇ ಬಲಿಷ್ಟರಾಗಿ ಬೆಳೆಯುತ್ತಿದ್ದರು ಎನಿಸುತ್ತದೆ. ರಾಜ ಇನ್ನೇನಾದರೂ ಹೇಳಿದರೆ ತಾನು ಹಾಗೆಂದು ಹೇಳಿಬಿಡಬೇಕು' ಎಂದು ಕೊಳ್ಳುತ್ತಾಳೆ. ಸೀತಾ ಸ್ವಭಾವತಃ ಒಳ್ಳೆಯವಳು

ಮುನ್ನನೆಂದರೆ ಅವಳಿಗೆ ಬಲು ಅಕ್ಕರೆ. ಅವನಿಗೆ ಏನು ಹೆಚ್ಚುಕಮ್ಮಿಯಾದರೂ ತನ್ನ ಪಾಲಿಗೆ ಧೈರ್ಯ ನೀಡುತ್ತಾಳೆ. ನೆರೆಯಲ್ಲಿ ಸೀತಾ ಇರುವುದರಿಂದ ತನ್ನ ನೋವೆಲ್ಲ ಎಷ್ಟೋ ಮಟ್ಟಿಗೆ ಪರಿಹಾರವಾಗುತ್ತಿದೆ ಎಂದುಕೊಳ್ಳುತ್ತಾಳೆ ತಾನು. ರಾಜನಿಗೆ ಯಾವುದೂ ಅರ್ಥವಾಗುವುದಿಲ್ಲ. ಸೀತಾ ಅವಳ ಮಕ್ಕಳ ಬಗ್ಗೆ ಎಚ್ಚರಿಕೆ ವಹಿಸುವುದಿಲ್ಲ' ಎಂದು ಅವನ ಭಾವನೆ. ಯೋಚನೆ ಹೀಗೆ ದಿಕ್ಕು ಬದಲಾಯಿಸುತ್ತಿದ್ದ ಹಾಗೆ ಮುನ್ನ ನಿದ್ರೆಯಿಂದ ಎಚ್ಚೆತ್ತು ಅಳುತ್ತಾ ಎದ್ದು ಬರುತ್ತಾನೆ ತನ್ನ ಬಳಿಗೆ. ನೂರಾರು ಆಸೆಗಳನ್ನು ತೋರಿಸಿದರೂ ಅಮ್ಮನಿಗಿಂತ ಪ್ರಿಯವಾದ ವಸ್ತು ಬೇರಾವುದೂ ಇಲ್ಲ ಎನ್ನುವ ಭಾವ ತಳೆದ ನಿಲುವು ಆ ತುಂಟಪೋರನನ್ನು ಎದೆಗೆ ಹುದುಗಿಸಿಕೊಂಡಾಗೊಮ್ಮೆ ತನ್ನ ನೋವೆಲ್ಲವೂ ಮರೆಯಾಗುವುದಿಲ್ಲವೇ; ಎನಿಸುತ್ತದೆ. ಅವನನ್ನು ರಮಿಸುತ್ತಾ ಒಳಗೆ ಬರುತ್ತಿದ್ದಂತೆ ಹಿಂದಿನಂದ ರಾಜ ಬಂದು.

"ನರ್ಮದಾ" ಎನ್ನುತ್ತಾನೆ.

"ಏನು" ಎನ್ನುತ್ತ ಹಿಂತಿರುಗಿ ನೋಡುತ್ತಾಳೆ ತಾನು. ಮುನ್ನನನ್ನು ಕೈ ಬೀಸಿ ಕರೆಯುತ್ತಾನೆ ರಾಜ.

"ಇಲ್ಲ" ಎನ್ನುತ್ತದೆ ತಲೆಯಲುಗಿಸಿ ಮುನ್ನ.

"ಬಾರೋ.... ಬಿಸ್ಕತ್ತು ಉಂಟು ಕೈಯಲ್ಲಿ"

ಇನ್ನು ಜೋರಾಗಿ ತಲೆಯಲಗಿಸುತ್ತದೆ ಮುನ್ನ. ತಾಯ ಕೈಯೊಳಗಿದ್ದೇನಲ್ಲ ಎನ್ನುವ ಆನಂದ ಮುನ್ನನ ಮುಖದಲ್ಲಿ.

"ಟಾ . ಟಾ.... ಬೂವ... ಪಪಾಂ... ಏನೆಲ್ಲ ಪುಸಲಾಯಿಸುತ್ತಾನೆ ರಾಜ. ಮುನ್ನ ತನ್ನನ್ನು ಅವಚಿಕೊಂಡು ಎದೆಯೊಳಗೆ ಮುಖ ಹುದುಗಿಸುತ್ತದೆ, ರಾಜನ ಕಡೆಗೆ ನೋಡುವುದೇ ಇಲ್ಲ. ಏಕೋ ಮನಸ್ಸಿಗೆ ಒಂದು ಬಗೆಯ ತೃಪ್ತಿ ದೊರಕುತ್ತದೆ ತನಗೆ. ಆ ತೃಪ್ತಿಯಲ್ಲೇ "ಏನು ಕರೆದಿರಲ್ಲ" ಎನ್ನುತ್ತಾಳೆ ತಾನು.

"ಊರಿನಿಂದ ಅಮ್ಮ ಬರುತ್ತಾಳಂತೆ, ಇನ್ನು ನಿಶ್ಚಿಂತೆ. ಮುನ್ನನ ವಿಷಯದಲ್ಲಿ ಇನ್ನು ಚಿಂತಿಸಬೇಕಾಗಿಲ್ಲ. ಅವಳಿಗೆ ಸರಿಯಾಗಿ ನೋಡಿಕೊಳ್ಳುವುದು ತಿಳಿದಿದೆ" ಎನ್ನುತ್ತಾನೆ.

ಖುಶಿಯಾಗಿದ್ದ ಮನಸ್ಸು ಒಮ್ಮೆಲೆ ಮುದುಡುತ್ತದೆ, ಮುನ್ನ ತನ್ನನ್ನು ಅಂಟಿಕೊಂಡ ಹಾಗೆ, ರಾಜ ತಾಯಿಯನ್ನು ಹಂಬಲಿಸುವುದಂತು ಸರಿ. ಸಹಜವಾಗಿ ಮಕ್ಕಳು ತಾಯಿಯನ್ನು ಪ್ರೀತಿಸುತ್ತಾರೆ. ಆದರೆ ತನ್ನ ರಾಜ ತನ್ನನ್ನು ಅಗ್ಗವಾಗಿ ಕಾಣುತ್ತಾನಲ್ಲ ಎನಿಸಿ ಮನಸ್ಸು ಮುದುಡಿಕೊಳ್ಳುತ್ತದೆ. ತಾನೇನು ಮುನ್ನನಿಗೆ ತಾಯಿಯಲ್ಲವೇ ? ಎಂದು ಯೋಚಿಸುತ್ತಾಳೆ.

"ಏನು ಯೋಚಿಸುತ್ತಿದ್ದೀಯ ನರ್ಮದಾ?"

"ಏನಿಲ್ಲ" ಎನ್ನುತ್ತಾಳೆ ತಾನು ಮುನ್ನನಿಗೆ ಮುದ್ದನ್ನಿತ್ತು,

"ಏನೋ ಯೋಚಿಸುತ್ತಿದ್ದೀಯ, ಹೇಳಬಾರದೆ ? ಮತ್ತೆ ರಾಜನ ಪ್ರಶ್ನೆ.

ಮನಸ್ಸಿನೊಳಗೆ ಹುದುಗಿದ್ದ ಎಲ್ಲಾ ವಿಚಾರವನ್ನು ಅಲ್ಲೇ ಲಯಗೊಳಿಸಿ ಹೇಳುತ್ತಾಳೆ ತಾನು, ತನಗೆ 3 ತಿಂಗಳು ಆಗಿರುವುದನ್ನು.

ಎಂತಹ ತೃಪ್ತಿ ರಾಜನಿಗೆ, ಮುನ್ನನಿಗೆ ಸವಿಮುತ್ತನ್ನಿತ್ತು,

"ಮುನ್ನ ನಮ್ಮ ಮನೆಗೆ ಅದೃಷ್ಟದ ಮುತ್ತು" ಎನ್ನುತ್ತಾನೆ. ಅವನ ಆನಂದದಲ್ಲಿ ತಾನು ಸಹಜವಾಗಿ ಬಾಗಿಯಾಗಿದ್ದಳು ನರ್ಮದಾ.

---

ಕಾಯ ಕರ್ರನೆ ಕಂದಿದರೇನಯ್ಯ,
ಕಾಯ ಮಿರ್ರನೆ ಮಿಂಚಿದರೇನಯ್ಯ,
ಅಂತರಂಗ ಶುದ್ಧವಾದ ಬಳಿಕ
ಚೆನ್ನಮಲ್ಲಿಕಾರ್ಜುನ ಒಲಿದ
ಕಾಯ ಹೇಗಿದ್ದರೇನಯ್ಯ ?

ಅಕ್ಕಮಹಾದೇವಿ (ಕನ್ನಡ ಕವಯಿತ್ರಿ)

# ತಾ ರೆ ಯ ರು

— ವೈ ಶಾ ಲಿ

ತಾರೆಯರ ಕಾಲ್ಪನಿಕವಾಸ ಆಕಾಶದಲ್ಲಿ. ಅದಕ್ಕೆ ಅವರು ಸಾಮಾನ್ಯರಿಗಿಂತ ಭಿನ್ನ. ಬಯಸಿದರೂ ಅವರು ಕೆಳಗಿಳಿಯುವಂತಿಲ್ಲ. ಸ್ವತಃ ತಾರೆಯರೇ ಮುಂದೆ ನಿಂತು ನಾನು ನಿಮ್ಮಂತೆಯೇ ಮನುಷ್ಯಪ್ರಾಣಿಯೆಂದು ಘೋಷಿಸಿದರೂ ಸಾಮಾನ್ಯ ಅದನ್ನು ಒಪ್ಪುವುದಿಲ್ಲ. ಬದಲಿಗೆ "ತಾರೆಯರಿಗೆ ಅವರ ಬಗ್ಗೆ ಏನೂ ಗೊತ್ತಿಲ್ಲ" ಎಂದು ತಾರೆಯ ಅಜ್ಞಾನದ ಬಗ್ಗೆ ಮರುಗುವ ಅಸಾಮಾನ್ಯ ಪುರುಷರೂ ಇದ್ದಾರೆ. ಇಂಥವರು ತಮಗೆ ತೋಚಿದ, ಅನಿಸಿದ, ಊಹಿಸಿದ, ಇರದ, ಇಲ್ಲದ, ಭ್ರಮೆ, ಹರಟೆ, ಕಥೆ, ಬುರುಡೆಗಳನ್ನು ನಿರ್ಮಿಸಿ ತಾರೆಯರ ಬಗ್ಗೆ ಒಂದು "ಇಮೇಜ್"ನ್ನೇ ಸ್ಥಾಪಿಸುತ್ತಾರೆ. ತಮ್ಮ ವ್ಯಕ್ತಿಗತ ಅಭಿಪ್ರಾಯಗಳನ್ನು ತಮ್ಮ ಕನಸುಗಳನ್ನು, ಎಲ್ಲವನ್ನೂ ಆ ಇಮೇಜ್ ಮೇಲೆ ಹೇರುತ್ತಾರೆ. ಅವರ ಊಟ ತಿಂಡಿಗಳಿಂದ ಮೊದಲುಗೊಂಡು ಅವರ ಸರಸ, ವಿರಸ, ಪ್ರಣಯ, ಕಲಹ, ಮದುವೆ ಮುಂಜಿ ಎಲ್ಲದರ ಮೇಲೂ ಸಾಮಾನ್ಯ ತನಗೆ ಹಕ್ಕಿದೆಯೆಂದು ಭಾವಿಸುತ್ತಾನೆ. ಇಂಥ 'Fans' ಹಾಕುವ ಗಾಳಿಯ ಗಾಳಿಗೋಪುರದಲ್ಲಿ ತಾರೆಯರ "ಇಮೇಜ್ ಜಗತ್ತು" ತೂಗಿಸಿಂತಿರುತ್ತದೆ. ಭ್ರಮೆಲೋಕದ ದೇವರೇ ಈ ಸಿನೇಮಾತಾರೆಯರು. ನಿಜವೆಂದರೆ ಈ ಇಮೇಜೇ ತಾರಾವ್ಯಕ್ತಿತ್ವ. ಈ ಇಮೇಜ್ ಇರುವಷ್ಟುದಿನ ತಾರೆಯರ ತಮ್ಮ ತಾರಾಪಟ್ಟವನ್ನು ಉಳಿಸಿಕೊಳ್ಳುತ್ತಾರೆ. ಅದು ಮುರಿದು ಬಿದ್ದಿತೆಂದರೆ ತಾರೆಯರ ಅಧಃಪತನ ಸಿದ್ಧ. ಈ ಇಮೇಜ್ ತಾರೆಯರ ಆಸ್ತಿಯೆಂದರೆ ತಪ್ಪಾಗದು. ಇದನ್ನು ಉಳಿಸಿಕೊಳ್ಳುವುದಕ್ಕಾಗಿಯೇ ಸತತವಾಗಿ ಹೋರಾಡಬೇಕಾಗುತ್ತದೆ. ಈ ಹೋರಾಟದಲ್ಲಿ ಅವರ ವ್ಯಕ್ತಿತ್ವ ಎಲ್ಲಿಯೋ ಕಳೆದುಹೋಗಿರುತ್ತದೆ. ಕಳೆದುಹೋದ ವ್ಯಕ್ತಿತ್ವ ಇದೆ ಎಂದು ತೋರಿಸುವುದಕ್ಕಾಗಿ ತಾರೆಯರು ತಮ್ಮ ಸುತ್ತಲೂ ಒಂದು ಸುಳ್ಳು ಪ್ರಪಂಚವನ್ನೇ ಸೃಷ್ಟಿಸಬೇಕಾಗುತ್ತದೆ. ಈ ಸುಳ್ಳು ಪ್ರಪಂಚವನ್ನೇ ನಿಜವೆಂದು ನಂಬಿ ಸಾಮಾನ್ಯ ವ್ಯಕ್ತಿ ತಾರೆಯರ ಬಗ್ಗೆ ಸುಂದರ ಕನಸುಗಳನ್ನು ಹೆಣೆಯ ತೊಡಗುತ್ತಾನೆ. 'ತಾರೆ' ಎಂದೊಡನೆ ಓರ್ವ ಅಪ್ರತಿಮ ಸುಂದರಿ ಕಣ್ಣೆದುರು ಕಾಣಿಸುತ್ತಾಳೆ. ಕಾಳಿದಾಸನ ವರ್ಣನೆಗಿಂತಲೂ ಒಂದು ಪಟ್ಟು ಚಲುವೆಯಾಗಿರುತ್ತಾಳೆ ಈ ತಾರೆ. ಅಲ್ಲದೆ ಒಬ್ಬ ಮಹಾನ್ ಕಲಾವಿದೆಯಾಗಿರುತ್ತಾಳೆ. ನಂತರ ದೊಡ್ಡ ಮನೆ, ಕಾರು, ಕೈಗೊಬ್ಬ ಕಾಲಿಗೊಬ್ಬ ಆಳು. ಮೆತ್ತನೆಯ ಹಾಸಿಗೆಯಲ್ಲಿ ಕುಳಿತು ಊಟಕ್ಕೆ ಬದಲು ಹಣ್ಣಿನ ರಸವನ್ನೇ ಸೇವಿಸುವ ಈ ತಾರೆ ದೇವತೆಯಲ್ಲದೇ ಮತ್ತೇನು? ಅಲ್ಲದೆ ಈ ತಾರೆಗೆ ಮಗುವಿನ ನಾಮಕರಣದಿಂದ ಹಿಡಿದು ವಿಶ್ವದ ರಾಜನೀತಿಯವರೆಗೆ ಎಲ್ಲಾ ತಿಳಿದಿದೆ ಎಂಬ ಭ್ರಮೆ ಅದಕ್ಕಂನೇ ತಾರೆಯರು ಕ್ರಿಕೆಟ್ ಆಡುತ್ತಾರೆ ಎಂದಾಗ ನೂರು ರೂಪಾಯಿಯ ಟಿಕೆಟ್ ಆದರೂ ಸರಿ ತಪ್ಪಿಸುವುದಿಲ್ಲ. ತಾರೆಯರ ವೈಯುಕ್ತಿಕ ಜೀವನದ ಬಗ್ಗೆ ಆಸಕ್ತಿಯಂತೂ ಕೆಲವರಿಗೆ ತಮ್ಮ ಜೀವನಕ್ಕಿಂತಲೂ ಅಧಿಕವಾಗಿರುತ್ತದೆ. ತಾರೆಯರ ಪ್ರಣಯ ಕಥೆ ನಮ್ಮ ರಾಮಾಯಣ, ಮಹಾಭಾರತದ ಕಥೆಗಳಿಗಿಂತಲೂ ಹೆಚ್ಚು ಆಕರ್ಷಕವಾದದ್ದು ಅವರ ಸ್ವಚ್ಛಂದ ಜೀವನ ಬಗ್ಗೆ ತಮ್ಮದೇ ಆದ ಒಂದು ಕಲ್ಪನೆ. ಎಲ್ಲಾ ಬಗೆಯ ಕಥೆಗಳು ಹೇಳಿ, ಕೇಳಿಯಾದನಂತರ ಅಸೂಯೋ, ಅತೃಪ್ತಿಗೋ "ಸಿನೇಮಾದವರ ಹಣೇಬರಹವೇ ಇಷ್ಟು" ಎಂದು ಹೀಯಾಳಿಸುವುದೂ ಉಂಟು.

ಒಮ್ಮೊಮ್ಮೆ ಈ ತಾರೆಯರು ಸಾಮಾನ್ಯರ ಈ

ಕನಸುಗಳನ್ನೇ ನನಸಾಗಿಸಲು ಹೊರಡುತ್ತಾರೆ. ತಮ್ಮ ಪ್ರಣಯ ಜೀವನದ ಬಗ್ಗೆ ಅಥವಾ ತಮ್ಮ ವೈವಾಹಿಕ ಜೀವನದ ಬಗ್ಗೆ ತಾವೇ ಹೇಳಿಕೊಳ್ಳುತ್ತಾರೆ. ಇದರಿಂದ ತನಗೆ "ಪಬ್ಲಿಸಿಟಿ" ದೊರೆಯುವುದಲ್ಲದೇ ತಮ್ಮ "ಮಾರ್ಕೆಟ್" ಸಹ ಹೆಚ್ಚುತ್ತದೆ ಎಂಬ ಭ್ರಮೆ. ಒಮ್ಮೆ ಒಬ್ಬ ವಿವಾಹಿತ ತಾರೆಯನ್ನು ಪತ್ರಿಕೆಯವರೊಬ್ಬರು ಕೇಳಿದ ಪ್ರಶ್ನೆ "ನಿಮ್ಮ ಪತಿಯಲ್ಲಿ ನೀವು ಮೆಚ್ಚಲಾರದ ಗುಣ ಯಾವುದು ?" ಅದಕ್ಕೆ ಆಕೆಯಿಂದ ಬಂದ ಉತ್ತರ "ಅವರು ಬೆಳಿಗ್ಗೆ ಎದ್ದೊಡನೆಯೇ ಶೇವ್ ಮಾಡದೇ ನನಗೆ ಮುತ್ತಿಡುವ ಗುಣ" ಎಂಥಾ ಥ್ರಿಲ್ಲಿಂಗ್ ಉತ್ತರ ! ಆದರೆ ಇಲ್ಲಿ ಥ್ರಿಲ್ ಆಗುವವರು ಯಾರು ? ನಮ್ಮ ಇಂದಿನ ಕಾಲೇಜು ಯುವಕ-ಯುವತಿಯರು. ಆ ತಾರೆಯ ಮೋಹಕ ತುಟಿಗಳನ್ನು ನೋಡಲು ನೂಕು ನುಗ್ಗಲು. ಆಕೆಯ ಸುಂದರ ಜೀವನದ ಬಗ್ಗೆ ಅಸೂಯೆ. ತಮ್ಮ ಜೀವನವೂ ಅವರಂತೆಯೇ ರಸಮಯವಾಗ ಬೇಕೆಂಬ ಕನಸು. ಈ ಎಲ್ಲಾ ಮುಗಿಯಲಾರದ ಕನಸು ಗಳು ಅವರನ್ನು ಯಾವ ಮಟ್ಟಕ್ಕೆ ಎಳೆದೊಯ್ಯುತ್ತವೆ ಎಂದು ಹೇಳುವುದು ಕಷ್ಟ. ಅಂತೆಯೇ ಜಯಾಭಾದುರಿ ಚಪ್ಪಲಿ, ಹೇಮಮಾಲಿನಿ ಸೀರೆ, ಬಾಬಿ ಬಳೆ, ರಾಜೇಶ್ ಖನ್ನ ಶರ್ಟು-ಇವೆಲ್ಲಾ ಹೆಚ್ಚು ಮಾರಾಟವಾಗುವ ವಸ್ತು ಗಳು. ಇವುಗಳನ್ನು ಉಪಯೋಗಿಸುವವರು ಮಾತ್ರ ನಮ್ಮ ಸಮಾಜದಲ್ಲಿ ಯೋಗ್ಯರೆನಿಸುತ್ತಾರೆ. "ಸೋಫೆಸ್ಟಿ ಕೆಟೆಡ್" ಎನಿಸಿಕೊಳ್ಳುತ್ತಾರೆ.

ಇನ್ನು ತಾರೆಯರಲ್ಲಿಯೂ ಮಟ್ಟಗಳಿರುತ್ತವೆ. ಬುದ್ಧಿಜೀವಿ ತಾರೆ, ಸಾಮಾನ್ಯ ತಾರೆ, ಪರಾವಲಂಬಿ ತಾರೆ, ಗ್ಲಾಮರ್ ತಾರೆ.

ಮೊದಲನೆಯದಾಗಿ ಬುದ್ಧಿಜೀವಿ ತಾರೆ. ಈ ತಾರೆ ಸ್ವತ, ಬುದ್ಧಿಜೀವಿಯಾಗಿರಬೇಕೆಂಬ ನಿಯಮವಿಲ್ಲ ಅಥವಾ ಅತ್ಯಂತ ಪ್ರತಿಭಾವಂತಳಾಗಿರಬೇಕೆಂದೂ ಇಲ್ಲ. ಬುದ್ಧಿಜೀವಿ ನಿರ್ದೇಶಕನೊಬ್ಬ ತಯಾರಿಸಿದ ಚಿತ್ರದಲ್ಲಿ ಅಭಿನಯಿಸಿದರೆ ಸಾಕು. ಆಕೆ ಬುದ್ಧಿಜೀವಿ ಸಾಲಿಗೆ ಸೇರಿ ದಂತೆ. ಆಕೆಯ ಬಾಲಿಶ ಮಾತುಗಳೂ, ಅಪ್ರಬುದ್ಧ ಹೇಳಿಕೆಗಳೂ ಸಹ ಒಂದು ವಿಶೇಷ ಅರ್ಥದೊಂದಿಗೆ ಪತ್ರಿ ಕೆಯಲ್ಲಿ ಬಂದಿರುತ್ತವೆ. ಇಂಥ ತಾರೆಯರೂ ಸಹ ತಮ್ಮ ಸುತ್ತಲೂ ತಮ್ಮದೇ ಆದ ಒಂದು ಬೇಲಿಯನ್ನು ನಿರ್ಮಿಸಿ ಕೊಂಡಿರುತ್ತಾರೆ. ಅದೇನೆಂದರೆ ಯಾವ ಸಮಾರಂಭ ಗಳಲ್ಲೂ ಭಾಗವಹಿಸದೇ ಇರುವುದು. (ಸಮಾರಂಭಗಳಿಗೆ ಹೋಗುವುದು ತಮ್ಮ ಪ್ರತಿಷ್ಠೆಗೆ ಕುಂದು ಎಂಬ ಭಾವನೆ) ವಿಶೇಷ ಸಮಾರಂಭಗಳಲ್ಲಿ ಭಾಗವಹಿಸಲು ಒಂದು ಒಂದು ವರೆ ಗಂಟೆ ತಡವಾಗಿ ಬರುವುದು, ಕೆಲವೊಮ್ಮೆ ಬರುವು ದಾಗಿ ಹೇಳಿ ಕೊನೆ ಗಳಿಗೆಯಲ್ಲಿ ಸಂದೇಶ ಕಳಿಸಿ ಸುಮ್ಮ ನಾಗುವುದು. ಇಂಥ ಕೆಲವು ನಿಯಮಗಳನ್ನು ಈ ಬುದ್ಧಿ ಜೀವಿ ತಾರೆಯರು ಎಂದೂ ಮುರಿಯುವುದಿಲ್ಲ. ಆಶ್ಚರ್ಯ ವೆಂದರೆ ಈ ರೀತಿಯ ಅಹಿತಕರ ಘಟನೆಗಳು ನಡೆದರೂ ಸಹ ಅದನ್ನು ನೇರವಾಗಿ ಹೇಳುವ ಧೈರ್ಯ ಯಾರಿಗೂ ಇರುವುದಿಲ್ಲ. ಎಷ್ಟಾದರೂ ಬುದ್ಧಿಜೀವಿಗಳಲ್ಲವೇ ? !

ಇನ್ನು ಗ್ಲಾಮರ್ ತಾರೆ. ಈ ತಾರೆಗೆ ಮುಖ್ಯ ವಾಗಿ ಬೇಕಾದ್ದು ಸುಂದರ ಮೈಮಾಟ. ಬುದ್ಧಿವಂತಿಕೆಗೆ, ಪ್ರತಿಭೆಗೆ ಇಲ್ಲಿ ಸ್ಥಳವಿಲ್ಲ. ಕೇವಲ ಸೌಂದರ್ಯವೇ ಮುಖ್ಯ ಇಲ್ಲಿ. ಭಿಕ್ಷುಕಿಯ ಪಾತ್ರವಾದರೂ ಸರಿ "ಐ ಲೈನರ್ (Eye liner) ಸಮೇತವಾಗಿ ಫಳಫಳಿಸುವ ಕಮಲದಂತಹ ಕಣ್ಣುಗಳು ಆಕೆಗಿರಲೇ ಬೇಕು. ಗಂಭೀರ ವಾದ ಸೀತೆಯ ಪಾತ್ರವಾದರೆ ? ಚಿಂತೆಯಿಲ್ಲ ಕಾರಣ ಸೀತೆಯನ್ನು "ರೇಪ್" ಮಾಡುವ ಒಂದು ದೃಶ್ಯವನ್ನಾ ದರೂ ಸೇರಿಸಲೇ ಬೇಕು. ಇಲ್ಲದಿದ್ದರೆ ಕಾಸು ಕೊಟ್ಟು ನೋಡಲು ಬರುವ ರಸಿಕರಿಗೆ "ಡಿಸಪಾಯಿಂಟ್" ಆಗ ಲಾರದೇ ?

ಇಂಥಾ ಗ್ಲಾಮರ್ ಆ ತಾರೆಗೆ ಬೇಕಿರಲಿ ಅಥವಾ ಬೇಕಿಲ್ಲದಿರಲಿ ಅದನ್ನು ಆಕೆ ಉಳಿಸಿಕೊಂಡು ಬರಲೇ ಬೇಕು. ಮೈತುಂಬ ಬಟ್ಟೆ ಧರಿಸಲೂ ಸಹ ನಿರ್ದೇಶಕನ ಅಪ್ಪಣೆ ಪಡೆಯಬೇಕು. ಇಂಥ ಸಂದರ್ಭಗಳಲ್ಲಿ ತನ್ನ ಸ್ಥಾನ, ವ್ಯಕ್ತಿತ್ವ, ಸ್ವಾಭಿಮಾನ ಇವುಗಳ ಬಗ್ಗೆ ಯೋಚಿ ಸುವ ಅವಕಾಶವೂ ಆ ತಾರೆಗಿರುವುದಿಲ್ಲ. ಇದು ಆಕೆಯ ದೌರ್ಬಲ್ಯವೊ, ಅಸಹಾಯಕತೆಯೋ, ಮೂರ್ಖತನವೋ, ತಿಳಿಯುವುದು ಕಷ್ಟ. ಆದರೂ ಈ ಬಗೆಯ ತಾರೆಯರ ಸಂಖ್ಯೆ ನಮ್ಮ ಚಿತ್ರರಂಗದಲ್ಲಿ ಈಗ ಹೆಚ್ಚುತ್ತಲಿದೆ.

ಈಗ ಪರಾವಲಂಬೀ ತಾರೆಯರ ಬಗ್ಗೆ ಯೋಚಿ ಸೋಣ. ಈ ಬಗೆಯ ತಾರೆಯರಿಗೆ ಬೇಕಿರುವುದು ಕೇವಲ ಅದೃಷ್ಟ. ಗುರಿ ಸಾಧನೆಗಾಗಿ ಹೋರಾಟವಾ ಗಲೀ, ಅಂಗಾಂಗ ಪ್ರದರ್ಶಿಸುವ ಅಸಹಾಯಕತೆಯಾಗಲೀ

ಇಲ್ಲ. ಪ್ರಸಿದ್ಧ ನಟ ಅಥವಾ ನಿರ್ದೇಶಕನ ಪ್ರಭಾವ ವಿದ್ದರೆ ಸಾಕು. ಆಕೆ "Top Star" ಆಗುವುದರಲ್ಲಿ ಅನುಮಾನವೇ ಇಲ್ಲ. ಸೌಂದರ್ಯ, ಪ್ರತಿಭೆ, ಇವೆರ ಡರ ಅಗತ್ಯವೂ ಇಲ್ಲಿ ಇಲ್ಲ. ಮೊದಮೊದಲು ಆಕೆಯಲ್ಲಿ ಪ್ರತಿಭೆಯಿಲ್ಲವೆಂದು ಪ್ರೇಕ್ಷಕರು ಗೊಣಗಿದರೂ ಪ್ರಿಲಿಂದ ಮೇಲೆ ಅದೇ ರೀತಿಯ ಚಿತ್ರಗಳು ಬರತೊಡಗಿದಾಗ "ನಾವು ತಿಳಿದುಕೊಂಡಿದ್ದೇ ತಪ್ಪು" ಎಂದು ತಮ್ಮ ಅಜ್ಞಾನವನ್ನು ಶಪಿಸುತ್ತಾ ಆ ಹೊಸ ಬಗೆಯ ಅಭಿನ ಯಕ್ಕೆ ಹೊಂದಿಕೊಂಡು ಬಿಡುತ್ತಾರೆ. ಈ ವಿಷಯದಲ್ಲಿ ನಮ್ಮ ಜನ ತುಂಬಾ ಉದಾರಿಗಳು !

ಇನ್ನು "ಟೈಪ್ (Type) ತಾರೆಯರು." ಈ ತಾರೆಯರದ್ದು ನಿಜಕ್ಕೂ ಒಂದು ರೀತಿಯ ಶೋಚನೀಯ ಪರಿಸ್ಥಿತಿ. ಒಮ್ಮೆ ಒಂದು ಬಗೆಯ ಪಾತ್ರದಲ್ಲಿ ಒಬ್ಬ ತಾರೆ ಯಶಸ್ವಿಯಾದರೆ, ಮತ್ತೆ ಮತ್ತೆ ಅದೇ ಬಗೆಯ ಪಾತ್ರಗಳೇ ಆಕೆಗೆ ಗತಿ. ಒಂದೇ ಬಗೆಯ ಪಾತ್ರಗಳಿಂದ ಆಕೆಯೂ ರೋಸಿ, ನೋಡುವವರೂ ರೋಸಿ, ಇನ್ನು ನಾವು ಈ ಬಗೆಯ ಪಾತ್ರವನ್ನು ನೋಡಲಾರೆವು ಎಂದು ಮುಷ್ಕರ ಹೂಡುವವರೆಗೂ ಸೈ. ಒಮ್ಮೆ ಹುಚ್ಚಿಯಾಗಿ ಯಶಸ್ವಿಯಾದರೆ ಪದೇ ಪದೇ ಹುಚ್ಚಿಯಾಗೇ ಇರಬೇಕು. ಆ ಬಗೆಯ ಪಾತ್ರ ನೋಡಿ ನೋಡಿ, ನೋಡುವವರಿಗೂ ಹುಚ್ಚು ಹಿಡಿದು, ಮಾಡುವವರಿಗೂ ಹುಚ್ಚು ಹಿಡಿದರೂ ಸಹ ಆ ತಾರೆಗೆ ಹುಚ್ಚಿಯ ಪಾತ್ರ ಬರುವುದು ಕಡಿಮೆ ಯಾಗಲಾರದು ...ಹಾಸ್ಯ ಪಾತ್ರದಲ್ಲಿ ಒಮ್ಮೆ ಮಿಂಚಿದರೆ ಸಾಕು. ಮತ್ತೆ ಮತ್ತೆ ಹಾಸ್ಯ. ಆ ಹಾಸ್ಯ ಹಾಸ್ಯಾ ಸ್ಪದವಾದರೂ ಅದರಿಂದ ಆಕೆಗೆ ಬಿಡುಗಡೆ ದೊರೆಯಲಾ ರದು. ತಾನು ವಿಭಿನ್ನ ಬಗೆಯ ಪಾತ್ರ ಮಾಡಬಲ್ಲೆ, ನನ್ನಲ್ಲಿ ಆ ಯೋಗ್ಯತೆ ಇದೆಯೆಂದು ಚೀರಿ ಹೇಳಿದರೂ ಅದು ಕೇವಲ ಅರಣ್ಯ ರೋದನವಾಗುತ್ತದೆ. ಇಂತಹ ಚಕ್ರವ್ಯೂಹದಲ್ಲಿ ಸಿಕ್ಕಿ ಅನೇಕ ನಿಜವಾದ ಪ್ರತಿಭಾವಂತ ತಾರೆಯರೂ ಇಂದು ಮೂಲೆಗುಂಪಾಗಿದ್ದಾರೆ.

ಸಾಮಾನ್ಯ ತಾರೆಯರದ್ದೂ ಇದೇ ಗತಿ. ಈ ವರ್ಗದಲ್ಲಿ ನಿಜವಾದ ಚೆಲುವೆಯರು, ಸಾಧಾರಣ ರೂಪ ದವರು, ಪ್ರತಿಭಾವಂತರು, ಪ್ರತಿಭೆಯಿಲ್ಲದವರು ಎಲ್ಲರೂ ಸೇರಿದ್ದಾರೆ. ಚಿತ್ರರಂಗದ ರಾಜಕೀಯಕ್ಕೆ ಸಿಕ್ಕಿ ಕೆಲವರು ಸಾಮಾನ್ಯರಾದರೆ ಇನ್ನೂ ಕೆಲವರು ನಿರ್ದೇಶಕ ಅಥವಾ ನಟನ ಕೃಪಾಕಟಾಕ್ಷದಿಂದ ವಂಚಿತರಾಗಿ ಸಾಮಾನ್ಯ ರಾಗುತ್ತಾರೆ. ಆದರೂ ತಾರೆ ಎನಿಸಿಕೊಳ್ಳಲೇಬೇಕೆನ್ನುವ ಇವರ ಹಠ ಇವರನ್ನು ಪೂರ್ತಿಯಾಗಿ ಚಿತ್ರರಂಗದಿಂದ ಹೊರಬರಲು ಬಿಡುವುದಿಲ್ಲ. ಅದಕ್ಕಾಗಿ ಜೀವನದುದ್ದಕ್ಕೂ ಹೋರಾಡುತ್ತಲೇ ಇರುತ್ತಾರೆ. ಕೆಲವೊಮ್ಮೆ ಈ ಹೋರಾ ಟದಲ್ಲಿ ಜಯದೊರೆತು ಇದ್ದಕ್ಕಿದ್ದಂತೆ ಅಪ್ರತಿಮ ತಾರೆ ಯಾದವರೂ ಇದ್ದಾರೆ. ಹೇಳ ಹೆಸರಿಲ್ಲದಂತೆ ಮಾಯ ವಾದವರೂ ಇದ್ದಾರೆ. ಅಂಥ ಸಮಯದಲ್ಲಿ "ಅವರವರ ಅದೃಷ್ಟ" ಎಂಬ ಮಾತನ್ನು ಹೇಳಲೇ ಬೇಕಾಗುತ್ತದೆ.

ಈ ಎಲ್ಲಾ ಗೊಂದಲದಲ್ಲಿ ತಾರೆಯರ ವ್ಯಕ್ತಿಗತ ಯೋಗ್ಯತೆಗಳೇನು ? ಎಂದು ಯೋಚಿಸುವ ಗೊಡವೆ ಯಾರಿಗೂ ಇಲ್ಲ. ತಾರಾ ಪ್ರಪಂಚಕ್ಕೆ ತಾರೆಯ ಕೊಡುಗೆ ಏನು ಎಂದು ಯಾವ ತಾರೆಯೂ ಯೋಚಿಸುವುದಿಲ್ಲ. ಇಂದಿನ ಚಿತ್ರಗಳನ್ನು ನೋಡುವಾಗ ತಾರೆಗೆ ಯಾವ ವ್ಯಕ್ತಿತ್ವವೂ ಇಲ್ಲ ಎನಿಸುತ್ತದೆ. ಉದಾಹರಣೆಗೆ, ಪ್ರಯೋ ಗಾತ್ಮಕ ಚಿತ್ರಗಳು. ಇದರಲ್ಲಿ ಅಭಿನಯಿಸುವ ಕಲಾವಿದರಿಗೆ ಪ್ರತಿಭೆಯ ಅಗತ್ಯವಿಲ್ಲ. ನಿರ್ದೇಶಕ 'ನೋಡು' ಎಂದಾಗ ನೋಡಿ, 'ಮಾತಾಡು' ಎಂದಾಗ ನಿರ್ವಿಕಾರವಾಗಿ ಮಾತೊಪ್ಪಿಸಿದರೆ ಮುಗಿಯಿತು ಈ ಕಲಾವಿದರ ಕೆಲಸ.... ಏಕೆಂದರೆ ಸಹಜತೆಯೇ ಇಲ್ಲಿ ಮುಖ್ಯವಾದದ್ದು. ಒಮ್ಮೊಮ್ಮೆ ನಿಜಜೀವನದಲ್ಲಿರುವುದಕ್ಕಿಂತಲೂ ಹೆಚ್ಚಿನ ಸಹಜತೆ ಈ ಚಿತ್ರಗಳಲ್ಲಿರುತ್ತದೆ. ಇಲ್ಲಿ ನಿರ್ದೇಶಕ ಮುಖ್ಯ ಹೊರತು ತಾರೆಯಲ್ಲ.

ಇನ್ನು ಕಮರ್ಷಿಯಲ್ ಚಿತ್ರಗಳಲ್ಲಿ ಪ್ರತಿಭೆಗಿಂತ ಪ್ರಭಾವ (ಇನ್‌ಫ್ಲೂಯನ್ಸ್) ಮುಖ್ಯ. ಪಾತ್ರಕ್ಕೆ ಒಪ್ಪುವ ಪಾತ್ರದಾರಿಗಳೇ ಬೇಕೆಂಬ ನಿಯಮವೂ ಇಲ್ಲ. ನಿರ್ದೇಶಕನಿಗೆ ಒಪ್ಪುವ ಪಾತ್ರದಾರಿಗಳಾದರೆ ತೀರಿತು.

ಈ ಎಲ್ಲಾ ಆಗುಹೋಗುಗಳಿಗೆ ಯಾರು ಹೊಣೆ ? ತಾರೆಯರೇ ? ನಿರ್ದೇಶಕರೇ ? ಅಥವಾ ಪ್ರೇಕ್ಷಕರೇ ? ಯಾರು ಅಲ್ಲ ! ಯಾವ ರೀತಿಯಿಂದಲೂ ಇದನ್ನು ವಿಂಗಡಿಸುವುದು ಸಾಧ್ಯವಿಲ್ಲ. ಏನೇ ಅಂದರೂ "ತಾರೆ ಯರು" ಎಂಬುದು ಮಾತ್ರ ಚರ್ಚೆಗೆ ಬಹಳ "ಇಂಟ ರೆಸ್ಟಿಂಗ್" ವಿಷಯ.

---

# ಪ್ರಗತಿಯ ಪಕ್ಷಿನೋಟ

★ "ಕರ್ನಾಟಕ" ಎಂಬ ಸ್ಫೂರ್ತಿದಾಯಕ ಹೆಸರನ್ನು ನಮ್ಮ ರಾಜ್ಯವು ತಳೆದು ಈಗ ಒಂದು ವರ್ಷವಾಯಿತು. ರಾಜ್ಯವು ರೂಪುಗೊಂಡು ಹದಿನೆಂಟು ವರ್ಷಗಳಾದುವು. ಈ ಅವಧಿಯಲ್ಲಿ ಕರ್ನಾಟಕ ಪ್ರಗತಿಯು ಹೆದ್ದಾರಿಯಲ್ಲಿದೆ. ಸಾಧಿಸಿದ ಪ್ರಗತಿಯ ಪಕ್ಷಿನೋಟವಿದು :–

★ ವ್ಯವಸಾಯ ಕ್ಷೇತ್ರದ ಪ್ರಗತಿ ಮುನ್ನಡೆಯ ಸಂಕೇತ. 1956 ರಲ್ಲಿ ಆಹಾರ ಧಾನ್ಯಗಳ ಉತ್ಪಾದನೆ 33.3 ಲಕ್ಷ ಟನ್‌ಗಳಿದ್ದುದು 1974 ರ ವೇಳೆಗೆ 61.5 ಲಕ್ಷ ಟನ್‌ಗಳಿಗೇರಿದೆ. ಆಹಾರ ಧಾನ್ಯ ಬೆಳೆಯುವ ಪ್ರದೇಶ 69.9 ಲಕ್ಷ ಹೆಕ್ಟೇರುಗಳಿದ್ದುದು 74.2 ಲಕ್ಷ ಹೆಕ್ಟೇರುಗಳಷ್ಟಾಗಿವೆ. ಕಬ್ಬಿನ ಉತ್ಪಾದನೆ 34.5 ಲಕ್ಷ ಟನ್‌ಗಳಿಂದ 92.31 ಲಕ್ಷ ಟನ್‌ಗೆ ಹೆಚ್ಚಿದೆ.

★ ವ್ಯವಸಾಯಾಭಿವೃದ್ಧಿಗೆ ನೀರಾವರಿ ಸೌಕರ್ಯ ಅತಿ ಮುಖ್ಯ. 1956 ರಲ್ಲಿ ನೀರಾವರಿ ಭೂಮಿ 7.4 ಲಕ್ಷ ಹೆಕ್ಟೇರಿದ್ದುದು 1974 ರ ವೇಳೆಗೆ ಅದು 17.40 ಲಕ್ಷ ಹೆಕ್ಟೇರುಗಳಿಗೇರಿದೆ. ನೀರಾವರಿ ಭಾವಿಗಳ ಸಂಖ್ಯೆ ಮೂರು ಪಟ್ಟು ಹೆಚ್ಚಿದೆ.

★ ಕೃಷಿ ಮತ್ತು ಕೈಗಾರಿಕಾಭಿವೃದ್ಧಿಗೆ ವಿದ್ಯುಚ್ಛಕ್ತಿ ಕಾಮಧೇನು. ವಿದ್ಯುತ್ ಉತ್ಪಾದನೆ 1956 ರಲ್ಲಿ 1.79 ಲಕ್ಷ ಕಿ.ವ್ಯಾ. ಇತ್ತು. ಇಂದು 9.67 ಲಕ್ಷ ಕಿ.ವ್ಯಾ. ಆಗಿವೆ. ಕಾಳಿನದಿ ಜಲ ವಿದ್ಯುತ್ ಯೋಜನೆ ಪೂರ್ಣಗೊಂಡ ನಂತರ ಉತ್ಪಾದನೆ ದ್ವಿಗುಣಗೊಳ್ಳುವುದು.

★ ರಾಜ್ಯ ಸರಕಾರದ ಉದಾರ ನೀತಿಯಿಂದಾಗಿ ಹಾಗೂ ಕಚ್ಚಾ ವಸ್ತುಗಳ ವಿದ್ಯುಚ್ಛಕ್ತಿಯ ಸೌಕರ್ಯವಿದ್ದುದರಿಂದ ಈ ಅವಧಿಯಲ್ಲಿ ಕೈಗಾರಿಕೆಗಳ ಸಂಖ್ಯೆ ಎಂಟರಷ್ಟು ಹೆಚ್ಚಿ ಈಗ 9657 ಇವೆ.

★ 1956 ಗಿಂತ ಇಂದು 12435 ರಷ್ಟು ಹೆಚ್ಚು ಗ್ರಾಮ ಮತ್ತು ಪಟ್ಟಣಗಳಿಗೆ ವಿದ್ಯುತ್ ಒದಗಿಸಲಾಗಿವೆ. ವಿದ್ಯುತ್‌ಚಾಲಿತ ನೀರಾವರಿ ಪಂಪುಸೆಟ್ಟುಗಳ ಸಂಖ್ಯೆ ಅಂದು 7923 ಇದ್ದುದು ಇಂದು 1.90 ಲಕ್ಷವಾಗಿವೆ.

★ ರಸ್ತೆಗಳು ಸಂಚಾರ ವ್ಯವಸ್ಥೆಗೆ ಪೂರಕವಾಗಿದ್ದು ಅಭಿವೃದ್ಧಿಗೆ ದಾರೀ ಮಾಡಿಕೊಡುತ್ತವೆ. ಇಂದು ರಸ್ತೆಗಳ ಉದ್ದಳತೆ 80,168 ಕಿ.ಮಿ. ಮಾತ್ರ ಇದ್ದು 1956ರಲ್ಲಿ ಕೇವಲ 43,448 ಕಿ.ಮಿ. ಮಾತ್ರ ಇತ್ತು.

★ ಸಾಕ್ಷರ ಪ್ರಮಾಣ ಶೇಕಡಾ 25.4 ಇದ್ದುದು ಇಂದು 3i.52 ಆಗಿವೆ. 11,000 ಹೊಸ ಪ್ರಾಥಮಿಕ ಶಾಲೆಗಳು, 1668 ಹೊಸ ಪ್ರೌಢ ಶಾಲೆಗಳು ಹಾಗೂ 285 ಹೊಸ ಕಾಲೇಜುಗಳು ಪ್ರಾರಂಭವಾಗಿವೆ.

★ ಆರೋಗ್ಯವೇ ಭಾಗ್ಯ, ವೈದ್ಯಕೀಯ ಸೌಕರ್ಯಗಳಲ್ಲಿ ಹೆಚ್ಚಳವಾಗಿದೆ. 1956 ರಲ್ಲಿ ಆಸ್ಪತ್ರೆ, ಔಷಧಾಲಯಗಳ ಸಂಖ್ಯೆ ಕೇವಲ 776 ಇಂದು 1346. ಸುಮಾರು 26 ಸಾವಿರ ಗ್ರಾಮಗಳಿಗೆ ಶುದ್ಧ ಕುಡಿಯುವ ನೀರಿನ ಸೌಕರ್ಯ ಒದಗಿಸಲಾಗಿದೆ.

★ 1956 ರಲ್ಲಿ ರಾಜ್ಯದಲ್ಲಿ ಸರಕಾರೀ ಹಾಲಿನ ಡೈರಿಗಳು ಇರಲಿಲ್ಲ. ಇಂದು ಒಂಬತ್ತು ಪ್ರಾರಂಭವಾಗಿವೆ. ಪಶುವೈದ್ಯ ಶಾಲೆಗಳು ಅಂದು 318 ಮಾತ್ರ ಇಂದು ಅವುಗಳ ಸಂಖ್ಯೆ 1018.

★ ಈ ಅವಧಿಯಲ್ಲಿ ಸಹಕಾರೀ ಸಂಸ್ಥೆಗಳು ದ್ವಿಗುಣಗೊಂಡು ಸದಸ್ಯರ ಸಂಖ್ಯೆ ಮೂರರಷ್ಟು ಹೆಚ್ಚಿವೆ. ಅದರಿಂದಾಗಿ ಏಳು ಸಾವಿರ ಹೆಚ್ಚು ಗ್ರಾಮಗಳು ಸಹಕಾರದ ಕಕ್ಷೆಯಲ್ಲಿ ಬಂದಿವೆ.

(ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಕರ್ನಾಟಕ ಸರಕಾರ ಇವರಿಂದ ಪ್ರಕಟಿತ)

# ಬ್ರಾಹ್ಮಣ-75



ಇವನು,

ಕೋಡಿ ಬಿದ್ದವರ ನೋಡುತ್ತ, ನೋಡುತ್ತ ನಿಂತಿದ್ದಾನೆ.
ಎಡಗೈ, ಬಲಗೈ ಇಲ್ಲದೆ ಕಳಕ್ಕನೆ ಕಳಚಿ ಕೊಂಡಿದ್ದಾನೆ.
ಬಯಲಲ್ಲಿ ಬೀಸುವ ಗಾಳಿಯ ಧರ-ದಿಕ್ಕಿಲ್ಲದೆ, ದೆಸೆಯಿಲ್ಲದೆ
ಆಕಾಶಕ್ಕೆ ಬಾಯಿ ಬಿಟ್ಟದ್ದಾನೆ.

ತಲೆ ಹಿಂದೆ, ಎರೆ
ಗದ್ದೆಯಂಚಲ್ಲೆ ಶೂದ್ರ ನರ
ಳು ದೇಕುತ್ತದೆ. ನೇಗಿಲಡಿಯಲ್ಲಿ,
ಯೋನಿ ಬಾಯಲ್ಲಿ
ಪಂಚಮಿಯ ಚೀತ್ಕಾರ ಹುಟ್ಟುತ್ತದೆ.

ತಲೆ ಮೇಲೆ, ತಿರುಗುತ್ತ-ತಿರುಗುತ್ತ
ಆಳಕ್ಕೆ ಕೊರೆಯುತ್ತ ಚಕ್ರ (ತಳಕ್ಕೆ) ಪಾತಾಳಕ್ಕೆ
ದೂಡುತ್ತದೆ.

ಚಕ್ರದಡಿಯಲ್ಲಿ ಸಣ್ಣಗೆ ಕೊರಗುತ್ತ
ನರಳುತ್ತ, ಅತೃಪ್ತಿಯ ಹರಳಾಗುತ್ತ

ಇವನು,

ಅಲೆಯುತ್ತಿದ್ದಾನೆ, ಶಾಪ ಹೊತ್ತವನಂತು

—ಕಮಲ ಹೆಮ್ಮಿಗೆ




“ಗೋಪಿ, ನಿನ್ನ ಕಂಡರೆ ನನಗೆ ತುಂಬ ಪ್ರೀತಿ, ಎಷ್ಟೇ ಖರ್ಚಾದರೂ ಪರವಾಗಿಲ್ಲ. ನಿನ್ನ ಡಾಕ್ಟರ್ ಪರೀಕ್ಷೆಗೆ ಓದಿಸುತ್ತೇನೆ,” ಎಂದು ಅಪ್ಪ ದಿನಕ್ಕೆ ಒಂದು ಬಾರಿಯಾದರೂ ನನ್ನನ್ನಪ್ಪಿ ಹೇಳದೇ ಇರುತ್ತಿರಲಿಲ್ಲ.

ಎಲ್ಲಾ ಬರೀ ಸುಳ್ಳು. ಪ್ರೀತಿ ಇದ್ದಿದ್ದರೆ ನಾನು ಕೇಳಿದ ಸಾಮಾನುಗಳನ್ನು ತೆಗೆದುಕೊಡುವುದಿಲ್ಲವೇಕೆ ? ಏನು ಕೇಳಿದರೂ ಒಂದೇ ಮಾತು :

“ಅದಕ್ಕೆಲ್ಲ ಸುಮ್ಮನೆ ಖರ್ಚು ಮಾಡಬಾರದು”

ಎದುರುಮನೆ ಶ್ರೀಧರ ನನ್ನಂತೆ ಅವನೂ ಒಬ್ಬನೇ ಮಗ. ಅವನಿಗೂ ಒಬ್ಬಳೇ ಅಕ್ಕ. ಅವನನ್ನೆಷ್ಟು ಪ್ರೀತಿಸುತ್ತಾರೆ ಅವನ ತಂದೆತಾಯಿಗಳು ! ಅವನು ಇಷ್ಟಪಟ್ಟ ಬಟ್ಟೆಯೆಲ್ಲಾ ಹೊಲೆಸುತ್ತಾರೆ. ಅವನು ಹುಟ್ಟಿದ ಹಬ್ಬದ ದಿನ ಹಾಕಿಕೊಂಡು ಬಂದ ಟೆರಿಲಿನ್ ಷರ್ಟು ಮತ್ತು ಟೆರಿಲಿನ್ ಚಡ್ಡಿ ಎಷ್ಟು ಚೆನ್ನಾಗಿತ್ತು ! ಅಪ್ಪ ಮಾತ್ರ ನನ್ನ ಹುಟ್ಟಿದ ಹಬ್ಬದಲ್ಲಿ ನೂಲಿನ ಚಡ್ಡಿ ಷರಟನ್ನೇ ಹೊಲಿಸಿಬಿಟ್ಟ !

“ಕ್ಲಾಸಿನಲ್ಲಿ ಫಸ್ಟ್ ರ‍್ಯಾಂಕು ತೆಗೆದುಕೊಂಡರೆ ಹೊಲೆಸುತ್ತೀನಿ” ಅಂತ ಅಂದಿದ್ದ. ಎಷ್ಟು ಕಷ್ಟಪಟ್ಟು ರಾಮುನನ್ನು ಸೋಲಿಸಿ ಅವನ ಜಾಗ ಗಿಟ್ಟಿಸಿದೆ....... ಆದರೂ ಟೆರಿಲಿನ್ ಬಟ್ಟೆ ಹೊಲಿಸಲಿಲ್ಲ.

ಶ್ರೀಧರನ ತಾಯಿ, ಅವನಿಗೆ ಪ್ರತಿದಿನ ಮೂರು ಅಥವ ಐದು ಪೈಸೆ ಕೊಡುತ್ತಾರೆ. ದಿನಾ ಸ್ಕೂಲು ಬಿಟ್ಟ ತಕ್ಷಣ ಅವನು ಕಡ್ಲೇಕಾಯೋ, ಪೆಪ್ಪರ್ ಮೆಂಟೋ ಏನಾದರೂ ಕೊಂಡುಕೊಳ್ಳುತ್ತಾನೆ. ಕೊಂಡಿದ್ದರಲ್ಲಿ ನನಗೂ ಪಾಲು ಕೊಡುತ್ತಾನೆ.

ಅಪ್ಪ ಎಂದಾದರೂ ದುಡ್ಡು ಕೊಟ್ಟು ಬೇಕಾದ್ದು ಕೊಂಡುಕೋ ಎಂದು ಹೇಳಿದ್ದಾನೆಯೆ ? ಉಹು.... ಇದ್ದಿ

ರಲ್ಲಿ ಅಮ್ಮನೇ ವಾಸಿ. ಅದೂ ತುಂಬಾ ಗಲಾಟೆ ಮಾಡಿ, ನೆಲದಮೇಲೆ ಬಿದ್ದು ಹೊರಳಾಡಿ ಅತ್ತಾಗ, ಲೀಲಕ್ಕ ತನ್ನ ಪರವಾಗಿ ವಾದಿಸಿದಾಗ, ಒಂದು ಪೈಸ ಕೊಡುತ್ತಾಳೆ. ಪಾಪ ! ಅವಳು ತಾನೆ ಏನು ಮಾಡುತ್ತಾಳೆ ? ಅವಳ ಹತ್ತಿರ ಕಾಸಿದ್ದರಲ್ಲವೆ ಕೊಡುವುದಕ್ಕೆ ? ಅಪ್ಪ ಅವಳಿಗೂ ಒಂದು ಪೈಸ ಕೊಡುವುದಿಲ್ಲ

ಅಪ್ಪ ಎಷ್ಟು ಕೆಟ್ಟವನು ! ಅವನ ಪೆಟ್ಟಿಗೆಯಲ್ಲಿ ತುಂಬಾ ನೋಟಿನ ಕಂತೆಗಳಿವೆ. ಆದರೂ ಒಬ್ಬರಿಗೂ ಒಂದು ಪೈಸ ಕೊಡುವುದಿಲ್ಲ. ಬಹಳ ಜಿಪುಣ !

ಒಂದು ದಿನ ಅಪ್ಪ ಪೆಟ್ಟಿಗೆ ತೆರೆಯುತ್ತಿದ್ದಾಗ ಮೆಲ್ಲನೆ ಹಿಂದೆಹೋಗಿ ನಿಂತು ಬಗ್ಗಿ ನೋಡಿದೆ. ಅಬ್ಬ! ಎಷ್ಟೊಂದು ದುಡ್ಡು ! ತುಂಬ ದುಃಖ ಆಯಿತು. ಕಣ್ಣೀರು ಬಂತು.


ಪೆಟ್ಟಿಗೆ ತುಂಬಾ ದುಡ್ಡಿದ್ದರೂ ಅಪ್ಪ ಅಮ್ಮನಿಗೆ ಒಂದು ಸಿಲ್ಕು ಸೀರೆ ತಂದು ಕೊಟ್ಟಿಲ್ಲ. ಬೆಳಗಿನಿಂದ ಹಿಡಿದು ರಾತ್ರಿಯ ವರೆಗೂ ಎಲ್ಲಾ ಕೆಲಸ ಮಾಡುತ್ತಾಳೆ; ಅಡುಗೆ ಮಾಡುತ್ತಾಳೆ, ಬಟ್ಟೆ ಒಗೆಯುತ್ತಾಳೆ, ಪಾತ್ರೆ ತೊಳೆಯುತ್ತಾಳೆ, ಆದರೂ ಅವಳಿಗೆ ಹರುಕು ಸೀರೆಯೇ ಗತಿ ! ಅಮ್ಮ ಹಟ ಮಾಡಬಾರದೇ ?


"ನೀನು ಬಹಳ ಕೆಟ್ಟವನು ಅಪ್ಪ. ಇಷ್ಟು ದುಡ್ಡಿದ್ದರೂ ನಾನು ಕೇಳಿದ್ದು ತೆಗೆಸಿಕೊಡುವುದಿಲ್ಲ. ನಿಜವಾಗಿ ನನ್ನ ಡಾಕ್ಟರ್ ಪರೀಕ್ಷೆಗೆ ಓದಿಸ್ತೀಯ ?" ಧೈರ್ಯ ಮಾಡಿ ಕೇಳಿದೆ. ಕೋಪಗೊಳ್ಳುತ್ತಾನೋ ಅಂತ ಹೆದರಿದೆ. ಆದರೆ ಅಪ್ಪನಮುಖ ಚಿಕ್ಕದಾಯಿತು. ಎರಡು ಕೈಗಳಿಂದ ನನ್ನನ್ನು ಬಾಚಿ ತಬ್ಬಿಕೊಂಡು ಹೇಳಿದ: "ನಿಜ ಗೋಪಿ, ಖಂಡಿತ ನಿನ್ನನ್ನು ಓದಿಸುತ್ತೇನೆ. ನಾನು ಸುಳ್ಳು ಹೇಳುವುದಿಲ್ಲ. ಲೀಲಕ್ಕನ ಮದುವೆ ಆಗಿಹೋಗಲಿ ನಿನ್ನ 'ಭಾವ' ಬರಲಿ. ಆಮೇಲೆ ನೀನು ಕೇಳಿದ್ದೆಲ್ಲಾ ತೆಗೆಸಿಕೊಡುತ್ತೇನೆ."

ಅಪ್ಪನ ಮಾತು ನಿಜವೆ ? ಒಂದು ವೇಳೆ ಇದ್ದರೂ ಇರಬಹುದು. ಏಕೆಂದರೆ ಆಗಾಗ್ಗೆ ಲೀಲಕ್ಕಳನ್ನು 'ಭಾವ'ನಿಗೆ ತೋರಿಸಲು ಕರೆದುಕೊಂಡು ಹೋಗಿರುತ್ತಾನೆ ಅಪ್ಪ. ಲೀಲಕ್ಕ ಸಿಲ್ಕ್ ಸೀರೆ ಉಟ್ಟು, ಹೂ ಮುಡಿದು, ಮುಖಕ್ಕೆ ಪೌಡರ್ ಪೂಸಿ, ಕೆಂಪು ಚಾಂದಿನ ತಿಲಕವಿಟ್ಟು ಅಪ್ಪನ ಜೊತೆ ಹೋಗುತ್ತಾಳೆ. ಆಗ ಅವಳೆಷ್ಟು ಚೆನ್ನಾಗಿ ಕಾಣುತ್ತಾಳೆ ! ಆದರೂ 'ಭಾವ' ಅವಳನ್ನು ಒಪ್ಪಲಿಲ್ಲ. ಅಂತ ಅಪ್ಪ ಅಮ್ಮನ ಹತ್ತಿರ ಹೇಳುತ್ತಾನೆ !

ಇಲ್ಲ, ಅಪ್ಪನ ಮಾತು ಎಲ್ಲಾ ಸುಳ್ಳು. ಅಮ್ಮನಿಗೆ ಏನೂ ತಿಳಿಯುವುದಿಲ್ಲ. ಅಪ್ಪ ಹೇಳಿದ ಸುಳ್ಳುಗಳನ್ನೆಲ್ಲಾ ನಿಜ ಅಂತಲೇ ತಿಳಿದುಕೊಂಡು ಸುಮ್ಮನಿರುತ್ತಾಳೆ.

ಪಾಪ ! ಅಮ್ಮಾ ಹರುಕು ಸೀರೆ ಹೊಲೆದು ಉಡುತ್ತಾಳೆ. ಜಾಕೀಟು ಹರಿದರೂ ಹಾಗೇ ತೊಡುತ್ತಾಳೆ. ಶ್ರೀಧರನ ತಾಯಿ ಎಷ್ಟು ಒಳ್ಳೊಳ್ಳೆಯ ರಂಗು ರಂಗಿನ ಸೀರೆಗಳನ್ನು ಉಡುತ್ತಾರೆ ! ಅವರು ಅಡುಗೆ, ಮನೆ ಕೆಲಸ, ಯಾವುದೂ ಮಾಡುವುದೇ ಇಲ್ಲ. ಎಲ್ಲಾ ಆಳುಗಳು ಮಾಡುತ್ತಾರೆ. ಯಾವಾಗಲೂ ಸುಮ್ಮನೆ ರೇಡಿಯೋ ಕೇಳಿಕೊಂಡು ಕುರ್ಚಿಯ ಮೇಲೆ ಕುಳಿತಿರುತ್ತಾರೆ. ಆದರೂ ಶ್ರೀಧರನ ತಂದೆ ಅವರಿಗೆ ತುಂಬಾ ಸೀರೆ ತಂದುಕೊಡ್ತಾರೆ.

ಪೆಟ್ಟಿಗೆ ತುಂಬಾ ದುಡ್ಡಿದ್ದರೂ ಅಪ್ಪ-ಅಮ್ಮನಿಗೆ ಒಂದು ಸಿಲ್ಕು ಸೀರೆ ತಂದು ಕೊಟ್ಟಿಲ್ಲ. ಬೆಳಗಿನಿಂದ ಹಿಡಿದು ರಾತ್ರಿಯುವರಿಗೂ ಎಲ್ಲಾ ಕೆಲಸ ಮಾಡುತ್ತಾಳೆ; ಅಡುಗೆ ಮಾಡುತ್ತಾಳೆ, ಬಟ್ಟೆ ಒಗೆಯುತ್ತಾಳೆ, ಪಾತ್ರೆ ತೊಳೆಯುತ್ತಾಳೆ. ಆದರೂ ಅವಳಿಗೆ ಹರಕು ಸೀರೆಯೇ ಗತಿ ! ಅಮ್ಮ ಹಟ ಮಾಡಬಾರದೆ ?

"ಅಮ್ಮ, ಅಪ್ಪ ತುಂಬ ಕೆಟ್ಟವನು ಅಲ್ಲವೇನಮ್ಮ ?", ಒಂದು ಸಲ ಮನಸ್ಸು ನಿಲ್ಲದೆ ಕೇಳಿಯೇ ಬಿಟ್ಟೆ.

"ಯಾಕೋ ಗೋಪಿ ? ಹಾಗಂದರೇನೋ ? ತುಂಬ ಒಳ್ಳೆಯವರು ಕಣೋ" ಎಂದಳು ಅಮ್ಮ ನಗುತ್ತ.

"ಸುಮ್ಮನಿರಮ್ಮ, ನಿಂಗೆ ಒಂದೂ ತಿಳಿದಿಲ್ಲ. ಶ್ರೀಧರನ ತಾಯಿ ಒಂದೂ ಕೆಲಸ ಮಾಡೋದಿಲ್ಲ, ಆದ್ರೂ

ಶ್ರೀಧರನ ತಂದೆ ಅವರಿಗೆ ತುಂಬಾ ಸೀರೆ ತಂದುಕೊಡುತ್ತಾರೆ. ನೀನು ಮಾತ್ರ ಇಷ್ಟೊಂದು ಕೆಲ್ಸ ಮಾಡಿದ್ರೂ ಹರಕಲು ಸೀರೇನೇ ಉಡಬೇಕು ! ಅಪ್ಪ ಬಹಳ ಒಳ್ಳೆಯವನು ಅಲ್ಲ ? ಎಲ್ಲ ದುಡ್ಡು ಪೆಟ್ಟಿಗೆಯಲ್ಲಿಟ್ಟು ಮುಚ್ಚಿ ಬೀಗ ಹಾಕಿಕೊಂಡಿದ್ದಾನೆ."

ಯಾಕೋ ಅಮ್ಮನ ಕಣ್ಣುಗಳಲ್ಲಿ ನೀರು ಬಂತು.

"ಗೋಪಿ, ನೀನಿನ್ನು ಚಿಕ್ಕವನು. ನಿನಗೆ ಏನು ಹೇಳಲಿ ? ನೀನು ದೊಡ್ಡವನಾದ ಮೇಲೆ ಎಲ್ಲಾ ಅರ್ಥವಾಗುತ್ತೆ" ಎಂದು ನಿಟ್ಟುಸಿರು ಬಿಟ್ಟಳು ಅಮ್ಮ.

"ಈಗಲೇ ಹೇಳಮ್ಮ, ಎಲ್ಲ ಅರ್ಥವಾಗುತ್ತೆ. ಕ್ಲಾಸಿನಲ್ಲಿ ನಾನೇ ಫಸ್ಟ್. 'ಗೋಪಿ ತುಂಬ ಬುದ್ಧಿವಂತ' ಅಂತ ಮೇಷ್ಟರೂ ಅಂತಾರೆ !"

"ಗೋಪಿ, ನಿಮ್ಮಪ್ಪ ದುಡ್ಡು ಕೂಡಿಡುವುದು ಏಕೆ ಗೊತ್ತೆ ? ಅದೆಲ್ಲ ಲೀಲಕ್ಕನ ಮದುವೆಗೆ. ನಿನಗೆ 'ಭಾವ' ಬರುವುದು ಇಷ್ಟ ತಾನೆ ?"

ಹಾಗಾದರೆ....ಅಪ್ಪ ಒಳ್ಳೆಯವನು ! ಎಲ್ಲ ಲೀಲಕ್ಕನ ಮದುವೆಗೆ ಖರ್ಚು ಮಾಡುತ್ತಾನೆ. ಹೌದು, ಶ್ರೀಧರನೂ ಹೇಳಿದ್ದ ಅವರಕ್ಕನಿಗೂ ತುಂಬ ದುಡ್ಡು ಕೊಟ್ಟು 'ಭಾವ'ನನ್ನು ತಂದರಂತೆ. ಈಗ ಶ್ರೀಧರನ ಭಾವ ಬಂದಾಗಲೆಲ್ಲ ತಿಂಡಿ, ಪಟಾಕಿ, ಆಟದ ಸಾಮಾನು, ಎಲ್ಲಾ ತಂದು ಕೊಡ್ತಾರಂತೆ. ಹಾಗಾದ್ರೆ ಲೀಲಕ್ಕನಿಗೆ ಬೇಗ ಮದುವೆಯಾಗಲಿ, ನನಗೂ ಭಾವ ಬರಲಿ !

"ಅಮ್ಮ, ಹಾಗಾದ್ರೆ ಬೇಗ ಭಾವನನ್ನು ಕರೆದುಕೊಂಡು ಬಂದುಬಿಡು ಅಂತ ಅಪ್ಪನಿಗೆ ಹೇಳು."

"ಅಷ್ಟು ಸುಲಭ ಅಲ್ಲ ಗೋಪಿ, ನಿನ್ನ ಲೀಲಕ್ಕ ಕಪ್ಪು ಅಂತಾರೆ, ಭಾವ ಅದಕ್ಕೋಸ್ಕರ ತುಂಬಾ ದುಡ್ಡು ಕೇಳ್ತಾರೆ. ಅದಕ್ಕೆ ನಿನ್ನ ಅಪ್ಪ ನಾನು ಕೇಳಿದ್ದು ತೆಕ್ಕೊಡುವುದಿಲ್ಲ. ಎಲ್ಲಾ ಭಾವನಿಗೋಸ್ಕರ ಕೂಡಿಡುತ್ತಿದ್ದಾರೆ."

"ಅಮ್ಮ, ನಂಗೆ ಗೊತ್ತಿರಲಿಲ್ಲ, ಹಾಗಾದ್ರೆ ಅಪ್ಪ ತುಂಬ ಒಳ್ಳೆಯವನು ! ಇನ್ನು ಮೇಲೆ ಭಾವ ಬರುವವರೆಗೂ ಅವನನ್ನು ಒಂದು ಪೈಸಾನೂ ಕೇಳುವುದಿಲ್ಲ."

ಅಮ್ಮ ಬರಸೆಳೆದು ಅಪ್ಪಿ ಮುದಿಟ್ಟ ಜಾಣ ಅಂದಳು. ಪಾಪ, ಲೀಲಕ್ಕ 'ಭಾವ' ಬರಲಿಲ್ಲವೆಂದೇ ಇರಬೇಕು. ಅಮ್ಮನಿಗೆ ಕಾಣದಂತೆ ಅಳುತ್ತಿರುತ್ತಾಳೆ. ನಾನು ಕಂಡರೆ ಅಮ್ಮನಿಗೆ ಹೇಳಬೇಡವೆಂದು ಹೇಳು-ತ್ತಾಳೆ.

ರಾಮು, ನಾಣಿ, ಶ್ರೀಧರ, ಎಲ್ಲರ ಮನೆಗೂ ಭಾವ ಬಂದಿದ್ದಾರೆ. ನಮ್ಮನೆಗೂ ಬೇಗ ಬರಬಾರದೆ ?

ಒಂದು ದಿನ ಸ್ಕೂಲು ಬಿಟ್ಟದ್ದೇ ಚೀಲದಲ್ಲಿ ಪುಸ್ತಕಗಳನ್ನು ತುರುಕಿಕೊಂಡು ಮನೆಯ ಕಡೆ ಓಡಿದ್ದೆ. ಅಪ್ಪ ಅಂದು ಆಫೀಸಿಗೆ ಹೋಗದೆ ಮನೆಯಲ್ಲೇ ಅಮ್ಮನ ಹತ್ತಿರ ಮಾತನಾಡುತ್ತ ಕುಳಿತಿದ್ದರು. ಲೀಲಕ್ಕ ತುಂಬ ತುಂಬ ಅಲಂಕಾರ ಮಾಡಿಕೊಂಡು ಕುಳಿತಿದ್ದಳು. ಏನಿರಬಹುದು ? ಮನೆಯೊಳಗೆ ಕಾಲಿಟ್ಟ ಕೂಡಲೇ ಅಮ್ಮ ಹೇಳಿದಳು

"ಗೋಪಿ, ಲೀಲಕ್ಕನ ಮದುವೆ ನಿಶ್ಚಯವಾಯ್ತು. ನಿಂಗೆ 'ಭಾವ' ಬರ್ತಾರೆ." ನನಗೆಷ್ಟು ಸಂತೋಷ ಆಯಿ-ತೆಂದರೆ ಪುಸ್ತಕದ ಚೀಲ ಬಿಸುಟು ಲೀಲಕ್ಕನ ಕೊರಳನ್ನು ತಬ್ಬಿಕೊಂಡು ಅವಳ ಕೆನ್ನೆಗೆ ಮುತ್ತಿಟ್ಟೆ. ನಾನು ಕೇಳ-ದಿದ್ದರೂ ಅಪ್ಪ ಜೇಬಿನಿಂದ ಹತ್ತುಪೈಸೆ ತೆಗೆದು ನನ್ನ ಕೈಲಿಟ್ಟ !

"ಭಾವ ಚೆನ್ನಾಗಿದ್ದಾರ ಅಪ್ಪ, ?" ಸಂಭ್ರಮದಿಂದ ಕೇಳಿದೆ.

"ಹು, ತುಂಬಾ ಚೆನ್ನಾಗಿದ್ದಾರೆ....ದೊಡ್ಡ ಕೆಲಸದಲ್ಲಿದ್ದಾರೆ...ತುಂಬಾ ಸಂಬಳ ತರುತ್ತಾರೆ".

"ನಿನಗಿಂತ ಜಾಸ್ತಿ ಸಂಬಳ ಬರುತ್ತ ಅಪ್ಪ ?"

"ಹು, ನನಗಿಂತ ತುಂಬ ಜಾಸ್ತಿ ಬರುತ್ತೇ"

ನಾನು ಲೀಲಕ್ಕನತ್ತ ನೋಡಿ ನಕ್ಕೆ. ಲೀಲಕ್ಕ ನಾಚಿಕೆಯಿಂದ ತಲೆ ತಗ್ಗಿಸಿಕೊಂಡಳು.

"ಹಾಗಾದ್ರೆ ಯಾವಾಗ ನಾನು ಭಾವನನ್ನು ನೋಡೋದು ?"

"ಇನ್ನು ಒಂದು ತಿಂಗಳಿಗೆ ನೀನು ನೋಡಿವೆಯಂತೆ. ಸದ್ಯಕ್ಕೆ ಭಾವನ ಫೋಟೋ ನೋಡು"

ಅಪ್ಪ ಚಿಕ್ಕ ಫೋಟೋ ತೋರಿಸಿದ.

ಹೌದು, ಅಪ್ಪ ಹೇಳಿದ್ದು ನಿಜ. ಭಾವ ತುಂಬಾ ಚೆನ್ನಾಗಿದ್ದಾರೆ. ಅವರಿಗೆ ತುಂಬ ಸಂಬಳ ಬರಬೇಕು. ಅಪ್ಪನಂತೆ ಅವರು ಪಂಚೆಯಲ್ಲ, ಸೂಟು ಹಾಕಿದ್ದಾರೆ.

ಅಮ್ಮ ಹೇಳಿದಹಾಗೆ ಲೀಲಕ್ಕ ತುಂಬ ಅದೃಷ್ಟ ರಂತಳು, ಇಷ್ಟು ದಿನ ಒಂದು ಪೈಸೆ ಖರ್ಚು ಮಾಡದೆ ಇದ್ದ ಅಪ್ಪ ಇನ್ನು ಮೇಲೆ ನೋಟಿನ ಕಂತೆ ಕಂತೆ ಖರ್ಚು ಮಾಡುತ್ತಾನಂತೆ. ಮನೆ ಮುಂದೆ ದೊಡ್ಡ ಚಪ್ಪರ ಹಾಕಿಸುವನಂತೆ. ಅಮ್ಮನಿಗೆ, ಲೀಲಕ್ಕನಿಗೆ ಜರಿಸೀರೆ, ನನಗೆ ಟೆರಿಲಿನ್ ಬಟ್ಟೆ ತರುತ್ತಾನಂತೆ.

ಭಾವ ಬಂದಾಗ ಅಮ್ಮ, ಚಿರೋಟಿ, ಲಾಡು, ಜಿಲೇಬಿ ಇನ್ನು ಏನೇನೋ ರುಚಿ ರುಚಿಯಾದ ತಿಂಡಿ ಗಳನ್ನು ಮಾಡಿಸುವಳಂತೆ, ಆಗ ಬೇಕಾದಷ್ಟು ತಿನ್ನಬಹು ದಂತೆ.

ಆಗ ಚೆಲ್ಲಿದರೂ ಬಯ್ಯುವುದಿಲ್ಲವಂತೆ! ಅಬ್ಬ, ಈಗ ಒಂದು ತುತ್ತು ಅನ್ನ ಚೆಲ್ಲಿದರೆ ಅಮ್ಮ ಎಷ್ಟೊಂದು ಬಯ್ಯುತ್ತಾಳೆ ! ಆಗ ಎಷ್ಟೊಂದು ಮಜ

ಲೀಲಕ್ಕನ ಮದುವೆ ಗೊತ್ತಾದ ಕೆಲವು ದಿನಗಳಲ್ಲೇ ಅಪ್ಪನಿಗೆ ಭಾವನ ಕಡೆಯವರಿಂದ ಪತ್ರ ಬಂತು. ಓದಿದ ಕೂಡಲೇ ಅಪ್ಪ ಸಿಕ್ಕಾಪಟ್ಟೆ ರೇಗಾಡಲು ಶುರು ಮಾಡಿದ. ಅಡುಗೆ ಮನೆಯಲ್ಲಿದ್ದ ಅಮ್ಮ ಗಾಬರಿಯಿಂದ ಹೊರಗೆ ಓಡಿಬಂದಳು.

"ಒಂದು ಸಾವಿರ ವರದಕ್ಷಿಣೆ ಕೂಡಲೇ ಕಳುಹಿಸ ಬೇಕಂತೆ, ಇಲ್ಲದಿದ್ದಲ್ಲಿ ಮದುವೆ ನಿಂತಹಾಗೆ ಎಂದು ಬೀಗರು ಪತ್ರ ಬರೆದಿದ್ದಾರೆ" ಎಂದು ಅಪ್ಪ ಹೇಳಿದ.

ಅಮ್ಮನ ಕಣ್ಣುಗಳಲ್ಲಿ ನೀರು ಸುರಿಯಲಾರಂಭಿ ಸಿತು. ರೂಮಿನ ಬಾಗಿಲಲ್ಲಿ ನಿಂತು ಅಪ್ಪನ ಮಾತು ಗಳನ್ನು ಕೇಳಿಸಿಕೊಳ್ಳುತ್ತಿದ್ದ ಲೀಲಕ್ಕನ ಕಣ್ಣುಗಳಲ್ಲೂ ನೀರು ತುಂಬಿತ್ತು.

ನನಗೊಂದೂ ಅರ್ಥವಾಕೆಲಿಲ್ಲ.

"ಯಾಕಮ್ಮಾ, ಭಾವ ಬರುವುದಿಲ್ಲವೇನಮ್ಮಾ ?" ಅಂತ ಅಮ್ಮನ ಸೆರೆಕೆಳೆದು ಕೇಳಿದೆ.

"ಒಂದು ಸಾವಿರ ರೂಪಾಯಿ ಕೊಟ್ಟರೆ ಮಾತ್ರ ಲೀಲಕ್ಕನ ಮದುವೆಯಾಗುತ್ತಾರಂತಪ್ಪ"

ನನ್ನ ಕಣ್ಣುಗಳಲ್ಲೂ ನೀರು ತುಂಬಿ ತೊಟ್ಟಿಕ್ಕ ಲಾರಂಭಿಸಿತು.

"ಅಪ್ಪ ನಿನ್ನ ಪೆಟ್ಟಿಗೆಯಲ್ಲಿರುವ ದುಡ್ಡನ್ನೆಲ್ಲಾ ಕಳು ಹಿಸಿಬಿಡಪ್ಪಾ"

ಅಪ್ಪ ನನ್ನ ಕಣ್ಣೊರೆಸಿ "ಗೋಪಿ ಸುಮ್ಮನಿರು, ಈ 'ಭಾವ' ಕೆಟ್ಟವರು ವರದಕ್ಷಿಣೆ ಕೇಳ್ತಾರೆ. ನಿನಗೆ ಬೇರೆ ಭಾವನನ್ನು ತೆಗೆದುಕೊಂಡು ಬರ್‍ತೀನೆ" ಅಂತ ಅಂದರು.

ಎಂದೂ ಅಳದೇ ಇದ್ದ ಅಪ್ಪ ಕೂಡ ಅಂದು ಅಳು ತ್ತಿದ್ದರು. 'ಭಾವ' ಬಂದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಆದರೆ 'ಭಾವ' ಬರಲಿಲ್ಲ.

ಲೀಲಕ್ಕನ ಮದುವೆ ನಿಂತಾಗಿನಿಂದ ಅಮ್ಮನ ಅಳುವು ನಿಲ್ಲಲಿಲ್ಲ. ಲೀಲಕ್ಕನೂ ಯಾವಾಗಲೂ ಕೋಣೆಯಲ್ಲಿ ಕುಳಿತು ಕಣ್ಣೀರು ಹಾಕುತ್ತಿದ್ದಳು. ಲೀಲಕ್ಕ ಊಟ ಕೂಡ ಸರಿಯಾಗಿ ಮಾಡುತ್ತಿರಲಿಲ್ಲ.

ಲೀಲಕ್ಕ ಬರಬರುತ್ತಾ ಸಣ್ಣಗಾಗಿಬಿಟ್ಟಳು. ದಿನಾ ಸಣ್ಣಗೆ ಜ್ವರ ಬರಲಾರಂಭಿಸಿತು. ಆಗ ಅಪ್ಪ ಅಮ್ಮನಿಗೆ ಗಾಬರಿಯಾಯಿತು. ಕೂಡಲೇ ಡಾಕ್ಟರು ಅದೇನೋ 'ಕ್ಷಯರೋಗ' ಅಂದರಂತೆ.

ಎಂದೂ ದುಡ್ಡು ಖರ್ಚು ಮಾಡದಿದ್ದ ಅಪ್ಪ ಲೀಲ ಕ್ಕನ ಖಾಯಿಲೆಗೋಸ್ಕರ ಪೆಟ್ಟಿಗೆಯಿಂದ ದುಡ್ಡು ತೆಗೆದು ತೆಗೆದು ಖರ್ಚು ಮಾಡತೊಡಗಿದ. ಅಪ್ಪ ಟ್ಯಾಕ್ಸಿಯಲ್ಲಿ ಲೀಲಕ್ಕನನ್ನು ಆಸ್ಪತ್ರೆಗೆ ಕರೆದುಕೊಂಡುಹೋಗಿ ಸೇರಿಸಿದ ಅಪ್ಪ ಎಂದೂ ಲೀಲಕ್ಕನನ್ನೂ ಟ್ಯಾಕ್ಸಿಯಲ್ಲಿ ಕರೆದು ಕೊಂಡು ಹೋಗಿರಲಿಲ್ಲ, ಯಾವಾಗಲೂ ಜಟಕಾ ಗಾಡಿಯೇ ! ಡಾಕ್ಟರು ಹೇಳಿದ ಔಷಧಿ, ಗುಳಿಗೆ, ಹಣ್ಣು ಗಳು ಎಲ್ಲಾ ಅಪ್ಪ ಲೀಲಕ್ಕನಿಗಾಗಿ ತರುತ್ತಿದ್ದ. ಅಮ್ಮ ದಿನಾ ರುಚಿ ರುಚಿಯಾದ ಅಡುಗೆ ತಿಂಡಿಗಳನ್ನು ಮಾಡಿ ಕೊಂಡು ಆಸ್ಪತ್ರೆಗೆ ತೆಗೆದುಕೊಂಡು ಹೋಗುತ್ತಿದ್ದಳು. ದಿನಾ ಲೀಲಕ್ಕನಿಗೆ ಹಾಲು, ಮೊಸರು, ತುಪ್ಪ, ಹಣ್ಣು !

ನಾನು ಲೀಲಕ್ಕನನ್ನು ನೋಡಬೇಕೆಂದು ಹಟ ಮಾಡಿದಾಗ ಅಮ್ಮಾ ನನ್ನನ್ನು ಆಸ್ಪತ್ರೆಗೆ ಅಪರೂಪಕ್ಕೆ ಕರೆದುಕೊಂಡು ಹೋಗುತ್ತಿದ್ದಳು. ಲೀಲಕ್ಕ ಯಾವಾಗ್ಲೂ ಮಂಚದ ಮೇಲೆ ಮಲಗಿರುತ್ತಿದ್ದಳು. ನನ್ನ ಹತ್ತಿರ ಹೆಚ್ಚಿಗೆ ಮಾತಾಡುತ್ತಲೇ ಇರಲಿಲ್ಲ. ಅವಳು ಬಹಳ ಬದ ಲಾಯಿಸಿಬಿಟ್ಟಿದ್ದಳು. ಧ್ವನಿ ಕೂಡ ಸಣ್ಣಗಾಗಿತ್ತು. ನನಗೆ ಲೀಲಕ್ಕನ ಹಾಸಿಗೆಯ ಮೇಲೆ ಕುಳಿತು ಅವಳ ಕೊರಳನ್ನು ತಬ್ಬಿಕೊಂಡು ಮಾತನಾಡಬೇಕೆಂದು ಆಸೆ ! ಆದರೆ ಅಮ್ಮ ನನ್ನನ್ನು ಅವಳ ಹತ್ತಿರ ಒಂದು ಸಾರಿ ಯಾದರೂ ಬಿಡುತ್ತಿರಲಿಲ್ಲ.

ಹೀಗೆ ಅದೆಷ್ಟೋ ದಿನಗಳು ಕಳೆದವು. ನನಗೆ ಪರೀಕ್ಷೆ ಮುಗಿದು ಬೇಸಿಗೆ ರಜ ಕೂಡ ಬಂದಿತ್ತು. ಲೀಲಕ್ಕ ಇಲ್ಲದೆ ನನಗೆ ಮನೆಯಲ್ಲಿ ಬಹಳ ಬೇಜಾರಾಗುತ್ತಿತ್ತು. ಅವಳು ಯಾವಾಗ ಮನೆಗೆ ಬರುತ್ತಾಳೋ ಎಂದು ಕಾದಿರುತ್ತಿದ್ದೆ.

ಒಂದು ದಿನ ಅಪ್ಪ ಲೀಲುವನ್ನು ಟ್ಯಾಕ್ಸಿಯಲ್ಲಿ ಮನೆಗೆ ಕರೆದುಕೊಂಡು ಬಂದುಬಿಟ್ಟರು. ಆಗ ನನಗಾದ ಸಂತೋಷಕ್ಕೆ ಇಷ್ಟಿಷ್ಟಲ್ಲ. ಆದರೆ ಅಮ್ಮ ಅಳಲು ಪ್ರಾರಂಭಿಸಿದಳು.

ಅಪ್ಪ ಲೀಲಕ್ಕನ್ನ ಎತ್ತಿಕೊಂಡು ಬಂದು ಒಳಗೆ ಚಾಪೆಯ ಮೇಲೆ ಮಲಗಿಸಿದರು. ಲೀಲಕ್ಕ ಕಣ್ಣುಮುಚ್ಚಿಕೊಂಡು ನಿದ್ರೆ ಹೋಗಿದ್ದಳು. ಅಮ್ಮ ಅವಳ ಮೈಮೇಲೆ ಬಿದ್ದು ಎಷ್ಟು ಅತ್ತರೂ ಕಣ್ಣು ಬಿಡಲಿಲ್ಲ.

"ಯಾಕಮ್ಮ ಲೀಲಕ್ಕ ಮನೆಗೆ ಬಂದರೂ ಅಳುತ್ತೀಯಲ್ಲ?" ಎಂದೆ ನಾನು.

"ಇನ್ನು ಲೀಲಕ್ಕ ಇಲ್ಲಪ್ಪ, ಅವಳು ಸತ್ತುಹೋದಳು ಅವಳನ್ನು ದೇವರ ಹತ್ತಿರ ಕಳುಹಿಸಿಬಿಡಬೇಕು" ಎಂದು ಅಮ್ಮ ಗಟ್ಟಿಯಾಗಿ ಅಳತೊಡಗಿದಳು.

ಆಗ ನನಗೆ ತಿಳಿಯಿತು. ಹಿಂದೆ ಹೀಗೆಯೇ ಅಪ್ಪ ಅಜ್ಜಿ–ತಾತನನ್ನು ದೇವರ ಹತ್ತಿರ ಕಳುಹಿಸಿ ಬಂದಿದ್ದ. ಪುನಃ ಅಜ್ಜಿ–ತಾತ ಬರಲೇ ಇಲ್ಲ. ಹಾಗಾದ್ರೆ ಇನ್ನು ಲೀಲಕ್ಕನೂ ಬರುವುದೇ ಇಲ್ಲ !

ನಾನು ಅಮ್ಮನನ್ನು ತಬ್ಬಿಕೊಂಡು ಅಳತೊಡಗಿದೆ. ಅಪ್ಪನೂ ಅಳುತ್ತಾ ಲೀಲಕ್ಕನನ್ನ ದೇವರ ಹತ್ತಿರ ಕಳುಹಿಸಿ ಬರಲು ಟ್ಯಾಕ್ಸಿಯಲ್ಲಿ ಕರೆದುಕೊಂಡು ಹೋದ. ಅಪ್ಪನ ದುಡ್ಡಿನ ಪೆಟ್ಟಿಗೆ ಖಾಲಿಯಾಗಿ ತೆರೆದು ಬಿದ್ದಿತ್ತು. ಲೀಲಕ್ಕ ಹೊರಟೇ ಹೋದಳು. ಅಂತೂ "ಭಾವ ಬರಲೇ ಇಲ್ಲ !"

---

# ಕಂತ್ರಿಯರು

—ಕಮಲಾ ಹಂಪನಾ

ಮಾನವ ಜನ್ಮಕ್ಕೆ ಜೈನಧರ್ಮ ಕೊಟ್ಟಷ್ಟು ಪ್ರಾಶಸ್ತ್ಯ ವಿಶ್ವದಲ್ಲಿ ಮತ್ತಾವ ಧರ್ಮವೂ ಕೊಟ್ಟಿಲ್ಲ. ಮಾನವನ ಮಾತು ಹಾಗಿರಲಿ, ದೇವತೆಗಳೂ ಕೂಡ ಮುಕ್ತರಾಗ ಬೇಕಾದರೆ ಮಾನವರಾಗಿಯೇ ಹುಟ್ಟಬೇಕೆಂದು ಜಿನಧರ್ಮ ಸ್ಪಷ್ಟವಾಗಿ ಸಾರಿದೆ. ಮಾನವ, ಮುಕ್ತಿಯ ಮೊದಲ ಮೆಟ್ಟಿಲೆಂಬುದು ಅವರ ದೃಢವಾದ ನಂಬಿಕೆ ಮತ್ತು ಖಚಿತವಾದ ಹೇಳಿಕೆ. ತೀರ್ಥಂಕರನಾಗಬೇಕಾದರೂ ಆತ ಮನುಷ್ಯನ ಮೂಲಕನೇ ಹಾಯಬೇಕು.

ಜೈನಧರ್ಮ ಭಾರತದ ಪುರಾತನ ಧರ್ಮಗಳ ಲ್ಲೊಂದು. ಮಾನವ ಜನ್ಮ ದೊಡ್ಡದೆಂದು ಮೊಟ್ಟ ಮೊದಲ ಬಾರಿಗೆ ಲೋಕಕ್ಕೆ ಪ್ರಚುರ ಪಡಿಸಿದ ಈ ಧರ್ಮ ದಲ್ಲಿ ಮಹಿಳೆಯರಿಗೆ ಕೊಟ್ಟಿರುವ ಸ್ಥಾನಮಾನಗಳು ಪರಿ ಭಾವನಾರ್ಹವಾದ ಗಹನವಿಚಾರವಾಗಿದೆ. ಜೈನ ಧರ್ಮ ದಲ್ಲಿ ಸ್ತ್ರೀಗೆ ತುಂಬ ವಿಶಿಷ್ಟವೂ ಮಹತ್ವವೂ ಮಹ ತ್ವದ್ದೂ ಆದ ಸ್ಥಾನಮಾನಗಳನ್ನಿತ್ತು ಗೌರವಿಸಿದ್ದಾರೆ. ನಿದರ್ಶನಕ್ಕಾಗಿ ಒಂದೆರಡನ್ನು ಉಲ್ಲೇಖಿಸುವುದಾದರೆ ಪ್ರವಾಹ, ಬೆಂಕಿ, ಆಕಸ್ಮಿಕ, ಲೂಟಿ ಮತ್ತು ದರೋಡೆ ಮುಂತಾದ ಸಂದರ್ಭಗಳಲ್ಲಿ ಮೊಟ್ಟಮೊದಲು ಮಹಿಳೆಯ ರನ್ನು ರಕ್ಷಿಸಬೇಕೆಂದು ಜೈನ ಧಾರ್ಮಿಕ ಗ್ರಂಥಗಳಲ್ಲಿ ಹೇಳಿಕೆಗಳಿವೆ. ಜೈನರು ತೀರ್ಥಂಕರರ ತಂದೆ-ತಾಯಿ ಗಳಿಗೆ, ಅದರಲ್ಲಿಯೂ ತೀರ್ಥಂಕರರ ತಾಯಂದಿರಿಗೆ ಹೆಚ್ಚಿನ ಗೌರವ ಸಲ್ಲಿಸುತ್ತಿದ್ದರು. ಜಿನನ ಜನನಿಯರು ತಮ್ಮ ಚಿಕ್ಕ ಮಕ್ಕಳಾದ ತೀರ್ಥಂಕರರನ್ನು ತೊಡೆಯ ಮೇಲೆ ಕೂಡಿಸಿಕೊಂಡಿರುವ ಕಲ್ಲಿನ ವಿಗ್ರಹಗಳನ್ನು ಈಗಲೂ ಆಬು, ಗಿರಿನಾರ್, ಪಾಟನ್ ಮುಂತಾದ ಕೆಲವು ಸ್ಥಳಗಳಲ್ಲಿ ವಿಶೇಷ ಭಕ್ತಿಯಿಂದ ಪೂಜಿಸುವುದನ್ನು ಕಾಣ ಬಹುದು.

ಜೈನಧರ್ಮ ಪುರುಷರಿಗೆ ಹೇಗೋ ಹಾಗೇಯೇ ಸ್ತ್ರೀಯರಿಗೂ ಲೌಕಿಕ ವಿದ್ಯಾಭ್ಯಾಸವು ಅಗತ್ಯವೆಂಬು ದನ್ನು ಈ ಅಂಶವನ್ನು ಜೈನ ದಿಗಂಬರ ಸಂಪ್ರದಾಯದಲ್ಲಿ ಮಾನ್ಯವಾದ ಮಹಾಪುರಾಣ ಎಂಬ ಪ್ರಮಾಣ ಗ್ರಂಥದ ಆಧಾರದಿಂದ ಅರಿಯಬಹುದು. ಅಲ್ಲಿ ಬರುವ ಒಂದು ಪದ್ಯ ಹೀಗೆ ತಿಳಿಸಿದೆ :

"ವಿದ್ಯಾವಾನ್ ಪುರುಷೋ ಲೋಕೇ
ಸಮ್ಮತಿಂ ಯಾತಿ ಕೋವಿದೈಃ।
ನಾರೀಚ ತದ್ವತೀ ದತ್ತೇ
ಸ್ತ್ರೀ ಸೃಷ್ಟೇರಗ್ರಿಮಂ ಪದಂ ॥

"ಲೋಕದಲ್ಲಿ ವಿದ್ಯಾವಂತನಾದ ಪುರುಷನು ವಿದ್ವಾಂಸರುಗಳಿಂದ ಸನ್ಮಾನ ಪಡೆಯುತ್ತಾನೆ, ಅದ ರಂತೆಯೇ ವಿದ್ಯಾವತಿಯಾದ ಸ್ತ್ರೀಯೂ ದೃಷ್ಟಿಯಲ್ಲಿ ಮೊದಲನೆಯ ಸ್ಥಾನವನ್ನು ಪಡೆಯುತ್ತಾಳೆ."

ಜಿನ ಜನನಿಯರಲ್ಲಿ ಮೊದಲನೆಯ ಸ್ಥಾನವನ್ನು ಪಡೆದ ಆದಿದೇವನ ತಾಯಿಯಾದ ಮರುದೇವಿ ಜೈನರಲ್ಲಿ ಬಹಳ ಪ್ರಸಿದ್ಧಳಾಗಿದ್ದಾಳೆ. ಋಷಭನಾಥನು ಕೇವಲ ಜ್ಞಾನವನ್ನು ಪಡೆದ ಸುದ್ದಿ ಮರುದೇವಿ ಮತ್ತು ಭರತ ಚಕ್ರವರ್ತಿಗೆ ತಿಳಿಯಲು, ತಕ್ಷಣವೇ ತೀರ್ಥಂಕರ ತಾಯಿ ಯಾದ ಮರುದೇವಿ ಬಂದು ದೇವತೆಗಳಿಂದ ನಿರ್ಮಿತ ವಾದ ಸಮವಸರಣ ಮಂಟಪದಲ್ಲಿ ಹೊರಟು, ದಿವ್ಯಧ್ವನಿ ಗೈಯ್ಯುತ್ತಿದ್ದ ತನ್ನ ಮಗನನ್ನು ಸಂದರ್ಶಿಸಿದಳು. ತೀರ್ಥಂಕರನ ವೈಭವವನ್ನು ನೋಡಿದ ಮರುದೇವಿ ಒಡ ನೆಯೇ ಧ್ಯಾನ ನಿರತಳಾಗಿ ಕೇವಲ ಜ್ಞಾನವನ್ನು ಸಂಪಾದಿ ಸಿದಳು. ಸನ್ಯಾಸತ್ವ ಪುರುಷನಿಗೆ ಎಂತೋ ಅಂತೇ ಸ್ತ್ರೀಗೂ ದೊರೆತಿದೆ ಈ ಧರ್ಮದಲ್ಲಿ, ಎಂದೇ ಮರುದೇವಿ

ನೆನೆದ ಒಡನೆ ಸನ್ಯಾಸಿನಿಯಾಗಿ ಕೇವಲ ಜ್ಞಾನ ಹೊಂದಿದಳು. ವಿದ್ಯಾಭ್ಯಾಸಕ್ಕೂ ಎಲ್ಲರಂತೆ ಸ್ತ್ರೀಯೂ ಅರ್ಹಳೆಂದು ಈ ಧರ್ಮ ಸಾರಿದೆ. ಆದಿ ತೀರ್ಥಂಕರ ಪುರುದೇವನು ತನ್ನ ಮಗಳಂದಿರಾದ ಬ್ರಾಹ್ಮಿ ಮತ್ತು ಸುಂದರಿ ಎಂಬುವರಿಗೆ ತನ್ನ ತೊಡೆಯ ಮೇಲೆ ಕೂಡಿಸಿಕೊಂಡು ವಾತ್ಸಲ್ಯದಿಂದ ಮೊಟ್ಟ ಮೊದಲು ವಿದ್ಯಾಭ್ಯಾಸ ಮಾಡಿಸಿದ. ಬ್ರಾಹ್ಮಿಗೆ ಲಿಪಿ ಶಾಸ್ತ್ರವನ್ನು ಕಲಿಸಿಕೊಟ್ಟ. ಅಂದಿನಿಂದ ಭಾರತೀಯ ಲಿಪಿಗಳಿಗೆಲ್ಲಾ ಮೂಲಸೆಲೆಯಾಗಿ ಗಂಗೋತ್ರಿಯಾಗಿ ನಿಂತ ಆ ಲಿಪಿಗೆ ಅವಳ ಹೆಸರಿನಿಂದಾಗಿ "ಬ್ರಾಹ್ಮಿಲಿಪಿ" ಎಂದಾಯಿತು. ಸುಂದರಿ ಎಂಬುವಳಿಗೆ ಅಂಕಮಾಲೆಯನ್ನೂ, ಹಲವು ಶಾಸ್ತ್ರಗಳನ್ನೂ ಕಲಿಸಿದನು. ಅನಂತರ ಪುರುದೇವ ತನ್ನ ಪುತ್ರರಿಗೆ ಇತರ ವಿದ್ಯೆಯನ್ನು ಕಲಿಸಿದನೆಂದು ತಿಳಿದು ಬರುತ್ತದೆ. ಇದು ಆದಿ ತೀರ್ಥಂಕರ ಹೆಣ್ಣಿಗೆ ಕೊಟ್ಟ ಮೊದಲ ಸ್ಥಾನ.

ದಿಗಂಬರ ಪಂಥದ ಪ್ರಕಾರ ಹೆಣ್ಣಿಗೆ ಮೋಕ್ಷ ಸಿದ್ಧಿಸದು ಎಂದು ಹೇಳಿದರೆ ಜೈನ ಧರ್ಮದ ಮತ್ತೊಂದು ಪಂಥವಾದ ಶ್ವೇತಾಂಬರ ಪಂಥದಲ್ಲಿ ಹತ್ತೊಂಬತ್ತನೆಯ ತೀರ್ಥಂಕರ "ಮಲ್ಲಿ" ಎಂಬ ಒಬ್ಬ ಹೆಣ್ಣು ಮಗಳು ಅಂದರೆ ಜೈನಧರ್ಮವನ್ನು ಸಮಗ್ರವಾಗಿ ಅಭ್ಯಸಿಸಿದವರಿಗೆ, ಹೆಣ್ಣಿಗೆ ಎಂಥ ಒಂದು ಉಚ್ಚಸ್ಥಾನ ದೊರಕಿದೆ ಎನ್ನುವ ಕಲ್ಪನೆ ಬಾರದೆ ಇರದು. ತೀರ್ಥಂಕರತ್ವವನ್ನು ಪಡೆಯುತ್ತಿರುವ ಆ ಜೀವ ಹೆಣ್ಣು ಜೀವ. "ಮಲ್ಲಿ" ಎಂಬ ಹೆಸರಿನ ಒಬ್ಬ ರಾಜಕುಮಾರಿ. ಆಕೆಯ ಸೌಂದರ್ಯಕ್ಕೆ ಮರುಳಾಗಿ ಬಂದು ಮದುವೆಯಾಗಲು ನಿಂತ ರಾಜಕುಮಾರರ ಪಂಕ್ತಿ ಅತಿ ದೊಡ್ಡದು. ಯಾರಿಗೆ ತನ್ನ ಮಗಳನ್ನು ಧಾರೆ ಎರೆಯಬೇಕು ಎನ್ನುವುದು ತೋಚದೆ ಮಲ್ಲಿಯ ತಂದೆ ಮಿಥಿಲೆಯ ಕುಂಭರಾಜ ಚಿಂತಾಕ್ರಾಂತನಾದಾಗ, ಆ ರಾಜಕುಮಾರರೆಲ್ಲಾ ದಂಡೆತ್ತಿ ಬಂದು ಮಿಥಿಲೆಯನ್ನು ಮುತ್ತಿದರು. ಇದನ್ನು ತಿಳಿದ ಮಲ್ಲಿ ಎಲ್ಲ ರಾಜರನ್ನೂ ತನ್ನಲ್ಲಿಗೆ ಬರಮಾಡುವಂತೆ ತನ್ನ ತಂದೆಗೆ ತಿಳಿಸಿದಳು.

ಅದರಂತೆ ಆ ರಾಜಕುಮಾರರೆಲ್ಲ ಮಹಾಮಂದಿರವನ್ನು ಪ್ರವೇಶಿಸಿದರು. ಆ ಮಂದಿರದಲ್ಲಿದ್ದ ಮಲ್ಲಿಯ ಒಂದು ಸುಂದರವಾದ ಬಂಗಾರದ ಪ್ರತಿಮೆಯನ್ನು ಕಂಡು ಅದೊಂದು ಸಜೀವ ಮೂರ್ತಿಯೆಂದೇ ಅವರೆಲ್ಲ ಭ್ರಮಿಸಿದರು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಅವರ ಭ್ರಮೆ ನಿರಸನವಾಗುವಂತೆ ಪಕ್ಕದ ಬಾಗಿಲಿನಿಂದ ವಿಗ್ರಹಕ್ಕಿಂತಲೂ ಸುಂದರಳಾದ ಮಲ್ಲಿ ಪ್ರವೇಶಿಸಿ, ಅವರು ಮೊದಲು ನೋಡಿದ್ದು ತನ್ನಂತಿರುವ ಬಂಗಾರದ ಪ್ರತಿಮೆ ಎಂದು ತಿಳಿಸಿದಳು. ಅನಂತರ ಆ ಪ್ರತಿಮೆಯ ಮೇಲಿದ್ದ ಮುಚ್ಚಳವನ್ನು ತೆಗೆದಾಗ, ಅಲ್ಲಿ ತಾವರೆಯಾಕಾರದ ಭರಣಿಯಲ್ಲಿ ಕೆಟ್ಟ ವಾಸನೆಯ ಪುಡಿ ಕಂಡು ಬಂದಿತು.

ಆ ಸುಂದರವಾದ ವಿಗ್ರಹದ ಒಳಭಾಗ ಬಹಳ ಆಳವಾಗಿದ್ದ ಅದರಲ್ಲಿ ಕೆಲವು ದಿವಸಗಳ ಹಿಂದೆ ಉತ್ತಮವಾದ ತಿಂಡಿ–ತಿನಿಸುಗಳನ್ನಿಟ್ಟಿದ್ದು; ಅದೆಲ್ಲ ಕೊಳೆತು ಈಗ ಹಾಳಾಗಿದ್ದಿತು. ಮಲ್ಲಿ ಆ ರಾಜಕುಮಾರರಿಗೆ ಆ ವಿಗ್ರಹದ ಉದಾಹರಣೆಯನ್ನು ನಿರ್ದೇಶಿಸಿ ಸೌಂದರ್ಯದಿಂದ ಕೂಡಿದ ಈ ಹೆಣ್ಣು ದೇಹದೊಳಗೂ ಇಂಥದೇ ವಸ್ತುಗಳಿದ್ದು ಕಾಲಕ್ರಮೇಣ ಈ ಸೌಂದರ್ಯವೂ ಹಾಳಾಗಿ ಜಿಗುಪ್ಸೆಯನ್ನು ತರುವುದೆಂದು ತಿಳಿಸಿದಳು. ಆದರಿಂದಾಗಿ ಈ ಲೌಕಿಕ ವಿಷಯದಿಂದ ಬಿಡುಗಡೆ ಹೊಂದಿ ಅಜ್ಜಿಕೆ (ಕಂತಿ) ಯಾಗುವ ತನ್ನ ಅಪೇಕ್ಷೆಯನ್ನು ತಿಳಿಸಿದಳು. ದೀಕ್ಷೆಯನ್ನು ಸ್ವೀಕರಿಸಿ, ಹಂತ ಹಂತವಾಗಿ ಸಿದ್ಧಿಯ ಮೆಟ್ಟಿಲನ್ನು ಏರಿ ತೀರ್ಥಂಕರತ್ವವನ್ನು ಪಡೆದಳು. ಹೆಣ್ಣಿಗೆ ಜೈನ ಧರ್ಮದಲ್ಲಿ ಉಚ್ಚಸ್ಥಾನ ದೊರೆತಿಲ್ಲ ಎಂದು ಹೇಳುವವರಿಗೆ "ಮಲ್ಲಿ" 19ನೆಯ ತೀರ್ಥಂಕರಳಾಗಿ, ಸವಾಲನ್ನು ನಿಂತಿದ್ದಾಳೆ. ಇದು ಜೈನ ಮಹಿಳೆಯ ಸಂಯಮ ಪೂರ್ಣವಾದ ಸ್ಥಿರ ಚಿತ್ರವನ್ನು ಈ ಕಥಾನಕ ಚಿತ್ರಿಸುತ್ತದೆ.

ರಾಜಕುಮಾರ ನೇಮಿನಾಥ ವಿರಕ್ತನಾಗಿ, ಮದುವೆಯನ್ನು ತೊರೆದು ಸನ್ಯಾಸವನ್ನು ಸ್ವೀಕರಿಸಿ ಕಾಡಿಗೆ ನಡೆದಾಗ, ಆತನನ್ನು ಮದುವೆಯಾಗಲು ಸಿದ್ಧಳಾಗಿದ್ದ ರಾಜಮತಿ, ತಾನೂ ದೀಕ್ಷೆ ವಹಿಸಿ, ಅಜ್ಜಿಕೆಯಾದ ನಿದರ್ಶನ ದೊರೆಯುತ್ತದೆ.

ಜೈನಧರ್ಮ ಗೃಹಸ್ಥ–ಗೃಹಿಣೀ, ಸನ್ಯಾಸಿ–ಸನ್ಯಾಸಿನಿ ಈ ನಾಲ್ಕು ಗುಂಪಿಗೂ ಹೆಚ್ಚಿನ ಮಹತ್ವ ಕೊಟ್ಟಿರುವುದಲ್ಲದೆ, ಈ ಚತುರ್ವರ್ಣವನ್ನೂ ಸರಿಸಮಾನವಾಗಿ ಕಂಡಿದೆ. ಮಹಾವೀರನ ಸಮಕಾಲೀನಳಾದ ಆರ್ಯ ಚಂದನಾ ಮಹಾವೀರನ ಮೊಟ್ಟ ಮೊದಲ ಸ್ತ್ರೀ ಅನುಯಾಯಿಯಾದಳು. ಆಕೆ ತನ್ನ ನೇತೃತ್ವದಲ್ಲಿ ಮುವ

ತ್ತಾರು ಸಾವಿರ ಆರ್ಯಿಕೆಯರ ಸಂಘವನ್ನು ಸ್ಥಾಪಿಸಿ, ಜೈನಧರ್ಮ ಪ್ರಚಾರಕ್ಕೆ ಹೊಸ ಶಕ್ತಿಯನ್ನು ತುಂಬಿದಳು. ಕೌಶಾಂಬಿಯ ದೊರೆ ಶತಾನೀಕನ ತಂಗಿಯಾದ ಜಯಂತಿ ಮಹಾವೀರನ ಉಪಾನ್ಯಾಸವನ್ನು ಕೇಳುತ್ತಿದ್ದು ಆಧ್ಯಾತ್ಮಿಕ ಹಾಗೂ ಭೌತಿಕ ವಿಷಯಗಳನ್ನು ಚರ್ಚಿಸಿ ತನ್ನ ರಾಜಭೋಗವನ್ನು ತ್ಯಜಿಸಿ ಸನ್ಯಾಸಿಯಾದಳು. ಆಗ ಅವಳ ಅಣ್ಣ ಶತಾನೀಕನ ಪತ್ನಿಯಾದ ಮೃಗವತಿಯೂ ದೀಕ್ಷೆ ತಳೆದು ಅಜ್ಜಿಕೆಯಾದಳು.

ಹತ್ತನೆಯ ಶತಮಾನ ಆರಂಭಕಾಲದ ಕನ್ನಡ ಗದ್ಯಗ್ರಂಥವಾದ ವಡ್ಡಾರಾಧನೆಯಲ್ಲಿ ಕಮಳಶ್ರೀ, ಬ್ರಹ್ಮಿಲೆ, ಗುಣಮತಿ, ಪದ್ಮಾವತಿ, ಸುವ್ರತಿ ಮೊದಲಾದ ಕಂತಿಯರ ಉಲ್ಲೇಖವಿದೆ. ಅದೇ ಶತಮಾನದ ಕಡೆಯಲ್ಲಿ ರಚಿತವಾದ ಚಾವುಂಡರಾಯ ಪುರಾಣದಲ್ಲಿ ಅನಂತಮತಿ, ಗುಣಮತಿ, ಪ್ರಭಾವತಿ, ಸುದರ್ಶನ ಮೊದಲಾದ ಕಂತಿಯರ ಗುಣಗಾನವಿದೆ. ಸುಮಾರು ಕ್ರಿ. ಶ. 700ರಲ್ಲಿ ರಚಿತವಾದ ಶ್ರವಣಬೆಳುಗೊಳದ ಶಾಸನ 76ರಲ್ಲಿ ಸಸಿಮತಿ ಗಂತಿಯರು ಮುಡಿಪಿದ ವಿವರ ಹೀಗೆ ವರ್ಣಿಸಿದೆ.

ನೆಱೆದಾದ ವ್ರತ-ಶೀಲ-ನೋಂಪಿ ಗುಣದಿಂ ಸ್ವಾಧ್ಯಾಯ ಸಂಪತ್ತಿನಾ
ಕಱೆಯಿರ್ನಲ್ ತಪ ಧರ್ಮದಾ ಸಸಿಮತಿ ಶ್ರೀ ಗಂತಿಯರ್ ವಂದು ಮೇಲ್ ।
ಅಱಿದಾಯುಷ್ಯಮನೆಂತು ನೋಡೆನಗೆ ತಾನಿಂತೆಂದು ಕಟ್ಟಿಪ್ಪಿನಲ್
ತೊಱದಾರಾಧನೆ ನೋಂತು ತೀರ್ಥಗಿರಿಮೇಲ್ ಸ್ವರ್ಗಾಲಯಕ್ಕೇಱಿದಾರ್ ॥

ಇದೇ ಶ್ರವಣಬೆಳುಗೊಳದ ೩೫೧ ನೆಯ ಶಾಸನದಲ್ಲಿ (ಕಾಲ 1119) ದಿವಾಕರಣಂದಿಯ ಶಿಷ್ಯೆ ಶ್ರೀಮತಿ ಗಂತಿಯವರು ಸನ್ಯಸನವಿಧಿಯಿಂದ ಮುಡಿಪಿದರೆಂಬ ಸಂಗತಿಯನ್ನು ಹೇಳಿದೆ :

ಆ ಮುನಿ ದೀಕ್ಷೆಯಂ ಕುಡೆ, ಸಮಗ್ರ ತಪೋನಿಧಿಯಾಗಿ ದಾನಚಿಂ
ತಾಮಣಿಯಾಗಿ ಸದ್ಗುಣಗದಾಗ್ರಶಿಯಾಗಿ ದಯಾದಮ ಕ್ಷಮಾ ।
ಶ್ರೀಮುಖ ಲಕ್ಷ್ಮಿಯಾಗಿ ವಿನಯಾರ್ಣವ ಚಂದ್ರಿಕೆಯಾಗಿ ಸಂತತಂ
ಶ್ರೀಮತಿ ಗಂತಿಯಾರ್ ನೆಗದ್ದಿರುರ್ವಿಯೊಳುರ್ವಕೆ ಕೂರ್ತುಕೀರ್ತಿಸಲ್ ॥

ಅಂದಿನ ಜೈನ ಸಮಾಜದ ಮೇಲೆ ಯತಿಗಳಷ್ಟೇ ಈ ಸನ್ಯಾಸಿನಿಯರೂ ಗಾಢವಾದ ಪ್ರಭಾವವನ್ನು ಬೀರಿದ್ದರು ; ಅವರ ವರ್ಚಸ್ವೀ ವ್ಯಕ್ತಿತ್ವ ಅನುಪಮವಾಗಿತ್ತು. ಜೈನ ಕಂತಿಯರಲ್ಲಿ ವಿದ್ಯೆ, ತ್ಯಾಗ, ಬುದ್ಧಿವಂತಿಕೆ, ಪಾಂಡಿತ್ಯ ಶೀಲಸಂವರ್ಧನೆ–ಮೊದಲಾದ ಉದಾತ್ತ ಗುಣಗಳಿಂದ ಶೋಭಿತರಾದ ಎಷ್ಟೋ ಜನರ ವಿವರ ಸಿಗುತ್ತದೆ. ಸ್ಥೂಲಭದ್ರನ ಏಳುಮಂದಿ ಸಹೋದರಿಯರಾದ ಯಕ್ಷೆ ಮೊದಲಾದವರು ಅದ್ಭುತ ಜ್ಞಾಪಕಶಕ್ತಿಯ ಕುರುಹಾಗಿದ್ದರು. ಕ್ರಿ. ಶ. ೧ನೆಯ ಶತಮಾನದ ಆರ್ಯವ್ರಜನು ಆರು ವರ್ಷದ ಕಿಶೋರನಾಗಿರುವಾಗಲೇ ಜೈನ ಸನ್ಯಾಸಿಯವರ ಬಳಿ ವಿದ್ಯಾಭ್ಯಾಸ ಮಾಡಿದನು. ಕಂತಿಯರ ಅನುಗ್ರಹದಿಂದ ಚೆನ್ನಾಗಿ ವಿದ್ಯೆ ಕಲಿತು ಹಿರಿಯ ವಿದ್ವಾಂಸನಾದನು. ಆ ಸನ್ಯಾಸಿಯರಲ್ಲೆಲ್ಲಾ ಯಾಕಿನಿ ಮಹತ್ತಾ ಎಂಬುವಳು ಮಹಾ ವಿದುಷಿ. ಹರಿಭದ್ರ ಸುರಿ ಎಂಬ ಬ್ರಾಹ್ಮಣ ಪಂಡಿತನು–ತನ್ನನ್ನು ವಾದದಲ್ಲಿ ಯಾರು ಸೋಲಿಸುವರೋ ಮತ್ತು ಯಾರ ಪ್ರವಚನವನ್ನು ಅರ್ಥಮಾಡಿಕೊಂಡು ವಿವರಿಸಲು ತನಗೆ ಅಸಾಧ್ಯವಾಗುವುದೋ ಅಂಥವರನ್ನು ಗುರುವೆಂದು ಒಪ್ಪಿಕೊಳ್ಳುವುದಾಗಿ ತಿಳಿಸಿದನು. ಜೈನ ಕಂತಿಯಾದ ಯಕ್ಷಿನಿ ಮಹತ್ತರಾ ಅವನನ್ನು ವಾದದಲ್ಲಿ ಸೋಲಿಸಿ ಜೈನಧರ್ಮಕ್ಕೆ ಪರಿವರ್ತಿಸಿದಳು. ಭಾರತೀಯ ಸಾಹಿತ್ಯಕ್ಕೂ ಜೈನ ಧರ್ಮಕ್ಕೂ ದೊರೆತಿರುವ ಹರಿಭದ್ರಸುರಿಯ ಕಾಣಿಕೆಯ ಮೌಲ್ಯವನ್ನು ಅರ್ಥಮಾಡಿಕೊಂಡರೆ, ಅಂತಹ ಘನ ಪಂಡಿತನನ್ನೂ ಸೋಲಿಸಿದ ಯಕ್ಷಿನಿಯ ಪಾಂಡಿತ್ಯದ ಘನತೆಯನ್ನು ಔನ್ನತ್ಯವನ್ನೂ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಹರಿಭದ್ರಸುರಿ ಸಂತೋಷದಿಂದ ಜೈನ ಧರ್ಮವನ್ನು ಸ್ವೀಕರಿಸಿದ್ದೇ ಅಲ್ಲದೆ ತನ್ನನ್ನು "ಯಾಕಿನೀ ಮಹತ್ತರಸೂನು" ಎಂದು ಆತ ಕರೆದುಕೊಂಡಿದ್ದಾನೆ.

ಹೀಗೆ ಜೈನಧರ್ಮದಲ್ಲಿ ವಿದ್ಯಾವಂತರೂ, ಬುದ್ಧಿವಂತರೂ ಆದ ಅನೇಕ ಜೈನ ಕಂತಿಯರಿದ್ದಾರೆ. ಕ್ರಿ. ಶ. ೯೮೫ರಲ್ಲಿ ಸರಸ್ವತೀ ಪ್ರತೀಕದಂತಿದ್ದ ಸಿದ್ಧಶ್ರೀಯ

"ಉಪಮಿತ ಭವ ಪ್ರಪಂಚ ಕಥಾ" ಗ್ರಂಥವನ್ನು ಕುರಿತು ಉಪನ್ಯಾಸ ಮಾಡಿದಾಗ ಅಲಂಕಾರ ಗ್ರಂಥದ ಮೊಟ್ಟ ಮೊದಲ ಪ್ರತಿಯನ್ನು ಸಿದ್ಧಗೊಳಿಸಿದವಳು ಗುಣಸಾಧ್ವಿ ಎಂಬ ಜೈನಕಂತಿ. ಇದರಂತೆ ಕ್ರಿ. ಶ, ೧೧೧೮ರಲ್ಲಿ, ಸಿದ್ಧರಾಜ ಜಯಸಿಂಹದ ಕಾಲದಲ್ಲಿ, ಮಹಾನಂದ ಶ್ರೀಮತ್ತರಾ ಮತ್ತು ಗಣಿನಿವೀರಮತಿ ಎಂಬ ಇಬ್ಬರು ಕಂತಿಯರು, ಜಿನಭದ್ರನ "ವಿಶಾಷಾವಶ್ಯಕ ಭಾಷಾ" ಎಂಬ ಗ್ರಂಥಕ್ಕೆ ವಿವರವಾದ ಟೀಕೆಯನ್ನು ಬರೆಯಲು ಹೇಮಚಂದ್ರನಿಗೆ ಬಹುವಾಗಿ ಸಹಾಯ ಮಾಡಿದರು.

ಕ್ರಿ. ಶ. ೧೧೫೦ರಲ್ಲಿ ಗುಣಸಮೃದ್ಧಿ ಮಹತ್ತರಾ ಎಂಬ ಜೈನ ಕೃತಿ "ಅಂಜನಸುಂದರೀ ಚರಿತ್ರ" ಎಂಬ ಪ್ರಾಕೃತ ಗ್ರಂಥವನ್ನು ರಚಿಸಿದಳು.

ಕಂತಿ, ಆರ್ಯಿಕೆ, ಅಜ್ಜಿಕೆ, ಅಜ್ಜಿ ಸನ್ಯಾಸಿನಿ, ಪರಿವ್ರಾಜಿಕೆ, —ಹೀಗೆ ಜೈನ ಸನ್ಯಾಸಿನಿಯರನ್ನು ನಾನಾ ಪರ್ಯಾಯ ಶಬ್ದಗಳಿಂದ ಹೆಸರಿಸಿದ್ದಾರೆ. ಆದರೂ ಇವುಗಳಲ್ಲಿ ಕಂತಿ, ಅಜ್ಜಿಕೆ ಎಂಬುದೇ ಹೆಚ್ಚು ರೂಢಿಯಲ್ಲಿರುವ ರೂಪಗಳು.

---

ಯೋಗ್ಯಳಾದ ಹೆಂಡತಿ ಗೃಹಕೃತ್ಯಗಳನ್ನು ನಿರ್ವಹಿಸುತ್ತ ಧಾರ್ಮಿಕ ಕಾರ್ಯಗಳನ್ನು ಸಹ ಏಕಕಾಲದಲ್ಲಿ ಮಾಡುತ್ತಾಳೆ. ಅಂತಹ ಪತ್ನಿಯರ ಅಂಗೈಯಲ್ಲಿ ಸ್ವರ್ಗವಿದೆ.

ಬಹಿಣಾಬಾಯಿ (ಗುಜರಾತಿ ಕವಯತ್ರಿ)

ಮಾತೃ ಮರಣದಿಂದ ಆಹಾರದಲ್ಲಿನ ರುಚಿ ಮಾಯವಾಗುತ್ತಿದೆ. ಪಿತೃ ಮೃತಿಯಿಂದ ವಿದ್ಯೆ ಹಾಳಾಗುತ್ತದೆ. ಸಹೋದರನ ಸಾವಿಂದ ಬಾಹುಬಲ ತಗ್ಗುತ್ತದೆ. ಹೆಂಡತಿ ಸತ್ತಾಗ ಸಮಸ್ತವೂ ಅವಳೊಡನೆ ಹೋಗಿಬಿಡುವುದು.

ಅವ್ವೈಯಾರ್ (ತಮಿಳು ಕವಯತ್ರಿ)

ಋತುಗಳು ಹೊರಗಿನ ವಾತಾವರಣಕ್ಕೆ ಮಾತ್ರ ಸೀಮಿತವಲ್ಲ. ಮನಸ್ಸಿಗೂ ಇರುತ್ತದೆ. ಅವುಗಲ್ಲಿ ಕೆಲವು ಕೊನೆಮೊದಲಿಲ್ಲದ್ದು. ಬಿರುಗಾಳಿಯಂತೆ ಬೀಸುವ ಮಾರುತದಲ್ಲಿ ಭೂತಗಳು ಕುಣಿಯುತ್ತವೆ. ಅದೇ ಮೃತ್ಯುವಿನ ಸಮಯ........

ದಲೀಪ್‌ಕಾರ್ ಟಿವಾನಾ (ಪಂಜಾಬಿ ಕವಯತ್ರಿ)

ಭಗವದನುಭವ ಗಳಿಸುವುದು ಹೇಗೆಂದರೇ ಹೊಸದಾಗಿ ಬಿಡಿಸಿದ ಹತ್ತಿ ಬೀಜ ಕಳೆನು ಶುಭ್ರಹೊಂದಿ ಧೂಳು ಕಳೆದು ನೂಲಾಗಿ, ಗಿರಣಿಗೆ ಸಿಕ್ಕಿ ದಾರವಾಗಿ ಬಿಸಿನೀರಿನಲ್ಲಿ ಕೊಳೆತು ಸ್ವಚ್ಛವಾಗಿ, ಹೊಲಿಗೆಯಂತ್ರದಲ್ಲಿ ಸಿಕ್ಕು, ಏಟುತಿಂದು ಹೊಲಿಗೆಯಾಗುವಂತೆ.

ಲಲ್ಲೇಶ್ವರಿ (ಕಾಶ್ಮೀರ ಕವಯತ್ರಿ)

# ಹೊರಕ್ಕೆ ದಾರಿಯಿಲ್ಲ



ಬೆಳಗಿನ ಬಣ್ಣ
ತನ್ನ ಬಾಲವನ್ನು ತಾನೇ ಅಟ್ಟಿಸಿಕೊಂಡು ಹೋಗಿ
ಕಾಲು ದಾರಿಯ ಧೂಳು ಚೌಕಗಗಳನ್ನು ಕಚ್ಚಿದಾಗ
ಅವನು ಎದ್ದು ನಿಂತ;
ಅವನ ಚಿಂದಿ ಘೂದಿಕೆಯೊಳಗೆ
ಸೂರ್ಯ ನುಸುಳಿದ;
ಚೌಕಗಳು ಮೈಚಾಚಿ, ಅರಳಿ,
ಅವನನ್ನು ಅಪ್ಪಿ, ಹಿಚುಕಿದವು
ಆದರೆ ಟೂತ್‌ಪೇಸ್ಟ್ ಟ್ಯೂಬಿನ
ನುಣುಚು ಪ್ರಾಣಿಯಂತೆ ಇದ್ದ ಅವನು
ಸೂರ್ಯ ಚಿನ್ನ ಮಾಡುತ್ತಿದ್ದ ಒದ್ದೆ ಹುಲ್ಲಿಗೆ ಓಡಿ
ಮತ್ತೆ
ನಿದ್ದೆ ಮಾಡಿದ.......
ಆದರೆ ಹುಲ್ಲು ಗರಿಕೆಗಳು
ಅವನನ್ನು ಸೀಳಿ, ಸಣ್ಣ ಹೋಳು ಮಾಡಿ
ವಿನೋದವಾಡಲು ಪಾಚಿಕೊಳದ ಕಪ್ಪೆ ಮರಿಗಳಿಗೆ
ಎಸೆದುವು

—ತೇಜಸ್ವಿನೀ ನಿರಂಜನ

# ಅ ಪೂ ರ್ಣ

ಕರಾಳ ಅಂತರಾಳಕ್ಕೆ
ಮುಕಮಲ್ಲು ಹೊದಿಕೆ
ಕುಸುರಿ ಚಿತ್ತಾರದ ಹಿಂದೆ
ಸೂಜಿಯದೇ ಚಮತ್ಕಾರ
ಮಿಂಚು ಹುಳುಗಳೆಲ್ಲ ಬೆಂಕಿಗೆ ಬಲಿ
ಒನಪು ವೈಯ್ಯಾರ ಮೃತ್ಯು ಚುಂಬನ
ಎಲ್ಲಿಂದ ಎಲ್ಲಿಗೋ ಬಿಟ್ಟ ಮಾರನ ಅಂಬು
ಯಾವ ದುಷ್ಯಂತನೋ, ಯಾವ ಅಷ್ಟಾವಂಕನೋ
ಯಾರಾದರೇನು ? ಎಲ್ಲಾದರೇನು ?
ಕಾಲೇಜು, ಆಫೀಸು, ಹೋಟೆಲ್ಲು
ಕಡೆಗೆ ದೇವಸ್ಥಾನದಲ್ಲೂ ನಿನ್ನ ನೃತ್ಯ
ಪ್ರೇಮ
ವಿರಹ
ಆತ್ಮಹತ್ಯೆ
ಹೊಳಪಿನ ಝಳಕ್ಕೆ ಮುದುಕರೂ ಶರಣು
ದಾರಿಯುದ್ದಕ್ಕೂ ತೋಡಿದ ಹಳ್ಳ
ಉಕ್ಕಿ ಹರಿದ ಜೀವ
ತೊಗಲು ಸುಕ್ಕಾಗಿ ಬೆನ್ನು ಗೂನಾದರೂ
ನಿಲ್ಲದ ನಿರಂತರ ಕುಣಿತ
ಆದರೂ ನೀನು ಚಿರಂಜೀವಿಯಲ್ಲ.

—ಉಮಾ



# ವಧೂಪರೀಕ್ಷೆ

— ಶಾರದ

ರೂಮಿನ ಬಾಗಿಲನ್ನು ತೆಗೆಯುತ್ತಿದ್ದಂತೆಯೇ ನರಹರಿಗೆ ಕೆಳಗೆ ಬಿದ್ದಿದ್ದ ಕಾಗದ ಇನ್‌ಲೆಂಡ್ ಲೆಟರ್ ಕಾಣಿಸಿತು. ದೀಪದ ಸ್ವಿಚ್ಚನ್ನು ಒತ್ತಿ ಅದನ್ನು ಕೈಗೆತ್ತಿಕೊಂಡು ಯಾರಿಂದ ಬಂದಿರಬಹುದು ಎಂದು ಹಿಂದೆ ತಿರುಗಿಸಿ ನೋಡಲೆ ಬೇಕಾಗಿರಲಿಲ್ಲ. ಅಕ್ಷರಗಳೇ ಸಾರಿ ಹೇಳುತ್ತಿದ್ದವು. ಅದು ಬೆಂಗಳೂರಿನಿಂದ ಅವನ ತಂದೆ ಬರೆದಿದ್ದ ಕಾಗದ ಎಂದು !

ದಿನದ ದುಡಿಮೆಯಿಂದ ಆಯಾಸಗೊಂಡಿದ್ದ ನರಹರಿ ಕಾಗದ ಓದಲು ತವಕ ಪಡಲಿಲ್ಲ. ಹಾಗೆಯೇ ಟೀಪಾಯಿಯ ಮೇಲಿಟ್ಟು ಷೂಸುಗಳನ್ನು ಕಳಚಿ ಸೋಫಾಕ್ಕೆ ಒರಗಿ ಕಣ್ಣು ಮುಚ್ಚಿ ಕುಳಿತ. ಮನಸ್ಸು ಕಾಗದದಲ್ಲಿ ಏನಿರಬಹುದು ಎಂದು ಊಹಿಸಲಾರಂಭಿಸಿತು.

ಇನ್ನೇನು ಅಪ್ಪನ ಕಾಗದದಲ್ಲಿ ಇರೋದು ಅದೊಂದೇ ವಿಷಯ. ಹುಡುಗಿಯರು, ಇಂಟರ್‌ವ್ಯೂ– ಮದುವೆ ! ಎಂದು ನರಹರಿಯ ಮನಸ್ಸು ನಕ್ಕಿತು. ಹಿಂದೆ ಇಂತಹ ಕಾಗದಗಳು ಮೊದ ಮೊದಲು ಬರಲಾರಂಭಿಸಿದಾಗ ನರಹರಿ ಅವುಗಳನ್ನು ಆಸಕ್ತಿಯಿಂದ ಓದುತ್ತಿದ್ದ. ಹುಡುಗಿಯ ವರ್ಣನೆಯನ್ನು ನೂರಾರು ಬಾರಿ ಓದಿ ಬಾಯಿಪಾಠ ಮಾಡುತ್ತಿದ್ದ. ಕನಸಿನಲ್ಲೂ ಅವುಗಳನ್ನೇ ಮೆಲುಕು ಹಾಕುತ್ತಿದ್ದ.

---

ಪ್ರತಿ ಬಾರಿಯೂ ಹೆಣ್ಣು ನೋಡಲು ಹೋದಾಗ ನರಹರಿಗೆ ಆಗುತ್ತಿದ್ದುದು ನಿರಾಶೆಯೆ. ಆದರೆ ರೂಪಾ "you look like a gentleman, behave like a gentlemen" ಎಂದು ಛೀಮಾರಿ ಮಾಡಿದ್ದರೂ ಒಪ್ಪಿದ್ದು ಅವಳನ್ನೇ.

---

ಹುಡುಗಿ ಚೆಲುವೆ ಎಂದು ತಂದೆ ಬರೆದರೆ ನರಹರಿಯ ಮನಸ್ಸು ಕೂಡಲೇ ಅವಳನ್ನು ಹೇಮ ಮಾಲಿನಿ, ವಹೀದಾ, ಮುಂತಾದ ಸುಂದರಿಯರೊಂದಿಗೆ ಹೋಲಿಸುತ್ತಿತ್ತು. ಹುಡುಗಿ ಒಳ್ಳೆಯ ಕುಲದವಳು ಗುಣ ವಂತೆ ಎಂದಿದ್ದರೆ ಅವಳು ಅವನಿಗೆ ಮೀನಾಕುಮಾರಿ ನಿರುಪಾರಾಯ್ ಆಗುತ್ತಿದ್ದರು. ಹುಡುಗಿ ಇನ್ನೂ ಚಿಕ್ಕ ವಳು ಓದುತ್ತಿದ್ದಾಳೆ ಎಂದರೆ ಅವಳು ಜೀನತ್ ಅಮಾನೋ, ರಾಖೀನೋ, ಅಥವಾ ರೇಖಾನೋ ಆಗಿ ಬಿಡುತ್ತಿದ್ದಳು.

ಇಷ್ಟೆಲ್ಲಾ ಕನಸು ಕಂಡು ತವಕದಿಂದ ಸೀಟು ಬುಕ್ ಮಾಡಿಸಿ, ಒಮ್ಮೊಮ್ಮೆ ರಿಜರ್ವೇಶನ್ನೂ ಇಲ್ಲದೆ ಹಾಗೇ ಕಷ್ಟಪಟ್ಟು ಪ್ರಯಾಣಮಾಡಿ ಬೆಂಗಳೂರು ತಲುಪಿ ಹುಡುಗಿಯನ್ನು ನೋಡಿದಾಗ ಅವನ ಕನಸು ಗಳೆಲ್ಲಾ ನಿಜವಾದ ಕನಸೇ ಆಗಿ ಹಾರಿಹೋಗುತ್ತಿದ್ದವು. ಒಮ್ಮೆಯಾದರೂ ಹುಡುಗಿ ಹೇಮಮಾಲಿನಿಯಂತೆ ಸುಂದ ರಿಯಾಗಿ ಮೀನಾಕುಮಾರಿಯಂತೆ ಗುಣವಂತೆಯಾಗಿ ರಾಖಿ ರೇಖಾನಂತೆ ತುಂಟ ಹುಡುಗಿಯಾಗಿ ಕಾಣುತ್ತಿರಲಿಲ್ಲ. ಹುಡುಗಿ ಹೊಸಿಲು ದಾಟಿ ಹೋಗುವುದರೊಳಗೆ ನಕಾರಾ ತ್ಮಕ ಉತ್ತರಕೊಟ್ಟು ತಂದೆ ತಾಯನ್ನು ಪೇಚಿನಲ್ಲಿ ಸಿಕ್ಕಿಸಿ ತಾನು ತಣ್ಣಗೆ ರೂಮು ಸೇರಿಬಿಡುತ್ತಿದ್ದ.

"ಎಷ್ಟು ಲಕ್ಷಣವಾಗಿದೆ ಹುಡುಗಿ ? ಇವಳನ್ನು ಬೇಡ ಅಂತಾನಲ್ಲ ಏನು ಹೇಳಬೇಕು ಇವನಿಗೆ ?" ಎಂದು ತಾಯಿ ತಂದೆಯ ಹತ್ತಿರ ಹೇಳಿಕೊಳ್ಳುವುದು ಅವನಿಗೆ ಕೇಳಿಸುತ್ತಿತ್ತು.

"ಇನ್ನು ಮೇಲೆ ನಾನು ಯಾರಿಗೂ ಹುಡುಗಿ ಕರ ಕೊಂಡು ಬನ್ನೀಂತ ಹೇಳೋದಿಲ್ಲ. ಅವನಿಗೆ ಯಾರು ಇಷ್ಟವೋ ಅವಳನ್ನೇ ಮದುವೆಯಾಗಲಿ" ಎಂದು ಬೇಜಾ ರಿನಿಂದ ಸಿಡುಕುತ್ತಿದ್ದರು ತಂದೆ. ಆದರೂ ಯಾವು ದಾದರೂ ಸಂಬಂಧ ಬಂದಾಗ ಆಸಕ್ತಿಯಿಂದ ವಿಚಾರಿಸಿ ಹುಡುಗಿಯಲ್ಲಿ ಇಲ್ಲದ್ದು ಇರುವುದನ್ನೆಲ್ಲಾ ಸೇರಿಸಿ ಮಗ ನಿಗೆ ಕಾಗದ ಬರೆಯುತ್ತಿದ್ದರು. ಪಾಪ ! ದೂರದಲ್ಲಿ ಒಂಟಿಯಾಗಿರುವ ಮಗ ಬೇಗ ಸಂಸಾರಸ್ಥನಾಗಲಿ ಎಂಬ ಆಸೆ ಅವರಿಗೆ.

ಕಳೆದ ಬಾರಿಯೂ ಇದೇ ಪುನಾರಾವೃತ್ತಿ ಆದಾಗ ತಂದೆ ವ್ಯಥೆಯಿಂದ ಅಂದಿದ್ದರು. "ಮೂವತ್ತು ವರುಷದ ಹತ್ತಿರ ಬಂತಲ್ಲಪ್ಪ. ಇನ್ನು ಯಾವ ಕಾಲಕ್ಕೆ ನೀನು ಮದುವೆಯಾಗುವುದು ? ಚೆನ್ನಾಗಿರೋ ಹುಡುಗಿಯರಿ ಗೆಲ್ಲಾ ಆಗಲೇ ಮದುವೆಯಾಗಿ ಹೋಯಿತು. ಇನ್ನು ನಿನಗೆ ಸಿಕ್ಕುವರು ಯಾರು ? ಹೋಗಲಿ, ಅಲ್ಲೇ ಯಾವು ದಾದರೂ ಹುಡುಗೀನ ನೋಡಿಕೊಂಡಿದ್ದರೆ ಧಾರಾಳವಾಗಿ ಮಾಡ್ಕೋ. ಯಾವ ಜಾತಿಯಾದರೂ ಸರಿ. ಅದು ಬಿಟ್ಟು ನಮ್ಮನ್ನ ಯಾಕೆ ಹೀಗೆ ಸತಾಯಿಸ್ತೀಯಾ ?"

ತಾನು ಯಾರನ್ನು ಮನಸ್ಸಿನಲ್ಲಿಟುಕೊಂಡಿಲ್ಲ ಎಂದು ತಂದೆಯನ್ನು ಒಪ್ಪಿಸಬೇಕಾದರೆ ನರಹರಿಗೆ ಸಾಕು ಸಾಕಾಗಿ ಹೋಯಿತು. ನಿಜವಾಗಿಯೂ ಅವನು ಅಂತಹ ವನಲ್ಲ. ಅವನ ಆಫೀಸಿನಲ್ಲಿಯೇ ಅವನ ಮನಸೆಳೆಯು ವಂತಹ ಅನೇಕ ಹುಡುಗಿಯರಿದ್ದಿದ್ದೂ ನಿಜ. ಆದರೆ ನರಹರಿ ತಮ್ಮ ಜಾತಿ, ಕುಲ ಬಿಟ್ಟು ಮದುವೆಯಾಗಲು ಸಿದ್ಧನಿರಲಿಲ್ಲ. ತಮ್ಮ ಜಾತಿಯಲ್ಲೇ ತಾನು ಬಯಸುವ ಎಲ್ಲಾ ಗುಣಗಳನ್ನು ಒಳಗೊಂಡ ಹುಡುಗಿ ಅವನಿಗೆ ಬೇಕಾಗಿತ್ತು !

ಹೊರಗೆ ಬಾಗಿಲು ತಟ್ಟಿದ ಸಪ್ಪಳವಾಯಿತು. ಪುಟ್ಟ ದನಿಯೊಂದು "ಅಂಕಲ್ ಊಟಕ್ಕೆ ಬರಬೇಕಂತೆ" ಎಂದು ಕಿರುಚಿತು. "ಬಂದೇ ಮರೀ" ಎಂದು ಉತ್ತರ ಕೊಟ್ಟು ನರಹರಿ ದಡಬಡಿಸಿ ಎದ್ದ. ಮುಂಬಯಿಯ ಯಾಂತ್ರಿಕ ಜೀವನದಲ್ಲಿ ಅವನು ಮನೆಯಲ್ಲಿರುತ್ತಿದ್ದ ಗಳಿಗೆಗಳೇ ಕಡಿಮೆ. ಬೆಳಿಗ್ಗೆ ಹೊತ್ತು ಹೋಟೆಲುಗಳಲ್ಲಿ ಅದೂ ಇದೂ ತಿಂದು ಬಾಯಿ ಮರಗಟ್ಟಿದಂತಾದಾಗ ಅವನ ಬಾಳಿನಲ್ಲೇ ಇದ್ದ ಕೃಷ್ಣಮೂರ್ತಿಯವರ ಪರಿಚಯ ಮಾಡಿಕೊಂಡು ಒಂದು ಹೊತ್ತಿನ ಪೇಯಿಂಗ್ ಗೆಸ್ಟ್ ಆಗಿ ಹೋಗಲಾರಂಭಿಸಿದ. ಒಂದು ಹೊತ್ತಿನ ಊಟ ವಾದರೂ ಚೆನ್ನಾಗಿರುತ್ತಿತ್ತು. ಆದರೆ ಎಂದಾದರೂ ಲೇಟಾ ದಾಗ ಅಥವ ತನ್ನಿಂದ ಅವರ ಪ್ರೋಗ್ರಾಮುಗಳಿಗೆ ತೊಂದರೆಯಾದಾಗ ಕೃಷ್ಣಮೂರ್ತಿಯ ಹೆಂಡತಿ ತನ್ನ ಅಸಮಾಧಾನವನ್ನು ಸ್ಪಷ್ಟವಾಗಿಯೇ ತೋರಿಸುತ್ತಿದ್ದರು, ಅಂತಹ ಸಮಯದಲ್ಲಿ ತಾನು ಬೇಗ ಗೃಹಸ್ಥನಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎನಿಸುತ್ತಿತ್ತು ಅವನಿಗೆ. ಆದರೆ ಯಾವ ಹುಡುಗಿಯೂ ಅವನ ಕನಸಿನ ಸುಂದರಿಯರಾಗಲೇ ಇಲ್ಲ.

ಯಾಂತ್ರಿಕವಾಗಿ ಊಟ ಮುಗಿಸಿಕೊಂಡು ಮನೆಗೆ ಬಂದು ಮಲಗಿಕೊಂಡು ಮತ್ತೆ ತಂದೆಯ ಕಾಗದ ನೆನಪಾಯಿತು. ಕುಳಿತಲ್ಲಿಂದಲೇ ಕೈ ನೀಡಿ ಕಾಗದವನ್ನು ಕೈಗೆತ್ತಿಕೊಂಡು ಓದಿದ.

ನರಹರಿಗೆ ಆಶೀರ್ವಾದಗಳು,

ನಿನ್ನ ಕಾಗದ ಬಂದು ಸೇರಿತು. ನೀನು ಆರೋಗ್ಯವಾಗಿರುವುದು ಕೇಳಿ ಸಂತೋಷವಾಯಿತು, ನಿನ್ನಲ್ಲಿ ಮತ್ತೆ ಮದುವೆಯ ಪ್ರಸ್ತಾಪ ಮಾಡಬಾರದೆಂದೇ ಇದ್ದೆ, ಆದರೂ ಮಾಡಬೇಕಾಗಿ ಬಂದಿದೆ. ನನ್ನ ಹಳೆಯ ಗೆಳೆಯರೊಬ್ಬರು ಇಲ್ಲೇ ನೆಲೆಸಿದ್ದಾರೆ ಅವರಿಗೆ ಒಬ್ಬಳೇ ಮಗಳು, M.Sc., ಮಾಡಿದ್ದಾಳಂತೆ, ನೋಡೋಕು ಚೆನ್ನಾಗಿದ್ದಾಳಂತೆ, ಅವರು ಬಹಳ ಬಲವಂತ ಮಾಡಿದ್ದರಿಂದ ನಿನಗೆ ಈ ಕಾಗದ ಬರೆಯುತ್ತಿದ್ದೇನೆ. ಆಗುತ್ತೋ-ಹೋಗುತ್ತೋ ಸುಮ್ಮನೇ ಆ ಹುಡುಗಿಗೆ ಯಾಕೆ ತೊಂದರೆ ಎಂದು ನಾನು ಅವಳನ್ನು ಕರೆಸಲಿಲ್ಲ. ನಿನಗೆ ಇಷ್ಟವಿದ್ದರೆ ಈ ತಿಂಗಳ ಕೊನೆಯ ವೇಳೆಗೆ ಬಂದು ಅವಳನ್ನು ನೋಡು. ಬರುವುದಾದರೆ ಮೊದಲೇ ತಿಳಿಸು.

ಇಂತಿ, ಆಶೀರ್ವಾದಗಳು

ಕಾಗದ ತುಂಬ ಚುಟುಕಾಗಿದ್ದುದು ನರಹರಿಗೆ ನಿರಾಶೆ ತಂದಿತು. ಅವರ ವ್ಯಥೆ ಕಾಗದದಲ್ಲೇ ವ್ಯಕ್ತವಾಗುತ್ತಿತ್ತು. ಆದರೂ ಅವನು ಅವರು ಹೇಳಿದವಳನ್ನು ಮದುವೆಯಾಗಲು ಸಿದ್ಧನಿರಲಿಲ್ಲ.

ಈ ಬಾರಿಯೂ ಅದೇ ಪುನಾರಾವರ್ತನೆ ಯಾಕೆ ? ಹೋಗದೇ ಇದ್ದರಾಯಿತು ಎನ್ನಿಸಿತು. ಅದರೆ ಎಂದಾದರೊಂದು ದಿನ ಅವನ ಚಲುವೆ ಅವನಿಗೆ ಸಿಗಬಹುದು ಎಂಬ ಆಸೆ ಮತ್ತೆ ಹೆಣ್ಣನ್ನು ನೋಡಲು ಉತ್ತೇಜಿಸಿತು.

'ನಾಳೆ ನೋಡೋಣ ಇನ್ನೂ ಎಂಟು ದಿನ ಟೈಮಿದೆ ರಿಜರ್ವೇಶನ್ ಸಿಕ್ಕಿದರೆ ಹೋಗುವುದು, ಇಲ್ಲದಿದ್ದರೆ ಇಲ್ಲ' ಎಂದು ನಿರ್ಧರಿಸಿ ನರಹರಿ ಮಲಗಿಕೊಂಡ.

o o o o

ನರಹರಿ ಬಯಸಿದಂತೆ ಅವನಿಗೆ ಬಾಂಬೆ-ಮದ್ರಾಸ್ ಮೇಲ್‌ನಲ್ಲಿ ಸೀಟು ಸಿಗಲಿಲ್ಲ, ಪೂನಾ ಮುಖಾಂತರ ಸಿಕ್ಕಿತು. ಹೋಗುವುದೇ ಬೇಡವೇ ಎಂದು ಎರಡು ದಿನ ತರ್ಕಿಸಿ ಕೊನೆಗೆ ಹೊರಟಿದ್ದಾಗಿದೆ, ಹೋಗಿ ಬರೋಣ ಎಂದು ನಿರ್ಧರಿಸಿ 'ಬರುತ್ತಿದ್ದೇನೆ' ಎಂದು ತಂದೆಗೆ ಟೆಲಿಗ್ರಾಮ್ ಕೊಟ್ಟು ರೈಲು ಹತ್ತಿದ.

ಪೂನಾದಲ್ಲಿ ರೈಲು ಬದಲಾಯಿಸಿ ಮೀರಜ್ ಎಕ್ಸ್‌ಪ್ರೆಸ್ ಹತ್ತಿದ. ರೈಲಿನಲ್ಲಿ ಹೊತ್ತು ಕಳೆಯಲು ಇಸ್ಪೇಟು ಗೆಳೆಯರು ಸಿಕ್ಕಿದರು. ಹುಬ್ಬಳ್ಳಿಯಲ್ಲಿ ರೈಲು ನಿಂತಾಗ ಎಲ್ಲರೂ ಒಟ್ಟಿಗೇ ಇಳಿದು 'ಚಾ' ಸೇವಿಸಿದರು. ಆಟ ಮತ್ತೆ ಭರದಿಂದ ಸಾಗಿತು. ರೈಲು ಹೊರಡಲು ಕೆಲವೇ ನಿಮಿಷಗಳಿರುವಾಗ ಸುಕ್ಕು ಸುಕ್ಕಾದ ಬಟ್ಟೆ ತೊಟ್ಟದ್ದ ಮುದುಕರೊಬ್ಬರು ನಡುಗುವ ಕಾಲ್ಗಳಿಂದ ಗಾಡಿಯೊಳಕ್ಕೆ ಬಂದರು ಅವರ ಮುಖ ವೇಷ ಭಾವ ನೋಡಿ ನರಹರಿ 'ರೀ ಇದು ರಿಸರ್ವ್ ಡಬ್ಬ' ಎಂದ. ಅದು ಅವರಿಗೆ ಕೇಳಿಸಿತೋ ಇಲ್ಲವೋ ತಡಕಾಡುತ್ತಾ ಬಂದು ಒಂದು ಕಡೆ ಕುಳಿತು ಬ್ಯಾಗನ್ನು ಸರಿಮಾಡಿಟ್ಟುಕೊಂಡರು. ಈಗ ಮಾತ್ರ ಒಬ್ಬ ಹುಡುಗನಿಗೆ ರೇಗಿತು.

"ಇದು ರಿಜರ್ವ್ ಕ್ಯಾರೇಜ್ ಗೊತ್ತೇನಯ್ಯ ?" ಎಂದು ಬಿರುಸಾಗಿ ಕೇಳಿದ. ಅವರು ಪಿಳಿಪಿಳಿ ಕಣ್ಣುಬಿಟ್ಟರು. ಅಷ್ಟರಲ್ಲಿ ಭರದಿಂದ ಒಳಗೆ ಬಂದ ಯುವತಿಯೊಬ್ಬಳು ಅಲ್ಲಿದ್ದ ನಾಲ್ವರನ್ನು ಉದ್ದೇಶಿಸಿ "ಇದು ರಿಸರ್ವ್ ಎನ್ನುವುದು ಹೊರಗಡೆ ದೊಡ್ಡದಾಗೆ ಬರೆದಿದೆಯಲ್ಲ?" ಎಂದು ಉತ್ತರ ಕೊಟ್ಟಳು.

ಅವಳ ಆಗಮನದಿಂದ ಅರ್ಧ ತಣ್ಣಗಾಗಿದ್ದ ಆ ಯುವಕರು ಆ ಮಾತಿನಿಂದ ಪೂರ್ತಿ ತಣ್ಣಗಾದರು. ನರಹರಿ ಕೂತಲ್ಲೇ ಮಿಸುಕಾಡಿದ. ಇಂತಹ ರೂಪರಾಶಿ ಈ ಮುದುಕನ ಹಿಂದೆ ಬರುತ್ತದೆ ಎಂದು ಗೊತ್ತಿದ್ದರೆ ಹೀಗೆ ಮಾಡುತ್ತಿದ್ದರೆ ? ಸಂತೋಷದಿಂದ ಒಳಗೆ ಕರೆದು ಚೀಲ ತಾವೇ ತೆಗೆದುಕೊಂಡು ಕೂಡಿಸಿ ಸ್ನೇಹಕ್ಕೆ ಪೀಠಿಕೆ ಹಾಕಿರುತ್ತಿದ್ದರು. ಆದರೆ ಈಗ ?

ಅದುವರೆಗೆ ಭರದಿಂದ ಸಾಗುತ್ತಿದ್ದ ಆಟ ಇದ್ದಕ್ಕಿದ್ದಂತೆ ಆಸಕ್ತಿ ಕಳೆದುಕೊಂಡಿತು. ಎಲ್ಲರ ದೃಷ್ಟಿಯೂ ಒಂದೇ ಕಡೆ ! ಒಬ್ಬ 'ಮೇರೆ ಸಪನೋಂಕಿ ರಾಣಿ' ಎಂದು ಹಾಡಿದರೆ ಮಗದೊಬ್ಬ 'ಗೋರಿ, ಗೋರಿ ಪ್ರೇಮ್ ಕಲ್ ಲೇ' ಎಂದು ಗುನಗಿದ. ನರಹರಿ ನಕ್ಕ. ಈ ರೀತಿ ಹುಡುಗಿಯರನ್ನು ಚುಡಾಯಿಸುವುದು ಅವನಿಗೆ ಹೊಸದೇನು ಅಲ್ಲ ಆದರೆ ಈ ದಿನ ಏಕೋ ಮನಸ್ಸು ಹಿಂಜರಿಯುತ್ತಿತ್ತು.

ಬರುಬರುತ್ತಾ ಆಟದಲ್ಲಿ ಎಲ್ಲರಿಗೂ ಆಸಕ್ತಿ ಪೂರ್ತಿ ಯಾಗಿ ಹೋಯಿತು. ಎಲ್ಲರೂ ತಮ್ಮ ತಮ್ಮ ಜಾಗದಲ್ಲಿ ಕುಳಿತರು. ಇದುವರೆಗೆ ಬಿಸಿಲಿದ್ದರೂ ಉಪಯೋಗವಾಗ ದಿದ್ದ ಗಾಗಲ್ಸ್ ಈಗ ದಿಡೀರನೆ ಎಲ್ಲರ ಕಣ್ಣುಗಳನ್ನು ಅಲಂಕರಿಸಿ ದೃಷ್ಟಿಯನ್ನು ಮುಚ್ಚಿತು !

ಆದರೆ ಆ ಯುವತಿ ಇದಾವುದನ್ನು ಗಮನಿಸದೆ ಕಾದಂಬರಿಯೊಂದರಲ್ಲಿ ತಲ್ಲೀನಳಾಗಿದ್ದಳು. ಎದುರಿಗೆ ಕುಳಿತಿದ್ದ ನರಹರಿಯೂ ಅವಳನ್ನು ಆಗಾಗ ನೋಡುತ್ತಿದ್ದ ಅವಳ ತುಂಬಿದ ಗುಂಡು ಮುಖ, ಹಾರಾಡುತ್ತಿದ್ದ ಮುಂಗುರುಳು, ಕಿವಿಗಳಲ್ಲಿ ನರ್ತಿಸುತ್ತಿದ್ದ ರಿಂಗುಗಳು, ಮುಂದುಗಡೆ ಇಳಿಬಿಟ್ಟಿದ್ದ ಉದ್ದ ಕೂದಲು, ಅದು ಎದ್ದು ಕಾಣುವಂತಹ ಅಚ್ಚ ಬಿಳಿಯ ಬಣ್ಣ ! ಒಂದೇ, ಎರಡೇ, ಮೂರೇ ! ನರಹರಿ ನೋಡಿ ನೋಡಿಯೇ ಸುಸ್ತಾದ. ಹಾಳಾದ್ದು ! ತನಗೆ ಒಮ್ಮೆಯಾದರೂ ಇಂತಹ ಹೆಣ್ಣು ಬರಬಾರದೇ, ಬಂದಿದ್ದರೆ ಇಷ್ಟುಹೊತ್ತಿಗೆ ಮದುವೆಯಾಗಿ ಇನ್ನು ಏನೇನು ಆಗಿಬಿಡುತ್ತಿತ್ತೋ ! ನರಹರಿಯ ತುಟಿ ಗಳಲ್ಲಿ ಮುಗುಳ್ನಗೆ ತೇಲಿ ಬಂತು. ಪುಟ ತಿರುಗಿಸುತ್ತಿದ್ದ ಆ ಯುವತಿ ತಿವಿಯುವ ದೃಷ್ಟಿಯಿಂದ ಅವನನ್ನೆ ನೋಡಿ ದಳು. ಅವನು ನಕ್ಕದ್ದು ತನಗಾಗಿ ಎಂದು ತಿಳಿದು !

ತಕ್ಷಣ ನರಹರಿ ಸರಿಯಾಗಿ ಕುಳಿತುಕೊಂಡ, ರೈಲೂ ನಿಧಾನವಾಗಿ ನಿಂತಿತು, ಆ ಮುದುಕರು "ರೂಪಾ ಯಾವ ಸ್ಟೇಷನ್ ?" ಎಂದು ಕೇಳಿದರು. ರೂಪಾ ಕಿಟಕಿಯಿಂದ ಹೊರಗೆ ಬಗ್ಗಿ ಹೆಸರು ಹುಡುಕಲು ಪ್ರಯತ್ನಿಸಿದಳು. ಆದರೆ ಅದುವರೆಗೆ ತಡೆಯುವವರು ಯಾರು ? ಅಲ್ಲಿದ್ದ ಐವರೂ ಒಟ್ಟಿಗೆ ಸ್ಟೇಷನ್ನಿನ ಹೆಸರು ಹೇಳಿದರು !

ಉಕ್ಕಿ ಬಂದ ನಗೆಯನ್ನು ಅಡಗಿಸಿಕೊಂಡು ರೂಪಾ ಪುಸ್ತಕದಲ್ಲಿ ಮುಳುಗಿದಳು.

ಕಾದು ಕಾದು ಬೇಸತ್ತ ಒಬ್ಬ ಯುವಕ ಪಕ್ಕದವ ನನ್ನು ತಿವಿದು "ಯಾಕೋ-ಸುಮ್ಮನೆ ಕಥೆ ಪುಸ್ತಕ ಓದ್ತಿ ದೀಯಾ ? ಹಾಯಾಗಿ ಮಾತಾಡ್ತಾ ಕಳೀಬಾರದೆ ?" ಎಂದ. ಓರೆಗಣ್ಣಲ್ಲಿ ರೂಪಳನ್ನು ನೋಡುತ್ತಾ, ಪುಸ್ತಕ ದಿಂದ ತಲೆ ಎತ್ತಿ ರೂಪಾ ಉರಿಗಣ್ಣನ್ನು ಅವನೆಡೆಗೆ ಹಾಯಿಸಿದಳು. ಆ ದೃಷ್ಟಿ ನರಹರಿಗೂ ತಾಗಿದಾಗ ಅವನ ಮೈ ಜುಂ ಎಂದಿತು. ಎಂ ಅಬ್ಬ ! ಎಂತಹ ಕೆಂಗಣ್ಣು ! ಸಾಕ್ಷಾತಾ ಕಾಳಿಕಾದೇವಿ !"

ರೂಪಳನ್ನು ಮಾತಿಗೆಳೆಯಲು ಆ ಯುವಕರು ಎಲ್ಲಾ ಪ್ರಯತ್ನಗಳನ್ನು ಮಾಡಿದರು. ಸಿನಿಮಾ, ರಾಜ ಕೀಯ, ಕ್ರಿಕೆಟ್ ಕೊನೆಗೆ ಕನ್ನಡ ಕಾದಂಬರಿಗಳ ಮೇಲೂ ಹರಟೆ ಕೊಚ್ಚಿದರು. ಕೆಲವು ಕಡೆ ನರಹರಿಯೂ ಸೇರಿಕೊಂಡ. ಆದರೆ ಒಮ್ಮೆಯೂ ರೂಪ ಅವರಿಗೆ ಉತ್ತೇಜನ ನೀಡಲಿಲ್ಲ. ರೈಲು ಸಾಗುತ್ತಲೆ ಇತ್ತು. ರೈಲು ಇನ್ನೂ ನಿಧಾನವಾಗಿ ಸಾಗಬಾರದೆ ಎನಿಸುತ್ತಿತ್ತು ನರಹರಿಗೆ. ಎದುರಿಗಿನ ಈ ರೂಪರಾಶಿ ಇಳಿಯುವ ಬೆಂಗಳೂರು ಆದಷ್ಟು ಲೇಟಾಗಿ ಬರಲಿ !

ನರಹರಿ ಹೊತ್ತು ಕಳೆಯಲು ಸಿಗರೇಟು ಹೊತ್ತಿ ಸಿದು ಸಿಗರೇಟಿನ ಹೊಗೆಯಲ್ಲಿ ರೂಪ ಮಸುಕು ಮಸು ಕಾಗಿ ಕಾಣುತ್ತಿದ್ದಳು. ಎದುರಿಗೆ ಇದ್ದುದರಿಂದ ರೂಪ ಳಿಗೆ ಸಿಗರೇಟಿನ ಹೊಗೆಯ ಅಭಿಷೇಕ ಧಾರಳವಾಗಿ ಆಗು ತ್ತಿತ್ತು. ರೂಪ ಸಹಿಸುವಷ್ಟು ಹೊತ್ತು ಸಹಿಸಿದಳು. ನರಹರಿ ಮೂರನೇ ಸಿಗರೇಟು ಹೊತ್ತಿಸಿದಾಗ 'ಇಲ್ನೋಡಿ ಮಿಸ್ಟರ್ !" ಎಂದು ಕರೆದಳು. ನರಹರಿ ಒಬ್ಬನ ಏಕೆ ನಾಲ್ವರು ಯುವಕರು ಅವಳಕಡೆ ಆಸಕ್ತಿಯಿಂದ ನೋಡಿ ದರು, ಏನು ಹೇಳುತ್ತಾಳೋ ಎಂದು.

"ಸಿಗರೇಟು ಸೇದಬೇಕಾದರೆ ಬಾಗಿಲ ಹತ್ತಿರ ಹೋಗಿ, ಇಷ್ಟು ಹೊಗೆ ಕುಡಿದರೆ ನಿಮ್ಮ ಗತಿಏನು ?"

ನರಹರಿ ಕೆಂಪಾದ ಮುಖದಿಂದ 'ಸಾರಿ' ಎಂದ. ಇಂತಹ ಅವಮಾನ ಅವನಿಗೆ ಯಾರಿಂದಲೂ ಆಗಿರಲಿಲ್ಲ ! ಸದ್ಯ ! ಈ ಕಾಳಿಯ ಸಹವಾಸ ಸಾಕಪ್ಪ ಎನ್ನಿಸಿತು ಅವನಿಗೆ.

ಸೇದುತ್ತಿದ್ದ ಸಿಗರೇಟನ್ನು ಹಾಗೆಯೇ ಹೊರ ಕ್ಕೆಸೆದು ತಲೆ ತಗ್ಗಿಸಿ ಕುಳಿತಿದ್ದ ರೂಪಳನ್ನು ಒಮ್ಮೆಗೆ ತಿಂದುಬಿಡುವಂತೆ ನೋಡಿದ. ಸಧ್ಯ! ಅವಳು ನೋಡಲಿಲ್ಲ ಮತ್ತೆ ಅವನ ಮನಸ್ಸು ಮರುದಿನದ 'ಇಂಟರ್‌ವ್ಯೂ ಕಡೆ ಹೋಯಿತು. ಹುಡುಗಿ ಹೇಗಿದ್ದಾಳೋ ಏನೋ ! ಎದು ರಿನ ಹುಡುಗಿಯ ಹಾಗಿದ್ದರೆ ! ನರಹರಿಯ ನಾಲಗೆಯಲ್ಲಿ ನೀರೂರಿತು ! ಆದರೆ ಅವಳ ನೋಟ ನೆನಪಾಗಿ ಸದ್ಯ ಎನ್ನಿಸಿತು ! ಹುಡುಗಿ ಚಲುವೆಯಾದರೆ ಈ ಜಂಭ ಜೋರು ಮತ್ತು ಗಯಾಳಿತನ ಎಲ್ಲಾ ಸೇರೇ ಇರುತ್ತೋ ಏನೋ ! ಗುಲಾಬಿಯಲ್ಲೇ ಅಲ್ಲವೇ ಮುಳ್ಳುಗಳಿರು ವುದು.

ರೈಲು ಸಾಗುತ್ತಲೇ ಇತ್ತು. ಹೊತ್ತು ಕಳೆಯಲು ನರಹರಿ ವಾರಪತ್ರಿಕೆಯೊಂದನ್ನು ಕೊಂಡುಕೊಂಡ. ಅದರೆ ಅದರಲ್ಲೂ ಮನಸ್ಸು ನಿಲ್ಲಲಿಲ್ಲ. ಕೊನೆಗೆ ಅದಕ್ಕಾಗಿಯೇ ಕಾಯುತ್ತಿದ್ದ ಪಕ್ಕದ ಯುವಕನಿಗೆ ಕೊಟ್ಟು ಮತ್ತೆ ಕಣ್ಣುಮುಚ್ಚಿ ಕುಳಿತ! 'ಇಷ್ಟೆಲ್ಲ ಕಾಗದ ಬರೆದ ಅಪ್ಪ ಅವಳ ಒಂದು ಫೋಟೋ ತರಿಸಿ ಕಳಿಸಿದ್ದರೆ? ಈ ಹಿರಿಯರು ಯಾವಾಗಲೂ ಹೀಗೆ! ನಮ್ಮ ಮನಸ್ಸನ್ನೇ ಅರ್ಥ ಮಾಡಿಕೊಳ್ಳೊಲ್ಲ!

ಪಕ್ಕದಲ್ಲಿ ನಗುವಿನ ಅಲೆ ಪ್ರಾರಂಭವಾಗಿ ನರಹರಿಯ ಮನಸ್ಸು ಆ ಕಡೆಗೆ ಹೋಯಿತು. ವಾರಪತ್ರಿಕೆಯೊಂದರಲ್ಲಿದ ಒಂದು ಚಿತ್ರವನ್ನು ಆತ ಎಲ್ಲರಿಗೂ ತೋರಿಸಿ ನಗಿಸುತ್ತಿದ್ದ. ಪುಸ್ತಕ ಹಿಡಿದು ಕುಳಿತಿದ್ದ ಆ ಚಿತ್ರದ ಯುವತಿ ಹೆಚ್ಚು ಕಮ್ಮಿ ರೂಪಳಂತಿಯೇ ಇದ್ದಳು.

"ಈ ಮುಖ ನೋಡೋ! ಥೇಟು ಹಾಗೆ ಇದೆ ಇಲ್ವಾ? ಸೀರೆ ಕೂಡಾ ಅದೇ ಪ್ರಿಂಟ್! ಕೂದಲೂ ಹಾಗೇ ಇಳಿಬಿಟ್ಟಿದೆ....ಕೈಲಿರೋ ಪುಸ್ತಕ ಕೂಡ ಕನ್ನಡ ಕಾದಂಬರೀ ತರಹಾನೇ ಇದೆ! ಎಲ್ಲಾ ಡಿಟೋ! ಆದರೆ ಇದರಲ್ಲಿರೋ ಹಾಗೆ.... ಸೆರಗು ಮಾತ್ರ ಜಾರಿಲ್ಲ ಅಷ್ಟೆ!" ನರಹರಿಯೂ ಅವರೊಂದಿಗೆ ಬೆರೆತು ನಕ್ಕ. ಎಲ್ಲರ ಕಣ್ಣೂ ರೂಪಳ ಮೇಲೆ! ಕೆಣಕಿದ ಫಣಿಯಂತೆ ರೂಪ ಬುಸುಗೊಟ್ಟುತ್ತಾ ಎದ್ದುನಿಂತಳು. ನರಹರಿಯ ಮುಂದಿನಿಂದ ನಡೆದುಬಂದು ಪುಸ್ತಕವನ್ನು ಕಿತ್ತುಕೊಂಡಳು! "ಯೂ ಫೂಲ್ಸ್!" ಅಗ್ನಿ ಪರ್ವತ ಸ್ಫೋಟಿಸಿತು! ಕಂಡ ಹುಡುಗೀರನ್ನೆಲ್ಲಾ ಗೋಳಾಡಿಸೋದೆ ನಿಮ್ಮ ಕೆಲಸಾನಾ? ಇನ್ನೊಂದ್ಸಾರಿ ನನ್ನ ತಂಟೆಗೆ ಬಂದರೆ T C ಗೆ ರಿಪೋರ್ಟ್ ಮಾಡಿ ಈ ಗಾಡಿಯಿಂದ ಹೊರಗೆ ಕಳಿಸ್ತೀನಿ.... ಕೇರ್‌ಫುಲ್! ಕಂಪಾರ್ಟ್‌ಮೆಂಟಲ್ಲಿ ಮೌನ ತಾನೇ ತಾನಾಗಿ ಆವರಿಸಿತು. ಎಲ್ಲರೂ ತೆಪ್ಪಗಾದರು. ತಮ್ಮ ಮರ್ಯಾದೆಯನ್ನು ಹಾಳು ಮಾಡಿಕೊಳ್ಳಲು ಅಲ್ಲಿ ಯಾರೂ ತಯಾರಿರಲಲ್ಲ.

ರೂಪಳ ಎದುರಿಗೇ ಕುಳಿತಿದ್ದ ನರಹರಿಯ ಫಜೀತಿಯಂತೂ ಬೇಡ! ತಲೆ ಎತ್ತಿ ನೋಡಿದರೆ ಏನಾಗುತ್ತೋ ಎನ್ನುವಷ್ಟು ಹೆದರಿಕೆಯಾಗಿತ್ತು. ಬೆಂಗಳೂರು ಬೇಗ ಬಂದರೆ ಸಾಕಪ್ಪ ಎಂದು ಈಗ ಅನಿಸುತ್ತಿತ್ತು!

"ಸದ್ಯ ಆದದ್ದಾಯಿತು. ಇದುವರೆಗೆ ಇಲ್ಲದ ಮರೀಚಿಕೆಯ ಬೆನ್ನು ಹಿಡಿದು ತಂದೆ ತಾಯೀನ, ಬಂದ ಹೆಣ್ಣು ಹುಡುಗಿಯರನ್ನ ಗೋಳಾಡಿಸಿದ್ದು ಸಾಕು. ಈ ಬಾರಿಯೇ ಕೊನೆ! ನಾಳೆ ನೋಡುವವಳು ತಂದೆ ತಾಯಿಗೆ ಇಷ್ಟವಾದರೆ ಅಲ್ಲಿಗೆ ಮುಗಿಯಿತು ನನ್ನ ಕನ್ಯಾ ಪರೀಕ್ಷೆ! ಎಂದು ನರಹರಿ ನಿರ್ಧರಿಸುವ ವೇಳೆಗೆ ಬೆಂಗಳೂರು ಕಾಣಿಸಿಕೊಂಡಿತು."

ರೈಲು ನಿಲ್ಲುವುದನ್ನೇ ಕಾಯುತ್ತಿದ್ದಂತೆ ಆ ಐದು ಮಂದಿ ಯುವಕರೂ ಸದ್ದಿಲ್ಲದೆ ಇಳಿದು ಹೋದರು. ರೂಪ ಸಾಮಾನನ್ನು ಎತ್ತಿ ಕಷ್ಟದಿಂದ ಇಳಿಸಲು ಪ್ರಯತ್ನಿಸಿದಾಗ ನರಹರಿ ತಾನಾಗಿ ಮುಂದೆ ಬಂದ.

"ನೀವು ಅವರು ಇಳೀರಿ ಮಿಸ್, ನಾನು ಸಾಮಾನು ಕೊಡ್ತೀನಿ" ರೂಪ ಅವನನ್ನೊಮ್ಮೆ ನೋಡಿದಳು. ಆ ನೋಟದಲ್ಲಿ ಏನೋ ನೋವು ಬೆರೆತಂತೆ ನರಹರಿಗೆ ಭಾಸವಾಯಿತು. ಮೂವರೂ ಒಟ್ಟಿಗೆ ಕಲೆಕ್ಟರ್ ಬಳಿ ಬಂದು ಒಟ್ಟಿಗೆ ಹೊರಗಡೆ ಬಂದರು.

ಆಟೋರಿಕ್ಷಾವೊಂದನ್ನು ಗೊತ್ತು ಮಾಡಿ ರೂಪ ತನ್ನ ಸಾಮಾನನ್ನು ಅದರಲ್ಲಿಳಿಸಿದಳು "ನೀವು ಕೂತ್ಕೊಳಿ ತಾತ." ಎಂದು ಆ ಮುದುಕರನ್ನು ಕೂಡಿಸಿದಳು.

ರೂಪ ತನ್ನನ್ನೆ ಬೀಳ್ಕೊಡುವಂತೆ ನೋಡಿದಾಗ ನರಹರಿ ಅಂದ.

"ಒಂದು ಮಾತು, ದಯವಿಟು ತಪ್ಪು ತಿಳಿಯಬೇಡಿ. ಆ ಹುಡುಗರ ಜೋತೆ ಸೇರಿದ್ದೇ ತಪ್ಪಾಯಿತು. ನಿಮ್ಮನ್ನು ಬೇಸರ ಪಡಿಸುವುದು.... ನನ್ನ ಉದ್ದೇಶವಾಗಿರಲಿಲ್ಲ."

ಅದನ್ನೇ ನಿರೀಕ್ಷಿಸಿದವಳಂತೆ ರೂಪಾ ಅಂದಳು.

"ಅದು ನನಗೂ ಗೊತ್ತು.... ಆದರೂ ಆದರೂ.... ಒಂದು advice .. you look like a gentleman behave like a gentleman also ವಾಕ್ಯ ಮುಗಿದೊಡನೆ ಅವಳು ರಿಕ್ಷಾದಲ್ಲಿ ಕುಳಿತಳು. ಜೋರಾಗಿ ಚಲಿಸಿದ ರಿಕ್ಷಾವನ್ನೇ ನೋಡುತ್ತಾ ನರಹರಿ ಮತ್ತೆ ಮತ್ತೆ ಆ ಪದವನ್ನೇ ಮೆಲುಕು ಹಾಕಿದ. you look like a gentleman!" ಎಲ್ಲಾದರೂ ಕನ್ನಡಿಯಿರಬಾರದಾಗಿತ್ತೇ ಎನ್ನಿಸಿತು ಅವನಿಗೆ!

ಮರುದಿನ ಹುಡುಗಿಯನ್ನು ಕರೆದುಕೊಂಡು ಬಂದಾಗ ನರಹರಿ ರೂಮಿನಲ್ಲಿದ್ದ. ನನ್ನ ಮಗಳು ನಿನ್ನೆ ತಾನೇ ಬಂದಳು. ಈಗ ನಮ್ಮ ತಂದೆ ತಾಯಿ ಜೊತೆಯಲ್ಲಿ ಹುಬ್ಬಳ್ಳಿಯಲ್ಲಿದ್ದಾಳೆ. ಅಲ್ಲಿ ಕಾಲೇಜ್ ಲೆಕ್ಚರರ್" ಈ ಮಾತುಗಳು ಕಿವಿಗೆ ಬಿದ್ದಾಗ ನರಹರಿ ಕುತೂಹಲದಿಂದ ಇಣಕಿ ನೋಡಿದ ! ರೂಪಾ !!

ಔಪಚಾರಿಕ ಮಾತುಕತೆಕಳು ಮುಗಿದ ನಂತರ ನರಹರಿ ತಂದೆಯ ಬಳಿ ಹೇಳಿದ "ನಾನು ಆ ಹುಡುಗಿ ಜೊತೆ ಮಾತಾಡಬೇಕು" ಮಗ ಒಪ್ಪಿಕೊಳ್ಳುವ ಸೂಚನೆಯಿಂದ ಸಂತೋಷಗೊಂಡು ಅವರು ಇಬ್ಬರ ಭೇಟಿಯನ್ನು ಏರ್ಪಡಿಸಿದರು.

ಸೆರಗನ್ನು ಮೈಪೂರ ಹೊದ್ದು ಮಂಗಳಗೌರಿಯಂತೆ ನಾಚಿ ನಿಂತಿದ್ದ ರೂಪಾಳನ್ನು ನರಹರಿ ಕೇಳಿದ.

"ನನ್ನ ಇಲ್ಲಿ ನೋಡಿ ಏನನ್ನಿಸ್ತು ರೂಪಾ ?"

"ಏನಿಲ್ಲ, ಆಶ್ಚರ್ಯವಾಯಿತು ಅಷ್ಟೆ" ಎಂದು ನಕ್ಕಳು ರೂಪ.

"ನಿನಗೆ ಒಪ್ಪಿಗೆ ಇದೆಯಾ ಈ ಮದುವೆ ?"

ರೂಪ ಮೆಲ್ಲನೆ ತಲೆ ಎತ್ತಿದಳು.

"ಸಿಗರೇಟ್ ಅಭ್ಯಾಸ ಕಡಿಮೆ ಮಾಡಿ, ಹುಡುಗಿಯರ ತಂಟೆಗೆ ಹೋಗದಿದ್ದರೆ ಮಾತ್ರ ......." ಎಂದು ನಸುನಗುತ್ತಿದ್ದುದು ನರಹರಿಗೆ ಮಾತ್ರ ಕೇಳಿಸಿತು.

---

ಹೃದಯ, ಪವಿತ್ರವಾಗುಳ್ಳವರಿಗೆ ಭಗವಂತ ದೂರ ಇರುವುದಿಲ್ಲ. ಹಣ ಕೊಟ್ಟು ಕೊಳ್ಳಲು ಪೇಟೆಯಲ್ಲಿ ಸಿಗುವುದಿಲ್ಲ. ಯುಕ್ಕ ಜೀವನದಿಂದ ಭಗವಂತ ಲಭಿಸಬಲ್ಲ. ಅವನನ್ನು ಸೇರುವ ಮಾರ್ಗ ಯಾರು ಭೋಧಿಸುತ್ತಾರೆ ? ಅವರಷ್ಟಕ್ಕೆ ಅವರೇ ತಿಳಿದುಕೊಳ್ಳಬೇಕು.

ಮುಕ್ತಾಬಾಯಿ (ಮಹಾರಾಷ್ಟ್ರ ಕವಯತ್ರಿ)

# ಮಹಿಳೆ ಮತ್ತು ಧರ್ಮ

—ಶಾಂತಾ ಎ. ದಿವಾಕರ

ಭಾರತೀಯ ಪರಂಪರೆಯಲ್ಲಿ ಮಹಿಳೆಗೆ ಉನ್ನತ ಗೌರವ ಸ್ಥಾನವನ್ನು ಕೊಡಲಾಗಿದೆ. ಅದನ್ನು ಉಳಿಸಿ - ಬೆಳಸಿ ಕೊಳ್ಳುವುದು ಇಂದಿನ ಯುಗದ ಮಹಿಳೆಯ ಆದ್ಯ ಕರ್ತವ್ಯವೇ ಆಗಿದೆ. ಭಾರತೀಯ ಸಂಸ್ಕೃತಿಯಲ್ಲಿ ಮಹಿಳೆ ಬರೀ ಭೋಗವಸ್ತುವಲ್ಲ. ಇಂದಿನ ಪ್ರಚಾರ ಪ್ರಪಂಚದಲ್ಲಿ ಕಾಣುವ ಆಕರ್ಷಣೆಗಾಗಿಯೇ ಜೀವ ತಾಳಿರುವ ವ್ಯಕ್ತಿಯಲ್ಲ. ಭಾರತೀಯ ಸಂಸ್ಕೃತಿಯಲ್ಲಿ ಮಹಿಳೆಯ ಸ್ಥಾನ ಮಾತೆಯ ಪವಿತ್ರ ಸ್ಥಾನ. ಅಂತಹ ಪವಿತ್ರ ಸ್ಥಾನವನ್ನು ಅಲಂಕರಿಸಲು ಭಾರತದ ಮಹಿಳೆ ಸಿದ್ಧಳಾಗಬೇಕಾಗಿದೆ. ಮಾತೆಯ ಸ್ಥಾನ ಗೌರವದ ಮಹತ್ವವನ್ನು ಅರಿತು ಅದಕ್ಕೆ ಪೂರಕವಾದ ರೀತಿಯಲ್ಲಿ ತನ್ನ ಜೀವನ ಕ್ರಮ, ಜೀವನ ಸಿದ್ಧಾಂತವನ್ನು ಅಳವಡಿಸಿಕೊಳ್ಳುವುದು ಇಂದಿನ ಮಹಿಳೆಯ ಕರ್ತವ್ಯವಾಗಿದೆ.

ಧರ್ಮ ಎಂಬ ಪದಕ್ಕೆ ನಾನಾ ಅರ್ಥಗಳನ್ನು ಕೊಡಲು ಸಾಧ್ಯವಿದೆ. ಸಾಮಾನ್ಯ ಅರ್ಥದಲ್ಲಿ ಧರ್ಮವೆಂದರೆ ಕರ್ತವ್ಯವೆನ್ನಬಹುದು. ಸಹಜ ಗುಣಕ್ಕೂ ಧರ್ಮವೆಂದೇ ಹೇಳಬಹುದು. ಉದಾಹರಣೆಗೆ, ಬೆಂಕಿಯ ಗುಣ ಧರ್ಮ ಸುಡುವುದು. ಸುಡುವುದು ಬೆಂಕಿಯ ನಿಜ ಧರ್ಮ. ಹಾಗೆಯೇ ಮಹಿಳೆಯ ಧರ್ಮವೇನು ಎಂಬ ಪ್ರಶ್ನೆ ಏಳುವುದು ಸಹಜ.

ಮಾತೃ ಭಾವವನ್ನು ಅಭಿವೃದ್ಧಿ ಮಾಡಿಕೊಳ್ಳುವುದು ಮಹಿಳೆಯ ಧರ್ಮ. ಮಾತೃ ಸ್ಥಾನದ ಸಂರಕ್ಷಣೆಯೇ ಮಹಿಳೆಯ ಧರ್ಮವೆಂದರೆ ತಪ್ಪಲ್ಲ. ಮಹಿಳೆ ತನ್ನ ಮಾತೃ ಧರ್ಮವನ್ನು ಕಾಯ್ದುಕೊಂಡರೆ ಅದೇ ಅವಳನ್ನು ಸಂರಕ್ಷಿಸುವುದರಲ್ಲಿ ಸಂಶಯವಿಲ್ಲ. "ಧರ್ಮೋ ರಕ್ಷತಿ ರಕ್ಷಿತಃ" ಎಂದು ಹೇಳಿದ್ದಾರೆ. ಮಾತೃ ಧರ್ಮದ ವಿವಿಧ ಮುಖಗಳನ್ನು ಪರಿಚಯ ಮಾಡಿಕೊಳ್ಳೋಣ.

## ದೇಹ ಮಾತೆಯ ಧರ್ಮ

ದೈಹಿಕವಾಗಿ ತಾಯಿಯಾಗಲೆಂದೇ ಮಹಿಳೆಯನ್ನು ನಿಸರ್ಗವೇ ಸೃಷ್ಟಿಸಿದೆ. ನೋವಿನಲ್ಲಿ ನಲಿವು ಕಷ್ಟದಲ್ಲಿ ಸುಖವನ್ನು ಕಾಣುವ ಕಲೆ ಮಾತೆಗಿರುತ್ತದೆ. ಜನನಿಯಾಗಿ ಪ್ರಕೃತಿ ಕಾರ್ಯದಲ್ಲಿ ನೆರವಾಗುವುದು ಮಹಿಳೆಯ ಧರ್ಮವೇ ಹೊರತು ಪುರುಷನ ವಿಲಾಸ ವಸ್ತುವಾಗುವುದು ಸ್ತ್ರೀಯ ಧರ್ಮಕ್ಕೆ ಹೊರತಾದುದು. ಮಕ್ಕಳ ಲಾಲನೆ, ಪಾಲನೆ ಮತ್ತು ಪೋಷಣೆ ಇವುಗಳ ಸಂಪೂರ್ಣ ಹೊಣೆ ಮಹಿಳೆಯ ಮೇಲೆ ಯಾವ ಪ್ರತಿಫಲಾಪೇಕ್ಷೆಯಿಲ್ಲದೆ ಮಕ್ಕಳ ಅಭಿವೃದ್ಧಿಗಾಗಿ ನಿಸ್ವಾರ್ಥತೆಯಿಂದ ಸೇವೆ ಮಾಡುವುದೇ ಮಾತೆಯ ಧರ್ಮ. ನಮ್ಮ ಸಂಸ್ಕೃತಿಯಲ್ಲಿ ಯಶೋದೆಗೆ ಹಿರಿಮೆಯ ಸ್ಥಾನ ಕೊಟ್ಟಿರುವುದು ಆಕೆಯ ತಾಯ್ತನಕ್ಕಾಗಿ. ಆಕೆ ತನ್ನ ಮಗುವಿನಲ್ಲಿ ಇಡೀ ಜಗತ್ತನ್ನು ಕಂಡ ಧನ್ಯೆ. ಮುದ್ದು ಮಗುವಿನ ಸೇವೆಯಲ್ಲಿ ತನ್ನನ್ನು ತಾನು ಸಮರ್ಪಿಸಿಕೊಂಡ ಯಶೋದೆ ಅಮರಳಾದಳು. ತನ್ನ ಮಗುವಿನಲ್ಲಿ ಶ್ರೀಕೃಷ್ಣನ ದೈವೀಕತೆಯನ್ನು ಕಾಣುವ ಭಾಗ್ಯ ಪ್ರತಿಯೊಬ್ಬ ತಾಯಿಗೂ ಇದ್ದೇ ಇದೆ. ಕೃಷ್ಣನ ಬಾಲಲೀಲೆಗಳಲ್ಲಿ ಮಹದಾನಂದವನ್ನು ಪಡೆದ ಯಶೋದೆಯ ವಾತ್ಸಲ್ಯ ಭಕ್ತಿಯ ನಿದರ್ಶನವಾಗಿ ಮಹಿಳೆಯರಿಗೆ ಆದರ್ಶಳೆನಿಸಿದ್ದಾಳೆ. ಮಾತೆಯ ಪ್ರೇಮ ನಿಂತ ನೀರಾಗಬಾರದು, ಹರಿಯುವ ನದಿಯಾಗಬೇಕು. ತಾನು, ತನ್ನ ಮಕ್ಕಳು ಇವಿಷ್ಟಕ್ಕೆ ಆಕೆಯ ಪ್ರೇಮ ಸೀಮಿತವಾಗದೆ ಎಲ್ಲ ಮಕ್ಕಳ ಶ್ರೇಯೋಭಿವೃದ್ಧಿಯೇ ಆಕೆಯ ಗುರಿಯಾಗಬೇಕು. ಬಾಲ ಬಾಲೆಯರ ದೈಹಿಕ ಮಾನಸಿಕ ಮತ್ತು ಬೌದ್ಧಿಕ ವಿಕಾಸಗೊಳಿಸುವುದು ಮಾತೆಯ ಪ್ರಥಮ ಕರ್ತವ್ಯ.

## ದೇಶ ಮಾತೆಯ ಧರ್ಮ

ಭಾರತ ಮಾತೆ ಅಥವಾ ದೇಶ ಮಾತೆಯಾಗಿ ಕರ್ತವ್ಯ ಪಾಲನೆ ಮಾಡುವುದೂ ಮಹಿಳೆಯ ಧರ್ಮ. ಪ್ರಜೆಗಳ ಆಲಸ್ಯ, ಅನಾಚಾರ, ಸ್ವಾರ್ಥಗಳನ್ನು ಸದೆ ಬಡಿದು ಎಚ್ಚರಿಸುವುದು ಮಹಿಳೆಯ ಕರ್ತವ್ಯ. ದೇಶ ಮಾತೆಯ ರಕ್ಷಣೆಗಾಗಿ ವೀರರು ಹೋರಾಡಿ ವೀರ ಸ್ವರ್ಗ ವನ್ನು ಸೇರುತ್ತಿದ್ದರು. ಅಂತಹ ವೀರರನ್ನಾಗಿ ಮಾಡಲು ಇಂದಿನ ಮಹಿಳೆ ಕಂಕಣ ಕಟ್ಟಬೇಕಾಗಿದೆ. ರಾಷ್ಟ್ರ ಪ್ರೇಮ ಕರ್ತವ್ಯ ಪ್ರಜ್ಞೆ ಇವುಗಳಿಗೆ ಸ್ಫೂರ್ತಿದಾತೆಯಾಗಿ, ಪ್ರೇರಕ ಶಕ್ತಿಯಾಗಿ ನಿಲ್ಲಬಲ್ಲಬೇಕಾದುದು ಮಹಿಳೆಯ ಧರ್ಮ. ವಿದೇಶಿ ವಸ್ತುಗಳ ವ್ಯಾಮೋಹ, ರಾಷ್ಟ್ರದ್ರೋಹ ಕಾರ್ಯ ಗಳು, ಭ್ರಷ್ಟಾಚಾರ ಹೆಡೆಯಾಡುತ್ತಿರುವುದಕ್ಕೆ ಕಾರಣ ಇಂದಿನ ಮಹಿಳೆಯಲ್ಲಿ ಧರ್ಮಪ್ರಜ್ಞೆ ಜಾಗೃತವಾಗದೆ ಇರುವುದರಿಂದ. ಸಮಾಜದ ದುಷ್ಟ ಶಕ್ತಿಗಳನ್ನು ಎದುರಿಸಲು ದೇಶಮಾತೆಯಾಗಿ ಕರ್ತವ್ಯ ನಿರ್ವಹಣೆ ಮಾಡುವುದು ಮಹಿಳೆಯ ಧರ್ಮ.

ಭೂಮಾತೆಯ ಕರುಣೆ, ಕ್ಷಮೆ ಇವುಗಳನ್ನು ಮೈ ಗೂಡಿಸಿಕೊಂಡು ಸಹನೆ, ತ್ಯಾಗ ಮತ್ತು ಅಹಿಂಸೆಗಳಿಂದ ಜನತೆಯನ್ನು ಎಚ್ಚರಿಸಲು ಸನ್ನದ್ಧಳಾಗಬೇಕಾಗಿದೆ. ರಾಷ್ಟ್ರದ ಸಂಪದಭಿವೃದ್ಧಿಯಲ್ಲಿ ತನ್ನ ಪಾಲನ್ನು ನಿರ್ವಹಿಸ ಬೇಕಾಗಿದೆ. ಮಹಿಳೆ ತನಗೆ ದೈವದತ್ತವಾದ ಕಾರ್ಯ ಕೌಶಲ್ಯ, ಸಹನೆ ಮತ್ತು ಸೃಜನಶೀಲತೆಗಳನ್ನು ಉಪ ಯೋಗಿಸುವುದು ಅವಳ ಧರ್ಮವಾಗಿದೆ.

## ವೇದ ಮಾತೆ

ವೇದಗಳನ್ನು ಕಾಮಧೇನುವೆಂದು ಕರೆದಿದ್ದಾರೆ. ವೇದಗಳು ನೀಡುವ ಹಾಲನ್ನು ಭಾರತೀಯ ಜನಕ್ಕೆ ಏಕೆ ವಿಶ್ವ ಮಾನವತೆಗೆ ನೀಡಲು ವೇದ ಮಾತೆಯ ಪಾತ್ರ ವನ್ನು ವಹಿಸಬೇಕಾಗಿದೆ. ನೈತಿಕ ಅಧಃಪತನ ಭಾರತದ ಹೆಸರಿಗೇ ದೊಡ್ಡ ಕಳಂಕ. ಭಾರತದ ಸಾತ್ವಿಕ ಸಂಪತ್ತನ್ನು ಅಭಿವೃದ್ಧಿಗೊಳಿಸಲು ಭಾರತೀಯ ಸಂಸ್ಕೃತಿಯ ಅರಿ ವನ್ನುಂಟು ಮಾಡುವುದು ಮಹಿಳೆಯ ಧರ್ಮವೇ ಆಗಿದೆ. ತಾನು ಭೋಗ ವಸ್ತುವಲ್ಲ, ಬರೀ ಸುಖ ಸಾಧನವಲ್ಲ. ತಾನು ಪರಮ ಪವಿತ್ರ ಆತ್ಮಸ್ವರೂಪವೆಂದು ಅರಿತು ವೇದ ವಾಣಿ ಹೇಳುವಂತೆ "ಏಕಂ ಸತ್ ವಿಪ್ರಾಬಹುಧಾವದಂತಿ" ಸತ್ಯವು ಒಂದೇ, ಜ್ಞಾನಿಗಳು ಅದನ್ನು ಬೇರೆ ಬೇರೆ ರೀತಿ ಯಲ್ಲಿ ಕರೆಯುತ್ತಾರೆ ಎಂಬ ಜ್ಞಾನವನ್ನು ಪಡೆದು, ಆಚ ರಣೆಯಲ್ಲಿ ತರಲು ಯತ್ನಿಸಬೇಕಾಗಿದೆ. ಯಜ್ಞವಲ್ಕ್ಯ ಋಷಿಯ ಪತ್ನಿ ಮೈತ್ರೇಯಿ ತನ್ನ ಧರ್ಮಾಚರಣೆಯಿಂದ ಶ್ರೇಷ್ಠ ಸ್ಥಾನವನ್ನು ಪಡೆದಿದ್ದಾಳೆ. ಯಜ್ಞವಲ್ಕ್ಯರು ಆಶ್ರಮವನ್ನು ಧನ, ಧಾನ್ಯ ಮತ್ತು ಗೋಸಂಪತ್ತನ್ನು ದಾನ ಮಾಡಿ ಹೊರಡಲು ನಿಂತರು. ಪತ್ನಿಯನ್ನು ಕರೆದು "ಆಶ್ರಮದ ಸಂಪತ್ತು, ಐಶ್ವರ್ಯವೆಲ್ಲವನ್ನೂ ತೆಗೆದುಕೊ" ಆದರೆ ಮೈತ್ರೇಯಿ ಸ್ವೀಕರಿಸಲು ಸಿದ್ಧಳಿರಲಿಲ್ಲ.

"ಯಾವ ವಸ್ತುಗಳನ್ನು ತ್ಯಜಿಸಿ ನೀವು ಹೊರಟಿ ದ್ದೀರಿ ಅದೇ ವಸ್ತುಗಳಿಂದ ನನಗೇನು ಪ್ರಯೋಜನ? ನಿಜ ಆನಂದ ದೊರೆಯುವಂತಿದ್ದರೆ ಅವುಗಳನ್ನು ನೀವು ಬಿಟ್ಟು ಹೋಗುತ್ತಿರಲಿಲ್ಲ. ನನಗೆ ಆ ಆನಂದವನ್ನು ಪಡೆ ಯುವ ಮಾರ್ಗವನ್ನು ತಿಳಿಸಿರಿ" ಎಂದು ಬೇಡಿದಳು ಮೈತ್ರೇಯಿ.

ದೇಹಮಾತೆ, ದೇಶಮಾತೆ ಮತ್ತು ವೇದಮಾತೆ ಈ ಮೂರು ಮಾತೆಯಾಗಿ ಮೆರೆದ ಮೈತ್ರೇಯಿ ಆತ್ಮ ಜ್ಞಾನದ ದಾಹವನ್ನು ವ್ಯಕ್ತಪಡಿಸಿದಳು. ಆತ್ಮವಿಶ್ವಾಸ ಮಹಿಳೆಯ ಧರ್ಮ. ತಾನು ಇಂದು ಇದ್ದು ನಾಳೆ ಹೋಗುವ ದೇಹವಲ್ಲ, ಆದರೆ ಅಮರ ಸಚ್ಚಿದಾನಂದ ಸ್ವರೂಪವೇ ನಾನು, ಎಂಬ ದೃಢ ನಂಬಿಕೆಯೇ ಆತ್ಮ ವಿಶ್ವಾಸವಿದ್ದ ಮಹಿಳೆ ಎಂದು ಮನೆ, ಆಸ್ತಿ, ಒಡವೆಗಳ ವ್ಯಾಮೋಹದ ಬಂಧನಕ್ಕೆ ಸಿಲುಕುವುದಿಲ್ಲ, ಆತ್ಮವಿಶ್ವಾಸ ದಿಂದ ತ್ಯಾಗಜೀವನ ಶಕ್ತಿ ಬರುತ್ತದೆ. ತ್ಯಾಗದಿಂದಲೇ ತೃಪ್ತಿ, ಸಮಾಧಾನಗಳ ಅನುಭವ ಲಾಭವಾಗುತ್ತದೆ. ತೃಪ್ತಿ ಇದ್ದರೆ ಆತ್ಮ ಸಾಕ್ಷಾತ್ಕಾರ ಪಡೆಯಲು ಸಾಧ್ಯ.

ಆತ್ಮ ಸಾಕ್ಷಾತ್ಕಾರಕ್ಕೆ ತಳಹದಿ ಆತ್ಮ ವಿಶ್ವಾಸ. ಈ ಆತ್ಮ ವಿಶ್ವಾಸ ಅಥವ ಆತ್ಮ ಸ್ವರೂಪವನ್ನು ಅರಿಯು ವಿಕೆ ಮಹಿಳೆಯ ಧರ್ಮ. ಭಾರತೀಯ ಆಧ್ಯಾತ್ಮಿಕ ಸಂಪತ್ತನ್ನು ಆಚರಣೆಯಲ್ಲಿ ತಂದು ಸಂರಕ್ಷಿಸುವುದು ಮಹಿ ಳೆಯ ಧರ್ಮ, ಅದರಿಂದಲೇ ಮಹಿಳೆಗೆ ಅಜ್ಞಾನದಿಂದ ವಿಮೋಚನೆ. ತನ್ನ ಸ್ವರೂಪ ಸಂದರ್ಶನವೇ ಮಹಿಳೆಯ ಸ್ವಾತಂತ್ರ್ಯ. ಅಂತಹ ಸ್ವಾತಂತ್ರ್ಯವೇ ಮಹಿಳೆಯ ನಿಜ ಧರ್ಮ. ಧರ್ಮ ಸಂವರ್ಧನೆಗೆ ಮಹಿಳೆ ದೇಹಮಾತೆ, ದೇಶಮಾತೆ ಮತ್ತು ವೇದಮಾತೆ ಈ ಮೂರು ಪಾತ್ರಗಳ ವಹಿಸಲೇಬೇಕಾಗಿದೆ. ಅದೇ ಮಹಿಳೆಯ ಜನ್ಮದ ಮರ್ಮ.

# ಸಹ ಪ್ರಯಾಣಿಕರು




✳ ಹೇಮಲತಾ ಮಹಿಷಿ

"ನಿಮ್ಮ ಸೀಟು ಯಾವ್ದು ಸ್ವಾಮಿ ?"

ಆನಂದ ಪರ್ಸಿನಿಂದ ಟಿಕೇಟನ್ನು ಹೊರತೆಗೆದು ನೋಡಿದ. "26 ಅದೇ, ಕಿಡ್ಕಿ ಪಕ್ಕದ್ದು" ಹೇಳಿದ್ದು ಪೋರ್ಟರ್‌ನನ್ನು ಕುರಿತಾದರೂ ಅಲ್ಲಿ ತನ್ನ ಸೀಟಿನಲ್ಲಿ ಕುಳಿತ್ತಿದ್ದ ಆ ಹುಡುಗಿಯ ಕಿವಿಗೂ ಬೀಳಲಿ ಎಂಬುದು ಆನಂದನ ಉದ್ದೇಶವಾಗಿತ್ತು. ಅಷ್ಟು ಜೋರಾಗಿ ಹೇಳಿದ್ದರೂ, ಪೋರ್ಟರ್ ಎದುರಿಗೆ ಹೋಗಿ ನಿಂತಿದ್ದರೂ ಏನು ತಿಳಿಯದವಳಂತೆ ಕಿಡಿಕಿಯಾಚೆ ನೋಡುತ್ತ ತನ್ನ ಜಾಗದಲ್ಲಿ ಪಟ್ಟಾಗಿ ಕುಳಿತಿದ್ದ ಹುಡುಗಿಯನ್ನು ನೋಡಿ ಆನಂದನಿಗೆ ರೇಗಿತು. 'ತನ್ನ ಮುದ್ದು ಮುಖ ನೋಡಿಕೊಂಡು ಸುಮ್ಮನೆ ಇರ್‍ತಾರೆ ಅಂತಾ ಮಾಡಿದ್ದಾಳೆ ಅಂತಾ ಕಾಣುತ್ತೆ' ಮನದಲ್ಲೇ ಅವನು ಬೈದುಕೊಂಡ.

ಇದ್ದಕ್ಕಿದ್ದಂತೆ 'ಧಪ್' ಎಂದು ಪೋರ್ಟರ್ ಕಾಲಿಗೆ ತಾಗಿದಂತೆ ಸೂಟ್‌ಕೇಸ್ ಇಟ್ಟಾಗ ಸುಮ್ಮನೆ ಬೆಚ್ಚಿ ಕಿಟಕಿಯಿಂದ ಮುಖ ತಿರುಗಿಸಿದಳು. ಪೋರ್ಟರ್ ಆ ಸೂಟ್‌ಕೇಸ್ ಒಡೆಯನಿಂದ ಆಗಲೇ ಕೂಲಿ ತೆಗೆದುಕೊಂಡು ಹೊರಟಿದ್ದ.

"ಮೇಡಂ, ಸ್ವಲ್ಪ ಈ ಕಡೆ ಬರ್‍ತಿರಾ. ಅದು ನನ್ನ ಜಾಗ" ಧ್ವನಿಯನ್ನು ಎಷ್ಟು ಹತೋಟಿಯಲ್ಲಿಡಲೆತ್ನಿಸಿದ್ದರೂ ಅದು ಬಿರುಸಾಗಿತ್ತು.

'ಇಡೀ ಸೀಟು ಖಾಲಿ ಇದೆ. ಒಂದು ಸ್ವಲ್ಪ ಹೊತ್ತು ಅಲ್ಲಿ ಕೂತಿದ್ದರೆ ಅವನ ಗಂಟೇನು ಖರ್ಚಾಗ್ತಿತ್ತೋ. ಹೋಗ್ಲಿ, ಸ್ವಲ್ಪ ನಿಧಾನವಾಗಿಯಾದರೂ ಜಾಗಬಿಟ್ಟುಕೊಡಲು ಕೇಳಿದ್ದರೆ ತಾನೇನು ಏಳದೇ ಇರ್‍ತಿದ್ನೇ, ಅದಕ್ಯಾಕೆ ಅಷ್ಟು ಜೋರು ಮಾಡ್ಬೇಕಾಗಿತ್ತು' —ಸುಮ್ಮನೆ ಮನಸ್ಸಿನಲ್ಲೇ ರೇಗಿದರೂ ತುಟಿ ಎರಡು ಮಾಡದೇ ಎದ್ದಳು. ಕೋಪದಿಂದ, ಅವಮಾನದಿಂದ ಮುಖ ಕೆಂಪಾಗಿತ್ತು.

"ಇಲ್ಲಿ ಬಾರೆ, ಎದುರಿನ ಸೀಟಿನ ಹೆಂಗಸು ಕಿಟಕಿಯಿಂದ ಸರಿದು ಜಾಗ ಮಾಡಿಕೊಟ್ಟಾಗ ಆನಂದ ಅಂದುಕೊಂಡ— ಆ ಹುಡುಗಿ ಅಮ್ಮ ಇರಬೇಕು. ಎಷ್ಟು ಸೊಕ್ಕು. ಇಬ್ಬರು ಸೇರಿ ತನ್ನನ್ನು ತಿಂದುಹಾಕುವವರ ಹಾಗೆ ದುರುಗುಟ್ಟಿ ನೋಡ್ತಾ ಇದಾರಲ್ಲಾ. ತನ್ದೇ ತಪ್ಪೂ ಅನ್ನುವವರ ಹಾಗೆ!

ಸೀಟಿನ ಕೆಳಗೆ ಸೂಟ್‌ಕೇಸನ್ನು ಸರಿಸಿ ಆನಂದ ಆರಾಮಾಗಿ ಕಾಲು ನೀಡಿದ. ರೈಲು ಬೆಂಗಳೂರು ನಿಲ್ದಾಣವನ್ನು ಬಿಡಲು ಇನ್ನೂ ಹತ್ತು ನಿಮಿಷವಿತ್ತು. ಕಿಟಕಿಯಿಂದ ತಲೆಹಾಕಿ ಅಲ್ಲೇ ಹೋಗುತ್ತಿದ್ದ ಹುಡುಗನನ್ನು ನೋಡಿ ಇಂಗ್ಲೀಷ್ ದಿನ ಪತ್ರಿಕೆಯನ್ನು ಕೊಂಡ—' ಇನ್ನೂ ಇಡೀ ಅರ್ಧ ದಿನವೆಲ್ಲಾ ಈ ರೈಲಿನಲ್ಲಿ ಪ್ರಯಾಣ ಮಾಡಬೇಕಲ್ಲಾ, ಅದೂ ಈ ಅಮ್ಮ–ಮಗಳ ಜೊತೆಗೆ! ಕಂಪಾರ್ಟ್‌ಮೆಂಟಿನಲ್ಲಿ ಇನ್ನಾರೂ ಇರಲಿಲ್ಲ ಬೆಳಿಗ್ಗೆ ಎದ್ದಿದ್ದು ತಡವಾಗಿತ್ತು. ರೈಲು ತಪ್ಪಿ ಹೋದೀತೆಂಬ ಭಯದಿಂದ ಕಾಫಿಯನ್ನೂ ಕುಡಿಯದೇ ಓಡಿ ಬಂದಿದ್ದ. ಯಾರಾದ್ರೂ ಸೂಟ್‌ಕೇಸ್ ನೋಡಿಕೊಳ್ಳುವವರಿದ್ದಿದ್ದರೆ ಕಾಫಿ ಕುಡಿದು ಬರಬಹುದಿತ್ತು:– ಆನಂದ ಎದುರು ಕುಳಿತ ಹುಡುಗಿಯ ಕಡೆ ನೋಡಿದ. ಮುಖ ಇನ್ನೂ ಗಂಟಾಗಿತ್ತು. ಹಾಳಾಗ್ಹೋಗ್ಲಿ, ಮುಂದಿನ ಸ್ಟೇಶನ್‌ನಲ್ಲಿ ನಿಲ್ಲಿಸ್ದಾಗ ಅಲ್ಲೇ ಕಾಫಿ–ತಿಂಡಿ ತೆಗೆದುಕೊಂಡರಾಯಿತು. ಈ ಮುದ್ದು ಮುಖದ ಹುಡುಗೀಗೆಕೆ ಶರಣಾಗೋದು. ಕಾಲೇಜ್‌ನಲ್ಲಿ ಓದ್ತಾ ಇರೋವಾಗ ಇಂಥಾ ನೂರಾರು ಹುಡುಗೀರು ಬೆನ್ನು ಹತ್ತಿದ್ರೂ ಯಾರಿಗೂ ಸೊಪ್ಪು ಹಾಕದ ಈ ಆನಂದ ಈ ಯಃಕಶ್ಚಿತ್ ಹುಡುಗಿ ದುರುಗುಟ್ಟಿ ನೋಡಿದ ಮಾತ್ರಕ್ಕೆ ಹೆದರ್‍ತ್ತಾರೇನು. ಪಾಪ! ಅವಳಿಗೇನು ಗೊತ್ತು ತಾನ್ಯಾರು ಅಂತಾ!

ಇಬ್ಬರು ಪೋರ್ಟರ್‌ಗಳು ಮತ್ತಾರದೋ ಸಾಮಾನುಗಳನ್ನು ಹೊತ್ತು ತಂದರು. ಒಂದು ಸೆಕೆಂಡಿನಲ್ಲಿ ಮೇಲಿನ ಜಾಗ, ಕೆಳಗಿನ ಜಾಗಗಳೆಲ್ಲಾ ಸಾಮಾನಿನಿಂದ ಭರ್ತಿಯಾದವು. ಹಿಂದೆಯೇ ದೊಡ್ಡ ಹೊಟ್ಟೆಯ ಗೃಹಸ್ಥರೊಬ್ಬರು ಆನಂದನ ಪಕ್ಕದಲ್ಲಿ ಬಂದು ಧೊಪ್ಪನೆ ಕುಳಿತರು. ಅವರ ಆಳತೆಗೆ ತಕ್ಕಂತಿದ್ದ ಮಡದಿ ಕಂಕುಳಲ್ಲೊಂದು, ಕೈಯಲ್ಲೊಂದು ಹಿಡಿದು "ನಾಗರಾಜ, ರಾವೂ" ಎಂದು ಹಿಂದೆ ಬರುತ್ತಿದ್ದ ಮಗನನ್ನು ಕೂಗಿದರು. ತಿರುಗಿದಾಗ ಮೂಗು, ಕಿವಿಗಳಲ್ಲಿದ್ದ ಆಭರಣ ಫಳಕ್ಕನೆ ಮಿಂಚಿದ್ದನ್ನು ನೋಡಿ "ಓ! ಶೆಟ್ಟರಿರಬೇಕು" ಸುಮನ ಊಹಿಸಿದಳು. ಮತ್ತಿಬ್ಬರು ತಮಿಳರು ಬಂದು ಸುಮನಾಳ ತಾಯಿಯ ಪಕ್ಕದಲ್ಲಿ ಖಾಲಿ ಇದ್ದ ಜಾಗದಲ್ಲಿ ಕುಳಿತರು. ಪ್ರಯಾಣಕ್ಕೆ ಒಳ್ಳೆಯ 'ಕಂಪೆನಿ' ಸಿಗುವ ಆಶೆಯನ್ನು ತ್ಯಜಿಸಿ ಆನಂದ ಪತ್ರಿಕೆಯನ್ನು ಬಿಡಿಸಿದ. ರೈಲು ದೀರ್ಘವಾಗಿ ಶಿಳ್ಳು ಹಾಕಿತು, ಕೆಳಗಿದ್ದ ಜನರೆಲ್ಲಾ ಗಡಿಬಿಡಿಯಿಂದ ಓಡಿಬಂದು ರೈಲನ್ನೇರಿದರು. ನಿಲ್ದಾಣದಲ್ಲಿದ್ದ ಜನ ರೈಲು ಕಣ್ಮರೆಯಾಗುವವರೆಗೂ ಕೈ ಬೀಸುತ್ತಲೇ ಇದ್ದರು.

ರೈಲು ಸ್ವಲ್ಪ ವೇಗವನ್ನು ಹೆಚ್ಚಿಸಿಕೊಂಡಿತು. ಸುಮನಾ ತಾನು ತಂದಿದ್ದ "ಇಲ್ಲಸ್ಟ್ರೇಟೆಡ್ ವೀಕ್ಲಿ"ಯನ್ನು ಬಿಡಿಸಿ ಅದರಲ್ಲಿದ್ದ ಕಥೆಯನ್ನು ಓದತೊಡಗಿದಳು. ರೈಲು ಚಲಿಸಲು ಆರಂಭಿಸಿದಂತೇ ಎದುರಿನ ಗೃಹಸ್ಥರು ಎದ್ದು ಮೇಲಿಟ್ಟದ್ದ ಡಬ್ಬವನ್ನು ಕೆಳಗಿಳಿಸಿಕೊಂಡರು. ಮಕ್ಕಳು ಅದಕ್ಕೆ ಮುತ್ತಿಗೆ ಹಾಕಿದವು, ಡಬ್ಬದಿಂದ ಖಾರಸೇವು, ಅವಲಕ್ಕಿ ಹೊರಬಂತು. ಗಾಡಿಯಲ್ಲಿದ್ದ ಇತರರನ್ನು ಗಮನಕ್ಕೆ ತೆಗೆದುಕೊಳ್ಳದೇ ಅವರ ಬೆಳಗಿನ ಉಪಾಹಾರ ಆರಂಭವಾಯಿತು. ಆನಂದದ ಹೊಟ್ಟೆಯಲ್ಲಿ ಕಾಗೆ ಕೂಗತೊಡಗಿದವು.

"26–27 ವರ್ಷದ ಯುವಕ, ಎತ್ತರವಾದ ನಿಲುವು ಆಕರ್ಷಕ ಕಣ್ಣುಗಳು, ಗೋಧಿಗೆಂಪು ಬಣ್ಣ, ಅಲೆಅಲೆಯಾದ ಗುಂಗರು ಕೂದಲು...." ಕಥೆಯನ್ನು ಓದುತ್ತಿದ್ದ ಸುಮನಾ ಎದುರು ದಿಟ್ಟಿಸಿದಳು 'ಬಹುಶಃ ಆ ಕಥಾ ನಾಯಕ ಇವನ್ಹಾಗೆ ಇದ್ದ ಅಂತ ಕಾಣುತ್ತೆ. ನೋಡ್ಲಿಕ್ಕೆ ಮಾತ್ರ ಜಂಟಲ್‌ಮನ್, ಮಾನರ್ಸ್ ಮಾತ್ರ ಇಲ್ಲ' ನೋಟ ತೀಕ್ಷ್ಣವಾಯಿತು. ಕಣ್ಣು ಪುನಃ ಕಥೆಯತ್ತ ಹೊರಳಿತು.

"ನೋಡೋಕೇನೋ ಚೆನ್ನಾಗಿದ್ದಾಳೆ. ಆದರೆ ಹ್ಯಾಗೆ ನೋಡ್ತಾಳಲ್ಲ, ನಾನೇನು ಅವರ ಅಪ್ಪನ ಮನೆ ಗಂಟು ತಿಂದ್ನೇ, ಈ ಸೀಟು ಸಿಗೋದಕ್ಕೆ ಇಡೀ ಎರಡು ಗಂಟೆ ಕ್ಯೂನಲ್ಲಿ ನಿಲ್ಲಬೇಕಾಯ್ತು. ಈ ಮೊದ್ದಮ್ಮಂಗೇನು ಅದರಿಂದ, ಯಾವ್ದೋ ಕಾಲೇಜಿನಲ್ಲಿ ಬಿ.ಎ., ನೋ, ಬಿ.ಎಸ್ಸಿ., ನೋ ಥರ್ಡ್ ಕ್ಲಾಸಿನಲ್ಲಿ ಮಾಡಿರ್‍ತಾರೆ, ಅದೂ ಗ್ರಾಜುಯೇಟ್ ಅಲ್ದಿದ್ರೆ ಮದ್ವೇ ಆಗೋದಿಲ್ಲ ಅನ್ನೋ

ಭಯಕ್ಕೆ ಆಮೇಲೆ ನೋಡಿದರೆ ತಮ್ಮನು ಬಿಟ್ರೆಂಲ್ಲಾ ಅಂತಾ ಮೆರೀತಾರೆ. ನಂಗೇನು ಗೊತ್ತಿಲ್ವೇ ಇವರ ಬೇಳೇ ಕಾಳು, ಅದ್ಕೇ ಅಲ್ವೇ ತಾನು ಡಬ್ಬಲ್ ಗ್ರಾಜುಯೇಟ್ ಹುಡುಗೀನ್ನೇ ಮದುವೆ ಆಗೋದು ಅಂತಾ ಹಟ ಹಿಡಿದು...." ಯೋಚನೆಯ ಸರಣಿ ತಡಿಯಿತು.

ಸೀಟಿನ ಮೇಲಿಟ್ಟಿದ್ದ ಡಬ್ಬ ಕೆಳಗೆ ಬಿದ್ದು ಅವಲಕ್ಕಿ ಎಲ್ಲಾ ಸೂರೆಯಾಗಿತ್ತು. ಬೆನ್ನಿನ ಮೇಲೆ ಬಿದ್ದ ಅಮ್ಮನ ಗುದ್ದಿಗೆ ನಾಗರಾಜ ಅಳತೊಡಗಿದ್ದ. ವಜ್ರದ ಮೂಗುತಿಯ ಹೆಂಗಸು ತೆಲುಗಿನಲ್ಲಿ ಏನೇನೋ ಬೈಯುತ್ತಾ ಅವಲಕ್ಕಿ ಆರಿಸಿ ಡಬ್ಬಕ್ಕೆ ಹಾಕತೊಡಗಿದ್ದಳು.

ಊರಿನ ಹತ್ತಿರ ಬಂದರೂ ಹುಡುಗಿಯ ಮುಖ ಗಂಟಾಗಿಯೇ ಇತ್ತು. ಪತ್ರಿಕೆಯನ್ನು ಓದಿ ಮುಗಿಸಿಯಾಗಿತ್ತು. ಮುಖದ ಗಂಟು ಸ್ವಲ್ಪ ಕಡಿಮೆಯಾಗಿದ್ದರೆ "ವೀಕ್ಲಿ" ಯನ್ನು ಕೇಳಿ ತೆಗೆದುಕೊಳ್ಳಬಹುದಿತ್ತು. ಆನಂದ ಮತ್ತೊಮ್ಮೆ ಎದುರು ಕುಳಿತ ಹುಡುಗಿಯತ್ತ ನೋಡಿದ. ಸ್ಟೇಷನ್‌ನಲ್ಲಿ ರೈಲು ನಿಲ್ಲುತ್ತಿದ್ದಂತೆ ತಾಯಿ ಮಗಳಿಬ್ಬರೂ ಕೆಳಗಿನಿಂದ ಕೈಚೀಲವನ್ನು ಎಳೆದು ಸ್ಟೀಲ್ ಡಬ್ಬಿಯನ್ನು ಹೊರತೆಗೆದರು. ಬಾಳೆಎಲೆ ಕೂಡ ತಂದಿದ್ದರು. ನೀರಿನಿಂದ ತುಂಬದ ಗಾಜಿನ ಶೀಸೆ ಹೊರಬಂತು. ಅದರೊಂನೆಗೆ ಎರಡು ಸ್ಟೀಲ್ ಲೋಟ, ಫ್ಲಾಸ್ಕ್ ಕೂಡ. ಶೆಟ್ಟರ ಸಂಸಾರವಂತೂ ಎರಡನೆಯದೋ, ಮೂರನೆಯದೋ ರೌಂಡು ಬೆಳಗಿನ ಉಪಾಹಾರ ಆರಂಭಿಸಿದ್ದರು. ಥತ್ತೇರಿ, ಒಳ್ಳೇ ಕಂಪನಿ ಗಂಟು ಬಿತ್ತು. ಒಬ್ಬರಾದರೂ ಒಂದು ಚೂರು ಕೂಡಾ ಕೊಡೋದಿಲ್ಲಾ. ಆನಂದ ಬೈದಕೊಂಡು ಕೆಳಗಿಳಿದ. ತಮಿಳರಿಬ್ಬರೂ ಎಲ್ಲೋ ಗುಂಪಿನಲ್ಲಿ ಬೆರತು ಹೋಗಿದ್ದರು. ಸ್ಟಾಲ್‌ನ ಹತ್ತಿರ ಆಗಲೇ ತುಂಬಾ ಜನ ಮುತ್ತಿಗೆ ಹಾಕಿದ್ದರು. ಕಷ್ಟಪಟ್ಟು ನುಗ್ಗಿ ನಾಲ್ಕು ಇಡ್ಲಿ, ಎರಡು ವಡೆ ಸಂಪಾದಿಸಿದ. ಖಾರದ ಚಟ್ನಿ, ಬಿಕ್ಷುಕ ಹುಡುಗರ ಕಾಟ, ತಿಂದರೂ ಹೊಟ್ಟೆ ತುಂಬಲಿಲ್ಲ. ಕಾಫಿಯಂತೂ ದೇವರಿಗೇ ಪ್ರಿಯ. ತಾಯಿ–ಮಗಳ ಬಗ್ಗೆ ಆನಂದನಿಗೆ ಅಸೂಯೆಯೆನಿಸಿತು. ನಿಧಾನವಾಗಿ ಪ್ಲಾಟ್‌ಫಾರಂ ಒಂದು ಗಸ್ತು ಹೊಡೆದು ಬರುವ ವೇಳೆಗೆ ಇಂಜನ್ ಶಿಳ್ಳೆ ಹಾಕಿತು. ತನ್ನ ಕಂಪಾರ್ಟ್‌ಮೆಂಟಿನಿಂದ ಸ್ವಲ್ಪ ದೂರ ಹೋಗಿದ್ದ ಸುಮನ ಗಾಬರಿಯಿಂದ ಓಡಿ ಬಂದಳು. ಕೈಯಲ್ಲಿದ್ದ ಖಾಲಿ ಶೀಸೆಯನ್ನು ನೋಡಿ ಆನಂದ ಊಹಿಸಿದ. "ಇಲ್ಲಿ ಕೊಡಿ ನಾನು ತರ್‍ತೀನಿ" ಉತ್ತರಕ್ಕೂ ಕಾಯದೇ ಶೀಶೆಯನ್ನು ಕಿತ್ತುಕೊಂಡು ಓಡಿದ.

"ತುಂಬಾ ಥ್ಯಾಂಕ್ಸ್" (ಹೋಗ್ಲಿ ಇಷ್ಟಾದ್ರೂ ಒಳ್ಳೇ ಬುದ್ದೀ ಇದೆಯಲ್ಲಾ) ಸುಮನಾ ಔಪಚಾರಿಕವಾಗಿ ನುಡಿದಳು.

"ಪರವಾಗಿಲ್ಲ ಹುಡುಗಿ, ದುರಗುಟ್ಟಿಕೊಂಡು ಹೆಣ್ಣು ಹುಲಿ ಹಾಗೆ ನೋಡಿದ್ರೂ ಸ್ವಲ್ಪ ಮ್ಯಾನರ್ಸ್ ಇದೆಯಲ್ಲಾ, ಇನ್ನೂ ಚಿಂತೆಯಿಲ್ಲಾ. "ವೀಕ್ಲಿ" ಕೇಳಿ ತೆಗೆದುಕೊಳ್ಳಬಹುದು. ಆನಂದ ಪುನಃ ತನ್ನ ಜಾಗದಲ್ಲಿ ಕುಳಿತ. ರೈಲು ವೇಗವಾಗಿ ಹೋಗತೊಡಗಿತ್ತು.

"ಸ್ವಲ್ಪ 'ವೀಕ್ಲಿ' ಕೊಡ್ತೀರಾ ?"

ತೊಡೆಯ ಮೇಲಿದ್ದ "ವೀಕ್ಲಿ"ಯನ್ನು ಸುಮನಾ ಎತ್ತಿ ಕೊಟ್ಟಳು. ಬದಲಿಗೆ ಆನಂದ ಇಂಗ್ಲೀಷ್ ಪತ್ರಿಕೆಯನ್ನು ಕೈಗಿತ್ತ. ಇನ್ನು ಊಟದ ಹೊತ್ತಿಗೆ ರೈಲು ನಿಲ್ಲುವವರೆಗೆ ನಿಶ್ಚಿಂತೆಯಿಂದಿರಬಹುದು. ಹುಡುಗಿ ಮುಖದ ಗಂಟಂತೂ ಸ್ವಲ್ಪ ಸಡಿಲವಾಗಿರೋ ಆಗಿದೆ. ಪೂರ್ತಿ ಕಡಿಮೆಯಾಗಿದ್ರೆ ಕಾರ್ಡ್ಸ್ ಬರುತ್ತೆ ಅಂತಾದ್ರೂ ಕೇಳಬಹುದಿತ್ತು. ಜೇಬಿನಲ್ಲಿದ್ದ ಇಸ್ಪೀಟ್ ಪ್ಯಾಕನ್ನು ಆನಂದನ ಬೆರಳು ಸವರಿತು.

"ನೀರು ತಂದುಕೊಟ್ಟು ದೊಡ್ಡ ಉಪಕಾರ ಮಾಡ್ದೆ ತಾನು ಅಂತಾ ತಿಳ್ಕೊಂಡಿದಾನೋ ಏನೋ, ಕೂತಿರೋ ಗತ್ತು ನೋಡಿದ್ರೆ ತಿಳಿಯುತ್ತೆ. ಪ್ರಪಂಚದಲ್ಲಿ ತಾನೇ ಸುಂದರ ಅಂತಾ ತಿಳ್ಕೊಂಡಿರಬೇಕು. ಪತ್ರಿಕೆಯಲ್ಲಿ ನೆಟ್ಟದೃಷ್ಟಿ ಆಗಾಗ ಎದುರು ಕುಳಿತ ವ್ಯಕ್ತಿಯ ಮೇಲೆ ಹರಿಯುವುದನ್ನು ತಪ್ಪಿಸಲು ಸುಮನಾಗೆ ಸಾಧ್ಯವಾಗಲಿಲ್ಲ.

"ಅವಳು ಹೇಗಿರಬಹು ? ಇವಳಾಗೇ ಇರಬಹುದೋ ಏನೋ, ಹೀಗೇನಾದ್ರೂ ಇದ್ರೆ ತಕ್ಷಣ ಒಪ್ಪಿಕೊಂಡು ಬಿಡ್ತೇನೆ. ಅಂದ್ಹಾಗೆ ಪದೇ ಪದೇ ಹಾಗೆ ಅವಳ್ನೇ ನೋಡ್ತಿದ್ದರೆ ತನ್ನನ್ನು ನೋಡಿ ಮೆಚ್ಚಿ ಮರುಳಾಗಿದ್ದಾನೆ ಅಂತಾ ಅಂದ್ಕೋಬಹುದು ಅವಳು. ಆನಂದ ಪುನಃ ವೀಕ್ಲಿ ಕಡೆಗೆ ದೃಷ್ಟಿ ಹರಿಸಿದ.

ರೈಲು ಸ್ಟೇಷನ್‌ನಲ್ಲಿ ನಿಂತಿತು. ಊಟದ ಸಮಯ. ಎಲ್ಲರೂ ಮತ್ತೊಮ್ಮೆ ಚಟುವಟಿಕೆಯಿಂದ ಎದ್ದರು. ಶೆಟ್ಟರು ರೈಲು ನಿಲ್ಲುತ್ತಿದ್ದ ಹಾಗೆಯೇ ಎದ್ದು ಸೀಟಿನ ಕೆಳಗಿನಿಂದ ಮತ್ತೊಂದು ಗಂಟನ್ನು ಹೊರತೆಗೆದರು. ಖಾಲಿಯಾಗಿದ್ದ ತಿರುಪಿನ ತಂಬಿಗೆಯನ್ನು ತೆಗೆದುಕೊಂಡು ನೀರು ತರಲು ಓಡಿದರು. ವಜ್ರದ ಮೂಗುತಿಯ ಅವರ ಮಡದಿ ಗಂಟನ್ನು ಬಿಚ್ಚಿ ಹುಡುಗರಿಗೆಲ್ಲಾ ಹುಳಿಯನ್ನ ಹಂಚಿ ಕೊಟ್ಟಳು.

ಸುಮನಾಗೆ ಈ ಸಾರಿ ಆ ವ್ಯಕ್ತಿಗೆ ಕೊಡದೆ ತಾವಿಬ್ಬರೇ ತಿನ್ನುವುದಕ್ಕೆ ಸ್ವಲ್ಪ ಸಂಕೋಚವೆನ್ನಿಸಿತು. "ನೀವು ಸ್ವಲ್ಪ ನಮ್ಮ ಜೊತೆಗೆ ತೊಗೋಳಿ" ಔಪಚಾರಿಕವಾಗಿ ಹೇಳಲೇಬೇಕಾಯಿತು.

"ಥ್ಯಾಂಕ್ಸ್, ಪರವಾಗಿಲ್ಲ. ನಾನು ಹುಳಿಯನ್ನ-ಮೊಸರನ್ನದ ಪ್ಯಾಕೇಟ್ ಕೊಂಡ್ಕೋತ್ತೇನೆ, ನೀವು ಊಟ ಮಾಡಿ."

ಆನಂದ ಗಾಡಿಯಿಂದಿಳಿದಾಗ ಸುಮನಾಗೆ ನಿರಾತಂಕವಾಗಿ ಊಟ ಮಾಡಲು ಸಾಧ್ಯವಾಯಿತು. "ಏನೋ ನೀರು ತಂದು ಕೊಟ್ಟ ದಾಕ್ಷಿಣ್ಯಕ್ಕೆ ಕಟ್ಟು ಬಿದ್ದು ಕೇಳಿದ್ದಾಗಿತ್ತು. ಅಕಸ್ಮಾತ್ ಅವನೇನಾದ್ರೂ "ಆಗಲಿ ಕೊಡ್ರಿ" ಎಂದು ಕೂತು ಬಿಟ್ಟಿದ್ದರೆ ಸುಮನಾಗೆ ತನ್ನ ಯೋಚನೆಗೆ ತನಗೇ ನಗು ಬಂತು. ತುಟಿಯ ಮೇಲೆ ಮೂಡಿದ ನಗೆಯು ತಾಯಿಗೆ ಕಾಣಿಸಿದಂತೆ ಮುಖವನ್ನು ಕಿಟಕಿಯೆಡೆಗೆ ತಿರುಗಿಸಿದಾಗ ಆನಂದ ಅಲ್ಲೇ ಸ್ವಲ್ಪ ದೂರದಲ್ಲಿ ಕಲ್ಲು ಬೆಂಚಿನ ಮೇಲೆ ಕುಳಿತು ಊಟ ಮಾಡುತ್ತಿದ್ದುದು ಕಣ್ಣಿಗೆ ಬಿತ್ತು.

"ಅವರೂ" ಪಕ್ಕದಿಂದ ನೋಡಿದರೆ ಸ್ವಲ್ಪ ಹೀಗೇ ಕಾಣ್ತಾರೆ." ಸುಮನಾಳ ಮನಸ್ಸು ಸಂಜೆ ತನ್ನ "ಅವರ" ಮನೆಯಲ್ಲಿ ಜರುಗಲಿರುವ ತನ್ನ-ಅವರ ವಿವಾಹ ನಿಶ್ಚಿತಾರ್ಥದ ನೆನಪಿನಿಂದ ಸಿಹಿಯಾಯಿತು. ಕಣ್ಣುಗಳು ಸಂತೋಷದಿಂದ ಮಿನುಗಿದವು. ಕೈ ಅಭ್ಯಾಸ ಬಲದಿಂದ ತುತ್ತನ್ನು ಬಾಯಿನೆಡೆ ಒಯ್ಯುತ್ತಿತ್ತು.

ಊಟ ಮುಗಿದು ಎಲೆಯನ್ನು ಬಿಸಾಡಲೆಂದು ಎದ್ದ ಆನಂದನ ಗಮನ ಕಿಟಕಿ ಎಡೆಗೆ ಹೊರಳಿತು. ಒಂದು ಕ್ಷಣ ದೃಷ್ಟಿ ಕಲೆಯಿತು. ನಾಚಿ ಸುಮನಾ ಕಿಟಕಿಯಿಂದ ಈಚೆಗೆ ಮುಖ ಹೊರಳಿಸಿದಳು.

ಅರೆ, ಈ ಹುಡುಗಿ ಯಾಕೆ ಒಂದೇ ಸಮ ಮುಖ ನೋಡ್ತಾ ಇದ್ದಳು. ನಗ್ತಾ ಇದ್ರೆ ಬೇರೆ, ನಕ್ಕರೆ ಎಷ್ಟು ಚೆನ್ನಾಗಿ ಕಾಣಿಸ್ತಾಳೆ (ಹುಬ್ಬು ಗಂಟು ಹಾಕಿದಾಗ ಕಾಣೋದಕ್ಕಿಂತ) ತಾನು ನೋಡಲು ಹೋಗುತ್ತಿರುವ ಆ ಹುಡುಗಿಯೂ ಹೀಗೆ ಇದ್ದರೆ ಎಷ್ಟು ಚೆನ್ನ. ಈಗ ರೈಲಿನಲ್ಲಿ ಪ್ರಯಾಣಮಾಡಿದಂತೆ ಜೀವನದುದ್ದಕ್ಕೂ ಒಟ್ಟಿಗೆ ಪ್ರಯಾಣ ಮಾಡಬಹುದು. ಸುಂದರ ಜೊತೆಗಾತಿ ಇದ್ದರೆ ಜೀವನ ಪ್ರಯಾಣ ಎಷ್ಟು ಚೆನ್ನಾಗಿರುತ್ತೆ. ಆನಂದನಿಗೆ ಇಗ ಸುಂದರ ಸಹ ಪ್ರಯಾಣಿಕಳು ತನ್ನ ತನ್ನ ಪ್ರವಾಸದ ಅನುಭವದಲ್ಲಿ ಭಾಗಿಯಾದುದರ ಅರಿವಾಯಿತು. ಅದೇ ಹಿತವಾದ ಭಾವನೆಯಿಂದಲೇ ಕಿಟಕಿಯ ಬಳಿಬಂದು "ಶೀಶೆಕೊಡಿ, ನೀರುತಂದು ಕೋಡ್ತೀನಿ" ಎಂದಾಗ ಧ್ವನಿ ಅಪ್ರಯತ್ನವಾಗಿ ಮಧುರವಾಗಿತ್ತು.

"ಥ್ಯಾಂಕ್ಸ್ ಪರವಾಗಿಲ್ಲ ಇನ್ನೂ ಬೇಕಾದಷ್ಟು ಟೈಮಿದೆ. ತರ್‍ತೀನೆ". ಸಾಮಾನ ತಾಯಿಗೆ ಏನೋ ಹೇಳಿ ಗಾಡಿಯಿಂದಿಳಿದಾಗ ಆನಂದ ಅಂದು ಕೊಂಡ—'ಅಬ್ಬಾ, ಹುಡುಗಿ ಜೋರಾಗಿದ್ದಾಳೆ. ನನ್ನ ಬಾಣವನ್ನು ನನಗೇ ತಿರುಗಿಸಿದಲ್ಲಾ.

ಅಲ್ಲೇ ಕಿಟಕಿಯೆದುರು ನಿಂತು ರೈಲು ಹೊರಡುವವರೆಗೆ ಅವಳ ಸೌಂದರ್ಯವನ್ನು ಆಸ್ವಾದಿಸುವ ಮನಸ್ಸಾದರೂ ಆನಂದ ತನ್ನ ಆಸೆಯನ್ನು ಹತ್ತಿಕ್ಕಿ ಪ್ಲೇಟ್‌ಫಾರಂ ತಳಾಯಿಸಲು ಹೊರಟ ಕಬ್ಬಿಣದ ಮೇಲುಸೇತುವೆಯನ್ನು ದಾಟಿ ಆ ಕಡೆಯ ಪ್ಲಾಟ್‌ಫಾರಂಗೆ ಹೊರಟ ರೈಲ್ವೇ ಬುಕ್ ಸ್ಟಾಲ್‌ನಲ್ಲಿದ್ದ ಯಾವುದಾದರೂ ಒಳ್ಳೆ ಪುಸ್ತಕ ಸಿಕ್ಕಿದರೆ ಮದ್ರಾಸ್ ತಲಪುವವರೆಗೆ ಓದಬಹದು.

ಘಂಟೆ ಭಾರಿಸಿದರೂ ಎದುರು ಕುಳಿತ 'ಆ' ವ್ಯಕ್ತಿ ಬರಲಿಲ್ಲ. ಇಂಜಿನ್ ಶಿಳ್ಳೆ ಊದಿದ್ದು ಆಯಿತು. ರೈಲು ನಿಧಾನವಾಗಿ ಸ್ಟೇಶನ್ ಬಿಟ್ಟು ಚಲ್ಲಿಸಲು ಆರಂಭಿಸಿತು.

ಆಯ್ಯೋ, ಎನು ಅವನು ಬರ್‍ಲೇಇಲ್ವಲ್ಲಾ, ಎಲ್ಲಿ ಹೋದ್ನೋ ಎನೋ—ಚಡಪಡಿಕೆಯಿಂದ ಸುಮನಾಳ ಕಣ್ಣುಗಳು ಗುಂಪಿನಲ್ಲಿ ಹುಡುಕಿದವು. ನಾಲ್ಕಾರು ಡಬ್ಬಿಗಳ ಆಚೆಬರುತ್ತಿದ್ದ ಆನಂದ ಓಡಿಬಂದು ತನ್ನ ಕಂಪಾರ್ಟ್‌ಮೆಂಟನ್ನು ಹತ್ತಿದಾಗ ಸುಮನಾಗೆ ಸಮಾಧಾನವಾಯಿತು. ಹೃದಯ ಇನ್ನೂ ಜೋರಾಗಿ ಹೊಡೆದು ಕೊಳ್ಳುತಿತ್ತು. ಆನಂದ ಒಳಬಂದು ತನ್ನ ಸ್ಥಳದಲ್ಲಿ

ಕುಳಿತು ಕರವಸ್ತ್ರದಿಂದ ಹಣೆಯ ಮೇಲಿನ ಬೆವರನ್ನು ಒರೆಸಿ ಹುಡುಗಿಯತ್ತ ನೋಡಿದ. ಅವಳು ಕಿಟಕಿಯಿಂದ ಹೊರಗೆ ಮುಖವಿಟ್ಟು ಬೆವರನ್ನು ಒರೆಸಿ ಆ ಹುಡುಗಿಯತ್ತ ನೋಡಿದ. ಅವಳು ಕಿಟಕಿಯಿಂದ ಹೊರಗೆ ಮುಖವಿಟ್ಟು ಆತಂಕದಿಂದ ಯಾರನ್ನೋ ಹುಡುಕುತ್ತಿದ್ದುದನ್ನು ಅವನು ದೂರದಿಂದಲೇ ಕಂಡಿದ್ದ. 'ತನಗಾಗಿಯೇ ಇರಬಹುದೇ ?' ಆನಂದನ ಹೃದಯ ಮೃದುವಾಯಿತು. ಪುನಃ ದೃಷ್ಟಿ ಕಲೆತಾಗ ಸುಮನಾ ಅವನ ಬಗ್ಗೆ ತಾನು ತೋರಿಸಿದ ಆತಂಕವನ್ನು ಕಂಡುಕೊಂಡಾನೆಂಬ ಭಯದಿಂದ ಕಣ್ಣನ್ನು ತಕ್ಷಣ ಹೊರಳಿಸಿದಳು. ಶೆಟ್ಟರು ಕುಳಿತೇ ಗೊರಕೆ ಹೊಡೆಯತೊಡಗಿದ್ದರು. ಅವರ ಮಡದಿ ಕೈಗೂಸನ್ನು ಮಲಗಿಸಿ ಇನ್ನೊಂದನ್ನು ತೊಡೆಯ ಮೇಲೆ ಹಾಕಿ ನಿದ್ರಿಸುವಂತೆ ಮಾಡಲು ಜೋರಾಗಿ ಬೆನ್ನ ಮೇಲೆ ಏಟು ಹಾಕುತ್ತಿದ್ದಳು. ನಾಗರಾಜ ಆ ಕಡೆ ಕಿಟಕಿಯ ಹತ್ತಿರ ಹೋಗಿ ಹೊರಗಡೆ ನೋಡುತ್ತಾ ನಿಂತಿದ್ದ. ತಮಿಳರು ಸ್ವಲ್ಪ ತೂಕಾಡಿಸುತ್ತಿದ್ದರು. ತಾಯಿಯಂತೂ ರೈಲು ಹೊರಟಾಗಿನಿಂದ ತೂಕಡಿಸುತ್ತಲೇ ಇದ್ದರು.

ಸುಮನ ಯಾವುದೋ ಪುಸ್ತಕ ಕೈ ಚೀಲದಿಂದ ಹೊರತೆಗೆದು ಓದತೊಡಗಿದಳು.

"ಮತ್ತೇನು ಬಿ.ಎ., ಥರ್ಡ್ ಕ್ಲಾಸ್ ಮಾಡಿದ ಹುಡುಗಿ ಓದೋದು, ಯಾವುದೋ ಇಂಗ್ಲಿಷ್ ಕಾದಂಬರಿಯನ್ನು. ಹೆರಾಲ್ಡ್ ರಾಬಿನ್ಸೋ, ಪೆರ್ರಿಮೇಸನ್ನೋ ಇರಬೇಕು" ಉದಾಸೀನದ ದೃಷ್ಟಿಯಿಂದ ಪುಸ್ತಕದ ಶೀರ್ಷಿಕೆಯನ್ನು ಗಮನಿಸಿದಾಗ ಆನಂದನಿಗೆ ಸಖೇದಾಶ್ಚರ್ಯವಾಯಿತು. ತಡೆದುಕೊಳ್ಳಲಾರದೆ ಕೇಳಿಯೇ ಬಿಟ್ಟ "ಕ್ಷಮಿಸಿ, ಈ ಪುಸ್ತಕದಲ್ಲಿ ನಿಮಗೆ ಹೇಗೆ ಆಸಕ್ತಿ ಬಂತು ?"

"ಹೇಗೆ ಅಂದರೆ ! ನಾನು ಓದಿದ special subject ಅದು"

"ಅಂದರೆ ನೀವೂ ಡಾಕ್ಟರರೇ ?"

"ನೀವೂ ಅಂದರೆ ? ನೀವೂನು ಡಾಕ್ಟರರೆ ?"

"ಹೌದು. ಬೆಂಗಳೂರಲ್ಲಿ ನಾವು ಮೂರು ನಾಲ್ಕು ಜನಸೇರಿ ನರ್ಸಿಂಗ್ ಹೋಂ ಇಟ್ಟಿದೀವಿ. ಈಗ 2 ವರ್ಷದ ಹಿಂದೆ ಪೀಡಿಯಾಟ್ರಿಕ್ಸ್ ನಲ್ಲಿ M.D. ಮಾಡಿದೆ. ನೀವು ?"

"ನಾನು ಅಷ್ಟೇ, 2ವರ್ಷದ ಹಿಂದೆ ಗೈನೋಕಾಲೊಜಿಯಲ್ಲಿ M. D. ಮಾಡಿದೆ. ಈಗ ಬೆಂಗಳೂರಿನಲ್ಲೇ ಮನೆಯಲ್ಲಿ ಚಿಕ್ಕದಾಗಿ ನರ್ಸಿಂಗ್ ಹೋಂ ಮಾಡಿಕೊಂಡು ಪ್ರಾಕ್ಟೀಸ್ ಮಾಡ್ತಾ ಇದೀನಿ"

"ಅಂದ ಹಾಗೆ M. B. B. S. ಎಲ್ಲಿ ಮಾಡಿದ್ದು ನೀವು ?" ಆನಂದ ಬೇಕೆಂದೆ ಕೇಳಿದ. ಅವಳೂ M. D. ಮಾಡಿದ್ದರೂ M.B.B.S. ನಲ್ಲಿ ತಾನು ಗಳಿಸಿದ ಬಂಗಾರದ ಪದಕ ಅವಳಿಗೆಲ್ಲಿ ಬರಬೇಕು. ತಾನು ಬಳ್ಳಾರಿ ಕಾಲೇಜ್‌ನಿಂದ II ರ್‍ಯಾಂಕ್ ಬಂದ ವಿಷಯ ಅವಳ ಮುಂದೆ ಹೇಳಲು ಒಳ್ಳೆ ಅವಕಾಶ.

"ನಾನು ಬೆಂಗಳೂರಲ್ಲೇ M.B.B.S. ಮಾಡಿದ್ದು" ಸುಮನಾ ಅವನೇ ಮುಂದೆ ಹೇಳಲಿ, ಆಮೇಲೆ ತಾನು ಹೇಳಿದರಾಯಿತೆಂದು ಸುಮ್ಮನಾದಳು.

"ನಾವು ಓದಿದ ಕೊನೆವರ್ಷ ಒಂದು ಹುಡುಗಿ I Rank ಬಂದು ನೋಡಿ, ಜ್ಞಾಪಕ ಇದೆಯೇ ನಿಮಗೆ ಅವಳು ಹುಡುಗಿ ಅನ್ನೋ ಏಕಮಾತ್ರ ಕಾರಣಕ್ಕೆ ಎಲ್ಲಾ ಪ್ರೊಫೆಸರ್ಸ್ ಜಾಸ್ತಿ–ಜಾಸ್ತಿ ನಂಬರ್ ಕೊಟ್ಟು I Rank ಬರೋಹಾಗೆ ಮಾಡಿದ್ದು. ಎರಡು ನಂಬರ್‌ನಲ್ಲಿ ನನಗೆ I Rank 'ಮಿಸ್', ಆಯಿತು.

ಸುಮನಾಳ ಮುಖ ಕೆಂಪಾಯಿತು. "ಕ್ಷಮಿಸಿ ನೀವು ತಪ್ಪು ತಿಳಿದ್ದಿದೀರಿ. ಹುಡುಗಿಯಾದ್ರೇನು, ಅವ್ಳು ಚೆನ್ನಾಗಿ ಓದಿ I Rank ತಗೋಬಾರ್ದೆ"

ಅವಳ ಕೋಪ ಆನಂದ ಬೆಪ್ಪಾದ. ತಡವರಿಸಿದ,

"ನಿಮಗೆ ಕೋಪ ಬಂದಿದ್ದರೆ ಕ್ಷಮಿಸಿ. ನಿಮಗೆ ಆ ಹುಡುಗಿ ಪರಿಚಯ ಇರೋಹಾಗೆ ಕಾಣತ್ತೆ. ಗೊತ್ತಿಲ್ದೆ ಮನಸ್ಸಿಗೆ ನೋವಾಗೋ ಹಾಗೆ ಮಾಡಿದ್ದರೆ ಕ್ಷಮಿಸ್ಸಿ."

"ಏನೂ ಪರ್‍ವಾಗಿಲ್ಲ. ಆದರೆ ನನ್ನ ಮೇಲೆ ಹಾಗೆ ಇಲ್ಲ–ಸದ ಆರೋಪ ಮಾಡಿದ್ದು ನೋಡಿ ಒಂದು ನಿಮಿಷ ಕೋಪ ಬಂತು ಅಷ್ಟೇ, ನಾವು ಕಷ್ಟಪಟ್ಟು ಏನಾದ್ರೂ ಗಳಿಸಿದರೂ ಪ್ರಪಂಚದ ತಿಳಿಯೋದು ಹಾಗೇ ನೋಡಿ— ಹುಡುಗೀಂತಾ ಮುಖ ನೋಡಿಕೊಂಡು ಕೊಟ್ಟಿದಾರೆ' ಅಂತಾ.

ಆನಂದ ಮತ್ತಷ್ಟು ಬೇಸ್ತಾದ, 'ಛೇ, ಮೊದ್ಲೇ ಕೇಳ್ದೆ ಎಂಥಾ ಕೆಲ್ಸಾ ಮಾಡ್ದೇ' ತಮ್ಮ ವರ್ಷದಲ್ಲೇ I Rank ಗಳಿಸಿದ್ದ, M. D. ಮಾಡಿ ಡಾಕ್ಟರಳಾಗಿರುವ ಹುಡುಗಿ ಬಗ್ಗೆ ಆನಂದನ ಗೌರವ ಇಮ್ಮಡಿಸಿತು.

"ಕ್ಷಮಿಸಿ, ಖಂಡಿತಾ ನಾನು ನಿಮ್ಮ ಮನಸ್ಸು ನೋಯಿಸುವ ರೀತಿ ಹೇಳಲಿಲ್ಲ," ಆನಂದ ಹೃತ್ಪೂರ್ವಕ ವಾಗಿ ಕ್ಷಮೆಯಾಚಿಸಿದ.

"ಫಾರಿನ್‌ಗೆ ಹೋಗೋದಕ್ಕೇನು ಪ್ರಯತ್ನಿಸ ಲಿಲ್ವೇ " ಹೋಗಲಿ ಇಲ್ಲಾದರೂ ತಾನು ಜಯಗಳಿಸ ಬಹುದೆಂಬ ಆಸೆಯಿಂದ ಆನಂದ ಪ್ರಶ್ನಿಸಿದ. ತಾನು ಮುಂದಿನ ಜನವರಿಯಲ್ಲಿ ಇಂಗ್ಲೇಂಡ್‌ಗೆ ಹೋಗಲಿರುವ ವಿಷಯವನ್ನು ಆಗಲೇ ಹೇಳಿ ಬಿಡಲು ಅವನ ನಾಲಿಗೆ ತವ ಕಿಸಿತು.

"ಹೌದು, ಈ ಅಕ್ಟೋಬರ್‌ನಲ್ಲಿ ಅಮೇರಿಕಾಕ್ಕೆ ಹೊರಟಿದೀನಿ." ಸುಮನಾ ಚುಟುಕಾಗಿ ಉತ್ತರಿಸಿದಳು. ಎಲ್ಲಾ ಹೇಳುವುದು ಹೇಗೆ— ಸೆಪ್ಟೆಂಬರ್‌ನಲ್ಲಿ ಮದುವೆ, ಅಕ್ಟೋಬರ್‌ನಲ್ಲಿ ಅಮೇರಿಕಾಕ್ಕೆ ಪ್ರಯಾಣ, ಮುಂದೆ ಜನವರಿಯಲ್ಲಿ ಅವರೂ" ಬಂದು, ತನ್ನನ್ನು ಅಮೇರಿಕಾ ವಲ್ಲಿ ಸೇರುವುದು—ನಾಚಿಕೆಯಿಂದ ಸುಮನಾಳ ಮುಖ ಕೆಂಪಾಯಿತು.

ಆನಂದ ಇಲ್ಲಿಯೂ ಸೋಲನ್ನು ಅನುಭವಿಸಿದ್ದ. ತಾನು ನೋಡಲು ಹೋಗುತ್ತಿರುವ ಹುಡುಗಿ ಕೇವಲ M.A. ತನ್ನ ಉದ್ಯೋಗದವಳೇ ಆಗಿದ್ದರೆ ಎಷ್ಟು ಚೆನ್ನಾ ಗಿರುತ್ತಿತ್ತು. ಆದರೆ ಇದುವರೆಗೆ ನೋಡಿದ್ದ ತನ್ನ ಉದ್ಯೋಗದ ಯಾವ ಹುಡುಗಿಯರೂ ಸರಿ ಹೊಂದಿರ ಲಿಲ್ಲ. ಎಂ. ಎ. ಆದರೇನಾಯಿತು ? ಆ ಹುಡುಗಿ ತನಗೇ ಸೃಷ್ಟಿಯಾಗಿರುವುದಾಗಿ ಮದ್ರಾಸ್‌ನಿಂದ ತನ್ನ ಗೆಳೆಯ ರಮೇಶ್ ಬರೆದಿರಲಿಲ್ಲವೆ ? ಅದಕ್ಕೇ ಅಲ್ಲವೇ ತಾನು ಹೊರಟಿರುವುದು. ಇಂಗ್ಲೇಡ್‌ಗೆ ಹೊರಡುವ ಮುನ್ನ ಮದುವೆಯಾಗಿ ಬಿಡಬೇಕು. ಆದರೂ ಈ ಹುಡುಗಿ ತನಗೇ ಸಿಕ್ಕಿದ್ದರೆ....! ಯೋಚನೆಯನ್ನು ತುಂಡರಿಸಿ ಆನಂದ ನುಡಿದ,

"ನಾನೂ ಈ ಜನವರಿಯಲ್ಲಿ ಇಂಗ್ಲೆಂಡ್‌ಗೆ ಹೊರ ಟಿದೀನಿ."

ಸುಮನಾಳ ಮನಸ್ಸು ಅಂತರ್ಮುಖಿಯಾಯಿತು. "ಅವರು" ಎಲ್ಲಾ ವಿಧದಲ್ಲೂ ತನಗೆ ಅನುರೂಪರಾಗಿದ್ದ ರೇನೋ ಸರಿ, ಆದರೆ ಮೊದಲಿನಿಂದಲೂ ತನಗೆ ಎಷ್ಟು ಆಸೆಯಿತ್ತು, ತನ್ನ ಹಾಗೆಯೇ ಬುದ್ಧಿವಂತರಾದ ಡಾಕ್ಟರರ ಕೈ ಹಿಡಿಯಬೇಕು, ಒಟ್ಟಿಗೆ ದೊಡ್ಡ ನರ್ಸಿಂಗ್ ಹೋಂ ಸ್ಥಾಪಿಸಬೇಕು, ಹೆಸರುವಾಸಿಯಾಗಬೇಕು, ಕೈತುಂಬಾ ಸಂಪಾದಿಸಬೇಕು. ಆದರೆ ಏನು ಮಾಡುವುದು, ಅನು ರೂಪನಾದ ಡಾಕ್ಟರ್‌ನನ್ನು ನೋಡಿ, ನೋಡಿ ಸುಸ್ತಾ ಗಿತ್ತು. ಕೊನೆಗೂ ಇಂಜನಿಯರ್ ಗಂಡನೇ ದೊರಕಿದ್ದ. ತನಗೂ ಇವನಂತಹ ಗಂಡ ದೊರೆತಿದ್ದರೆ ..."

ರೈಲಿನ ವೇಗ ಕಡಿಮೆಯಾಯಿತು. ಕೈಮರ ಬಿದ್ದಿ ರಲಿಲ್ಲವೆಂದು ಇಂಜಿನ್ ಒಂದೇ ಸಮನೆ ಕಿರುಚಿಕೊಳ್ಳು ತ್ತಿತ್ತು.

"ಓ! ಮದರಾಸ್ ಬಂದೂಂತ ಕಾಣುತ್ತೆ." ಇಬ್ಬರೂ ಒಟ್ಟಿಗೆ ಜೋರಾಗಿ ನುಡಿದುದಕ್ಕೆ ನಗು ಬಂದು ಒಬ್ಬರನ್ನೊಬ್ಬರು ನೋಡಿದಾಗ ಪುನಃ ದೃಷ್ಟಿ ಕಲೆಯಿತು.

ಕೈಮರ ಬಿದ್ದಿರಬೇಕು, ರೈಲು ಪುನಃ ಚಲಿಸಲಾ ರಂಭಿಸಿತ್ತು. ಸ್ವಲ್ಪ ಹೊತ್ತಿನಲ್ಲೇ "ಮದ್ರಾಸ್" ಎಂದು ತಮಿಳು, ಇಂಗ್ಲೀಷ್‌ನಲ್ಲಿ ಬರೆದಿದ್ದ ಹಳದಿಯ ಬೋರ್ಡ ನ್ನು ರೈಲು ದಾಟಿತು. ಪ್ಲಾಟ್‌ಫಾರಂನ ಗುಜು–ಗುಜು ಶಬ್ದ ಆಗಲೇ ಕೇಳಿಸತೊಡಗಿತ್ತು. ಗಾರ್ಡ್ ಕೆಂಪು ಬಾವುಟ ಬೀಸುತ್ತಲೇ ಇದ್ದ. ಇಬ್ಬರಿಗೂ ಏನೋ ಹೇಳ ಲಾರದ ಮಧುರವಾದ ಯಾತನೆ, ಏನನ್ನೂ ಬಾಯಿ ಬಿಟ್ಟು ಹೇಳಲಾರದೇ ಒದ್ದಾಡುವಂತಾಗಿತ್ತು.

"ಎಷ್ಟು ಬೇಗ ಮದ್ರಾಸ್ ಬಂತು ?" ಮನಸ್ಸಿ ನಲ್ಲೇ ಅದುಕೊಂಡು ದೃಷ್ಟಿಸಿದಾಗ ಈ ಭಾರಿ ದೃಷ್ಟಿ ಯಲ್ಲಿ ಅಗಲಿಕೆಯ ನೋವು ಬೆರೆತಿತ್ತು.

ರೈಲು ನಿಲ್ದಾಣದಲ್ಲಿ ನಿಲುಗಡೆಗೆ ಬರುತ್ತಿದ್ದ ಹಾಗೆಯೇ ಪೋರ್ಟರ್‌ಗಳು ಒಳಗೆ ನುಗ್ಗಿ ಬಂದು ಸಿಕ್ಕ ಸಿಕ್ಕ ಸಾಮಾನಿಗೆ ಕೈಹಾಕತೊಡಗಿದರು. ಶೆಟ್ಟರು ಪೋರ್ಟರ್ ಒಬ್ಬನೊಂದಿಗೆ ಚೌಕಾಶಿಯಲ್ಲಿ ತೊಡಗಿ ದ್ದರು. ಅವರ ಮಡದಿ-ಮಕ್ಕಳನ್ನು ಒಂದೆಡೆ ಕಲೆ ಹಾಕುವ ಕಾರ್ಯದಲ್ಲಿ ತೊಡಗಿದ್ದಳು.

ನಿಲ್ದಾಣದಲ್ಲಿದ್ದ ಜನರ ಗುಂಪಿನ ಮುಂದೆಯೇ ಇದ್ದ ಗೆಳೆಯ ರಮೇಶನನ್ನು ಗುರುತಿಸುತ್ತಲೇ ಆನಂದ ಹರ್ಷಗೊಂಡ, ಪೋರ್ಟರ್ ಆಗಲೇ ಸೂಟ್‌ಕೇಸ್ ಹಿಡಿದು ಇಳಿಯತೊಡಗಿದ್ದ.

"ಸುಮನ್" ತಮ್ಮ ಸಾಮಾನನ್ನು ಮೇಲಿನ ಜಾಗದಿಂದ ಇಳಿಸಿಡುವ ಕಾರ್ಯದಲ್ಲಿ ತೊಡಗಿದ್ದ ಸುಮನಾಗೆ ಧ್ವನಿ ಕಿವಿಗೆ ಬಿದ್ದ ಕೂಡಲೇ ರೋಮಾಂಚನವಾಯಿತು. ತಿರುಗಿ ನೋಡಿದಾಗ ತನ್ನ "ಆವರು" ಕಿಟಕಿಯಲ್ಲಿ ತನ್ನತ್ತ ನೋಡುತ್ತಿದುದು ಕಣ್ಣಿಗೆ ಬಿದ್ದು ಸುತ್ತಲ ಪ್ರಪಂಚವೇ ಮರೆತು ಹೋದಂತಾಯಿತು.

ತಾಯಿಗಂತೂ ತಮ್ಮ ಭಾವೀ ಅಳಿಯ ತಮ್ಮನ್ನು ಕರೆದೊಯ್ಯಲು ಸ್ಟೇಷನ್ನಿಗೇ ಬಂದುದನ್ನು ನೋಡಿ ಅತ್ಯಂತ ಸಂತೋಷವಾಗಿತ್ತು.

ಟಿಕೇಟನ್ನು ಕಲೆಕ್ಟರನ ಕೈಗಿತ್ತು, Central ನಿಂದ ಹೊರ ಬಂದಾಗ ಇನ್ನೂ ಮಧ್ಯಾಹ್ನದ ಬಿಸಿಲು ಚುರುಕಾಗಿತ್ತು. ದೂರದಲ್ಲಿ ಆನಂದ ತನ್ನ ಗೆಳೆಯನ ಸ್ಕೂಟರ್ ಹಿಂದುಗಡೆ ಕುಳಿತು ಹೊರಟಿದ್ದುದು ಆ ಬಿಸಿಲಿನ ಝಳದಲ್ಲಿ ಸುಮನಾಳ ಕಣ್ಣಿಗೆ ಬೀಳಲಿಲ್ಲ, ಬಿದ್ದರೂ ಮನಸ್ಸು ಗಮನಿಸುವಂತಿರಲಿಲ್ಲ.

---

ನನಗೇಕೋ ನನ್ನ ಅನಿಸಿಕೆಗಳು ವಿಚಿತ್ರನೆನಿಸ ತೊಡಗಿದೆ. ಯಾವುದೋ ವಿಚಿತ್ರ ಅಪರಿಚಿತ ಪ್ರಪಂಚದಲ್ಲಿ ಕಾಲಿಟ್ಟ ಅನುಭವ. ಬೇಕು-ಬೇಡಗಳ ಹೊಯ್ದಾಟ. ಅರಿಯದ ಭಾವಗಳ ವಿಚಿತ್ರ ಬಡಿತ. ಎಲ್ಲವೂ ವಿಚಿತ್ರವಿಲ್ಲ. ಆದಿ–ಅಂತ್ಯ, ಹುಟ್ಟು–ಸಾವು ಇವುಗಳ ಬಗ್ಗೆ ಸಗ್ಗ ಮಕ್ಕಳಂತೆ ಪ್ರಶ್ನಿಸಿಕೊಂಡು ವಿಶ್ಲೇಷಿಸ ಹೊರಟು ಸೋತು ಸೊರಗಿ ಕೊನೆಗೆ ಬುದ್ಧಿ ಶೂನ್ಯವಾಯ್ತೆನ್ನುವ ಹೆದರಿಕೆ. ಬಯಕೆ, ಆಸೆ–ನಿರಾಸೆ, ಹಸಿವು–ನೀರಡಿಕೆಗಳನ್ನು ನಿರ್ಮೂಲ ಮಾಡಿದರೆ ಈ ಜಗತ್ತಿನಲ್ಲಿ ಯಾವುದೇ ಕಷ್ಟವಿಲ್ಲದೇ ಬದುಕು ಬಹುದೇನೂ--ಮೂಲೆಗ್ಯಾರೂ ಇಲ್ಲವೆಂದಲ್ಲ, ತಂದೆ-ತಾಯಿ-ತಂಗಿ ಎಲ್ಲರೂ ಇದ್ದಾರೆ. ಆದರೂ ಬಾಳು ಬಲಿದೆನಿಸುತ್ತದೆ. ನನ್ನ ಸ್ವಭಾವಕ್ಕನುಗುಣವಾಗಿ ನನಗೆ ಸ್ನೇಹಿತರೂ ಕಡಿಮೆ. ಯಾಕೋ 'ಸ್ನೇಹ' ನನ್ನ ಬಾಳಿದಲ್ಲಿ ಸುಳಿಯಲೇ ಇಲ್ಲಾ ಯಾರೊಬ್ಬನೂ ನನ್ನ ಹೃದಯದ ಹತ್ತಿರ ಬರಲೇ ಇಲ್ಲಾ.

ಸುಬ್ಬು, ಅನಂತ, ಆನಂದ, ಎಲ್ಲರೂ ಕೇವಲ ಜೇಬಿಗೆ ಸಂಬಂದ ಪಟ್ಟವರು. ಹೋಟೇಲಿಗೆ ಹೋಗುವ ತನಕ (ಕಾಲೇಜಿನಲ್ಲಿ ಇಂಟ್ರವಲ್ಲಿನಲ್ಲಿ ಮಾತ್ರ) ನಮ್ಮ ಗೆಳೆತನ.

—ಆರ್, ವಸುಂಧರಾ



ಮೂಲೆಯಲ್ಲಿ ಹೊರಟ ಧ್ವನಿ ತರಂಗಗಳಿಗೆ ಕಿವುಡಾಗಬೇಕು. ಆದರೆ ಇದೆಲ್ಲಾ ನನ್ನ ಪಾಲಿಗೆ ಅಸಾಧ್ಯ. (ಬೇರೆಯುವರ ಬಗ್ಗೆ ನಾನು ಹೇಳಲಾರೆ) ಅದಕ್ಕಾಗಿಯೇ ನನಗೇ ನನ್ನ ಅನುಭವಗಳು ವಿಚಿತ್ರವಾಗಿವೆ.

ಮನೆಯಿಂದ–ಕಾಲೇಜು, ಕಾಲೇಜಿನಿಂದ ಮನೆ, ನಡುವೆ ಬದುಕಿಗೆ Stop ಇಲ್ಲವೇ ಇಲ್ಲ. ಮನೆಯಲ್ಲಿ ಶಾಂತಿಯಿಲ್ಲ. ಕಾಲೇಜಿನಲ್ಲಿ ಮನಸ್ಸಿಲ್ಲದಿದ್ದರೂ ಅಲ್ಲಿಯೇ ಕೊಳೆಯು ಬೇಕಾದದ್ದು ಧರ್ಮ-ಕರ್ಮ, ಹೀಗೆಂದು ನನಬೆಳೆದು ನಿಂತ ತಂಗಿಯನ್ನು ನೋಡುತ್ತೇನೆ. ನೋಡಿದಾಗ ಎದೆ ಭಾರವಾಗುತ್ತದೆ. ಯಾವ ಪುರುಷನ ಪಾಲೂ ಈ ಕುಸುಮ ಎಂದೆನಿಸುತ್ತದೆ.

ಕುಸುಮ ಬೆಳೆದಂತೆ ತಂದೆಯ ರಿಟಾಯರ್‌ಮೆಂಟ್ ನನ್ನ ಕೆಲಸಕ್ಕೆ ಬಡ್ತಿ – ಜವಾಬ್ದಾರಿಯ ಭಾರ ಹೆಗಲು ಹೊತ್ತು ಬಾಗಿದೆ ಎನಿಸಿತೊಡಗಿದೆ. ಬಸ್‌ಸ್ಟಾಪ್‌ನಲ್ಲಿ ನಿಂತು ಏನೇನೋ ಯೋಚಿಸುತ್ತೇನೆ. ಬಸ್ಸಿಗಾಗಿ ನಿಂತ ಹುಡುಗಿಯರ ಕಿಲ ಕಿಲ ಧ್ವನಿ, ಆ ವಿಚಿತ್ರ ಡ್ರೆಸ್‌ಗೆ

ಕನ್ನು ನೋಡಿ ನಾವೆತ್ತ ಸಾಗಿದ್ದೇವೆ ಎಂಬ ಯೋಚನೆ ಎತ್ತೆತ್ತಲೂ ಸಾಗುತ್ತದೆ. ಬಸು ಬರುತ್ತದೆ' ಆ Rush ನಲ್ಲೇ ನುಗ್ಗಿ ಶರಟಿನ ಇಸ್ತ್ರಿ ಕೆಡದಂತೆ ಮೆಲ್ಲನೆ ಹತ್ತಲು ಪ್ರಯತ್ನ ಮಾಡುತ್ತೇನೆ.

'ಎಮುಂಡಿ ಕಾಲೇಜಿಕಿ ವೆಳ್ತುನ್ನಾರಾ ?'

(ಎನ್ರೀ ಕಾಲೇಜಿಗೆ ಹೋಗುತ್ತಿದ್ದೀರಾ ?)

ಕರ್ಕಶ ದನಿ ಬಂದತ್ತ ತಿರುಗಿ ನೋಡುತ್ತೇನೆ ಅದೇ ನಮ್ಮ ಮನೆ ಮಾಲಿಕನ ಮಗಳು ಪದ್ಮಾ. ಪಕ್ಕಾ ಆಂಧ್ರ ಪಿಲ್ಲಾ (ಹುಡುಗಿ) ತನ್ನ ಬಿಳಿಯ ಹಲ್ಲುಗಳನ್ನು ಪ್ರದರ್ಶಿಸುತ್ತಾ ಬಸ್ಸಿನಲ್ಲೇ ಎಲ್ಲರ ಮುಂದೆ ಕೇಳಿದಾಗ ನಾನು ಬೆವರುತ್ತೇನೆ. 'ಹ....ಹ' ಎಂದಷ್ಟೇ ಹೇಳಿ ಹೊರಗೆ ನೋಟವನ್ನು ತಿರುಗಿಸುತ್ತೇನೆ. ಇದೆಲ್ಲಿ ಪ್ರಾರಬ್ಧವಪ್ಪಾ ವೆಂದೆನಿಸುತ್ತದೆ. ಅವಳೇಕೆ ಈ ಬಸ್ಸಿನಲ್ಲಿ ಬಂದಳಪ್ಪಾ ಎಂದು ಭಯವಾಗುತ್ತದೆ. ಈ ವಕ್ರಮೂರ್ತಿಯವಳಿಂದ ಇನ್ನೇನು ಕಾದಿದೆಯೋ ಎಂದು ಯೋಚಿಸುವಾಗಲೇ ನಮ್ಮ Arts College Stop ಬಂದು ನಾನು ಇಳಿದು ಹಿಂತಿರುಗಿದಾಗ, ಆ ಪದ್ಮಾ ಸಹ ಇಳಿದು ನನ್ನ ಬಳಿ ಧಾವಿಸುವುದು ಕಂಡು ಎದೆ ಝಲ್ಲೆಂದೆನಿಸುವುದು.

---

"Good morning Dr. Saheb" ಎಂದು ಕಿಲಕಿಲನೆ ನಕ್ಕ ಅವಳ ಕೆನ್ನೆಗೆ ನಾಲ್ಕು ಬಿಗಿಯಬೇಕೆನಿಸುತ್ತೆ. ಅವಳು ನನ್ನ ಶತ್ರುವಲ್ಲ, ನನ್ನ ಸಂಬಂಧಿಕಳಲ್ಲ. ಅವ ಕಂಡಾಗ ಮೈ ಎಲ್ಲಾ ಬೆಂಕಿಯಾಗುತ್ತೆ.

---

'ಎಮುಂಡಿ ಮೀ ದಗ್ಗರ ಕೊಂಚ ಪನಿವುಂದಂಡಿ'

(ಎನ್ರೀ ನಿಮ್ಮ ಹತ್ತಿರ ಸ್ವಲ್ಪ ಕೆಲಸವಿದೆ)

ಎಂದಾಗ ಪ್ಸ್ಸಾ ...ಪ್ಸ್ಸಾ ಎಂದು ತೊದಲಿ ಮುಖ ವರೆಸಿಕೊಂಡು

"ಏಮಂಡಿ ?" (ಏನ್ರೀ ?)

ಅಂದಾಗ ಆಗ ಇನ್ನೂ ನನ್ನ ಹತ್ತಿರ ಸರಿದಾಗ ನನ್ನ ಅನುಭವಗಳು ವಿಚಿತ್ರ ಪ್ರಪಂಚದೆಡೆಗೆ ಸರಿದಂತೆ ಅನಿಸಿತು.

"ಏಮಿಲೇದು ಆ examination branchಲೋ"

(ಏನಿಲ್ಲಾ ಆ examination branchನಲ್ಲಿ)

ಏನೇನೋ ಹೇಳುತ್ತಿತ್ತು ಆ ಕುಳ್ಳಿ ಹುಡುಗಿ. ಅವಳನ್ನೇ ದಿಟ್ಟಿಸಿ ನೋಡಬೇಕೆಂದು ಆ ಕ್ಷಣದಲ್ಲಿ ಅನಿಸಿದರೂ, ಥೂ ಇವಳಾ, ಇವಳಲ್ಲೇನು ನನಗೆ ಆಕರ್ಷಣೆ ಎಂದೆನಿಸಿ ತಲೆ ಅಲ್ಲಾಡಿಸುತ್ತಲೇ ಇದ್ದೆ.

"ಮೀಕು ಅಕ್ಕುನವಾಳ್ಳು ತೆಲಿಸಾ

(ನಿಮಗೆ ಅಲ್ಲಿ ಅವರು ಗೊತ್ತಾ....)

ಎಂದು ಮಾತು ಮುಗಿಸಿದಾಗ ತಬ್ಬಿಬ್ಬಾದೆ. ಯಾರು ? ಏನು ? ಯಾವ ಕೆಲಸದ ಬಗ್ಗೆ ಇವಳು ಹೇಳಿದುದು....ಒಂದು ನಿಮಿಷ ಸುಮ್ಮನಿದ್ದೆ. ಅನಂತರ ...

"ಲೇದಂಡಿ....ನಾಕು ಇಪ್ಪುಡು ಕ್ಲಾಸುನ್ನದಿ"

(ಇಲ್ಲಾರಿ... ನನಗೆ ಈಗ ಕ್ಲಾಸಿದೆ)

ಎಂದಾಗ, ಎದೆಯುಬ್ಬಿಸಿ, ಸೆರಗು ಹಾರಿಸಿ, ವಕ್ರನಗೆ ಬೀರಿ ಆ ಹುಡುಗಿ ಅತ್ತ ಸರಿದ ಮೇಲೆ ನಾನು ಮತ್ತೆ ಮೆಲ್ಲನೆ ನಡೆದು Staff-room ನಲ್ಲಿ ಕಾಲಿಟ್ಟಾಗ ಆ ಫೆಮಿನಾಳ ಸ್ನೈಯ ತಂಪು ಘಮ್ಮೆಂದು ಮೂಗಿಗೆ ಬಡಿದು ಜೀವನ ತತ್ವವನ್ನು ವಿಶ್ಲೇಷಿಸ ಹೊರಟ ಮನವು ವಿಲವಿಲನೆ ಒದ್ದಾಡಿತು. ವಾರಗಟ್ಟಲೆ ಸ್ನಾನ ಮಾಡದೆ ಮೈ ತುಂಬಾ ಸೆಂಟು ಬಳಿದಿರುವ ಇವಳನ್ನು ಎತ್ತಿ ಆಚೆಗೆ ಒಗಿಯಬೇಕು.

"Good morning Dr. Saheb" ಎಂದು ಕಿಲಕಿಲನೆ ನಕ್ಕ ಅವಳ ಕೆನ್ನೆಗೆ ಯೊಕೋ ನಾಲ್ಕು ಬಿಗಿಯಬೇಕೆನಿಸಿತು. ಅವಳು ನನ್ನ ಶತ್ರುವಲ್ಲಿ ನನ್ನ ಸಂಬಂಧಿಗಳಲ್ಲ ಕೇವಲ ನನ್ನೊಡನೆ ಕೆಲಸ ಮಾಡುವ ಹೆಂಗ್ಸೆಂದ ಮಾತ್ರಕ್ಕೆ ನಾನೇಕೆ ಅವಳನ್ನ ಕಂಡಾಗ ಮಾತ್ರ ಮೈಯಲ್ಲಾ ಬೆಂಕಿಯಾಗುತ್ತದೆ.

'ಆಪಕೊ ಕ್ಲಾಸ್ ಹೈನಾ ಅಬ್ ?'

(ನಿಮಗೆ ಕ್ಲಾಸಿದೆ ಅಲ್ಲವೇ ಈಗ ?) ಎಂದು ಹೇಳುತ್ತಾಳೆ ಫೆಮಿನಾ. ಕ್ಲಾಸಿಗಾಗಲ್ಲ ಸದ್ಯತಿ ನಿನ್ನೊಡನೆ ಚಕ್ಕಂದ ವಾಡಲು ಕಾಲೇಜಿಗೆ ಬಂದಿದ್ದೇನೆಯೇ ಎಂದು ಕೇಳಬೇಕೆನಿಸುತ್ತದೆ. ಕೇಳಲಾರದೆ—

'ಜೀಹಾಂ, ಆಪಕೊ ಅಬ್ ನಹೀ ಹೈ ಶಾಯದ'

(ಹೌದು, ನಿಮಗೆ ಈಗ ಕ್ಲಾಸು ಇರಲಿಕ್ಕಿಲ್ಲ.)

ಎಂದು ಮರುತ್ತರ ನೀಡಿ ಕ್ಲಾಸಿಗೆ ಹೋಗಲು ಅನುವಾಗುತ್ತೇನೆ.

"ಆಜ್ ಮೈತೋ ಕ್ಲಾಸ ನಹೀ ಶೀತಿ-ಮುಝೆ ಶಾಪಿಂಗ್ ಕೇ ಲಿಯೇ ಜಾನೇಕಾ ಹೈ.."

(ನಾಸಿವತು ಕ್ಲಾಸು ತೆಗೆದುಕೊಳ್ಳುವುದಿಲ್ಲ- ನನಗೆ ಶಾಪಿಂಗ್ ಹೋಗಬೇಕಾಗಿದೆ) ಎಂದು ಒಂದು ವಿಧವಾಗಿ ನಕ್ಕು ವ್ಯಯಲ್ಲಾಡಿಸುತ್ತಾ ಹೊರಗೆ ಹೊರಟ ಅಳಳನ್ನು Staff room ನಲ್ಲೇ ಕೊಡಿ ಹಾಕಬೇಕೆನಿಸು ತ್ತದೆ....

ಕ್ಲಾಸಿಗೆ ಹೋದಾಗ ಮನಸ್ಸು ವಿಚಿತ್ರ ವಿಚಿತ್ರ ವಾಗಿ ವರ್ತಿಸುತ್ತದೆ. ಪಾಠದ ಕಡೆಗೆ Coneentracte ಮಾಡೋಕೆ ಆಗಲ್ಲ ಹಾಳಾದ್ದು. ಸಾಹಿತ್ಯಾಭ್ಯಾಸಿ ಗಳಾದ ನನ್ನ Students-ನೆಲ್ಲಾ ಪ್ಲಾಟಫಾರಂ ಮೇಲೆ ನಿಂತು ನೋಡುತ್ತೇನೆ. ನನ್ನ ದೃಷ್ಟಿಗೆ ಮೊದಲು ಬಲಿ ಯಾದವಳು ಶೀತಲ....

(ಸೀತಾ....ಸೀತು....ಶೀತಲ ಆಗಿದ್ದಾಳೆ ಕಾಲೇಜಿ ನಲ್ಲಿ) ಮೊದಲ ಬೆಂಚಿನಲ್ಲೇ ಕೊತು ಹುಬ್ಬು ಹಾರಿಸುತ್ತಾ ನನ್ನೆಡೆಗೆ ನೋಡುತ್ತಾ ಪಕ್ಕದ ಹುಡುಗಿಯ ಕಿವಿಯಲ್ಲಿ ಏನೋ ಹೇಳಿ ಕಿಸಕ್ಕನೆ ನಗುತ್ತಾಳೆ.

ನನ್ನ ಕೈಯಲ್ಲಿರುವ 'ಯಶೋಧರ ಭಾರಿ ಚರತ್ರೆ' ವಾಗಿ ಹೇಳಬೇಕಾದುದನ್ನು ಹೇಳಲು ಉಗುಳು ನುಂಗಿ ಪ್ರಾರಂಭಿಸುತ್ತೇನೆ. "ಕವಿಚಕ್ರವರ್ತಿ ಜನ್ನ ರಚಿಸಿದ ಅಮೂಲ್ಯ ಕೃತಿ ರತ್ನವಾದ ಈ ಯಶೋಧರ ಚರಿತ್ರೆ ಯನ್ನು ನಾವೀಗ ಅಭ್ಯಾಸ ಮಾಡಬೇಕಾಗಿದೆ .. ಪ್ರಾರಂಭ ವೇಕೋ ಸಪ್ಪೆ ಯಾದಂತೆ ಅನಿಸುತ್ತದೆ. ಆದರೂ ಶೀತಲಳ ಮುಖ ನೋಡುತ್ತಾ ಮುಂದುವರೆಯುತ್ತೇನೆ.

ಅಮೃತ ಮತಿಯ ಬಗ್ಗೆ ಹೇಳುವಾಗ ಹೃದಯ ಕಠಿಣವಾಗುತ್ತದೆ. ಮುಂದೆ ಕುಳಿತವರು ಮುಖ ಸೊಟ್ಟಗೆ ಮಾಡುತ್ತಾರೆ.

'ಪೊಲ್ಲಮೆಯೆ ಲೇಸು ನಲ್ಲರ ವೈಯೊಳ್ ಎನ್ನು ವಂತೆ ಅಷ್ಟಾವಂತ ನನ್ನು ಸೇರಿದ ಈ ಅಮೃತ ಮತಿಯ ತುತ್ತಿಗೆ ಹಿಚುಕಿ ಹಾಕ ಬೇಕೆನಿಸುವುದು ನನ್ನಂಥವನಿಗೆ ವ್ಯರ್ಥ ವ್ಯಥೆ ಈಪಾತ್ರದ ಬೆನ್ನಟ್ಟದರೆ ಕಲ್ಪನೆಯ ವೇಗ ಮುಗಿಲನ್ನು ಮುಟ್ಟಿದರೂ ಕೈಗೆ ಸಿಕ್ಕದು.

ಯಶೋಧರನ ಬಗ್ಗೆ ಅನುಕಂಪ ಮಾಡಿದರೂ ಎಂಥ ಹೇಡಿ ಎಂದು ಬೇಸರ. ಹುಡುಗರಿಗೂ ಬೇಸರ ಈ ಪಾಠ ಎಂದೆನಿಸಿದಾಗ ಕ್ಲಾಸುಬಿಟ್ಟು ಮತ್ತೆ Staff room ನತ್ತ ತೆರಳುತ್ತೇನೆ. ನನ್ನ ಹಿಂದೆಯೇ ಶೀತಲ ಬರುತ್ತಾಳೆ. "ಸಾರ್, ನನ್ನದೊಂದು ಪ್ರಶ್ನೆ" ಎನ್ನು ತ್ತಾಳೆ. ಮತ್ತೇನು ಬಂತಪ್ಪಾ ಎಂದೆನಿಸಿ ಕುರ್ಚಿ ಮೇಲೆ ಕುಳಿತು 'ಕೇಳಿ' ಎಂದು ಮೆಲ್ಲನೆ ನುಡಿಯುತ್ತೇನೆ.

"ಅಲ್ಲಾ ಸಾರ್, ಅಮೃತ ಮತಿಯನ್ನು ಕವಿ ಇಷ್ಟೊಂದು ಕೀಳಾಗಿ ಸೃಷ್ಟಿಸಿದ್ದಾನಲ್ಲಾ, ಯಶೋಧರ ನನ್ನು ಮೇಲೆತ್ತಲು ಅವನಷ್ಟೇ ಸತ್ಕುಲ ಸಂಜಾತೆಯಾದ ಅವಳನ್ನು ಪಾತಕಿಯನ್ನಾಗಿ ಮಾಡಿ ಪಾತಾಳಕ್ಕೆ ಅಟ್ಟಿ ಆ ಪಾತ್ರಕ್ಕೆ ಅನ್ಯಾಯ ಮಾಡಿದದು ಸರಿಯೇ ?...."

ಅವಳ ಹುಬ್ಬುಗಳ ಹಿಗ್ಗುವಿಕೆ ಸಂಕುಚಿತ ಗೊಳಿಸು ವಿಕೆ-ಯನ್ನೇ ದಿಟ್ಟಿಸುತ್ತೇನೆ. ಅರೆ! ಹೌದಲ್ಲ ಈ ಬಗ್ಗೆ ನಾನೆಂದೂ ಯೋಜಿಸಲೇ ಇಲ್ಲಾ. ಯಾವುನೋ ಕವಿಯೊಬ್ಬನ ಕಲ್ಪನೆಯ ಪಾತ್ರವನ್ನು ನಾನೇಕೆ ಅಷ್ಟೊಂದು ದ್ವೇಷಿಸುತ್ತಿದ್ದೆನೆಯೋ.... ಉತ್ತರಕ್ಕಾಗಿ ಕಾಯುತ್ತಿದ್ದಳು ಶೀತಲ.

"ಹೌದು, ನಿಮ್ಮ ಅಭಿಪ್ರಾಯ ಸರಿಯಾಗಿದೆ. ಕವಿ ಬರೆದಿದ್ದಾನೆ ಸಂಪೂರ್ಣ ಹಕ್ಕಿನಿಂದ, ಹಿಂದಿನಿಂದ ಪಂಡಿ ತರು ಸ್ವೀಕರಿಸಿದ್ದಾರೆ. ತಮ್ಮಭಿಪ್ರಾಯಗಳನ್ನು ನಿಮ್ಮ ಹಾಗೇ ವ್ಯಕ್ತಗೊಳಿಸಿದ್ದಾರೆ...."

ಮುಂದೆ ಹೇಳುವುದನ್ನು ಬಿಟ್ಟು ಮೇಜಿನ ಮೇಲಿನ ಅವಳ ಬೆರಳಾಟವನ್ನು ನೋಡಿದಾಗ, ಕೆಂಪೇ ರಿದ ಮುಖದಿಂದ ಶೀತಲ "ಸರಿ, ಸಾರ್ ಹೋಗ್ತೇನೆ" ಎಂದು ಹೊರಡುತ್ತಾಳೆ.

ಸಿಗರೇಟು ಸೇದಬೇಕೆನಿಸಿ ತುಟಿಗಳೆರಡರ ನಡುವೆ ಸಿಗರೇಟನ್ನು ಸಿಕ್ಕಿಸಿಕೊಂಡು ಕಡ್ಡಿಗಾಗಿ ಜೇಬನ್ನು ತಡ ಡಿದಾಗ ಕಡ್ಡಿ ಪೆಟ್ಟಿಗೆ ಸಿಗದ ಸಿಟ್ಟಿನಲ್ಲಿ ಅದನ್ನು ದೂರ ಎಸೆಯುತ್ತೇನೆ. ಈ ಹೆಣ್ಣುಗಳೂ ಅಷ್ಟೇ, ಮನಸ್ಸಿನಲ್ಲಿ ಬೆಂಕಿಯನ್ನು ಹಿತ್ತಿಸಿ ದೂರ ಸರಿಯುತ್ತವೆ ಮೂದೇವಿ ಗಳು ಎಂದು ಮನಸ್ಸೀ ಬೈದುಕೊಳ್ಳುತ್ತೇನೆ. ನಾನೇಕೆ ಸ್ತ್ರೀ ದ್ವೇಷಿ ಯಾಗುತ್ತಿದ್ದೇನೆಂದೆನಿಸುತ್ತದೆ. ಒಳಗಿನ ಪ್ರಜೆ ಎಚ್ಚತ್ತು ನೀನು ಸ್ತ್ರೀ ದ್ವೇಷಿಯಲ್ಲ ಎನ್ನುವು

ದೇನೋ ಎಂದು ಗಂಭೀರವಾಗಿ, ಆಳವಾಗಿ, ಯೋಚಿಸುತ್ತೇನೆ. ಹುಟ್ಟು–ಸಾವಿನ ನಡುವಿನ ಬದುಕು ಎಷ್ಟು ವಿಚಿತ್ರ. ಎಲ್ಲರೂ ಬೇರೆ ಬೇರೆ ಅನುಭವಗಳಲ್ಲಿ ಕರಗಿ ಅಭಿವ್ಯಕ್ತಗೊಳಿಸುವಲ್ಲಿ ವಿಚಿತ್ರವಾಗಿ ವರ್ತಿಸುತ್ತಾರೆ. ಮತ್ತೆ ಏಕೋ ಈ ಅನಿಸಿಕೆಯು ಆಳದಲ್ಲಿ ಇಳಿಯತೊಡಗಿದೆ ಎಂದು ಜೋರಾಗಿ ತಲೆ ಅಲ್ಲಾಡಿಸುತ್ತೇನೆ. ಯೋಚನೆಗಳನ್ನು ಓಡಿಸುವಂತೆ, ಆದರೆ ಅವು ನನ್ನನ್ನು ಬಿಟ್ಟರಲ್ಲವೇ !

ಮತ್ತೆ ಕ್ಲಾಸು....ಮತ್ತೆ ಪಾಠ.... ಮತ್ತೆ....ಮತ್ತೆ ಅದೇ ಹೇಳುವುದು, ಹಾಡಿದ್ದೇ ಹಾಡುವುದು. ಮುಖಗಳನ್ನು ವಕ್ರ ವಕ್ರವಾಗಿ ಮಾಡುವ ವಿದ್ಯಾರ್ಥಿಗಳು.... ಅವರ ಮುಂದೆ ಮಾಡೆಲ್‌ಗೆ ನಿಂತಂತೆ ನಾನು.. ಏನೇನೊ ಹೇಳುವೆ.... ಪಾಪ ಕೇಳುವವರು ಗಂಭೀರವಾಗಿ ಸಹನೆಯಿಂದ ಕೇಳ್ತಾರೆ. ಒಲ್ಲದವರು ಬಾಯಿ ಬಿಡಲಾಗದೆ ಒದ್ದಾಡುವುದೊಂದು ಮೋಜು ನನಗೆ. ಕ್ಲಾಸಾದ ಮೇಲೆ ಕ್ಲಾಸು ಮುಗಿದು ಇಂಟರವೆಲ್ ಆದಾಗ ಮನಸ್ಸು ಹಗರುವಾಗಿ, ಅಬ್ಬಾ ಅರ್ಧದಿನ ಕಳೆದ್ರಾಯ್ತು ಎಂದು ಬಲು ಸಂತೋಷವಾಗಿ ಕಾಫಿ ಕುಡಿಯಲು ಹೊರಡುತ್ತೇನೆ.

ಆನಂದ, ಅನಂತ, ದಾರಿಯಲ್ಲಿ ಅದೂ ಇದೂ ಮಾತಾಡುತ್ತಾ ಕ್ಯಾಂಟೆನ್ನಿಗೆ ನನ್ನನ್ನು ಕರೆತಂದು ಕಾಫಿಗೆ ಆರ್ಡರು ಮಾಡ್ತಾರೆ ತಫೇರಿ, ಅವರ ಮಾತೆಲ್ಲಾ ಫೇಮಿನಾ, ಶೀತಲ, ಹುಡುಗೀರ ಸುತ್ತ ತಿರುಗುತ್ತಲೇ ಇರುತ್ತದೆ.

"ನೀನು ತುಂಬಾ ಲಕ್ಕಿ ತಗೋಪ್ಪಾ...." ಎಂದು ನನ್ನ ಬೆನ್ನನ್ನು ಅನಂತ ಚಪ್ಪರಿಸಿ ನುಡಿದ್ದಾಗ 'ಸಾಲಾ ಮಸಕ ಚಲಾತಾ' ಎಂದು ಜೋರಾಗಿ ಕೂಗಬೇಕೆನಿಸುತ್ತದೆ.

"ಫಮಿನಾ ನಿನ್ನ ಬಹಳ Like ಮಾಡ್ತಳಂತಲ್ಲ" ಎಂದು ಕಿವಿಯಲ್ಲಿ ಮೆಲ್ಲನೆ ಉಸುರಿದಾಗ ಫೆಮಿನಾಳ ಕೆಂಪು ಕೋತಿಯ ಮುಖ ನೆನಪಾಗಿ 'ಥೂ' ಎನ್ನುತ್ತೇನೆ. ಬಿಲ್ಲು ಯಥಾ ಪ್ರಕಾರ ನನ್ನ ಕೈಗೇ ಬರುತ್ತದೆ. ಬಿಲ್ಲು ತೆತ್ತು ಹೊರಗೆ ಬಂದು ಬೈ, ಬೈ ಎಂದು ಅವರಿಗೇ ಹೇಳಿ ಒಲ್ಲದ ನಗುವನ್ನು ತುಟಿಯ ತನಕ ತಂದು ಅವರನ್ನು ಅಗಲುತ್ತೆನೆ. ಮಧ್ಯಾನ್ಹದ ಕ್ಲಾಸುಗಳು ಬೋ ೯ ರು. ಹುಡುಗರಿಗೂ ನಿದ್ದೆ. ನನಗೂ ಮಂಪರು ಆದರಲ್ಲೂ ಈ ದಿನವಂತೂ ಕ್ಲಾಸು ತೆಗೆದುಕೊಳ್ಳುವುದು ಬಲು ಕಷ್ಟವೆನಿಸಿ ಬಸ್‌ಸ್ಟಾಪಿನತ್ತ ನಡೆಯುತ್ತೇನೆ.

ನನಗಿದೇನಪ್ಪಾ ಯೋಚನೆ ಸಲ್ಲದ್ದು ಛೇ ದೇಶದ ಹಾಲತ ಏನಾಗಿದೆ ? ಸಾಮಾಜಿಕ, ರಾಜಕೀಯ, ಸಾಹಿತ್ಯ ರಂಗಗಳಲ್ಲಿ ನಡೆಯುತ್ತಿರುವುದು ಏನೋ ? ಅದರ ಬಗ್ಗೆ ಸ್ವಲ್ಪವೂ ಯೋಚನೆ ಮಾಡದೇ ಹೀಗೇಕೆ ಇಷ್ಟು ಅಲ್ಪತನದಲ್ಲೇ ನನ್ನ ಬುದ್ಧಿ ವ್ಯರ್ಥವಾಗುತ್ತಿದೆ. ಬಸ್ಸಿಗಾಗಿ ಪದ್ಮಾ ಕಾಯುತ್ತಾ ನಿಂತಿರುವುದು ಕಂಡು ಮನ ಮುದುಡುತ್ತದೆ.

ಅವಳಿದ್ದರೆ ನನಗೇನೂ .. ಮಾತಾಡಿದರೆ ಎರಡು ಮಾತಾಡಿದರಾಯಿತು ಎಂದು ಅಡಿಗಳನ್ನಿಟ್ಟು Stopಗೆ ಬಂದಾಗ ನಮ್ಮ ಮನೆಯ ಹತ್ತಿರದ ಹುಡುಗ ಶೇಖರನೊಂದಿಗೆ ಮಾತನಾಡುತ್ತಿದ್ದ ಪದ್ಮಾ ಒಮ್ಮೆಯೂ ನನ್ನತ್ತ ತಿರುಗಿ ನೋಡದೇ ಇದ್ದದ್ದು ಕಸಿವಿಸಿಯಾಯ್ತು. ಇದೇಕೆ ಹೀಗೆ ... ಆಕೆ ಮಾತಾಡಿದಾಗ ಬೇಡವೆನಿಸಿದುದು ಈಗೇಕೆ ಬೇಕಾಯ್ತು ? ಈ ಬೇಕು ಬೇಡಗಳಿಗೆ ಅರ್ಥವಿಲ್ಲವೇ ?

ಬಸ್ಸು ಬರುತ್ತದೆ. ಎಲ್ಲರೊಡನೆ ಒದ್ದಾಡುತ್ತಾ ಬಸ್ಸೇರಿ ಮನೆ ಸೇರುತ್ತೇನೆ. ಅಮ್ಮ ಬಾಗಿಲಲ್ಲೇ ನಿಂತಿರುತ್ತಾಳೆ. ಎಲಾ, ಇವರಿಗೇನು ಗೊತ್ತು ನಾನು ಬರುವ ಹೊತ್ತು. ತಾಯಿ ಕರುಳಿಗೆ ಎಲ್ಲವೂ ಅರ್ಥವಾಗುವುದೇನೋ ? ಹತ್ತಿರ ಹತ್ತಿರ ಹೋದಂತೆ ನನ್ನ ತಾಯಿ ನನಗೆ ಅಪರಿಚಿತರಂತೆ ಅನಿಸುತ್ತಾರೆ. ಹಿಂದಿನ–ಮುಂದಿನ ಜನ್ಮಗಳ ತಾಯಂದಿರು ಯಾರೋ ? ಅಂತೂ ಈ ಜನ್ಮದಲ್ಲಿ ಭೂಮಿಯ ಮೇಲೆ ನಾನು ಅವತರಿಸುವುದಕ್ಕೆ ಈ ಮಹಾ ತಾಯಿಯೇ ಕಾರಣ. ಆದ್ದರಿಂದ ಅವರಿಗೆ ಋಣಿಯಾಗಿರಬೇಕೆನಿಸುತ್ತದೆ.

"ಮಗು, ಮುಗಿತೇನಪ್ಪಾ ಕಾಲೇಜು?" ಎನ್ನುತ್ತಾ ನನ್ನೊಡನೆ ಒಳಗೆ ಬರುತ್ತಾರೆ. ಲವಲವಿಕೆಯಿಂದ ಅಡುಗೆಯ ಮನೆಯತ್ತ ಹೋಗುತ್ತಾರೆ. ಕಾಫಿಗಾಗಿಯೇ ಇರಬೇಕು. ಕಾಫಿಯೊಂದಿಗೆ ಯಾವುದೋ ಕಾಗದವನ್ನೂ ತರುತ್ತಾರೆ, ನನ್ನ ಕೈಯಲ್ಲಿಟ್ಟು ನಸುನಕ್ಕು, "ಓದು" ಎನ್ನುತ್ತಾರೆ. ಅರ್ಥವಾಗದ ನಾನು ಮಿಕಿ ಮಿಕಿ ನೋಡುತ್ತಾ ಕಾಗದ ಬಿಚ್ಚಿ ಓದುತ್ತೇನೆ.

ಚಿ॥ ಸೌ॥ ಸುಬ್ಬಮ್ಮನಿಗೆ,

ಆ॥ ಗಳು. ಈಗ ಕಾಗದ ಬರೆಯಲು ... ಕಾರಣವೇನೆಂದರೆ, ಚಿ॥ ಮೋಹನ ಈಗ ಡಾಕ್ಟರೇಟ್ ಮುಗಿಸಿ ಒಂದು ವರ್ಷವಾಯ್ತಲ್ಲವೇ ? ನಮ್ಮ ಇಂದಿರಾಳ ಬಗ್ಗೆ ಯೋಚನೆ ಮಾಡುವೆನೆಂದು ಹೇಳಿದ್ದಿ. ದಯವಿಟ್ಟು ಈ ಬಗ್ಗೆ ನಿಮ್ಮ ಅಭಿಪ್ರಾಯ ತಿಳಿಸು, ಹಾಗೇ ಕುಸುಮಳಿಗೆ ಇಲ್ಲೊಂದು ಡಾಕ್ಟರ್ ವರವಿದೆ. ದೇವರ ಅನುಗ್ರಹವಿದ್ದರೆ ಶುಭಕಾರ್ಯ ಬೇಗನೆ ಜರುಗಲಿ. ಯಾವುದಕ್ಕೂ ಜರೂರು ಕಾಗದ ಬರಿ.

ನಿನ್ನಣ್ಣ

ವಾ ಸು ದೇ ವ

ಕಾಗದವನ್ನು ಮಡಿಸಿದಾಗ ಅಮ್ಮ ನನ್ನತ್ತ ನೋಡುತ್ತಾಳೆ. ಫೆಮಿನಾ, ಶೀತಲ, ಪದ್ಮಾ ..ಇಂದಿರಾ ಯಾಕೋ ಈ ಹೆಸರೇ ಮುದ್ದಾಗಿರುವಂತೆ ತೋರುತ್ತದೆ. ಇದರೆಲ್ಲರ ಸಾನಿಧ್ಯದಲ್ಲಿ ಅಲ್ಪ ಸಮಯ ಕಳೆದಿದ್ದರೂ ಕಾಗದ ಇಂದಿರಾಳ ನೆನಪು ಹೃದಯವನ್ನು ಒದ್ದೆ ಮಾಡಿ ನನ್ನನ್ನು ದುರ್ಬಲನನ್ನಾಗಿ ಮಾಡುತ್ತದೆ. ಈರುಳ್ಳಿಯ ಪದರು–ಪದರನ್ನು ಬಿಚ್ಚಿದಾಗ ಕಳೆದುಕೊಳ್ಳುವ ಘಾಟನಂತೆ ನನ್ನ ಮನದ ಪದರು ಪದರು ಬಿಚ್ಚಿ ನೋಡಿದಾಗ ಇವರೆಲ್ಲರೂ ಪ್ರಿಯವಾಗೇ ಕಂಡರು. ನನ್ನ ಉತ್ತರಕ್ಕಾಗಿ ಕಾದು ನಿಂತ ತಾಯಿಗೆ "ನಿಮ್ಮಿಷ್ಟ" ಎಂದು ಹೇಳಿ ರೂಮಿಗೆ ಹೋಗಿ ಮಂಚದ ಮೇಲೆ ಉರುಳುತ್ತೇನೆ.

ಅನುಭವ, ಹುಟ್ಟು, ಸಾವು ಇವುಗಳ ಗೊಡವೆ ನನಗೇಕೆ ಎಂದೆನ್ನಿಸಿ ಹೃದಯದ ಪ್ರತಿ ಸ್ಪಂದನದಲ್ಲೂ ಇಂದಿರಾ ಇಂದು ... ಇಂದು .... ಎಂಬ ಧ್ವನಿ ಕರಗಿ ಮಧುರವಾದ ಕನಸೊಂದು ನನ್ನನ್ನು ಕಚಗುಳಿಯಿಟ್ಟು ನಗಿಸುತ್ತದೆ.

---

# 'ನಾನು ಕಂಡ ಅಮೆರಿಕ'

— ಸಾವಿತ್ರಿದೇವಿನಾಯ

ಅಮೇರಿಕನ್ನರು ಒಂದು ಜನಾಂಗವಲ್ಲ. ಒಂದು ಬುಡ ಕಟ್ಟಿನವರಲ್ಲ. ಪ್ರಪಂಚದಲ್ಲಿರುವ ಎಲ್ಲ ಭೂಖಂಡಗಳ ನಿವಾಸಿಗಳು ಇಲ್ಲಿಗೆ ವಲಸೆ ಬಂದು ಒಟ್ಟುಗೂಡಿದನೊಳ್ಳರು ಬೆರೆತು ಹೋಗಿರುವ ಕಲಬೆರಿಕೆ ಜನಾಂಗ ಅಮೇರಿಕನ್ನರು. ಇಲ್ಲಿನ ಮೂಲ ನಿವಾಸಿಗಳನ್ನು, ಹೊರದೇಶಗಳಿಂದ ಗುಂಪು ಕಟ್ಟಿಕೊಂಡು ಬಂದ ವಲಸೆಗಾರರು ಒತ್ತರಿಸಿ, ಒತ್ತರಿಸಿ ಒಂದು ಮೂಲೆಗೆ ತಳ್ಳಿ ಬಿಟ್ಟಿದ್ದಾರೆ.

ರಿಗೆ ಬಿಳಿಯರಾದ ಯಾವ ಪಂಗಡದ ಅಮೇರಿಕನ್ನ ಕಂಡರೂ ಮಹಾ ದ್ವೇಷ. ಏಕೆಂದರೆ ಈ ಜನ ನೀಗ್ರೋ ಗಳನ್ನು ಕೆಟ್ಟ ರೀತಿಯಲ್ಲಿ ನಡೆಸಿಕೊಂಡದನ್ನು ಗುಲಾ ಗಿರಿ ಅಳಿದು ಶತಮಾನವಾಗಿದ್ದರೂ ಇವರು ಮರೆ ಸೇಡು ತೀರಿಸಿಕೊಳ್ಳುತ್ತಿದ್ದಾರೆ. ಈಗ ಬಿಳಿಯರಿಗಿಂತ ಈ ಕರಿಯರ ಸಂತಾನ ಹೆಚ್ಚು ಹೆಚ್ಚಾಗಿ ಬೆಳೆಯುತ್ತಿ ಆ ದಿನ ಗುಲಾಮರಾಗಿದ್ದವರು ಈಗ ಬಿಳಿಯರ ಸರಿ

## ವಿಷಾದ ಸೂಚನೆ

ಕನ್ನಡ ಲೇಖಕಿಯರಲ್ಲಿ ಹಿರಿಯ ಹಾಗೂ ಎಲ್ಲರ ಮೆಚ್ಚಿನ ಸ್ನೇಹಿತೆಯಾದ ಶ್ರೀಮತಿ ಸಾವಿತ್ರಿ ದೇವಿ ನಾಯ್ಡುರವರು ಇದೇ ತಿಂಗಳಲ್ಲಿ ವಿಧಿವಶರಾದುದು ಕನ್ನಡ ಸಾಹಿತ್ಯಕ್ಕೆ ತುಂಬಲಾರದ ನಷ್ಟ. ಇವರನ್ನು ಕಳೆದುಕೊಂಡದ್ದಕ್ಕೆ ಕನ್ನಡ ಲೇಖಕಿಯರೆಲ್ಲರೂ ಅವರ ಆತ್ಮಕ್ಕೆ ಶಾಂತಿ ಕೋರಿ ತಮ್ಮ ವಿಷಾದವನ್ನು ವ್ಯಕ್ತಪಡಿಸಿದ್ದಾರೆ.

ಇಲ್ಲಿ ಎದ್ದು ಕಾಣುವ ಎರಡು ಜನಾಂಗಗಳಲ್ಲಿ ಒಂದು ಇಲ್ಲಿನ ಮೂಲ ನಿವಾಸಿಗಳಾದ ರೆಡ್ ಇಂಡಿಯನ್ಸ್. ಈಗ ಇವರನ್ನು ಅಮೇರಿಕನ್ ಇಂಡಿಯನ್ಸ್ ಅನ್ನುತ್ತಾರೆ. ಎರಡನೆಯದು ಆಫ್ರಿಕಾ ಖಂಡಾದಿಂದ ಗುಲಾಮರಾಗಿ ಬಂದ ನಿಗ್ರೋ ಜನಾಂಗ, ಇವರನ್ನು ಈಗ ನೀಗ್ರೋಗಳೆಂದು ಕರೆಯುವುದಿಲ್ಲ. ಬ್ಲ್ಯಾಕ್ ಅಮೇರಿಕನ್ಸ್ ಅನ್ನುತ್ತಾರೆ. ನೀಗ್ರೋಸ್ ಎಂದರೆ ಈ ಕಪ್ಪು ಅಮೇರಿಕನ್ನರಿಗೆ ಬಹಳ ಕೋಪ ಬರುತ್ತೆ. ಅವ

ನಾಗಿ ನಿಲ್ಲುವ ಮನೋಧಾರಣೆ ಹೊಂದಿದ್ದಾರೆ. ಸಾ ವಾದ ಕಡೆಗಳಲ್ಲಿ ಬಿಳಿಯರಿಗೆ ಸಾಕಷ್ಟು ಕಿರುಕಳ ಕೊ ಸಂತೋಷ ಪಡುತ್ತಿದ್ದಾರೆ. ಇವರಿರುವ ಕಡೆ ಹಿಂ ಕೃತ್ಯಗಳು ಹೆಚ್ಚು.

ವಾಸಿಂಗ್‌ಟನ್ ನಗರದಲ್ಲಿ ಈ ಕಪ್ಪು ಅಮೇ ರಿಕನ್ನರು ಅಲ್ಲಿನ ಜನಸಂಖ್ಯೆಯಲ್ಲಿ ನಲವತ್ತು ರಷ್ಟು (40%) ಇದ್ದಾರೆ. ಶಿಕಾಗೋದಲ್ಲಿ ಇನ್ನೂ ಹೆಚ್ಚು

ಇವರ ಹೀಳಿಗೆ ವರ್ಷೇ ವರ್ಷೇ ಹೆಚ್ಚುತ್ತಿದೆಯಂತೆ. ವಿದ್ಯಾಭ್ಯಾಸದ ಅನುಕೂಲತೆಗಳು ಇವರಿಗೆ ಬಹಳ ಕಡಿಮೆ. ಇವರಿಗೇ ಪ್ರತ್ಯೇಕವಾದ ಶಾಲೆಗಳು ನಡೆಸಲ್ಪಡುತ್ತಿವೆ. ಈಗ ಅಂದರೆ 3–4 ವರ್ಷಗಳಿಂದ ಬಿಳಿಯ ಮಕ್ಕಳು ಕರಿಯ ಮಕ್ಕಳು ಎನ್ನುವ ಭೇದವಿರಿಸದೆ ಎಲ್ಲ ಮಕ್ಕಳಿಗೂ ಒಂದೇ ಬಗೆಯ ವಿದ್ಯಾಭ್ಯಾಸದ ಸೌಕರ್ಯಗಳಿರಬೇಕು ಎನ್ನುವ ಪ್ರಯತ್ನ ಸರಕಾರ ಮಾಡುತ್ತಿದೆ. ಆದರೆ ಬಿಳಿಯ ಅಮೇರಿಕನ್ನರು ತಮ್ಮ ಮಕ್ಕಳನ್ನು ನೀಗ್ರೋ ಮಕ್ಕಳೊಂದಿಗೆ ಸೇರಲು ಅವಕಾಶ ಕೊಡದೆ ಗಲಾಟೆ ಎಬ್ಬಿಸಿದರು. ಈಗೀಗ ಅವರ ಹಠ ಸಡಿಲಗೊಳ್ಳುತ್ತಿದೆ ಎಂದು ತಿಳಿದು ಬಂದಿದೆ. ಇವರ ಅತ್ಯಾಚಾರಗಳಿಂದ ನೊಂದಿರುವ ನೀಗ್ರೋಗಳು ಬಿಳಿಯರನ್ನು ಆಳುವ ಕಾಲ ಬಹಳ ದೂರವಿಲ್ಲ ಎನಿಸುತ್ತದೆ. ಕಪ್ಪು ಅಮೇರಿಕನ್ನರಿಗೆ ಬಿಳಿಯರು ಹೆದರುವಂತಾಗಿದೆ !

ಇನ್ನು ಅಮೇರಿಕನ್ ಇಂಡಿಯನ್ಸ್ (Red Indians) ಅಲ್ಲಿನ ಮೂಲ ನಿವಾಸಿಗಳು. ಅವರೂ ಸಹ ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಬಡಿದಾಡುವ ಸ್ಥಿತಿಗೆ ಬಂದಿದ್ದಾರೆ. ಎತ್ತು, ಎಮ್ಮೆ, ಕೋಣಗಳಂತೆ ಅವರನ್ನು ಒತ್ತರಿಸಿಟ್ಟಿರುವುದರ ಅರಿವು ಅವರಿಗಾಗಿದೆ. ಜನ ಜಾಗೃತಗೊಳ್ಳುತ್ತಿದ್ದಾರೆ. ಇವರಲ್ಲಿ ಅನೇಕ ಪಂಗಡಗಳಿವೆ. (ಆ ಪಂಗಡಗಳ ಹೆಸರುಗಳನ್ನು ಇಲ್ಲಿ ಬರೆದು ಅವರ ಕಸುಬುಗಳನ್ನು ವಿವರಿಸಲು ಸಾಧ್ಯವಿಲ್ಲ.) ಅದರಲ್ಲಿ ಚೆರೋಕಿ (Cherokee) ಪಂಗಡ ಕೈಗಾರಿಗಳಲ್ಲಿ ಖ್ಯಾತಿವಂತರು. ಅಲ್ಲದೆ ವಿದ್ಯಾಭ್ಯಾಸದಲ್ಲೂ ಮುಂದುವರಿದಿದ್ದಾರೆ. ಪಟ್ಟಣದ ಜನರೊಂದಿಗೆ ಬೆರೆತು ಜೀವನ ನಡೆಸುವ ನಾಗರೀಕರಾಗಿದ್ದಾರೆ. ಈ ಜನಾಂಗ ಇಂದಿಗೂ ಆಚರಣೆಯಲ್ಲಿಟ್ಟುಕೊಂಡಿರುವ ಸ್ವಾರಸ್ಯವಾದ ವಿಷಯಗಳನ್ನು ಎಷ್ಟು ಹೇಳಿದರೂ ತೀರದು. ಸ್ಥಳ ಸಂಕೋಚದಿಂದ ಯಾವ ವಿಷಯಗಳನ್ನೇ ಆಗಲಿ ವಿಸ್ತರಿಸಿ ಬರೆಯಲು ಸಾಧ್ಯವಿಲ್ಲ. ಆದುದರಿಂದ ಇಂಗ್ಲಿಷಿನಲ್ಲಿ gist ಅಂತಾರಲ್ಲ. ಅಂತಹ ತುಣುಕು ಸಂದರ್ಶನ ಮಾಡಿಸುತ್ತಿದ್ದೇನೆ.

ಇಲ್ಲಿನ ಹಳ್ಳಿಗಳು ನೋಡಲಿಕ್ಕೆ ಬಲು ಚೆಂದ. ನಿಜವಾದ ಅರ್ಥದಲ್ಲಿ ಇವುಗಳು ಹಳ್ಳಿಗಳೇ ಅಲ್ಲ. ಪಟ್ಟಣದ ಎಲ್ಲ ಸೌಕರ್ಯಗಳೂ ಇಲ್ಲಿರುತ್ತವೆ. ನಮ್ಮ ದೇಶದಲ್ಲಿರುವ ಮುಂಬಯಿ, ಮದ್ರಾಸುಗಳೂ ಸಹ ಇಲ್ಲಿನ ಹಳ್ಳಿಗಳ ಮುಂದೆ ಜುಜುಬಿ ಎನಿಸುತ್ತವೆ.

ಹಳ್ಳಿಗಳ ರಸ್ತೆಗಳ ಅಚ್ಚುಕಟ್ಟು ಕಾರುಗಳ ಎಡೆಬಿಡದ ಓಡಾಟ! ಅಂಗಡಿಗಳ ಸಾಲುಗಳಲ್ಲಿ ವೈಭವೋಪೇತವಾಗಿ ಜೋಡಿಸಿರುವ ಅಲಂಕಾರ ವಸ್ತುಗಳು. ಎಲ್ಲ ವಿಧದ ವ್ಯಾಪಾರ ವ್ಯವಹಾರಗಳು ! ಇವೇಂಥಾ ಹಳ್ಳಿಗಳಪ್ಪಾ! ಎಂದು ಬೆರಗಾಗಬೇಕಾಗುತ್ತದೆ.

ಇಷ್ಟಕ್ಕೂ ಈ ಹಳ್ಳಿಗಳಲ್ಲಿ ರೈತರು ವಾಸಿಸುವುದಿಲ್ಲ ಇಲ್ಲಿಯ ರೈತರು ವಿದ್ಯಾವಂತರು, ವ್ಯವಹಾರಜ್ಞರು. ಸಭ್ಯ ಗೃಹಸ್ಥರು. ಇವರನ್ನು Gentleman far mers ಎನ್ನುತ್ತಾರೆ. ಒಬ್ಬೊಬ್ಬ ರೈತನಿಗೆ ನೂರಾರು ಎಕರೆಗಳ ಜಮೀನು, ಯಾವೊಂದು ಬೆಳೆಯನ್ನು ಚಿಕ್ಕ ಪ್ರಮಾಣದಲ್ಲಿ ಬೆಳೆಯುವುದಿಲ್ಲ. ಈ ನೂರಾರು ಎಕರೆಗಳ ಒಡೆಯ ತನ್ನ ಜಮೀನಿನಲ್ಲಿಯೇ ಸೊಗಸಾದ ಮನೆ ಕಟ್ಟಿಕೊಂಡಿರುತ್ತಾನೆ. ಇಂತಹ ದೊಡ್ಡ ಜಮೀನುಗಳನ್ನು 'ರ್ಯಾಂಚ್' ಎನ್ನುತ್ತಾರೆ.

ಗೆಟಿಸ್‌ಬರ್ಗ್ ಎನ್ನುವುದು ಅಮೇರಿಕನ್ನರ ಯುದ್ಧ ಭೂಮಿ. ಅಲ್ಲಿ ಅದ್ಭುತವಾದ ಸ್ಮಾರಕಗಳಿವೆ. ಅದರ ಕೆಳಗೆ ಒಂದು ಹಳ್ಳಿ. (West Minister village) ಗೆಟಿಸ್ ಬರ್ಗಿಗೆ ಹೋಗುವ ದಾರಿಯಲ್ಲಿ ಸಿಗುತ್ತದೆ. ಎದುರಿಗೆ ಇರುವುದು ಒಬ್ಬ ರೈತನ ಮನೆ. (ಮೈಲಿಗಟ್ಟಳೆ ವಿಶಾಲವಾದ ಮೈದಾನಗಳಲ್ಲಿ ಹುಲುಸಾಗಿ ಬೆಳೆದಿರುವ ಪೈರುಗಳ ಸೊಂಪು) ಈ ರೈತನ ಮನೆಯಲ್ಲಿ ನಾಲ್ಕಾರು ಟ್ರ್ಯಾಕ್ಟರುಗಳು ಎರಡು ವ್ಯಾನುಗಳು ಎರಡೋ ಮೂರೋ ಕಾರುಗಳು ಇನ್ನಿತರ ಉಳುವ, ಉತ್ತುವ, ಬಿತ್ತುವ, ಕಳೆ ತೆಗೆಯುವ, ಬೆಳೆ ಕುಯ್ಯುವ ಸಲಕರಣೆಗಳಿಂದ ಹಿಡಿದು ಧಾನ್ಯಗಳನ್ನು ಬಡಿದು ಕುಟ್ಟಿ, ಕೇರಿ ಕಣಜಗಳನ್ನು ತುಂಬುವ, ಅವುಗಳಿಂದ ಹೊರತೆಗೆಯುವ ಸಾಧನೆಗಳು ಹೇರಳವಾಗಿರುತ್ತವೆ. ಈ ಎಲ್ಲಾ ಅನುಕೂಲತೆಗಳಿಂದ ಆ ದೇಶ ವ್ಯವಸಾಯದಲ್ಲಿ ಎಷ್ಟು ಮುಂದುವರೆದಿದೆ ಎನ್ನುವುದನ್ನು ಆ ದೇಶದ ಸುಭಿಕ್ಷತೆ ಸಾರಿ ಹೇಳುತ್ತದೆ.

ಸಾವಿರಾರು ಮೈಲುಗಳ ಪ್ರಯಾಣ ಮಾಡಿದರೂ ಪ್ರಯಾಣಿಕರಿಗೆ ಆಯಾಸವಾಗಲಿ, ಬೇಸರವಾಗಲಿ ಆಗುವುದಿಲ್ಲ. ಒಂದನೆಯದು ಅಲ್ಲಿನ ವಿಶಾಲವಾದ ರಸ್ತೆಗಳು,

ಎರಡನೆಯದು ನಿಸರ್ಗ ಸೌಂದರ್ಯ, ಮೂರನೆಯದು ಪ್ರಯಾಣಿಕರಿಗಾಗಿ ಮಾಡಿರುವ ಅನುಕೂಲತೆಗಳು, ಪ್ರಯಾಣವನ್ನು ಉಲ್ಲಾಸಮಯವಾಗಿ ಮಾಡಿರುತ್ತವೆ.

ಒಂದು ರಸ್ತೆಯಲ್ಲಿ ನಾಲ್ಕರಿಂದ ಹಿಡಿದು ಆರು ಕಾರುಗಳು ಒಂದರ ಪಕ್ಕದಲ್ಲಿ ಒಂದು ಹೋಗಬಹುದಾದ ಓಣಿಗಳನ್ನು (Laner) ಮಧ್ಯೆ ಬಿಳಿಯ ಪಟ್ಟಿಗಳ ಪೆಯಿಂಟ್ ಹಾಕಿ, ಬೇರ್ಪಡಿಸಿರುತ್ತಾರೆ. ಹೋಗುವು ದಕ್ಕೆ ಮತ್ತೊಂದು ರಸ್ತೆ, ಅಗಲವಾದ ಉದ್ದವಾದ ಈ ರಸ್ತೆಗಳ ಮೇಲೆ ಬಿಳಿಯ ರಿಬ್ಬನ್‌ಗಳನ್ನಿಟ್ಟು ಇಸ್ತ್ರಿ ಮಾಡಿ ಕೊಂಡು ಹೋಗಿರುವಂತೆ ಕಾಣಿಸುವ ನೀಟಾದ ನುಣು ಪಾದ ರಸ್ತೆಗಳ ಸೊಬಗನ್ನು ವರ್ಣಿಸಲು ಸಾಧ್ಯವಿಲ್ಲ! ಆ ರಸ್ತೆಗಳು ಎಷ್ಟೇ ಅಗಲವಾಗಿದ್ದರೂ ಅವೆಲ್ಲಿಯ ಕಾರು ಗಳೋ, ಇರುವೆಗಳ ಸಾಲಿನಂತೆ ರಸ್ತೆಗಳಲ್ಲಿ, ಅವುಗಳ ಉದ್ದಗಲಕ್ಕೂ ರಾತ್ರಿ-ಹಗಲೆನ್ನದೆ ಹರಿದಾಡುತ್ತಿರುತ್ತವೆ!

ಅಮೇರಿಕನ್ನರು ಕಲಾಪ್ರಿಯರು, ಸೌಂದರ್ಯೋ ಪಾಸಕರು. ಬಹುಶಃ ಪ್ರಕೃತಿಯ ಸಹಕಾರ ಅವರಿಗೆ ನೆರವಾಗುವುದರಿಂದ ಅವರು ತಮ್ಮ ನಾಡನ್ನು ಅಭಿವೃದ್ಧಿ ಸುವುದರಲ್ಲಿ ಮಾತ್ರವಲ್ಲ, ತಮ್ಮಲ್ಲಿ ಅಡಗಿರುವ ಕಲಾವಂ ತಿಕೆಯನ್ನು ಅನೇಕ ರೀತಿಗಳಲ್ಲಿ ಹೊರಗೆಡವಿದ್ದಾರೆ, ಹೊರಗೆಡುವುತ್ತಿದ್ದಾರೆ. ಪ್ರಯಾಣಿಕರಿಗಾಗಿ ಅನೇಕ ಅನುಕೂಲಗಳನ್ನು ಮಾಡಿದ್ದಾರೆ.

ಪ್ರಯಾಣ ಮಾಡುತ್ತಿರುವಾಗ ದಾರಿಯಲ್ಲಿ ಅಲ್ಲಲ್ಲಿ ಸಿಗುವ ಹಣ್ಣಿನ ಅಂಗಡಿಗಳು ಈ ದೇಶದ ಒಂದು ಮುಖ್ಯ ಆಕರ್ಷಣೆಯೇ. ಆಯಾ ಕಾಲದಲ್ಲಿ ಬೆಳೆಯುವ ಹಣ್ಣಿನ ರಾಶಿಗಳ ಜೊತೆಗೆ ಜೇನುತುಪ್ಪದ ಶೀಷೆಗಳು, ಸಣ್ಣ ಸಣ್ಣ ಶೀಷೆಗಳಿಂದ ಹಿಡಿದು ಒಬ್ಬರಿಂದ ಹೊರ ಲಾರದಂತಹ ದೊಡ್ಡ ದೊಡ್ಡ ಗಾಜಿನ ಜಾಡಿಗಳಲ್ಲಿ ಬಾಯಲ್ಲಿ ನೀರೂರುವಂತೆ ಜೇನುತುಪ್ಪವನ್ನು ತುಂಬಿಸಿ ಇಟ್ಟಿರುತ್ತಾರೆ. ಇಂತಿಂತಹ ಹಣ್ಣುಗಳ ಫಾರಂ ಈ ಕಡೆ ಇದೆ ಎಂದು ತೋರಿಸುವ ಬೋರ್ಡುಗಳು ದಾರಿಯು ದ್ದಕ್ಕೂ ಸಿಗುತ್ತಿರುತ್ತವೆ. ಇಲ್ಲಿ ಬಹಳ ಅಗ್ಗವಾದ ದರ ದಲ್ಲಿ ಹಣ್ಣುಗಳನ್ನು ಬುಟ್ಟಿಗಳಲ್ಲಿಟ್ಟು ಮಾರುತ್ತಿರುತ್ತಾರೆ. ಅಂತಹ ಒಂದು ಫಾರಂಗೆ ನಾವು ಹೋಗಿದ್ದೆವು. ಆಗ 'ಪೀಚ್‌ಸ್' ಹಣ್ಣುಗಳ ಹಾಲು-ಒಂದೊಂದು ಹಣ್ಣು ದೊಡ್ಡ ಸೈಜಿನ ಮೂಸಂಬಿ ಗಾತ್ರ ಅಥವಾ ಇನ್ನೂ ಎರಡು ಸುತ್ತು ದೊಡ್ಡದಾಗಿಯೇ ಇದ್ದವು. ಅದೆಂಥಹ ರಸಭರಿತವಾದ ಹಣ್ಣುಗಳು ? ಅದೆಂಥಹ ರುಚಿ! ಹಲ್ಲನ್ನು ಹಣ್ಣಿನ ಮೇಲೆ ಊರುವುದೇ ತಡ ತೊಟ ತೊಟನೆ ರಸ ಒಸರಿ ಗಲ್ಲದ ಬಳಿ ಟಿಶ್ಯೂ ಪೇಪರನ್ನು ಇಟ್ಟುಕೊಳ್ಳಬೇಕಾಗುತ್ತದೆ. ಬೇಸಿಗೆಯಲ್ಲಿ ಅನೇಕ ವಿಧವಾದ ಹಣ್ಣುಗಳು ಬೆಳೆಯುತ್ತವೆ. ಸೇಬುಗಳಂತೂ ಅತಿ ಅಗ್ಗವಾಗಿ ಸಿಗುವ ಕಾಲ ಅದು. ಇನ್ನು ದ್ರಾಕ್ಷಿ ಹಣ್ಣುಗಳು ವಿಧ ವಿಧವಾದ ಜಾತಿಗಳವು. ಪ್ಲಮ್ಸ್, ಚರ್ರೀಸ್, ಭರ್ರೀಸ್ ಇತ್ಯಾದಿ ಹಣ್ಣುಗಳು ಸೊಗಸಾಗಿ ಬೆಳೆದಿರುತ್ತವೆ. ನೆಲಗಡಲೆ-ಉಪ್ಪಿನ ನೀರಲ್ಲಿ ನೆನಸಿ ಮಾಡುವುದು ಇಲ್ಲಿನ ಒಂದು ಫ್ಯಾನ್ಸಿ. ಎಳೆಯದಾದ ಹಾಲುತುಂಬಿ ಕಳಕಳಿಸುತ್ತಿರುವ ಮುಸುಕಿನ ಜೋಳ ವನ್ನು ಹೊದಿಕೆ ತೆಗೆದು ಕುದಿಯುತ್ತಿರುವ ನೀರಿನಲ್ಲಿ ನೆನೆಸಿ, ಉಪ್ಪು ಬೆರಸಿದ ಬೆಣ್ಣೆಯಲ್ಲಿ ಉರುಳಿಸಿ ಕೊಡು ತ್ತಾರೆ. ಅದರ ರುಚಿಯನ್ನು ಸವಿದು ನೋಡಬೇಕೇ ಹೊರತು ಅದನ್ನು ವರ್ಣಿಸುವುದು ಸಾಧ್ಯವಿಲ್ಲ. ಅಮೆರಿ ಕನ್ನರು ಇಷ್ಟು ಆರೋಗ್ಯವಂತರಾಗಿರಲು ಅವರು ಸೇವಿ ಸುವ ಪೌಷ್ಟಿಕ ಆಹಾರವೇ ಕಾರಣ ಎಂದು ನನಗನ್ನಿ ಸಿತು.

---

ಪೆಣ್ಣಲ್ಲವೇ ತಮ್ಮನ್ನೆಲ್ಲ ಪಡೆದ ತಾಯಿ
ಪೆಣ್ಣಲ್ಲವೇ ಪೊರೆದವಳು
ಪೆಣ್ಣುಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು.



# ಹೆಳವನಕಟ್ಟೆ ಗಿರಿಯಮ್ಮ

* ಡಾ॥ ಸರೋಜಿನಿ ಮಹಿಷಿ

ಭಾರತದ ಭಕ್ತಿ ಪಂಥದಲ್ಲಿ ವೈರಾಗ್ಯ ನಿಧಿಗಳಾಗಿ ರತ್ನಗಳಂತೆ ಬೆಳಗಿದ ಅಕ್ಕಮಹಾದೇವಿ ಕ್ತ ಮೀರಾ, ಲಲ್ಲೇಶ್ವರಿ ಮುಂತಾದವರ ಸಾಲಿಗೆ ಸೇರಿದ ಹೆಳವನಕಟ್ಟೆ ಗಿರಿಯಮ್ಮ ಕರ್ನಾಟ ದ ಭಕ್ತಿ ಪಂಥದ ಧ್ರುವತಾರೆ.

ಸತ್ಯಮ್ಮ : ಇನ್ನೂ ಬೇಕಾದ ಹಾಗೆ ಹಾಡುತ್ತಾಳೆ ನಮ್ಮ ಗಿರಿಯಮ್ಮ. ಕೆರೆಗೆ ಬಟ್ಟೆ ಒಗೆಯಲು ಹೋದಾಗ ರಂಗನಾಥನ ಮಂದಿರದಲ್ಲಿ ಧ್ಯಾನಸ್ಥಳಾಗಿಬಿಟ್ಟಿದ್ದಳಂತೆ ಮೊನ್ನೆ ಜೊತೆಗೆ ಹೋದ ಹೆಂಗಸರು ಬಂದು ಹೇಳಿದರು.

ಕೃಷ್ಣಪ್ಪ : ಒಬ್ಬಳೇ ಹೋಗಿದ್ದಳೇ ಮನೆಯಿಂದ ಬಟ್ಟೆ ಒಗೆಯಲು ?

ಸತ್ಯಮ್ಮ : ಇಲ್ಲ ಸುಭದ್ರೆಯ ಜೊತೆಗೇ ಹೋಗಿದ್ದಳು. ಮನೆಗೆ ಬರುವಾಗ ಹೊತ್ತಾಯಿತು. ಯಾಕೆಂದು ಕೇಳಿದೆ ಆಗ ವಿಷಯ ತಿಳಿಯಿತು.

ಸುಭದ್ರೆ : (ಪ್ರವೇಶಿಸಿ) ಅತ್ತೆ, ಹಾಲು ಕರೆಯಲು ದನದ ಕೊಟ್ಟಿಗೆಗೆ ಹೋಗಬೇಕಾಗಿದೆ. ಜೊತೆಗೆ ಗಿರಿಯನ್ನು ಕರಕೊಂಡು ಹೋಗಲೇ ?

ಸತ್ಯಮ್ಮ : ಹೋಗು, ಗಿರಿ ಸುಭದ್ರೆಯ ಜೊತೆಗೆ ಹೋಗಮ್ಮ ಹಾಲು ಕರೆಯಲು.

ನಿರೂಪಕ : (ಗಿರಿಯಮ್ಮನೊಡನೆ ಸುಭದ್ರೆಯ ನಿಷ್ಕ್ರಮಣ. ಹೋಗುತ್ತಿದ್ದಂತೆ ದಾರಿಯಲ್ಲಿ)

ಸುಭದ್ರೆ : ಏನು ಗಿರಿ? ಭಕ್ತಿ ಹಾಡು ಎಲ್ಲ ಹೆಚ್ಚಾಗಿ ಬಿಟ್ಟಿತಲ್ಲ? ಅತ್ತೆ-ಮಾವನನ್ನು ಕೂಡ ಮೋಡಿ ಮಾಡಿ ಒಪ್ಪಿಸಿ ಬಿಟ್ಟೆಯೋ ?

ಗಿರಿ : ಮೋಡಿ ಯಾತರದು ಅಕ್ಕಾ, ರಂಗನಾಥ ಎಲ್ಲರಿಗೂ ಮೋಡಿ ಮಾಡುತ್ತಾನೆ.

ಸುಭದ್ರೆ : ತಿಳಿಯಿತು ಬಿಡೇ : ಊಟಕ್ಕೆ ಹಾಕಿದ ತುಪ್ಪವನ್ನು ಒಯ್ದು ರಂಗನಾಥನ ಎದುರು ತುಪ್ಪವನ್ನು ಒಯ್ದು ರಂಗನಾಥನ ಎದುರು ತುಪ್ಪದ ದೀಪ ಹಚ್ಚುತ್ತೀಯಂತೆ ಹೌದೇ ?

ಗಿರಿ : ಹೌದು ಅಕ್ಕಾ ಕ್ಷಮಿಸಿ, ಬೇರೆ ತುಪ್ಪವನ್ನು ಕೇಳಲು ಸಂಕೋಚವಾಗಿ ಹಾಗೆ ಮಾಡಿದೆ.

ಸುಭದ್ರೆ : ನೀನು ಹೀಗೆಲ್ಲ ಹಾಡಿ ಕುಣಿದು ವಿರಾಗಿಯ ಹಾಗೆ ಧ್ಯಾನಸ್ಥಳಾಗುತ್ತಿದ್ದರೆ, ಇಲ್ಲಿ ಸಂಸಾರ ಮಾಡುವವರಾರು ? ಮದುವೆಗೆ ಮೊದಲೂ ಹೀಗೇ ಮಾಡುತ್ತಿದ್ದಿಯಾ ?

ಗಿರಿ : ರಂಗನಾಥನಲ್ಲಿ ಭಕ್ತಿಗೆ ಯಾವ ಸಮಯವೇನು ಅಕ್ಕ ? ಹೆಳವನ ಕಟ್ಟೆ ಕೆರೆಯ ಹತ್ತಿರ ರಂಗನಾಥ ನನ್ನು ಕಂಡಾಗ ಏನೋ ಒಂದು ವಿಧದಲ್ಲಿ ಕಳೆದು ಹೋದ ವಸ್ತುವನ್ನು ಪುನಃ ಪಡೆದಷ್ಟು ಸಂತೋಷವಾಯಿತು.

ಸುಭದ್ರೆ : ನೀನು ಹೀಗೆಲ್ಲ ಹಾಡಿಕೊಂಡು ಕಾಲ ಕಳೆದರೆ ಮೈದುನನ ಗತಿಯೇನು ?

ಗಿರಿ : (ಮೌನ)

ಸುಭದ್ರೆ : (ದನದ ಕೊಟ್ಟಿಗೆಯಲ್ಲಿ ಪ್ರವೇಶಿಸಿ) ಆ ಕರುವನ್ನು ಬಿಟ್ಟು ಈಚೆಗೆ ಬಾ, ಗಿರೀ ನಿಜ ಹೇಳು ನಿನಗೆ ಸಂಸಾರ ಮಾಡುವ ಇಚ್ಛೆಯೇ ಇಲ್ಲವೇ ?

ಗಿರಿ : (ಕರು ಬಿಚ್ಚಿ) ಈ ಕರು ತಾಯಿಯ ಬಳಿ ಓಡಿ ಹೋಗುವಂತೆ, ನಾನು ರಂಗನಾಥನ ಬಳಿ ಹೋಗುಬೇಕೆನ್ನುತ್ತೇನೆ. ಪಾಶ ಹರಿಯಬೇಕಲ್ಲ.

ಸುಭದ್ರೆ : ಹಾಗಾದರೆ ಯಾಕೆ ಬೇಕಿತ್ತು ನಿನಗೆ ?

ಗಿರಿ : ಅಕ್ಕಾ, ಸಂಪ್ರದಾಯಕ್ಕೆ ನಾವೆಲ್ಲರೂ ಶರಣು ಹೋಗುವುದಿಲ್ಲವೆ ? ಹಿರಿಯರ ಇಚ್ಛೆ, ರಂಗನಾಥನ ಇಚ್ಛೆ, ನನ್ನದೇನು ಸ್ವಾಧೀನ ?

ಸುಭದ್ರೆ : ಈಗೇನು ನನ್ನ ಮೈದುನಿಗೆ ಇನ್ನೊಂದು ಮದುವೆ ಮಾಡುವಳೋ ಏನು ನೀನು ?

ಗಿರಿ : ಹಾಗಾದರೆ ಬಹಳ ಸಂತೋಷ ಅಕ್ಕಾ, ಸಂಸಾರದಲ್ಲಿ ಇರಬೇಕೆಂಬ ಆಸಕ್ತಿಯಿದ್ದವರಿಗೆ ಋಣ ಕೊರಗು ಯಾಕೆ ?

ಸುಭದ್ರೆ : ಹಾಗಾದರೆ ಅತ್ತೆ-ಮಾವನವರಿಗೆ ನಿನ್ನ ಮನಸ್ಸಿನಲ್ಲಿದ್ದುದನ್ನು ಹೇಳಿ ಬಿಡು. ಅವರಿಗೂ ನಿನ್ನ ವಿರಕ್ತಿಯನ್ನು ನೋಡಿ ಬೇಸರ.

ಗಿರಿ : ನೀನೇ ಹೇಳಿ ಪುಣ್ಯ ಕಟ್ಟಿಕೊ ಅಕ್ಕ : ನನ್ನನ್ನು ಬಂಧನದಿಂದ ಮುಕ್ತ ಮಾಡಿದ ಶ್ರೇಯಸ್ಸು ನಿನಗೆ !

ಸುಭದ್ರೆ : ನಡೆ ಹೊತ್ತಾಯಿತು ಹಾಲು ಕರೆದುಕೊಂಡು ಹೋಗೋಣ. ನಿನ್ನ ಮಾತನ್ನು ನಂಬುವುದೇ ಅಸಾಧ್ಯವಾಗಿದೆ.

(ಮತ್ತೊಂದು ದಿನ ಗಿರಿಯಮ್ಮನ ಅತ್ತೆ ಮಾವ ಚಿಂತಾಕಾಂತರಾಗಿ ಕುಳಿತಿದ್ದಾರೆ. ನಡೆದಘಟನೆಯನ್ನು ಮಗ ತಿಪ್ಪರಸನಿಂದ ಕೇಳಿ ತಿಳಿದ ತಾಯಿ ದಿಗ್ಭ್ರಾಂತಳಾಗಿದ್ದಾಳೆ)

ಸತ್ಯಮ್ಮ : ಕೇಳಿದಿರಾ, ನಿನ್ನೆ ನಾನೊಬ್ಬಳೆ ದೇವರ ಮನೆಯಲ್ಲಿ ಆಡ್ಡಾದಾಗ ತಿಪ್ಪಬಂದು ಕಾಲಿನ ಬಳಿ ಕುಳಿತ. ಯಾಕೋ ಏನಾಯಿತು ಎಂದು ಎದ್ದು ಕುಳಿತೆ. ಅಮ್ಮಾ ಅವಳನ್ನು ಏಕಾಂತ ದಲ್ಲಿ ಕಂಡಾಗೆಲ್ಲ ಅವಳ ಸುತ್ತು ಒಂದು ಘಟಸರ್ಪ ಕಾಣುತ್ತೇ ಏನು ದೆವ್ವೀಪವಾಡವೋ. ನಿನ್ನೆ 'ನನ್ನ ತಾಯಿ' ಎಂದು ಅವಳ ಕಾಲಿಗೆ ಎರಗಿ ಬಿಟ್ಟಿದ್ದೇನೆ. ಇನ್ನು ಮುಂದೆ ಅವಳು ನನ್ನ ಹೆಂಡತಿಯಲ್ಲ ಎಂದು ಹೇಳುತ್ತಲೇ ನಡುಗಿದ. ನನಗೆ ಮಾತೇ ಹೊರಡಲಿಲ್ಲ; ತಲೆಯ ಮೇಲೆ ಕಡಿದು ಕೊಂಡು ಬಿದ್ದಂತಾಯಿತು. ನಿಮ್ಮೆದುರು ಬಂದಾಗ ಹೇಳಲೂ ಇಷ್ಟು ಹೊತ್ತು ಬೇಕಾಯೀತು.

ಕೃಷ್ಣಪ್ಪ : ಏನು ವಿಚಿತ್ರ! ಗಿರಿಯಮ್ಮನ ಭಕ್ತಿ ಭಾವ ಪರವಶತೆಗಳನ್ನು ನೋಡಿದ್ದೇನೆ. ಈ ವಿಧವಾದ ವೈರಾಗ್ಯ ದೈವೀರಕ್ಷಣೆ ಅವಳಿಗಿದೆಯೆಂದೆನಿಸಿರಲಿಲ್ಲ... ಸರಿ, ಇಂತಹ ಪರಮ ಭಕ್ತೆ ನಮ್ಮ ಸೊಸೆಯಾಗಿ ಮನೆಗೆ ಬಂದುದೇ ಪುಣ್ಯವೆನ್ನಬೇಕು.

ಸತ್ಯಮ್ಮ : ಸುಭದ್ರೆಯೂ ಮೊನ್ನೆ ನನಗೆ ಹೇಳಿದಳು, ತಿಪ್ಪರಸನಿಗೆ ಇನ್ನೊಂದು ಮದುವೆ ಮಾಡಿ ಎಂದು ಗಿರಿಯೇ ಹೇಳುತ್ತಾಳಂತೆ. ಏನು ಹಣೆಯ ಬರಹ ನೋಡಿ!

ಕೃಷ್ಣಪ್ಪ : ಹಣೆಯ ಬರಹವನ್ನು ಯಾರಿಂದಲೂ ಅಳಿಸಲಾಗುವದಿಲ್ಲ "ವಿಧಿ ಬರೆದ ಲಿಪಿಯೇಂ ಜಲಲಿಪಿಯೇ"? ದೇವರ ಇಚ್ಛೆ ಹೇಗೋ ಹಾಗಾಗುತ್ತದೆ.

ಸತ್ಯಮ್ಮ : ನಿಮಗೆ ಇದನ್ನು ಕೇಳಿ ಗರಬಡಿದಂತಾಗಲಿಲ್ಲವೆ?

ಕೃಷ್ಣಪ್ಪ : ಆಗಿ ಮಾಡುವುದೇನು? ಸಂಸಾರದಲ್ಲಿ ಬಂದುದನ್ನು ತಡೆದುಕೊಂಡು ಹೋದವನೇ ಜಾಣ. ಸಂಸಾರದಲ್ಲಿ ಹಡಗ ಮುಳುಗುವ ಹೊತ್ತು ಬರುತ್ತದೆ!

ಸತ್ಯಮ್ಮ : ಸುಭದ್ರೆ ಆಗಲೇ ಇದನ್ನೂ ಸೂಚಿಸಿಬಿಟ್ಟಳು. ಅವಳ ದೂರದ ಚಿಕ್ಕಮ್ಮನ ಮಗಳೊಬ್ಬಳು ಮದುವೆಯಾಗಿದ್ದಾಳೆ ಎಂದು. ತಿಪ್ಪರಸ ಈ ವಿರಸವನ್ನು ಮರೆಯ ಬೇಕಾದರೆ, ಆದಷ್ಟು ಬೇಗ ಆ ಯೋಚನೆಯನ್ನೂ ಮಾಡು ಬೇಕಲ್ಲ!

ಕೃಷ್ಣಪ್ಪ : ಮಾಡೀ ಮಾಡೀ, ಅತ್ತೆ—ಸೊಸೆ ಇಬ್ಬರೂ ಸೇರಿ ಏನೇನೊ ಮಾಡುತ್ತೀರೋ ಮಾಡಿ.

ನಿರೂಪಕ : (ತಿಪ್ಪರಸನ ಎರಡನೆಯ ಮದುವೆಗೆ ಮನೆಯಲ್ಲ ಅಣಿಯಾಯಿತು ಮಂಗಳ ವಾದ್ಯಗಳು ಮೊಳಗಿದವು. ಮದುವೆಯಲ್ಲಿ ಗಿರಿಯಮ್ಮ ಸಂತಸತಿಂದಲೇ ಓಡಾಡಿದಳು. ಮದುವೆಯಲ್ಲಿ ಇನ್ನೊಂದು ವಿಶೇಷ ಘಟನೆಯೂ ನಡೆಯಿತು. ಗಿರಿಯಮ್ಮ ತನ್ನ ಒಡವೆಗಳನ್ನೆಲ್ಲ ತಂದು ವಧುವಿಗೂ ಸುಭದ್ರಮ್ಮನಿಗೂ ಹಂಚಿ ಕೊಟ್ಟುಬಿಟ್ಟಳು.)

ಸುಭದ್ರೆ : ಇದೇನೇ ಗಿರಿ, ಸುಮಂಗಲೆಯಾಗಿದ್ದೀ ಒಂದೆರಡು ಒಡವೆಗಳನ್ನೂ ಇಟ್ಟುಕ್ಕೊಳ್ಳಬಾರದೆ?

ಗಿರಿ : ಬೇಡ ಅಕ್ಕ, ನೀನೂ ತಂಗಿಯೂ ಆಭರಣಗಳನ್ನು ಇಟ್ಟುಕೊಂಡು ಸಂತಸದಿಂದ ಓಡಾಡಿದರೇ ನನಗೆ ಸಂತೋಷ.

ಸತ್ಯಮ್ಮ : ಸಂಸಾರದ ಮೋಹ ಅವಳಿಗೆ ಇಲ್ಲವೇ ಇಲ್ಲ. ಒಡವೆ ಇಟ್ಟುಕೊಂಡು ಏನಾಗಬೇಕಾಗಿದೆ ಅವಳಿಗೆ!

ನಿರೂಪಕ : (ತಿಪ್ಪರಸನ ಸಂಸಾರ ನಡೆಯಿತು. ಗಿರಿಯಮ್ಮನ ಬಂಧನ ಕಡಿಯಿತು. ಮನೆಗೆಲಸದ ಹೊರೆ ಗಿರಿಯಮ್ಮನ ಪಾಲಿಗೆ ಹೆಚ್ಚಾಯಿತು. ನಸುಕು ಹರಿಯುವ ಮೊದಲೆ ಅಮ್ಮ ಎದ್ದು ಮನೆ ಕೆಲಸ ಮುಗಿಸಿ ಹೆಳವನ ಕಟ್ಟೆಗೆ ನಡೆದು ಬಿಡುತ್ತಿದ್ದಳು. ಅಲ್ಲಿ ರಂಗನಾಥನ ಪೂಜೆ ಸಂಗೀತ ನರ್ತನ ಸೇವೆಯಲ್ಲಿ ಅವಳು ನಿರತಳಾಗಿ ಬಿಡುತ್ತಿದ್ದಳು. ಅವಳಿಗೆ ಆಹಾರದ ಪರಿವೆಯೂ ಇರುತ್ತಿರಲಿಲ್ಲ. ಅಮ್ಮನ ಓರಗಿತ್ತಿಯರಿಂದ ಬಂದ ದೂರು ಕೇಳಿ, ಮಾವ ಒಂದು ದಿನ ಅವಳನ್ನು ರಹಸ್ಯವಾಗಿ ಹೆಳವನ ಕಟ್ಟೆಯಲ್ಲ ಪರೀಕ್ಷಿಸಲೆತ್ನಿಸಿ ದೈಹಿಕ ಪೀಡೆಯನ್ನನುಭವಿಸಿದರು)

ನಿರೂಪಕ : (ಕೃಷ್ಣಯ್ಯ ನರಳುತ್ತ ಮಲಗಿದ್ದಾರೆ. ಗಿರಿಯಮ್ಮ ದೇವಾಲಯದಿಂದ ಮನೆಗೆ ಹಿಂದಿರುಗುತ್ತಾಳೆ.)

ಗಿರಿ : ಯಾಕೆ ಮಾವ ನರಳುತ್ತಿದ್ದಾರೆ? ಏನಾಗಿದೆ ಅವರಿಗೆ?

ಸುಭದ್ರ : ನಿನ್ನೆ ಮಾವ ಹೆಳವನ ಕಟ್ಟೆಗೆ ಹೋಗಿದ್ದರು, ಬಂದೊಡನೆ ಹೊಟ್ಟೆ ನೋವೆಂದು ಮಲಗಿದ್ದಾರೆ, ನಿನ್ನೆಗಿಂತ ಇಂದು ನರಳುವುದು ಹೆಚ್ಚಿದೆ.

ಗಿರಿ : ಕಟ್ಟೆಗೆ ಹೋಗಿದ್ದರೇ? ನೋಡಲೇ ಇಲ್ಲ ಅಲ್ಲಿ.

ಸುಭದ್ರೆ : ನಿನ್ನೆ ಸಂಗೀತ ನೃತ್ಯದಲ್ಲಿ ನೀನಿರುತ್ತೀ : ಅವರನ್ನೆಲ್ಲಿ ನೋಡಿದ್ದು ?

ಕೃಷ್ಣಪ್ಪ : (ನರಳುತ್ತ) ಗಿರಿಯಮ್ಮ, ಬಂದಿಯೇನೆ ತಾಯಿ, ಯಾರದೋ ದೂರು ಕೇಳಿ ನಿನ್ನನ್ನು ಪರೀಕ್ಷಿಸಲು ಹೋಗಿದ್ದೆನಮ್ಮ. ನನ್ನ ಗತಿ ಹೀಗಾಯಿತು.

ಗಿರಿ : ಅದೇನು ಮಾವಯ್ಯ, ಏನೋ ಬಡಬಡಿಸುತ್ತಿದ್ದೀರಿ. ರಂಗನಾಥನ ಕೃಪೆಯಿಂದ ನಿಮಗೆ ಗುಣವಾಗುತ್ತದೆ ಬೇಗ, ತಗೆದುಕೊಳ್ಳಿ ತೀರ್ಥ-ಪ್ರಸಾದ ಇದೋ !

ಕೃಷ್ಣಪ್ಪ : ತಾ ತಾಯಿ, ರಂಗನಾಥನ ಪರಮ ಭಕ್ತಳನ್ನು ಪರೀಕ್ಷಿಸಲು ಹೋಗಿದ್ದೆ. ನಿನ್ನೆ ಕನಸಿನಲ್ಲಿ ರಂಗನಾಥನೇ ಹೇಳಿದ, "ಪ್ರಾಯಶ್ಚಿತ್ತವಾಗಿ ಗಿರಿಯಮ್ಮನ ಕೈಯಿಂದ ಪ್ರಸಾದವನ್ನು ತೆಗೆದುಕೋ" ಎಂದು : ಅದೆಷ್ಟು ದಿನಗಳಾದುವು ತಾಯಿ ನಿನ್ನನ್ನು ಕಾಣದೆ, ನಿನ್ನೊಡೆ ಮಾತನಾಡದೆ, ನನ್ನ ಅಪರಾಧವನ್ನು ಕ್ಷಮಿಸಮ್ಮ.

ಗಿರಿಯಮ್ಮ : ಮಾವಯ್ಯ ನೀವು ಪುಣ್ಯವಂತರು, ರಂಗನಾಥ ಕಾಣಿಸಿಕೊಂಡಿದ್ದಾನೆ ನಿಮಗೆ ಸ್ವಪ್ನದಲ್ಲಿ !

ಕೃಷ್ಣಪ್ಪ : ಜನ ಹೇಳುತ್ತಾರಮ್ಮ ನೀನು ದೇವಾಲಯದಲ್ಲಿ ರಂಗವಲ್ಲಿ ಇಟ್ಟರೆ, ಬಾಲಗೋಪಾಲ ಬಂದು ಅಂಬೆಗಾಲಿಟ್ಟು ಸರಿಯುತ್ತಾನೆ. ಎಂದು. . ತಾಯಿ ನೀನು ಪುಣ್ಯವಂತೆ, ಅವರೂ ಪುಣ್ಯವಂತರು. ಯಾರ ಮಾತನ್ನೋ ಕೇಳಿ ಪರೀಕ್ಷಿಸ ಹೋದ ನಾನೊಬ್ಬನೇ ಪಾಪಿ !

ಗಿರಿ : ರಂಗನಾಥನ ದರ್ಶನದಿಂದ ಪುನೀತರಾಗುವ ಸಮಯ ಮಾವಯ್ಯ. ನಿಮ್ಮ ನೋವು ಗುಣವಾಗುತ್ತೆ, ಬರಲೇ ನಾನು ?

ಕೃಷ್ಣಪ್ಪ : ಗುಣವಾಯಿತಮ್ಮ, ಈಗಲೇ ಗುಣವಾಗಿ ಹೋಯಿತು, ಹೋಗು ತಾಯಿ.

(ಗಿರಿಯಮ್ಮನ ನಿಷ್ಕ್ರಮಣ)

ನಿರೂಪಕ : (ಮಾವಯ್ಯ ಹಿಂದಿನ ದಿನ ಸಮಗಾರ ಅಂಗಡಿಗೆ ಹೋಗಿ ಎಕ್ಕಡಗಳನ್ನು ಸರಿ ಮಾಡಲು ಕೊಟ್ಟು ಬಂದಿದ್ದರು. ಆ ದಿನ ಮುಂಜಾನೆ ಸ್ನಾನ ಮುಗಿಸಿ ಪೂಜೆ ಮಾಡಲು ದೇವರ ಮುಂದೆ ಕುಳಿತರು. ಹಿಂದೆ ನಡೆದ ಘಟನೆಯಿಂದಾಗಿ ಅವರು ಹೆಚ್ಚು ಸಮಯವನ್ನು ಪೂಜೆ ನಮಸ್ಕಾರಗಳಲ್ಲಿ ಕಳೆಯುತ್ತಿದ್ದರು. ಮನಸ್ಸು ಮಾತ್ರ ಎಕ್ಕಡಗಳ ಮೇಲಿತ್ತು. ಆಗ ಸಮಗಾರ ಮನೆಗೆ ಬಂದ. ಎದುರು ಗಿರಿಯಮ್ಮ ಕಾಣಿಸಿದಳು.)

ಸಮಗಾರ : ಒಡೆಯರಿದ್ದಾರೆಯೋ ತಾಯಿ ?

ಗಿರಿ : ಇಲ್ಲಯ್ಯ ಮಾವನವರು ಸಮಗಾರ ಅಂಗಡಿಗೆ ಹೋಗಿದ್ದಾರೆ.

ಕೃಷ್ಣಯ್ಯ : (ಒಳಗಿನಿಂದ ಕೋಪ) ಯಾರವನು ಗಿರಿಯಮ್ಮ ಏನು ಹೇಳುತ್ತಿದ್ದೀ ? ಮಡಿ ಉಟ್ಟು ಪೂಜೆಗೆ ಕೂತಿದ್ದೇನೆ. ಸಮಗಾರ ಅಂಗಡಿಗೆ ಹೋಗಿದ್ದೇನೆಂದ ಹೇಳುತ್ತೀ.

ಗಿರಿ : ಮಯವಯ್ಯ ಕ್ಷಮಿಸಿ ತಾವು ದೇವರ ಎದುರು ಕುಳಿತಿದ್ದರೂ ತಮ್ಮ ಮನಸ್ಸು ಎಕ್ಕಡಗಳ ಮೇಲಿತ್ತು, ಅದಕ್ಕೆ ಹೇಳಿದೆ.

ಕೃಷ್ಣಪ್ಪ : ಭಕ್ತಳೆಂದು ನಿನಗೆ ಗೌರವ ಕೊಟ್ಟಂತೆ, ನಿನ್ನ ಒರಟುತನ ಹೆಚ್ಚಾಗುತ್ತಿದೆ. ನನ್ನನ್ನು ಅಪಹಾಸ್ಯಕ್ಕೀಡುಮಾಡಿದೆ. ನಿನ್ನ ಹರಿಭಕ್ತಿಯನ್ನಷ್ಟು ನೋಡುವ ನನ್ನ ಎರಡು ಕೈಗಳಲ್ಲೂ ಏನಿದೆಯೆಂಬುದನ್ನು ಹೇಳಬಲ್ಲೆಯಾ ?

ಗಿರಿ : ಮಾವಯ್ಯ, ಒಂದು ಕೈಯಲ್ಲಿ ತುಳಸೀ ಪತ್ರವಿದೆ, ಇನ್ನೊಂದರಲ್ಲಿ ಬಿಲ್ವಪತ್ರೆಯಿದೆ.

(ಮಾವ ಅವಕ್ಕಾದರು ಮಳೆಯಿಲ್ಲದೆ ಜನ ಕಂಗೆಟ್ಟಾಗ, ಅಮ್ಮ ರಂಗನಾಥನನ್ನು ಪ್ರಾರ್ಥಿಸಿ ಮಳೆಗರಿಸಿ ಜನರನ್ನು ಕಾಪಾಡಿದಳು.

ನಿರೂಪಕ : (ಸುಮತೀಂದ್ರ ಸ್ವಾಮಿಗಳು ಸಂಚಾರಕ್ರಮದಲ್ಲಿ ಮಲೆಬೆನ್ನೂರಿಗೆ ಬಂದರು. ಆಗಲೇ ಶಿಷ್ಯರು ಗಿರಿಯಮ್ಮನ ಬಗ್ಗೆ ದೂರುಗಳನ್ನು ಅವರಿಗೆ ತಲುಪಿಸಿದರು. ಪೂಜೆಯ ತರುವಾಯ ನಡೆದ ಒಂದು ಘಟನೆ)

ಸ್ವಾಮಿಗಳು : ಏನಯ್ಯ, ಊರಲ್ಲಿ ಮಳೆ ಬೆಳೆ ಎಲ್ಲ ಸರಿಯಾಗಿದೆಯೆ ?

ಮೊದಲ ಶಿಷ್ಯ : ಸ್ವಾಮಿ ಏನು ಹೇಳೋಣ ಮಳೆ ಬರಲೇ ಇಲ್ಲ. ಕಾಲ ಕೆಟ್ಟುಹೋಯಿತು. ಹೆಂಗುಸು

ಸಂಗೀತ ನರ್ತನವೆಂದು ದಿನವಿಡೀ ದೇವಸ್ಥಾನದಲ್ಲಿ ಕುಣಿಯುತ್ತಿದ್ದರೆ, ಮಳೆಯಾಕೆ ಕರೆದೀತು.

ಇನ್ನೊಬ್ಬ : ಪತಿಯನ್ನು ತೊರೆದಿದ್ದಾಳೆ, ಮಕ್ಕಳಿಲ್ಲ ಮರಿಯಿಲ್ಲ, ಮನೆತನದ ಹೆಸರನ್ನೇ ಹಾಳುಗೆಡವಿದಳು ಗಿರಿಯಮ್ಮ.

ಮೊದಲ ಶಿಷ್ಯ : ಆಕೆ ದೇವಸ್ಥಾನಕೆ ಬರಬಹುದು ಈಗ. ಬಂಜೆಗೆ ತಮ್ಮಿಂದ ತೀರ್ಥ ದೊರೆಯಕೂಡದು.

ಸ್ವಾಮಿಗಳು : ಸರಿ ಸರಿ ನೀವೆಲ್ಲ ಈಚೆಗೆ ಬನ್ನಿ; ಎಲ್ಲಿ ಗಿರಿಯಮ್ಮ? ಗಿರಿಯಮ್ಮ ಆ ಮಹಾತ್ಮಳ ದರುಶನಕ್ಕೇ ನಾನಿಲ್ಲಿಯವರೆಗೆ ಬಂದದ್ದು. ಎಲ್ಲೀ ? ಬಾ ಅಮ್ಮ ಇಲ್ಲಿ. ತೀರ್ಥ ತೆಗೆದುಕೊ.

ಗಿರಿ : ಗುರುಗಳ ಕಾರುಣ್ಯ ದೊಡ್ಡದು. (ಕೈ ಮುಂದೆ ಒಡ್ಡುತ್ತಾಳೆ)

ಸ್ವಾಮಿಗಳು : ಎ ಂ ತ ಹ ಕೈ ! ಅಪುತ್ರವತಿಯಂತೆ. ರಂಗನಾಥನ ತಾಯಿ ಈಕೆ: ಇವಳಿಗೆ ತೀರ್ಥ ಕೊಟ್ಟು ನಾನು ಧನ್ಯನಾದೆ.

ಗಿರಿ : ಗುರುಗಳು ತಪ್ತ ಮುದ್ರಾಂಕಿತವನ್ನು ನನಗೂ ದಯಪಾಲಿಸಬೇಕು.

ಸ್ವಾಮಿಗಳು : ಸಾಕ್ಷಾತ್ ಶ್ರೀಹರಿಯೇ ಚಕ್ರಾಂಕನ ಮಾಡಿರುವ ನಿನಗೆ ಚಕ್ರಾಂಕನ ಮಾಡುವ ಅಧಿಕಾರ ನಮಗೆಲ್ಲಿದೆಯಮ್ಮ ?

ಅರ್ಚಕ : ಅಮ್ಮ ಅಮ್ಮ ನನ್ನನ್ನು ಕಾಪಾಡು.

ಗಿರಿ : ಎನಾಯಿತು ಅರ್ಚಕರೆ ?

ಅರ್ಚಕ : ಬೀಗ ಮುದ್ರೆ ಇದ್ದಂತೆ ಇದೆ. ಮಾರುತಿಯ ಕೈಯ್ಯ ಮುಗುರ ಮಾಯವಾಗಿದೆ. ನಾನು ಆರೋಪಿಯಲ್ಲ ಅಮ್ಮಾ ಕಾಪಾಡು.

ಗಿರಿ : ಆ ! ರಂಗನಾಥ ಎನು ನಿನ್ನ ಲೀಲೆ ! ಬಡ ಅರ್ಚಕರನ್ನು ಗೋಳು ಹೋಯ್ದುಕೊಳ್ಳುತ್ತಿದ್ದೀಯ?

ಕೂಡಿದ ಜನ : ಓ! ಓ! ಆಶ್ಚರ್ಯ ! ಅದೋ ಗುಬ್ಬಿ ಬಾಯಿಲ್ಲಿ ಉಂಗುರವನ್ನು ಕಚ್ಚಿ ತಂದಿದೆ, ದೂರ ಸರಿ ಹಾರಿ ಹೋದೀತು, ಓ ಓ ಚೆಲ್ಲಿ ಹಾರಿತು ಅದೋ ಅದೋ !

ನಿರೂಪಕ : (ಗಿ ರಿ ಯ ಮ್ಮ ನ ಭಕ್ತಿಗೆ ಜನ ಮಾರು ಹೋದರು. ಅವಳ ಬಗೆಗೆ ಜನರಲ್ಲಿ ಆದರ ಹೆಚ್ಚಿತು)

(ಮಂಗನೂರಿನ ರಾಜಕುಮಾರ ಅಂಧನಾಗಿ ತಿರುಪತಿಯಲ್ಲಿ ಕಣ್ಣು ಪಡೆಯಲು ಸೇವೆ ಸಲ್ಲಸುತ್ತಿದ್ದ. ಅವನ ಭಕ್ತಿಗೆ ಮೆಚ್ಚಿ ವೆಂಕಟೇಶನು ಒಂದು ಕಣ್ಣನ್ನು ನೀಡಿ ಇನ್ನೊಂದನ್ನು ಪಡೆಯಲು ಗಿರಿಯಮ್ಮನ ಕಡೆ ಕಳುಹಿಸಿದ.)

ದೊರೆ : ವೆಂಕಟೇಶನ ಲೀಲೆಯನ್ನು ಯಾರು ಬಲ್ಲರು ! ಎಲ್ಲಿ ತಿರುಪತಿ, ಎಲ್ಲಿ ಮಲೆಬೆನ್ನೂರು ; ವೆಂಕಟೇಶ.... ರಂಗನಾಥ ! ! ಸ್ವಪ್ನದಲ್ಲಿ ಬಂದು ಹೇಳಿದನಲ್ಲದೆ ವೆಂಕಟೇಶ. ಒಂದು ಕಣ್ಣಿನ ಬಲದಿಂದ ಆ ಮಹಾ ಮಹಿಮಳನ್ನು ಹುಡುಕುತ್ತಾನೆ.

(ಮಲೆಬೆನ್ನೂರಿಗೆ ಬಂದು ದೊರೆ ಗಿರಿಯಮ್ಮನನ್ನು ಕಂಡನು.)

ಅಮ್ಮಾ ಅಮ್ಮಾ ಈ ಮಗನನ್ನು ಅನುಗ್ರಹಿಸು.

ಗಿರಿ : ಏಳು ಮಗು, ಭಗವಂತನ ಕರುಣೆ ನಿನ್ನ ಮೇಲೆ ಅಪಾರವಾಗಿದೆ.

ದೊರೆ : ಎರಡೂ ಕಣ್ಣಿಲ್ಲದ ನನಗೆ, ವೆಂಕಟೇಶ ಒಂದನ್ನು ಕರುಣಿಸಿದ. ಇನ್ನೊಂದನ್ನು ಅಮ್ಮ ಕರುಣಿಸುತ್ತಾಳೆ ಎಂದು ದಾರಿ ತೋರಿದ. ಅನುಗ್ರಹಿಸು ಅಮ್ಮ.

ಗಿರಿ : ದೊರೆತ ತುಪ್ಪದಲ್ಲಿ ರಂಗನಾಥನಿಗೆ ತು ಪ್ಪ ದ ದೀಪ : ಅದೂ ಯಾರ ಕಣ್ಣು ತಾಕಕೂಡದೆಂದು ಅಡಕಲು ಗಡಿಗೆಯಲ್ಲಿ ಹಚ್ಚಿದ್ದು. ಅದರ ಕಾಡಿಗೆಯೇ ಮಹಾ ಪ್ರಸಾದ... ಇದೋ ಈ ಕಾಡಿಗೆಯನ್ನು ಕಣ್ಣಿಗೆ ಇಟ್ಟುಕೊಳ್ಳಿ ರಂಗನಾಥ ಭಕ್ತಳ ಮಾನವನ್ನು ಕಾಯುವದು ನಿನ್ನನ್ನೇ ಕೂಡಿದೆ.

ದೊರೆ : ಅಮ್ಮ ಅನುಗ್ರಹೀತನಾದೆ. ಕಣ್ಣಿನಲ್ಲಿ ಬೆಳಕು ಮೂಡುತ್ತಿದೆ. ನಾನು ಧನ್ಯ ನಾನು ಧನ್ಯಾ ನಿನ್ನನ್ನು ಪಡೆದ ನಮ್ಮ ನಾಡು ಧನ್ಯ.

ನಿರೂಪಕ : (ಮಲೆಬೆನ್ನೂರಿನ ಪಕ್ಕದ ದಿ ಬ್ಬ ನ ಹ ಳ್ಳಿ ಯ ಲ್ಲಿ ಪವಾಡದವರ ಮನೆಯ ಮಗುವನ್ನು ಅಮ್ಮ ಬದುಕಿಸಿಕೊಟ್ಟ ಸಂಗತಿ. ಈ ಮನೆತನದಲ್ಲಿ ತಲೆಮಾರುಗಳಿಂದ ಉಳಿದು ಬಂದಿದೆ.)

ತಾಯಿ : ಗಂಗೂ, ನನ್ನ ಮಗು ಎಲ್ಲಿ ಹೋಯಿತು ನೋಡೆ.

ಗಂಗಾ : ಇಲ್ಲೇ ಆಡುತ್ತಿರಬೇಕು ಬಿಡಮ್ಮಾ.

ತಾಯಿ : ನಾನು ಇಲ್ಲಿಯೇ ಜಾತ್ರೆಯ ಬಳಿ ತೆಗೆದುಕೊಂಡು ಬರ್ತೀರಿ, ಮುಂದೆ ಹೋಗಿ ಮಗುವನ್ನು ನೋಡೇ ಬೇಗ : ಆಡ್ತಾ ಆಡ್ತಾ ಎಲ್ಲಿ ಹೋಯಿತು!

(ಅಷ್ಟರಲ್ಲಿ ಜನರ ಕೂಗಾಟ)

ಯಾರ ಮಗು ಇದು ? ಹಳ್ಳಕ್ಕೆ ಬಿದ್ದು ಮೃತವಾಗಿದೆ. ಎಂತಹ ತಾಯಿ–ತಂದೆಗಳೋ ಮಗುವನ್ನು ಮರೆತೇ ಬಿಟ್ಟಿದ್ದಾರೆ.

ತಾಯಿ : (ಓಡುತ್ತ ಬಂದು) ಅಯ್ಯೋ ಘಾತವಾಯಿತು, ನನ್ನ ಮಗು ! ನನ್ನ ಮಗು ! (ದುಃಖದಲ್ಲಿ) ರಂಗನಾಥನ ಜಾತ್ರೆಗೆ ಬಂದು ಮಗುವನ್ನು ಕಳೆದುಕೊಂಡೆ. ಯಾವ ಮುಖದಿಂದ ಮನೆಗೆ ಹೋಗಲಿ, ಇಲ್ಲಿಯೇ ಆಡುತ್ತಿದೆ ಮಗು ಎಂದು ಸುಮ್ಮನುಳಿದೆ. ಗಂಗಮ್ಮ ನೀನೂ ನೋಡಲಿಲ್ಲವಲ್ಲೇ

(ಗಿರಿಯಮ್ಮನ ಪ್ರವೇಶ)

ಗಿರಿ : ರಂಗನಾಥನ ಸಾನ್ನಿಧ್ಯದಲ್ಲಿ ದುಃಖವ್ಯಾಕೆ ? ಮಗುವಿಗೆ ಅಪಮೃತ್ಯುವ್ಯಾಕೆ ? ತಂದೆ ರಂಗನಾಥ, ಯಾರ ಮೇಲಿನ ಕೋಪವನ್ನು ಯಾರ ಮೇಲೆ ತೀರಿಸುತ್ತೀ ?

ಜನ : ಮಗುವನ್ನು ಅಮ್ಮನ ಪಾದದಡಿ ಹಾಕಮ್ಮ, ನಿನ್ನ ದೈವ ಚೆನ್ನಾಗಿದ್ದಂತೆ ಕಾಣುತ್ತದೆ. ಅಮ್ಮನೇ ಇಲ್ಲಿಯವರೆಗೆ ನಡೆದು ಬಂದಿದ್ದಾಳೆ.

ತಾಯಿ : (ಅಮ್ಮನ ಪಾದದಲ್ಲಿ ಮಗುವನ್ನು ಹಾಕಿ) ಅಮ್ಮ, ಮಗುವನ್ನು ಬದುಕಿಸಮ್ಮ, ರಂಗನಾಥನ ಕರುಣೆಯನ್ನು ಎಂದೆಂದೂ ಮರೆಯುವುದಿಲ್ಲ. ನನ್ನ ಕಂದ, (ದುಃಖದಿಂದ) ಕಂದನನ್ನು ಉಳಿಸಿಕೊಡಮ್ಮ, ನಿನ್ನ ಪಾದವನ್ನು ಬಿಡೆ ಅಮ್ಮ.

ಗಿರಿ ; ರಂಗನಾಥನ ಲೀಲೆ ಎಷ್ಟು ವಿಧ ! ಯಾರು ಬಲ್ಲರು ಅದನು ? ಯಾರಿಗೆ ಒಲಿಯುತ್ತಾನೋ, ಯಾರಿಗೆ ಬಿಡುತ್ತಾನೋ ತಿಳಿಯದು.

ಶಿಶುತನದಲಿ ನೀ ಪಶುಗಳನು ಸಲಹಿದೆ
ಶಶಿಭೂಷಣ ಸಖನೆ ಶಿಶುವ ಕಾಪಾಡೊ ॥1॥

ಸಾಂದೀಪನಿಗೊಲಿದೆ ಸಂದೇಹವಿಲ್ಲದೆ
ತಂದೆ ಹೆಳವನಕಟ್ಟೆ ರಂಗ ಕರುಣಾಪಾಂಗ ॥2॥

ಎತ್ತಿಕೊಳ್ಳಮ್ಮಾ ನಿನ್ನ ಮಗುವನ್ನು, ಕಣ್ಣು ತೆರೆದಿದ್ದಾನೆ ನೋಡು.

ಜನ : (ಸಂತಸದಿಂದ) ಮಗು ಎದ್ದಿತು ಮಗು ಎದ್ದಿತು.

ತಾಯಿ : ನಿನ್ನ ಪಾದ ಧೂಳಿಯನ್ನು ತಲೆಯಲ್ಲಿ ಧರಿಸುತ್ತೇನೆ ಅಮ್ಮಾ, ನಿನ್ನ ಕರುಣೆ ಮಗುವಿಗೆ ಜನ್ಮಾಂತರದಲ್ಲೂ ರಕ್ಷೆಯಾಗಿರಲಿ.

ನಿರೂಪಕ : (ಮಲೆಬೆನ್ನೂರಿನ ಕುಲಕರಣಿಕೆ ತಿಪ್ಪರಸನದಾಗಿದ್ದರೂ ಅವರ ತಮ್ಮ ವೆಂಕಟರಾಯನೇ ಇದನ್ನು ನೋಡುತ್ತಿದ್ದ. ಅವನ ಬಗೆಗೆ ಜಿಲ್ಲಾಧಿಕಾರಿಗಳಲ್ಲಿ ದೂರು ಹೋಯಿತು.)

(ಜಿಲ್ಲಾಧಿಕಾರಿ ಕಚೇರಿ)

ಶಿಷ್ಯ : ಸ್ವಾಮಿ, ಪ್ರಾಂತಸಾಹೇಬರೆ, ತಾವು ಪ್ರಭುಗಳು. ವೆಂಕಟರಾಯನು ಮಾಡಿದ ಈ ಕೃತ್ಯದ ಬಗ್ಗೆ ಯೋಗ್ಯ ವಿಚಾರಣೆ ಆಗಲೇ ಬೇಕು.

ಇನ್ನೊಬ್ಬ : ಗ್ರಾಮದ ಸಂಪತ್ತನ್ನೆಲ್ಲ ಆ ಪವಾಡಗಿತ್ತಿ ಗಿರಿಯಮ್ಮನ ಸಮಾರಾಧನೆಗೆ ವೆಂಕಟರಾಯ ವೆಚ್ಚ ಮಾಡಿದ್ದಾನೆ. ಊರಿನಜನ ಕೇರು ಹಾಕಿಕೊಳ್ಳಬೇಕೆ ?

ಶಿಷ್ಯ : ಮಳೆಯೂ ಇಲ್ಲ ಬೆಳೆಯೂ ಇಲ್ಲ ಮೇಲೆ ಇಂತಹ ಅಪರಾಧಗಳನ್ನು ಗ್ರಾಮದ ಹಿರಿಯರೇ ಕೂತು ಮಾಡುತ್ತಾರೆ. ಇಷ್ಟು ದಿನ ನಾವು ಹೇಗೋ ತಡಕೊಂಡೆವು. ಅದೇಕಾರಣದಿಂದ ಈಗ ಅಪರಾಧ ಮಾಡುವ ಸಹಾಸ ಇಷ್ಟು ದೂರದವರೆಗೆ ಬಂದಿದೆ.

ಪ್ರಾಂತ ಸಾಹೇಬ : ಆಗಲಿ, ವೆಂಕಟರಾಯನು ಸದ್ಯಕ್ಕಂತೂ ಸೆರೆಯಲ್ಲಿದ್ದಾನಲ್ಲವೋ ?

ಕ. ಸ. ಅಧಿಕಾರಿ : ಜೀ ಹುಜೂರ, ಇದ್ದಾನೆ.

ಪ್ರಾಂತ ಸಾಹೇಬ : ನಾನೇ ಮಲೆಬೆನ್ನೂರಿನವರೆಗೆ ಹೋಗಿ ಈ ಮಾತನ್ನು ಪರೀಕ್ಷಿಸುತ್ತೇವೆ ಎಂದು ಜಾಹಿರಪಡಿಸು. ಇಂದು ರಾತ್ರಿ ಮಲೆಬೆನ್ನೂರಿನಲ್ಲಿಯೇ ತಂಗುತ್ತೇವೆ.

ನಿರೂಪಕ : (ಸಾಹೇಬರ ನಿರ್ಣಯದಿಂದ ಶಿಷ್ಯರು ಗಾಬರಿಯಾದರು. ಮಲೆಬೆನ್ನೂರಿನಲ್ಲಿ ಸಾಹೇಬರು ಜನರ ಬಾಯಿಂದ ವಿವಿಧ ಪವಾಡಗಳನ್ನು ಕೇಳಿ, ಗಿರಿಯಮ್ಮನ ದರ್ಶನಕ್ಕೆ ತಾವೇ ಧಾವಿಸಿದರು.)

ಒಬ್ಬ : ಸಾಹೇಬರೇ ಅಮ್ಮನವರು ಸಾಕ್ಷಾತ್ ದೇವತೆ! ಅವರು ಕೈಯೆತ್ತಿ ಕೊಟ್ಟ ಪ್ರಸಾದ ಸೇವಿಸಿದರೆ, ಬೇನೆ ಗಳೆಲ್ಲ ಹೋಗುತ್ತವೆ.

ಇನ್ನೊಬ್ಬ : ಮಂಗನೂರಿನ ದೊರೆಗೆ ಅಮ್ಮ ಒಂದುಕಣ್ಣು ದಯಪಾಲಿಸಿದ್ದನ್ನು ನಾವೇ ಕಂಡಿದ್ದೇವೆ. ಒಂದು ಕಣ್ಣನ್ನು ಮೊದಲೇ ತಿರುಪತಿ ವೆಂಕಟೇಶ ಕೊಟ್ಟಿದ್ದ. ಅಮ್ಮನೆಡೆಗೆ ಇನ್ನೊಂದನ್ನು ಪಡೆಯಲು ಭಕ್ತನನ್ನು ತಾನೇ ಕಳಿಸಿದ್ದ.

ಒಬ್ಬ : ಬಡವರಿಗೆ ಸಾಕ್ಷಾತ್ ರಂಗನಾಥನೇ ಅಮ್ಮನ ರೂಪದಲ್ಲಿ ಸಿಕ್ಕಿಂದತಿದೆ. ಮಳೆಬೆಳೆ ಇಲ್ಲದೆ ಜನ ಕೊರ ಗುತ್ತಿದ್ದಾಗ ಅಮ್ಮ ಮಳೆ ಕರೆಸಿದಳು.

ಸಾಹೇಬರು : ವೆಂಕಟರಾಯನು ಈ ಉತ್ಸವಗಳಿಗಾಗಿಯೇ ಗ್ರಾಮದ ಕಚೇರಿಯ ದುಡ್ಡನ್ನು ಉಪಯೋಗಿಸು ತ್ತಾನೆಯೇ ?

ಇಬ್ಬರೂ : ಮಳೆ ಬಂದು ದನಕರುಗಳಿಗೆ ನೀರು ದೊರೆ ಯುವವರೆಗೆ ಬೆಳೆ ಚಿಗುರುವವರೆಗೆ ಬಡಬಗ್ಗರಿಗೆ ಧಾನ್ಯವನ್ನು ವಂಕಟರಾಯ ಹಂಚಿದ್ದಾರೆ. ಅಮ್ಮ ನಿಗೆ ದೊರೆತ ಕಾಣಿಕೆಗಳನ್ನು ಜನತೆಗೆ ಹಂಚಿ ಬಿಡು ವಾಗ, ಊರಿನ ದುಡ್ಡನ್ನು ಬಳಸುವ ಮಾತು ಎಲ್ಲಿ ಬಂತು !

ಸಾಹೇಬ : ಕೆರೆ ಕಟ್ಟೆ ಗಳನ್ನು ದುರಸ್ತಿ ಮಾಡಲಾ ಗಿದೆಯೇ ?

ಒಬ್ಬ : ತಾವೇ ನೋಡಬೇಕು ಸಾಹೇಬರು, ಎಲ್ಲವನ್ನೂ ಮಾಡಿದ್ದಾರೆ. ರಂಗನಾಥನ ದೇವಾಲಯದ ಜೀರ್ಣೋದ್ಧಾರವನ್ನು ಮಂಗನೂರಿನ ದೊರೆ ಮಾಡಿ ಸಿದ್ದಾರೆ. ಆ ವೆಚ್ಚವನ್ನು ವೆಂಕಟರಾಯ ಮಾಡಿಲ್ಲ.

ಸಾಹೇಬ : ಒಹೋ, ನಾನೂ ಗಿರಿಯಮ್ಮನ ದರ್ಶನದಿಂದ ಪುನೀತನಾಗಬೇಕೆನ್ನುತ್ತೇನೆ.

ಇಬ್ಬರೂ : ಅದಕ್ಕೇನಂತೆ ಸಾಹೇಬ, ಅಮ್ಮನವರ ಪೂಜೆ ಮುಗಿಯುವ ವೇಳೆಗೆ ಹೋಗಿ ತಲುಪೋಣ ಕಟ್ಟೆ ಯನ್ನು ಬೆಳಿಗ್ಗೆ. ಆಗ ತೀರ್ಥವೂ ದೊರೆಯುತ್ತದೆ.

ನಿರೂಪಕ : (ಮರುದಿನ ಮುಂಜಾನೆ ಹೆಳವನ ಕಟ್ಟೆಯ ಮಂದಿರದಲ್ಲಿ)

ಸಾಹೇಬ : (ಸ್ವಗತ, ಅಮ್ಮನವರೆ, ಎಂತಹ ತೇಜಸ್ಸು, ದೈವೀ ಕಳೆ ಉಕ್ಕುತ್ತಿದೆ. (ಪ್ರಕಟ) ಇಲ್ಲಿಯೇ ಕುಳಿತು ಸ್ವಲ್ಪ ಹೊತ್ತು ನೋಡುವಾ.

(ಹರಿ-ಹರ ವಿಭೇದದ ಸಂಘರ್ಷವನ್ನು ಕಂಡ ಅಮ್ಮನವರು ಹಿಂದಿನ ದಿನ ಬಹಳ ವಿಷಾದಪಟ್ಟರು; ಹರಿ-ಹರ ಒಬ್ಬನೇ ಎಂದು ಸಾಕ್ಷಿಯಾಗಿ ನಿಂತಿರುವ ಹರಿಹರನ ನಾಡಿನಲ್ಲೂ ಭಿನ್ನಮತಗಳಾದುದು ಅಜ್ಞಾ ನದ ಪರಮಾವಧಿಯೆಂದು ನೆನೆಹ ಅಮ್ಮ ಅಪ್ಪಣೆ ಕೊಡಿಸಿದಳು)

ಅಮ್ಮ : ರಂಗನಾಥ, ನಿನ್ನ ನಿಜ ಸ್ವರೂಪದ ಅರಿವಾದರೆ ಹರಿ ಯಾರು, ಹರ ಯಾರು; ಜನದಲ್ಲಿ ಬುದ್ಧಿಭೇದ ವನ್ನುಂಟು ಮಾಡಿ ಬದುಕಲೆತ್ನಿಸುವ ಜನ ಯಾವಾ ಗಲೂ ಇದ್ದಾರೆ; ಆದರೆ ಸಜ್ಜನರನ್ನೂ ಶರಣಾಗತರಾ ದವರನ್ನೂ ಕಾಪಾಡುವ ಭಾರ ನಿನ್ನದು ದೊರೆಯ, ಅಜ್ಞಾನದಲ್ಲಿ ನೊಂದು ಬೆಂದು ಜನ ಘಾಸಿಯಾಗು ತ್ತಿದ್ದಾರೆ. ಸಿಟ್ಟಿನ ವೇಳೆಗೆ ಮೂಗು ಕೊಯ್ದರೆ ಶಾಂತ ವೇಳೆಗೆ ಹತ್ತು ಎದೆ ಮೂಗಲಿ ?

ಸಾಹೇಬ : ಎಂತಹ ವಿಶಾಲ ಬುದ್ಧಿ ! ಏನು ಅಸಾಧ್ಯ, ಭಕ್ತಿ !!

ಅಮ್ಮ : (ಸಾಹೇಬರನ್ನು ಗುರುತಿಸಿ) ಏನು ಸಾಹೇಬರೇ ರಂಗನಾಥನ ದರುಶನಕ್ಕಾಗಿ ಬಂದಿರಾ ? ರಂಗನಾಥನು ನಿಮ್ಮನ್ನು ಅನುಗ್ರಹಿಸಲಿ. ವೆಂಕಟರಾಯನ ಬಗೆಗೆ ಬಂದ ದೂರಿನ ವಿಚಾರಣೆಗೆ ನೀವು ಬಂದಿದ್ದೀರಿ ಎಂದು ತಿಳಿಯಿತು. ವಿಚಾರಣೆ ಆಯಿತೇ ?

ಸಾಹೇಬ : ಅಮ್ಮ ನನ್ನನ್ನು ಕ್ಷಮಿಸು. ದಿವ್ಯ ಜ್ಞಾನಿ ಯಾದ ತಮ್ಮೆದುರು ನಾನೇನೂ ಹೇಳಲಿ, ತಮ್ಮ ದರ್ಶನದಿಂದ ಪುನೀತನಾದೆ. ಅವರ್ಣನೀಯನಾದ ಶಾಂತಿ ನನ್ನ ಮನಸ್ಸಿಗೆ ಇಂದು ದೊರೆತಿದೆ.

ಅಮ್ಮ : ತಮ್ಮ ಕರ್ತವ್ಯವನ್ನು ನಿರ್ವಹಿಸುವುದು ಪ್ರತಿ ಯೊಬ್ಬರ ಧರ್ಮ. ಆ ಕರ್ತವ್ಯವನ್ನೇ ನೀವು ನಿರ್ವಹಿ ಸಿದ್ದೀರಿ. ರಂಗನಾಥ ನಿಮ್ಮನ್ನು ಕರುಣಿಸಲಿ.

ನಿರೂಪಕ : (ಅಮ್ಮನ ಆಶೀರ್ವಾದ ಪಡೆದು ಸಾಹೇಬರು ಹೊರಟರು, ವೆಂಕಟರಾಯ ಸೆರೆಯಿಂದ ಹೊರಬಂದ ಸುಳ್ಳು ಆರೋಪ ಹೊರಿಸಿದರಿಗೆ ಶಿಕ್ಷೆ ವಿಧಿಸಲಾಯಿತು)

o o o o

(ನಿತ್ಯದ ಪೂಜಾ ವಿಧಾನ ಕೀರ್ತನೆಗಳಲ್ಲಿ ತೊಡಗಿದ ಅಮ್ಮನಿಗೆ ತೀರ್ಥಯಾತ್ರೆಗೆ ಹೋಗ ಬೇಕೆಂದು ಇಚ್ಛೆಯಾಯಿತು. ಅಮ್ಮನವರ ದರ್ಶನವನ್ನು ಪಡೆಯಬೇಕೆಂದು ಇಚ್ಛಿಸಿದ ಸಾವಿರಾರು ಜನ ಭಕ್ತರನ್ನು ಕಾಣಲು ಅಮ್ಮನವರೂ ಇಚ್ಛಿಪಟ್ಟರು. ಒಂದು ಸಂಜೆ ಭಜನೆಯ ತರುವಾಯ ತನ್ನ ಇಚ್ಛೆಯನ್ನು ಭಕ್ತರೆದುರು ಪ್ರಕಟಪಡಿಸಿದರು.)

ಅಮ್ಮ : ಇದುವರೆಗೆ ಕಟ್ಟೆಯಲ್ಲಿಯೇ ರಂಗನಾಥನು ಸೇವೆಯನ್ನು ತೆಗೆದುಕೊಂಡ. ನಾನು ಕವಿತಾಚಾತುರ್ಯದ ಮಹಿಮೆಯನ್ನರಿಯೆ, ಗುರುಮುಖದಲ್ಲಿ ಕೇಳಲಿಲ್ಲ ಪರಮದಯಾಳು ಹೆಳವನಕಟ್ಟೆ ರಂಗಯ್ಯನ ವರವಿತ್ತು ಅನುದಿನವೂ ಸಲುಹಿದ. ಹೆಣ್ಣು ಬಾಲೆ ನಾನು ಅಚ್ಚ ಚಾತುರ್ಯದ ಸದನ ಅರಿಯೆ, ನಿನ್ನನೇ ನೆಚ್ಚಿ ಹೆಳವನಕಟ್ಟೆ ರಂಗಯ್ಯನ ಉಚ್ಚರಿಸಿದೆ, ಪಾಲಿಸುವುದು.

ನಾನು ಇನ್ನು ಮುಂದೆ ತೀರ್ಥಯಾತ್ರೆಗೆ ಹೊರಡಬೇಕೆಂದಿದ್ದೇನೆ. ಬರಲಿಚ್ಛಿಸುವ ಭಕ್ತರು ಅಣಿಯಾಗಬಹುದು.

ಭಕ್ತರು : ಅಮ್ಮಾ , ಮಿತ ಪರಿವಾರದೊಡನೆ ಹೊರಟರೆ ವಾಹನ ಸೌಕರ್ಯವನ್ನು ಇತರ ಅನುಕೂಲತೆಗಳನ್ನೂ ನಾವು ಏರ್ಪಡಿಸುತ್ತೇವೆ. ಅದೂ ರಂಗನಾಥನ ಸೇವೆ.

ಅಮ್ಮ : ರಂಗನಾಥನು ನಮ್ಮ ದೇಹದಲ್ಲಿ ಇನ್ನೂ ಶಕ್ತಿಯನ್ನು ಉಳಿಸಿದ್ದಾನೆ. ಆದ್ದರಿಂದ ಮಿತ ಪರಿವಾರದೊಡನೆ ಕಾಲು ನಡಿಗೆಯಲ್ಲೇ ಈ ಯಾತ್ರೆಯನ್ನು ಮುಗಿಸಬೇಕೆಂದು ಪ್ರಭುವಿನ ಪ್ರೇರಣೆಯಾಗಿದೆ.

ಈ ಪ್ರಾಂತದ ಅನೇಕ ಭಕ್ತರು ಭಿಕ್ಷೆ ನೀಡಲು ನೀಡಲು ಆತುರರಾಗಿದ್ದಾರೆ. ಆದುದರಿಂದ ಅನ್ನಾಹಾರಗಳ ಬೇರೆ ಏರ್ಪಾಟು ಕೂಡ ಬೇಕಾಗಿಲ್ಲ. ಆಯಾ ಭಾಗದ ಭಕ್ತರ ಸೇವೆಯನ್ನೂ ಸ್ವೀಕರಿಸಬೇಕಲ್ಲವೆ ? ಅದಕ್ಕೆ ನೀವು ಅನುವಾಗಬೇಕು.

ಭಕ್ತರು : ಅಮ್ಮನವರ ಇಚ್ಛೆ, ರಂಗನಾಥನ ಅನುಗ್ರಹ, ನಾವು ತಮ್ಮೊಂದಿಗೆ ಹೊರಡಲು ಅಣಿಯಾಗುತ್ತೇವೆ.

(ಶುಭ ದಿನದಲ್ಲಿ ಅಮ್ಮನವರು ಭಕ್ತರ ತಂಡದೊಡನೆ ಯಾತ್ರೆ ಹೊರಟರು. ದಾರಿಯುದ್ದಕ್ಕೂ ಭಜನೆ, ಕೀರ್ತನೆ. ಅಮ್ಮನವರ ಕೀರ್ತನೆ ಗಾಯನದಿಂದ ಅಲ್ಲಲ್ಲಿಯ ಭಕ್ತರು ಸಂತುಷ್ಟರಾಗಿ ದರ್ಶನಕ್ಕೆ ಪಡುತ್ತಿದ್ದರು. ಭಕ್ತ ವೃಂದಕ್ಕೆ ಭವ್ಯ ಸ್ವಾಗತ ದೊರೆಯುತ್ತಿತ್ತು. ತವರು ಮನೆಯ ಕುಲದೈವ ದೇವರಗುಡ್ಡನ ಮೈಲಾರ ಲಿಂಗವನ್ನು ಅಮ್ಮ ಮೊದಲು ಕಂಡರು.)

ಅಮ್ಮ : ಹೆತ್ತೋರ ಮನೆದೈವ ಶ್ರೀ ಮೈಲಾರಗೆ ಹಸ್ತವ ಮುಗಿದು ವಂದಿಸುವೆ.

ಭಕ್ತವೃಂದ : ಮೈಲಾರ ಲಿಂಗಸ್ವಾಮೀಗೇ ಉದ್ದಂಡ ಪ್ರಣಾಮ, ಅಪರಾಧವನ್ನು ಮನ್ನಿಸು ಪ್ರಭೋ.

ಅಮ್ಮ : ಮಂಗಳಾತ್ಮನು ಮಲ್ಲರಿವಾ ದೇವೋತ್ತುಂಗ ಹೆಳವನ ಕಟ್ಟೆಯ ರಂಗಗತಿ ಸಖನಾದ ನೀಲಗಿರಿರಂಗ ಮಾಲತಿ ಸಂಗ ಬೇಗದಿ ॥

ಪ್ರಭೋ, ನಿನ್ನ ದರುಶನ ಪಡೆದು, ಭಕ್ತರನ್ನು ಕಂಡು ಪುನೀತಳಾದೆ. ಮುಂದೆ ಸಾಗಲು ಅನುಗ್ರಹಿಸು.

(ಪೂಜೆ ಪ್ರಸಾದ ಮುಗಿಸಿ ಭಕ್ತವೃಂದ ಮುಂದೆ ಸಾಗಿತು. ಗೋಕರ್ಣದ ಮಹಾಬಲೇಶ್ವರರನ್ನೂ ಶಿವಮೊಗ್ಗೆಯ ಬಳಿ ಮಹೇಂದ್ರಕ್ಷೇತ್ರದ ದೇವದೇವನನ್ನೂ ಕಂಡು ಮುಂದುವರಿಯುವಷ್ಟರಲ್ಲಿ ಅಮ್ಮನಿಗೆ ದೇಹಾಲಸ್ಯವಾಯಿತು. ಭಕ್ತರು ಹೆಳವನಕಟ್ಟೆಗೆ ಹಿಂಭರುಗಬೇಕೆಂದು ಮೊರೆಯಿಟ್ಟರು.

ಭಕ್ತರು : ಅಮ್ಮ ಈ ತೀರ್ಥಯಾತ್ರೆಯನ್ನು ಇಲ್ಲಿಗೆ ಮುಗಿಸಿ, ಗಾಡಿಗಳಲ್ಲಿ ಹೆಳವನಕಟ್ಟೆಗೆ ಹೊರಟುಬಿಡೋಣ ತಮಗೆ ತುಂಬ ದಣಿವಾಗಿದೆ. ಆರೋಗ್ಯವನ್ನು ಸುಧಾರಿಸಿಕೊಂಡು ಮತ್ತೆ ಬೇಕಾದರೆ ಹೊರಡಬಹುದು.

ಅಮ್ಮ : ಒಡಲಿನ ಆಲಸ್ಯಕ್ಕೆ ಹೆದರಿ ಒಡೆಯನ ದರ್ಶನ ಮಾಡದೆ ಹಿಂದಿರುಗುವುದು ಸಾಧ್ಯವಲ್ಲ. ಈ ನಶ್ವರವಾದ ಬಾಳ್ವೆಯ ಅವಧಿಯಲ್ಲಿಯೇ ಶಾಶ್ವತ ಮುಕ್ತಿಯನ್ನು ಬಯಸಿ ನಾವು ಪುಣ್ಯಕ್ಷೇತ್ರಗಳ ಸಂಸರ್ಶನಕ್ಕೆ ಬಂದಿರುವುದು. ನಮ್ಮ ದೇಹಕ್ಕೆ ಆಲಸ್ಯವಾಗಲಿ ಅಥವಾ ಅದು ಇಲ್ಲಿಯೇ ಉರುಳಿ ಬೀಳಲಿ, ಸಂಕಲ್ಪವನ್ನು ಮಾತ್ರ ಅಪೂರ್ಣಗೊಳಿಸಲಾಗದು.

ಭಕ್ತರು : ರಂಗನಾಥನ ಇಚ್ಛೆ !

(ಭಕ್ತರ ತಂಡ ಮತ್ತೆ ಮುಂದುವರಿಯಿತು. ದಾಗಿದಕಟ್ಟೆಯ ನರಸಿಂಹಸ್ವಾಮಿಯ ಕ್ಷೇತ್ರಕ್ಕೆ ಬಂದು ಭಕ್ತರು ತಂಗಿದರು. ಅಮ್ಮನಿಗೆ ಅಪಾರ ಸಂತೋಷ.)

ಮ್ಮ: ಪ್ರಭುವೇ ನಿನ್ನನ್ನು ಕಾಣಬೇಕೆಂಬ ನನ್ನ ಸಂಕಲ್ಪವನ್ನು ಪೂರ್ತಿಗೊಳಿಸಿದೆಯಲ್ಲ ಬಾಲಕ ಪ್ರಹ್ಲಾದನನ್ನು ಕಾಪಾಡಿದಂತೆ ನಮ್ಮನ್ನು ಕಾಪಾಡು ವುದಿಲ್ಲವೇ ನೀನು ? ನೀನಿರುವಾಗ ನಮಗ್ಯಾತರ ಚಿಂತೆ ಸ್ವಾಮೀ.

ಪ್ರಭೋ ನಿನ್ನ ಅಪ್ಪಣೆ ಪಡೆದು ಹೆಳವನ ಕಟ್ಟೆಗೆ ಹಿಂದಿರುಗುತ್ತೇನೆ. ಇಲ್ಲಿಯವರೆಗೆ ಕರೆಸಿಕೊಂಡೆ, ಇನ್ನು ಸದಾಕಾಲ ನಿನ್ನ ಬಳಿಯಲ್ಲಿರುವುದಕ್ಕೆ ಎಂದು ಕರೆಸಿಕೊಂಡೆ ರಂಗನಾಥ.

ಭಕ್ತವೃಂದ: ಪ್ರಭೋ ಕರುಣಿಸು ಕರುಣಿಸು.

ನಿರೂಪಕ: (ಅಮ್ಮನವರ ಮಾತುಗಳಿಂದ ಭಕ್ತರು ದಾರಿ ತಿಳಿಯದಾದರು. ಅವರ ಇಚ್ಛೆಯಂತೆ ಎತ್ತಿನ ಗಾಡಿ ಗಳಲ್ಲಿ ಹೊರಟು ಹೆಳವನಕಟ್ಟೆಗೆ ಹಿಂದಿರುಗಿದರು. ಬಳಿಕ ನಾಲ್ಕು ದಿನಗಳನ್ನು ಮೌನ ಧ್ಯಾನದಲ್ಲಿ ಅಮ್ಮ ಕಳೆದರು. ರಂಗನಾಥನಿಗೆ ಮೌನ ಪೂಜೆ ಸಲ್ಲಿಸಿದರು. ಒಂದು ಸಂಜೆ ಭಕ್ತವೃಂದವನ್ನು ಕುರಿತು ರಂಗನಾಥ ನಿಂದ ದೊರೆತ ಪ್ರೇರಣೆಯನ್ನು ಸಂತೋಷದಿಂದ ಬಿತ್ತರಿಸಿದರು.)

ಅಮ್ಮ: ಮಕ್ಕಳೆ, ಇಂದು ನನ್ನ ಕೊನೆಯ ಮಾತು, ಲೌಕಿಕ ವ್ಯವಹಾರನ್ನು ನಡೆಸುವ ಈ ದೇಹವನ್ನು ತೊರೆದು ಸನ್ನಿಧಿಗೆ ಬರಲು ರಂಗನಾಥನ ಪ್ರೇರಣೆ ಯಾಗಿದೆ.

ಭಕ್ತವೃಂದ: (ದುಃಖದಲ್ಲಿ) ಅಮ್ಮಾ ಅಮ್ಮಾ ನಮ್ಮನ್ನು ತೊರೆದು ಹೋಗಬೇಡ, ಅನಾಥರನ್ನಾಗಿ ಮಾಡಬೇಡ.

ಅಮ್ಮ: ತಾಳಿಕೊ ಮಗು ಸ್ಥೈರ್ಯಗೆಡಬೇಡ. ರಂಗ ನಾಥನ ಕರುಣೆಯಿರುವವರೆಗೆ ನಾವಾರೂ ಅನಾಥ ರಲ್ಲ! ಸನಾಥರನ್ನಾಗಲೀ ಅನಾಥರನ್ನಾಗಲಿ ಮಾಡುವ ಶಕ್ತಿ ಮನುಷ್ಯ ಮಾತ್ರರಿಗೆಲ್ಲಿದೆ ?.... ಒಡೆಯನ ಅಣ ತಿಯಂತೆ ಶ್ರಾವಣಶುದ್ಧ ಪಂಚಮಿಯದಿನ ಕನ್ನಾ ಗಟ್ಟಿಗೆ ತೆರಳಿ ತುಂಗೆಯ ಪ್ರವಾಹದಲ್ಲಿ ಸೇರಿ ಹೋಗುತ್ತೇವೆ,

(ಸಭೆ ಕೇಳಿ ಸ್ತಂಬೀಭೂತವಾಯಿತು. ಭಕ್ತರ ಕಣ್ಣಿಂದ ನೀರಿಳಿದವು)

ಅಮ್ಮ: (ನಗುತ್ತ) ರಂಗನಾಥ ಸೂತ್ರಧಾರಿಯಾಗಿ ನಮ್ಮ ನ್ನಾಡಿಸುತ್ತಾನೆ. ಗೊಂಬೆಗಳಂತೆ ನಾವು ಕುಣಿಯು ತ್ತೇವೆ. ಒಮ್ಮೆ ನಗು ಒಮ್ಮೆ ಅಳು! ಆದರೆ ಇರುವ ನಾಲ್ಕು ದಿನಗಳಲ್ಲಿಯೇ ಸಾರ್ಥಕ ಬದುಕು ನಮ್ಮ ದಾಗಬೇಕು. ಮಾನವ ಜನ್ಮವನ್ನು ನಮಗಿತ್ತ ಒಡೆ ಯನಿಗೆ ಒಳ್ಳೆಯ ಹೆಸರು ತರುವಂತೆ ಬದುಕಬೇಕು. ಹುಟ್ಟುವ ಮೊದಲು ಎಲ್ಲಿದ್ದೆವು ತಿಳಿಯದು, ದೇಹ ತೊರೆದ ಮೇಲೆ ಎಲ್ಲಿಗೆ ಹೋಗುತ್ತೇವೋ ತಿಳಿಯದು. ಮಧ್ಯದ ಜೀವನದಲ್ಲಿ ಅಹಂಭಾವ ಅಸೂಯೆಗಳನ್ನು ತೊರೆದು, ಒಡೆಯನ ಅಣತಿಯನ್ನು ಪಾಲಿಸಬೇಕು. "ನಾನಾರು ? ನನ್ನದೆನ್ನುವದೇನು ?" ಎಂಬುದನ್ನು ಯಾರಿಗೂ ಹೇಳಲು ಬಾರದು. ಈ ರಹಸ್ಯವನ್ನು ಅರಿಯುವುದು ಕಷ್ಟ! ರಂಗನಾಥನಿಗೆ ಅನನ್ಯ ಭಾವ ದಿಂದ ಶರಣು ಹೋಗುವದೊಂದೇ ದಾರಿ.

ನಿಮ್ಮ ಬದುಕು ಹಿಮಾಲಯದಂತೆ ಉನ್ನತವಾ ಗಲಿ, ಸಾಗರದಂತೆ ವಿಶಾಲವಾಗಲಿ ರಂಗನಾಥನ ಕರುಣೆ ನಿಮ್ಮೆಲ್ಲರನ್ನೂ ಸದಾಕಾಲ ಕಾಪಾಡಲಿ.

ನಿರೂಪಕ: (ಭಕ್ತಜನ ಆರ್ತರಾಗಿ ಅಮ್ಮಾ ಈಗಲೇ ನಮ್ಮನ್ನು ಬಿಟ್ಟು ಹೋಗಬೇಡಿ ಎಂದು ಬೇಡಿ ಕೊಂಡರು, ಅತ್ತರು, ಕರೆದರು. ಅಮ್ಮಾ ರಂಗನಾಥ ನನ್ನೇ ಬೀಳ್ಕೊಂಡು. ಉಳಿದಾವುದನ್ನೂ ಗಣನೆಗೆ ತಾರದೆ ಹೊರಟೇ ಹೋದರು. ಜನತೆಯನ್ನು ಸಂತೈ ಸುತ್ತ ಸಂತೈಸುತ್ತ ಅದೃಶ್ಯರಾದರು.)

ಗಿರಿಯಮ್ಮನಂತಹ ಭಕ್ತಳನ್ನು ಪಡೆದ ಕನ್ನಡ ನಾಡು ನುಡಿ ಧನ್ಯವಾದವು. ಗಿರಿಯಮ್ಮನಂತಹ ಭಕ್ತ ಳಿಂದ ಹೆಳವನಕಟ್ಟೆಯ ರಂಗನಾಥ ಹೆಸರು ವಾಸಿಯಾ ದನೋ, ಹೆಳವನಕಟ್ಟೆಯ ರಂಗನಾಥನಿಂದಾಗಿ ಗಿರಿ ಯಮ್ಮ ಹಸರುವಾಸಿಯಾದಳೋ ಹೇಳುವದೇ ಕಷ್ಟ: ರಂಗನಾಥನು ಭಕ್ತರಕ್ಷಕನೂ ಅಹುದು, ಭಕ್ತಸೇವ ಕನೂ ಅಹುದು !!

# ಸಂಸ್ಕೃತ ಕವಿಯಿತ್ರಿಯರ ಕೆಲವು ಕೃತಿಗಳು

— ಲಲಿತಾರಾವ್

"ಸಾಹಿತ್ಯ ಸೃಷ್ಟಿಗೆ ಸ್ತ್ರೀ-ಪುರುಷರೆಂಬ ಭೇದವಿಲ್ಲ, ಕರ್ತೃಗಳು ಬೇರೆಯಾದರೂ ಕೃತಿಯೆಲ್ಲಾ ಒಂದೇ ಬಗೆಯದು," ಎಂಬ ವಾದವನ್ನು ಒಪ್ಪುವುದಾದರೂ, "ಸಾಹಿತ್ಯವು ಜನಜೀವನದ ರನ್ನಗನ್ನಡಿ, ವಾಸ್ತವಿಕತೆಯ ಪ್ರತೀಕ, ಅನುಭವದ ಫಲ" ಎಂಬೆಲ್ಲ ವಾದಗಳ ಸತ್ಯಾಂಶವನ್ನು ಪರಿಗಣಿಸುವಾಗ, ಸ್ತ್ರೀ-ಪುರುಷರ, ಅನುಭವಗಳ ಕ್ಷೇತ್ರ ವಾತಾವರಣ ಪರಿಸರಗಳ, ವಿಭಿನ್ನತೆಯಿಂದಾಗಿ, ಅವರಿಂದ ಹೊರಹೊಮ್ಮುವ ಸಾಹಿತ್ಯ ಸೃಷ್ಟಿಯಲ್ಲಿಯೂ ಕೂಡ, ವೈವಿಧ್ಯತೆಯಿರುವುದನ್ನು ನಾವು ಒಪ್ಪಲೇ ಬೇಕಾಗುತ್ತದೆ. ಹೀಗಾಗಿ ಅನುಭವದಿಂದ ಹೊರಹೊಮ್ಮುವ ಸ್ತ್ರೀ-ಪುರುಷರ ಸಾಹಿತ್ಯ ಸೃಷ್ಟಿಯಲ್ಲಿ ಮೇಲ್ನೋಟಕ್ಕೆ ಹೋಲಿಕೆಯಿದ್ದರೂ ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸುವಲ್ಲಿ, ಅವರವರ ಅನುಭವಕ್ಕೆ ಅನುಗುಣವಾಗಿ, ವಿಭಿನ್ನತೆ, ಇರುವುದೆಂಬುದು, ವಾಸ್ತವಾಂಶವಾಯಿತು. ಆದರೆ "ಕಾವ್ಯ ಮೀಮಾಂಸಾ" ಗ್ರಂಥದ ಕರ್ತೃವಾದ ಹತ್ತನೆಯ ಶತಮಾನದ ರಾಜಶೇಖರನು "ಕಾವ್ಯ ರಚನೆಗೆ ಸ್ತ್ರೀ-ಪುರುಷರೆಂಬ ಲಿಂಗಭೇಧವಿಲ್ಲ, ಅವರವರ ಆತ್ಮ ಸಂಸ್ಕಾರ, ಅಂತಸ್ಸತ್ವಗಳಿಗನುಗುಣವಾಗಿ, ಇಬ್ಬರೂ ಕಾವ್ಯವನ್ನು ರಚಿಸಬಲ್ಲರೆಂದು ಹೇಳಿದ್ದಾನೆ. ಈ ಮಾತು ಎಲ್ಲ ಭಾಷೆಗಳ ಕಾವ್ಯ ರಚನೆಗೂ ಅನ್ವಹಿಸುತ್ತದೆ. ಸಂಸ್ಕೃತ ಭಾಷೆಯಲ್ಲಿ ಈ ತತ್ವಕ್ಕೆ ಹೊರತಲ್ಲ. ಈ ಭಾಷೆಯಲ್ಲಿಯೂ, ಪುರುಷರಂತೆ ಸ್ತ್ರೀಯರೂ ಅಮೂಲ್ಯವಾದ ಕಾವ್ಯಗಳನ್ನು ರಚಿಸಿ ಯಶಃಕಾಯರಾಗಿರುವರೆಂಬುದು, ಅನೇಕ ಸಂಸ್ಕೃತ ಕವಿಗಳ ಉಲ್ಲೇಖನದಿಂದ ನಮಗೆ ತಿಳಿದು ಬಂದಿದೆ. ಧನದೇವನು ಕೆಲವು ಸಂಸ್ಕೃತ ಕವಯಿತ್ರಿಯರ ಹೆಸರುಗಳನ್ನು ಹೀಗೆ ತಿಳಿಸಿದ್ದಾನೆ :

"ಶೀಲಾ, ವಿದ್ಯಾ, ಮಾರುಲಾ, ಮೋರಿಕಾದ್ಯಾಃ
ಕಾವ್ಯ ಕರ್ತುಂಸಂತಿ ವಿಜ್ಞಾಃ ಸ್ತ್ರೀಲೋಪಿ ॥"

"ಶೀಲಾ, ವಿದ್ಯಾ, ಮಾರುಲಾ, ಮೋರಿಕಾ ಮೊದಲಾದವರು ಸ್ತ್ರೀಯರಾಗಿದ್ದರೂ ಸಂಸ್ಕೃತದಲ್ಲಿ ಕಾವ್ಯಗಳನ್ನು ರಚಿಸಲು ಸಮರ್ಥರಾಗಿದ್ದಾರೆ." ಅನೇಕ ಸಂಸ್ಕೃತ ಸಾಹಿತ್ಯ ಗ್ರಂಥಗಳಲ್ಲಿ, ಅಲಂಕಾರ ಶಾಸ್ತ್ರ ಕೃತಿಗಳಲ್ಲಿ, ಸುಭಾಷಿತಾವಲ್ಲಿಗಳಲ್ಲಿ ಸುಮಾರು 32 ಜನ ಕವಯಿತ್ರಿಯರ ಬಿಡಿ ಪದ್ಯಗಳು, ಉದಾಹೃತವಾಗಿರುವುದಲ್ಲದೆ, ನಾಲ್ಕು ಜನ ಕವಯಿತ್ರಿಯರ ಪೂರ್ಣ ಕೃತಿಗಳು ನಮಗೆ ದೊರೆತಿವೆ. ಈ ಎಲ್ಲ ಕವಯಿತ್ರಿಯರ ಕೃತಿಗಳೂ ರಸಪ್ರತಿಪಾದನೆಯಲ್ಲಿ, ವಿಷಯ ನಿರೂಪಣೆಯಲ್ಲಿ, ಜ್ಞಾನ ಪ್ರಸಾರದಲ್ಲಿ, ವಸ್ತು ವೈವಿಧ್ಯದಲ್ಲಿ ಪುರುಷ ಕೃತಿಗಳಿಗೆ ಯಾವ ರೀತಿಯಿಂದಲೂ ಕಳಪೆಯಿಲ್ಲ ಎಂಬುದಕ್ಕೆ ಅವುಗಳನ್ನು ಇತರ ಕವಿಗಳು ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿ, ಉದಹರಿಸಿ, ಮುಕ್ತಕಂಠದಿಂದ ಹಾಡಿ, ಹೊಗಳಿರುವುದೇ ಸೂಕ್ತ ನಿದರ್ಶನ. ಇವರುಗಳು ತಮ್ಮ ಕೃತಿಗಳಲ್ಲಿ ಶ್ಲಾಘಿಸಿರುವ ಕವಯಿತ್ರಿಯರಲ್ಲಿ ಶೀಲಾಭಟ್ಟಾರಿಕಾ, ಇಂದುಲೇಖಾ, ವಿದ್ಯಾವತೀ, ಪದ್ಮಾವತೀ, ತ್ರಿಭುವನ ಸರಸ್ವತೀ, ಭಾವದೇವಿ, ಸುಭದ್ರಾ-ಮೊದಲಾದವರು ಪ್ರಮುಖರು. ಕೆಲವರು ತಮ್ಮ ಹೆಸರುಗಳಿಗಿಂತ, ವಿಶೇಷಣಗಳಿಂದ ಕೂಡಿದ ತಮ್ಮ ಕಾವ್ಯನಾಮದಿಂದಲೇ ಹೆಚ್ಚು ಖ್ಯಾತರಾಗಿದ್ದಾರೆ. ಉದಾಹರಣೆಗೆ : "ಸರಸ್ವತೀ ಕುಟುಂಬ ದುಹಿತಾ", "ರಸವತೀ ಪ್ರಿಯಂವದಾ", ಜಘನೆ ಚಪಲಾ", "ವಿಕಟನಿತಂಬಾ", "ಮಧುರವಾಣೀ", "ಕಾಮಾಕ್ಷೀ", "ಮದಿರೇಕ್ಷಣಾ", "ಮದಾಲಸಾ"-ಇವು ಕೆಲವು ಆಕರ್ಷಕ ಹೆಸರುಗಳು ಇವರೆಲ್ಲರ ಕಾಲ, ವ್ಯಕ್ತಿ

ಚರಿತ್ರೆಗಳನ್ನು ಇವರುಗಳ ಬಗ್ಗೆ ಉಲ್ಲೇಖಿಸಿರುವ ಇತರ ಕವಿಗಳ ಗ್ರಂಥಗಳಿಂದ ಊಹಿಸಬೇಕಾಗುತ್ತದೆ. ಇವರ ಕಾವ್ಯ ಪ್ರತಿಭೆಗೆ ಒಳಪಡದ ವಸ್ತುವಿನ್ಯಾಸವೇ ಇಲ್ಲ. ಸ್ತ್ರೀ ಪುರುಷರ ಪ್ರೇಮ, ವಿರಹ, ಸೌಂದರ್ಯ ವರ್ಣನೆ, ಪ್ರಕೃತಿ ಚಿತ್ರಣ, ಋತುಗಳ ವೈಶಿಷ್ಟ್ಯ, ಮಾನವ ಸ್ವಭಾವ, ವಿವಿಧ ಮುಖಗಳ ಭಾವಾವೇಶಗಳ ಹೃದಯಂಗಮ ನೈಜ ಚಿತ್ರಣ, ದೇವತಾ ಸ್ತೋತ್ರ-ಇವೆಲ್ಲವೂ ಅವರುಗಳ ಬಿಡಿ ಪದ್ಯಗಳಲ್ಲಿ ಇತರ ಪುರುಷ ಕೃತಿಗಳ ಮಟ್ಟಕ್ಕೆ ಕಡಿಮೆ ಯಿಲ್ಲದಂತೆ ಸೂಕ್ಷ್ಮ ದೃಷ್ಟಿಯಿಂದ ಹೆಣ್ಣು ಹೃದಯದ ಭಾವ ತರಂಗಗಳ ಮೂಲಕ ಹೊರ ಹೊಮ್ಮಿವೆ. ಪುರುಷರು ಸ್ತ್ರೀಯರ ಸೌಂದರ್ಯವನ್ನು ತಮ್ಮ ಕೃತಿಗಳಲ್ಲಿ ವರ್ಣಿಸಿದ್ದರೆ, ಇವರುಗಳು ಪುರುಷರ ಸೌಂದರ್ಯವನ್ನು ತಮ್ಮದೇ ಆದ ದೃಷ್ಟಿ ಕೋನದಿಂದ ವೀಕ್ಷಿಸಿ, ಬಹಳ ಬಂಧುರವಾದ ರೀತಿಯಲ್ಲಿ ವರ್ಣಿಸಿರುವುದು ಅತ್ಯಂತ ಹೆಮ್ಮೆಯ ವಿಷಯ. ಉದಾಹರಣೆಗೆ ಗಂಗಾದೇವಿಯಿಂದ ಕಂಪಣರಾಯನ ವರ್ಣನೆ, ತಿರುಮಲಾಂಬೆಯಿಂದ ಅಚ್ಯುತರಾಯನ ವರ್ಣನೆ ಮತ್ತು ರಾಮಭದ್ರಾಂಬೆಯಿಂದ ರಘುನಾಥರಾಯನ ವರ್ಣನೆ. ಈ ಕವಯಿತ್ರಿಯರ ಪದ್ಯಗಳಲ್ಲಿ ಬಹುಭಾಗವು ಶೃಂಗಾರರಸ ಪ್ರಧಾನವಾದವುಗಳು. ಶೃಂಗಾರದ ವಿವಿಧ ಮುಖಗಳಾದ, ಪ್ರಥಮ ನೋಟದಲ್ಲಿನ ಪ್ರೇಮಾಂಕುರ, ವಿಪ್ರಲಂಭ ಶೃಂಗಾರ, ವಿರಸ, ಕಲಹ, ವಿರಹ-ಮೊದಲಾದುವುಗಳನ್ನು ತಮ್ಮದೇ ಆದ ಧಾಟಿಯಲ್ಲಿ ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಈ ಎಲ್ಲ ಕವಯಿತ್ರಿಯರ ಕೃತಿಗಳನ್ನು ಅವಲೋಕಿಸಿದಾಗ ಒಂದು ಸಾಮಾನ್ಯ ಅಂಶ ನಮಗೆ ವೇದ್ಯವಾಗುತ್ತದೆ. ಅದೇನೆಂದರೆ, ಇವರೆಲ್ಲರಿಗೂ ತಮ್ಮ ತಮ್ಮ ಕೃತಿಗಳ ಬಗ್ಗೆ ತಮ್ಮ ಪಾಂಡಿತ್ಯದ ಬಗ್ಗೆ ಎಣೆಯಿಲ್ಲದ ಆತ್ಮವಿಶ್ವಾಸ, ತಾವು ವಿದ್ವತ್ತಿನಲ್ಲಿ ಬೇರಾವ ಪುರುಷರಿಗೂ ಕಡಿಮೆಯಿಲ್ಲವೆನ್ನುವ ದೃಢ ನಂಬಿಕೆ. ಉದಾಹರಣೆಗೆ-"ಕೌಮುದೀ ಮಹೋತ್ಸವ"ವನ್ನು ಬರೆದಿರುವುದಾಗಿ ಪ್ರಥಿತಳಾಗಿರುವ ವಿಜ್ಜಿಕಾ ಅಥವಾ ವಿಜಯಾಂಬಿಕೆಯು ತನ್ನ ವ್ಯಕ್ತಿತ್ವದ ಬಗ್ಗೆ ಹೀಗೆ ಹೇಳಿಕೊಂಡಿದ್ದಾಳೆ :

"ನೀಲೋತ್ಪಲ ದುಶ್ಯಾಮಾಮ್ ವಿಜ್ಜಿಕಾಮ್
ಮಾಮ ಜಾನತಾ ।
ವೃಥೈವ ಗಂಡಿನಾ ಪ್ರೋಕ್ತಾ, ಸರ್ವಶುಕ್ಲಾ ಸರಸ್ವತಿ"॥

ನೀಲೋತ್ಪಲದಂತೆ ಕಪ್ಪಗಿರುವ, ವಿಜ್ಜಿಕೆಯೆಂಬ ನನ್ನನ್ನು ತಿಳಿಯದೆ ದಂಡಿಯು ವೃಥಾ ಸರಸ್ವತಿಯು ಬೆಳ್ಳಗಿರುವಳೆಂದು ಹೇಳಿದ್ದಾಳೆ."

ಪೂರ್ಣ ಕೃತಿಗಳನ್ನ ರಚಿಸಿದ ನಾಲ್ಕು ಕವಯಿತ್ರಿಯರ ಕೃತಿಗಳ ಬಗ್ಗೆ ಈಗ ಸ್ಥೂಲವಾಗಿ (ಸ್ಥಳಾಭಾವದ ಪ್ರಯುಕ್ತ) ವಿವೇಚಿಸೋಣ:—ಇವರಲ್ಲಿ, "ಕೌಮುದೀ ಮಹೋತ್ಸವ"ವನ್ನು ಬರೆದ, ವಿಜ್ಜಿಕಾ ಅಥವಾ ವಿಜಯಾಂಬಿಕೆಯೇ, ಬಹಳ ಪ್ರಾಚೀನವೆಂದು ಪರಿಗಣಿಸಲ್ಪಟ್ಟಿದ್ದಾಳೆ. ಇವಳನ್ನು ಬಾದಾಮಿಯ ಚಾಲುಕ್ಯ ರಾಜನಾದ ಎರಡನೆಯ ಪುಲಿಕೇಶಿಯ ಮಗನಾದ ಚಂದ್ರಾದಿತ್ಯನ ಮಡದಿಯೆಂದು ಸಂಶೋಧಕರು ಊಹಿಸಿದ್ದಾರೆ. ಇವಳ ಕಾಲವನ್ನ ಸುಮಾರು ಏಳನೇ ಶತಮಾನದಿಂದ 10ನೇ ಶತಮಾನದವರೆಗಿನ ಕಾಲದೊಳಗೆಂದು ತರ್ಕಿಸಿದ್ದಾರೆ. "ಕೌಮುದೀ ಮಹೋತ್ಸವವು", ಐದು ಅಂಕಗಳಿಂದ ಕೂಡಿದ, ಐತಿಹಾಸಿಕ ನಾಟಕವಾಗಿ, ಚಾರಿತ್ರಿಕ ದೃಷ್ಟಿಯಿಂದ ಅದಕ್ಕೆ ಮಹತ್ವವಿದ್ದರೂ, ಕಾವ್ಯದ ದೃಷ್ಟಿಯಿಂದ ಅದು ಒಂದು ಉತ್ತಮ ಮಟ್ಟದ ನಾಟಕವೆಂದು ಹೇಳಬಹುದು. ನಾಟಕದ ಆರಂಭದಲ್ಲಿ, ಕಾಳಿದಾಸನು, ಸಭಿಕರಲ್ಲಿ, ತನ್ನ ನಾಟಕದ ಬಗ್ಗೆ ವಿನಯದಿಂದ, ಅರಿಕೆ ಮಾಡಿಕೊಳ್ಳುವಂತೆ, ಇವಳೂ ಕೂಡ, ತನ್ನ ನಾಟಕದಲ್ಲಿ ಏನೇನು ದೋಷಗಳಿದ್ದರೂ, ಓದುಗರು, ಸಹೃದಯಿಗಳಾಗಿದ್ದಲ್ಲಿ, ಚಳಿಗಾಲದಲ್ಲಿನ, ಬಿಸಿಲಿನಂತೆ ಸಹ್ಯವಾಗುವುದಾಗಿ, ವಿಜ್ಞಾಪಿಸಿ ಕೊಳ್ಳುತ್ತಾಳೆ.

"ವಿರಸಾಪಿ, ಕೃತಿಃ ಪಪತ್ಸತೇ, ಮಧು ನಿಷ್ಪಂದ
ಮಮೀಂ ದಶಾಂತರಾಮ್ ।
ಯದಿನಾಮ ಸತಾಮನುಗ್ರಹಃ ಶಿಶಿರಃ, ಪ್ರಾಪ್ಯ
ರವೇರಿ ವಾತಪಮ್ ॥

ಪಾಠಲೀ ಪುತ್ರದ ದೊರೆಯಾದ ಸುಂದರವರ್ಮನ ಮಗ ಕಲ್ಯಾಣ ವರ್ಮನಿಗೂ, ಮಧುರೆಯ ರಾಜನಾದ, ಕೀರ್ತಿಕ್ಷೇಣನ ಮಗಳಾದ, ಕೀರ್ತಿಮತಿಗೂ ನಡೆಯುವ ವಿವಾಹವೇ ನಾಟಕದ ಮುಖ್ಯ ಕಥಾವಸ್ತು. ಅವರಿಬ್ಬರಲ್ಲಿ ಅಂಕುರಿಸುವ ಪ್ರಥಮ ನೋಟದ ಅನುರಾಗ, ಕುತೂಹಲ ಕಾತುರ, ವಿರಹ, ಪುನಸ್ಸಮಾಗಮ ಇವುಗಳು ನಾಟಕದಲ್ಲಿ ಬಹಳ ಚೆನ್ನಾಗಿ ವರ್ಣಿತವಾಗಿವೆ. ಕೆಲವು ಸನ್ನಿವೇಶಗಳು ಕಾಳಿದಾಸ, ಶ್ರೀಹರ್ಷ, ವಿಶಾಖದತ್ತರ ನಾಟಕಗಳ ಕಥಾ

ಸಂದರ್ಭಗಳ ಅನುಕರಣೆಯಂತಿದ್ದರೂ, ನಿರೂಪಣಾ ಶೈಲಿಯಲ್ಲಿ, ವಸ್ತು ಪ್ರತಿಪಾದನೆಯಲ್ಲಿ ಕವಯಿತ್ರಿಯ ಸ್ವಂತ ಪ್ರತಿಭೆ ವ್ಯಕ್ತವಾಗಿದೆ. ಕೀರ್ತಿಮತಿಯ ಸಾಕ್ಷಾತ್ತಾಯಿಯಾದ ಯೋಗಸಿದ್ದಿಯು, ಭವಭೂತಿಯೂ "ಮಾಲತಿ ಮಾಧವ" ದಲ್ಲಿನ ಕಾಮಂದಕಿಗೆ ಸಮನಾದ ಪಾತ್ರವೆನಿಸುತ್ತದೆ. ಈ ನಾಟಕವಲ್ಲದೆ, ಇವಳ ಇತರ 32 ಬಿಡಿ ಪದ್ಯಗಳು, ಬೇರೆ ಸಂಸ್ಕೃತ ಕಾವ್ಯಗಳಲ್ಲಿ, ಅಲಂಕಾರ ಗ್ರಂಥಗಳಲ್ಲಿ ಉದಾಹೃತವಾಗಿವೆ.

ಕಾಳಿದಾಸನ ಬಳಿಕ ವೈದರ್ಭೀ ಶೈಲಿಯಲ್ಲಿ ಪ್ರಭುತ್ವವನ್ನು ಗಳಿಸಿಕೊಂಡ ಕವಯಿತ್ರಿ ಇವಳು ಎಂದು ಅಲಂಕಾರಿಕನಾದ ರಾಜಶೇಖರನು ಇಂತಹ ಗೌರವವನ್ನು ಇವಳಿಗೆ ಸಲ್ಲಿಸಿದ ಬಳಿಕ ಇದಕ್ಕಿಂತಲೂ ಮಿಗಿಲಾದ ಸ್ಥಾನಮಾನಗಳ ಅವಶ್ಯಕತೆ ಏನಿದೆ ?

ವಿಜ್ಜಿಕೆಯ ನಂತರ ಕಾವ್ಯ ಲೋಕದಲ್ಲಿ ಪ್ರಕಾಶಮಾನವಾಗಿ ಬೆಳಗಿಧ ಕವಯಿತ್ರಿ ಗಂಗಾದೇವಿ. ಇವಳು ವಿಜಯನಗರದ ರಾಜನಾದ ಬುಕ್ಕರಾಯನ ಸೊಸೆ, ಹಿರಿಯ ಕಂಪಣರಾಯನ ಹೆಂಡತಿ. ಇವಳ ಕಾಲ 14ನೇ ಶತಮಾನ. ಇವಳು "ಮಧುರಾ ವಿಜಯಮ್" ಅಥವಾ "ವೀರ ಕಂಪಣರಾಯ ಚರಿತಮ್" ಎಂಬ ಕಾವ್ಯವನ್ನು ಬರೆದಿದ್ದಾಳೆ. ಆದರೆ ಕಾವ್ಯದ ಪೂರ್ಣಕೃತಿ ನಮಗೆ ದೊರೆತಿಲ್ಲ. ಕೇವಲ ಎಂಟು ಸರ್ಗಗಳು ಮಾತ್ರ ಈಗ ಉಪಲಬ್ದವಾಗಿವೆ. ಕಾವ್ಯದಲ್ಲಿ ವೀರ, ಶೃಂಗಾರ, ಕರುಣಾ ರಸಗಳು ಹಾಸು ಹೊಕ್ಕಾಗಿ ಸಾಗಿವೆ. ಬುಕ್ಕರಾಯನ ಮಗನಾದ ಕಂಪಣನು ತಂದೆಯ ಅಪ್ಪಣೆಯ ಮೇರೆಗೆ ದಕ್ಷಿಣ ದೇಶದ ದಂಡಯಾತ್ರೆಯನ್ನು ಕೈಗೊಂಡು ಮುಸಲ್ಮಾನರ ಹಾವಳಿಗೆ ಸಿಲುಕಿ ಸಂಕಟಕ್ಕೀಡಾಗಿದ್ದ ಮದುರೆಗೆ ಬಂದಾಗ ಅವನಿಗೆ ಒಂದು ದಿನ ಕನಸಿನಲ್ಲಿ ಮದುರಾ ನಗರದ ಅಧಿದೇವತೆಯೂ ಕಾಣಿಸಿಕೊಂಡು ನಗರಕ್ಕೆ ತುರುಕರಿಂದುಂಟಾದ ದುರವಸ್ಥೆಯನ್ನು ವರ್ಣಿಸಿ, ಅವನಿಗೆ ಖಡ್ಗವೊಂದನ್ನಿತ್ತು, ಶತೃಗಳನ್ನು ನಿರ್ನಾಮ ಮಾಡಲು ಹುರಿದುಂಬಿಸುತ್ತಾಳೆ. ತುರುಕರ ಧಾಳಿಗೆ ಮೊದಲು ಇದ್ದ ಮಧುರಾನಗರದ ವೈಭವವನ್ನೂ, ನಂತರ ಉಂಟಾದ ಹೀನಸ್ಥಿತಿಯನ್ನು ಕವಯಿತ್ರಿಯು ಬಹಳ ಚೆನ್ನಾಗಿ ವರ್ಣಿಸಿದ್ದಾಳೆ.

ಕಂಪನರಾಯನಿಗೆ ಮಧುರೆಯ ದುಃಸ್ಥಿತಿಯನ್ನು ವಿವರಿಸುತ್ತಾ ಅಧಿ ದೇವತೆಯು ಹೀಗೆ ಹೇಳುತ್ತಾಳೆ: "ತೆಂಗಿನ ಮರಗಳೆಲ್ಲ ಕತ್ತರಿಸಲ್ಪಟ್ಟು, ತಲೆಬುರುಡೆಗಳು, ಜೋತಾಡುವ ಶೂಲದ ಕಂಬಗಳಿಂದ ತುಂಬಿದ ಮಧುರೆಯ ಉದ್ಯಾನವನಗಳನ್ನು ನೋಡಿ ನನ್ನ ಮನಸ್ಸು ನೋಯುತ್ತದೆ. ಹಿಂದೆ ಮಧುರೆಯ ರಾಜಬೀದಿಗಳಲ್ಲಿ ಯುವತಿಯರ ನೂಪುರಗಳ ಧ್ವನಿ ಕೇಳಿ ಬರುತ್ತಿತ್ತು. ಆದರೆ ಈಗ ಅಲ್ಲಿನ ನಗರವಾಸಿಗಳಿಗೆ ಹಾಕಿದ ಕಬ್ಬಿಣದ ಕೈಬೇಡಿಗಳ ನಿನಾದ, ಕಿವಿಗೆ ಕಾದ ಸೀಸದಂತೆ, ಕರ್ಣಭೇಧಕವಾಗಿದೆ. ಗುಡಿ-ಗೋಪುರಗಳ ಮೇಲೆ ಕೆತ್ತಿದ ಗೊಂಬೆಗಳ ಮೇಲೆ ಹಬ್ಬಿದ ಜೇಡನ ಬಲೆಯು ನಿರ್ಜೀವವಾದ ಅವುಗಳ ಮೇಲೆ ಇಳಿಬಿಟ್ಟ ಬಿಳಿ ಬಟ್ಟೆಯಂತಿದೆ. ಹಾಳು ಬಿದ್ದ ತೋಟಗಳಲ್ಲಿ ಕೂಗುತ್ತಿರುವ ಗೂಗೆಗಳ ಕರ್ಕಶ ಧ್ವನಿಗಿಂತ, ಯವನರ ಮನೆಯಂಗಳದಲ್ಲಿರುವ ಗಿಳಿಗಳಾಡುವ ಪಾರಸಿಕ ಮಾತುಗಳಿಂದ ನನಗೆ ಹೆಚ್ಚು ವ್ಯಥೆಯಾಗುತ್ತದೆ. ತರುಣಿಯರ ಹರಿಚಂದನದಿಂದ ಪರಿಮಳವನ್ನು ಹೊಂದುತ್ತಿದ್ದ ತಾಮ್ರ ಪರ್ಣೀ ನದಿಯು, ಇಂದು ಗೋಮಾಂಸದಿಂದ ಕೂಡಿದ ರಕ್ತ ಪ್ರವಾಹದಿಂದ ಹರಿಯುತ್ತದೆ. "ಹೀಗೆ ಮಧುರೆಯ ದುಃಸ್ಥಿತಿಯನ್ನು ಕಣ್ಣಾರೆಕಂಡು ಗಂಗಾದೇವಿಯು ಓದುಗರ ಮನಮುಟ್ಟುವಂತೆ, ಮನಕರಗುವಂತೆ ವರ್ಣಿಸಿದ್ದಾಳೆ. ಕಾವ್ಯದ ಆರಂಭದಲ್ಲಿ ಕಾಳಿದಾಸ, ವ್ಯಾಸ, ವಾಲ್ಮೀಕಿ ಮೊದಲಾದವರ ಕಾವ್ಯ ಪ್ರತಿಭೆಯನ್ನು ಗೌರವದಿಂದ ಕೊಂಡಾಡಿರುವುದಲ್ಲದೆ ಕವಿ, ಕಾವ್ಯ, ಸಂಬಂಧದ ಬಗ್ಗೆ ಅನುಭವ ಪೂರಿತವಾದ ಮಾತುಗಳನ್ನು ಆಡಿದ್ದಾಳೆ. ಶಬ್ಧ ಸೌಂದರ್ಯ, ಅರ್ಥ ಗಾಂಭೀರ್ಯ, ರಸ ಪರಿಪೋಷಣೆ, ಭಾವಶಬಲತೆ ಈ ನಾಲ್ಕು ಒಟ್ಟಿಗೂಡಿರುವ ಕಾವ್ಯ ರಚನೆಯು ದುರ್ಲಭವೆಂದೂ, ಕಾವ್ಯದಲ್ಲಿ ಕೇವಲ ದೋಷಗಳಿಲ್ಲದಿದ್ದರೆ ಸಾಲದು, ಅದರಲ್ಲಿ ಗುಣವೂ ಇರಬೇಕು. ಇಲ್ಲದಿದ್ದಲ್ಲಿ ರೂಪವಿಲ್ಲದೆ ಪತಿವ್ರತೆಯು ಗಂಡನಿಗೆ ಅಪ್ರಿಯವಾಗುವಂತೆ ಆ ಕಾವ್ಯವೂ ರಸಿಕರಿಗೆ ಗ್ರಾಹ್ಯವಾಗುವುದಿಲ್ಲವೆಂದು ಹೇಳಿದ್ದಾಳೆ. ಸಹೃದಯರಲ್ಲದ ವಾಚಕರು, ಕಾವ್ಯದಲ್ಲಿ ಕೇವಲ ದೋಷಗಳನ್ನು ಮಾತ್ರ ಹುಡುಕುವರೆಂದೂ, ಕೃತಿಚೌರ್ಯದಿಂದ ರಚಿಸಿದ ಕಾವ್ಯವು, ಕೃತ್ರಿಮ ರಾಗದಿಂದ ಮಾಡಿದ ಮಣಿಯಂತೆ, ಬಹಳ ಕಾಲ ನಿಲ್ಲುವುದಿಲ್ಲವೆಂದೂ, ಅಂತಹವರನ್ನು ಎಚ್ಚ

ರಿಸುತ್ತಾಳೆ. ಮಧುರಾನಗರಿಯ ದುಃಸ್ಥಿತಿಯ ವರ್ಣನೆಯು ಕಾಳಿದಾಸನ ರಘುವಂಶದಲ್ಲಿನ ಅಯೋಧ್ಯೆಯ ದುರ್ದೆಶೆಯ ವರ್ಣನೆಯಂತಿದೆ. ಕವಯಿತ್ರಿಯು ಸಂದರ್ಭಕ್ಕೆ ತಕ್ಕಂತೆ, ಸನ್ನಿವೇಶಗಳಿಗನುಗುಣವಾಗಿ, ನೈಜವಾದ ಉಪಮಾನಗಳ ಮೂಲಕ ವರ್ಣಿಸಿ, ತನ್ನ ಕಲ್ಪನಾ ಸಾಮರ್ಥ್ಯವನ್ನು ವ್ಯಕ್ತ ಪಡಿಸಿದ್ದಾಳೆ.

ಸಂಸ್ಕೃತ ಕವಯಿತ್ರಿ ಯರಲ್ಲಿ ಪೂರ್ಣ ಕೃತಿಯು ಉಪಲಬ್ಧವಿರುವ ಇನ್ನೊಬ್ಬಳು ಕವಯಿತ್ರಿ, ತಿರುಮಲಾಂಬೆ ಇವಳೂ, ವಿಜಯ ನಗರದ ರಾಜ ಮನೆತನಕ್ಕೆ ಸೇರಿದವಳು. 16ನೇ ಶತಮಾನದಲ್ಲಿ ಆಳಿದ ಅಚ್ಯುತ ದೇವರಾಯನ ಪ್ರಿಯೆ. ಇವಳು "ವರದಾಂಬಿಕಾ ಪರಿಣಯ" ವೆಂಬ ಚಂಪೂ ಕಾವ್ಯವನ್ನು ರಚಿಸಿರುವಳು. ಅಚ್ಯುತ ರಾಯನ ಮತ್ತು ವರದಾಂಬಿಕೆಯರ ವಿವಾಹವೇ ಮುಖ್ಯ ಕಥಾವಸ್ತು. ಅಚ್ಯುತರಾಯನ ಜನನ, ವೈಭವ ಬಾಲ್ಯ ತಾರುಣ್ಯಗಳನ್ನು ವರ್ಣಿಸಿದ, ಈ ಕವಯಿತ್ರಿಯು ಅವನ ಮತ್ತು ನರಸಿಂಹನ (ತಂದೆ) ರಾಜ್ಯಭಾರ ಕ್ರಮವನ್ನು ಬಹಳ ಚೆನ್ನಾಗಿ ಚಿತ್ರಿಸಿದ್ದಾಳೆ.

ತಿರುಮಲಾಂಬೆಯ ನಂತರ, ನೂರು ವರುಷದ ಬಳಿಕ, ತಂಜಾವೂರಿನಲ್ಲಿ, ಹುಟ್ಟಿದ, ರಾಮಭದ್ರಾಂಬೆಯೆನ್ನುವಳು, ಅತ್ಯಂತ ಪ್ರತಿಭಾವಶಾಲಿಯಾದ ಸಂಸ್ಕೃತ ಕವಯಿತ್ರಿ. ಈಕೆ, ತಂಜಾವೂರಿನ ನಾಯಕರಲ್ಲಿ ಪ್ರಸಿದ್ಧನಾದ ರಘುನಾಥ ನಾಯಕನ ಪ್ರೇಯಸಿ. ಈಕೆ, "ರಘುನಾಥಾಭ್ಯುದಯ" ವೆಂಬ ಐತಿಹಾಸಿಕ ಕಾವ್ಯವನ್ನು ಬರೆದಿದ್ದಾಳೆ. ಪ್ರೌಢವಾದ ಈ ಕಾವ್ಯದಲ್ಲಿ, ತಂಜಾವೂರಿನ ವರ್ಣನೆ, ರಘುನಾಥನ ಹೃದಯಂಗಮ ವರ್ಣನೆಯಿದೆ. ಅವನ ಆಸ್ಥಾನದಲ್ಲಿ, ಕವಿತಾ ರಚನ ಸಾಮರ್ಥ್ಯ ವುಳ್ಳ, ವಿದ್ಯಾವತಿಯರಾದ, ಅನೇಕ ಕಲಾವಿದೆಯರು, ಬಹುಭಾಷಾ ಪ್ರವೀಣರಾಗಿ, ಆಶು ಕವಿತಾ ರಚನೆಯಲ್ಲಿ ಸಿದ್ಧಹಸ್ತರಾಗಿದ್ದರು. ಅವರಲ್ಲಿ ಎಷ್ಟೋ ಜನರು, ರಾಮಭದ್ರಾಂಬೆಯಂತೆ, ಕಾವ್ಯಗಳನ್ನು ರಚಿಸಿರಬಹುದು. ಆ ಕಾಲದಲ್ಲಿದ್ದ ಮಧುರವಾಣಿ ಎಂಬುವಳು, ರಘುನಾಥ ನಾಯಕನ, ತೆಲುಗು ರಾಮಾಯಣವನ್ನು ಸಂಸ್ಕೃತಕ್ಕೆ ಭಾಷಾಂತರಿಸಿದ್ದಾಳೆ. "ರಘುನಾಥನ ಖಡ್ಗವೂ, ಪ್ರಜ್ಞೆಯೂ, ಪರಸ್ಪರ ಸ್ಪರ್ಧೆ ಯುಳ್ಳವುಗಳಿಗೆ, ಯುದ್ಧದಲ್ಲಿಯೂ, ಸಭೆಯಲ್ಲಿಯೂ, ಶತೃಗಳ ಹೃದಯಚ್ಛೇದನವನ್ನು ಮಾಡುತ್ತಿದ್ದವು", ಎಂದು ರಘುನಾಥ ನಾಯಕನ, ಪರಾಕ್ರಮ ವಿದ್ವತ್ತು ಗಳನ್ನು, ಹೊಗಳಿದ್ದಾಳೆ.

ಹೀಗೆ ನಮಗೆ ದೊರಕಿರುವ ಈ ಕೃತಿಗಳಷ್ಟೇ ಅಲ್ಲದೆ, ಇನ್ನು ಅದೆಷ್ಟು ಸಂಸ್ಕೃತ ಕವಯಿತ್ರಿಗಳ ಕೃತಿಗಳು ಮುದ್ರಣದ ಬೆಳಕನ್ನೇ ಕಾಣದೇ ಅಜ್ಞಾತವಾಸದ ಕತ್ತಲೆಯ ಗರ್ಭದಲ್ಲಿ ಕೊಳೆಯುತ್ತಿರುವುವೋ ಕಂಡವರಾರು ? ಸಂಶೋಧಕರ ದೃಷ್ಟಿ ಪ್ರಯತ್ನಗಳು ಈಗ ಈ ದಿಶೆಯಲ್ಲಿ ಸಾಗಬೇಕಾದುದು ಅತ್ಯಗತ್ಯ. ಈ ಸಂದರ್ಭದಲ್ಲಿ ವಿದ್ಯಾವತಿಯ ಗೌರಿಸ್ತುತಿಯಿಂದ ಈ ವಿಮರ್ಶೆಯ ಲೇಖನವನ್ನು ಮುಕ್ತಾಯಗೊಳಿಸುವುದು ಸೂಕ್ತವಾಗಿದೆ.

ಸರಸ್ವತಿ, ಶೃತಿಮಹತೀ, ಮಹೀಯತಾಮ್ ।

---

ಕಹಿಯ ನೆನಪ ಮೂಟೆ ಕಟ್ಟಿ । ಸಿಹಿಯ ನೆನಪ ಜೊತೆಯಲ್ಲಿಟ್ಟು
ಭೂತವೆಂಬ ಬಾವಿಯಲ್ಲಿ ನೂಕಿ ಬಿಟ್ಟನು.
ಸವಿಯ ನೆನಪ ಮೆಲುಕುವಾಗ । ನೆನಪ ನೀರು ಕಲಕಿ ಹೋಗಿ
ಸಿಹಿಯು ಎಲ್ಲ ತಳದೊಳುಳಿದು, ಕಹಿಯು ಮಾತ್ರ ಮೇಲೆ ಉಕ್ಕಿ ಹರಿಯಿತು.

# ಕೇಳಿದ ಕಥೆ




— ನೀಲಾದೇವಿ

ಊರಿನ ಕಡೆ ಬಂದು ಐದಾರು ವರ್ಷಗಳಾದವೆಂದು ಈ ಸಲ ರಜದಲ್ಲಿ ಬೊಂಬಾಯಿಂದ ಬಂದಿದ್ದೆ. ಆಗ ಯಾವುದೋ ಒಂದು ಮದುವೆ ಮನೆಗೆ ಹೋಗಬೇಕಾಯಿತು. ಮದುವೆ ಹುಡುಗಿಯೂ ತುಂಬ ಅಂದದವಳು. ಅವಳಿಗೆ ತಕ್ಕಂತೆ ಅಮೆರಿಕದಲ್ಲಿ ಡಾಕ್ಟರಾಗಿರುವ ಹುಡುಗನೇ ದೊರಕಿದ್ದರಲ್ಲೇನೂ ಆಶ್ಚರ್ಯವಿಲ್ಲ. ಮದುವೆಯಾದೊಡನೆ ಅವಳನ್ನು ಕರೆದುಕೊಂಡು ಹೋಗಿ ಬಿಡುವನಂತೆ—"ಬ್ರೈನ್‌ಡ್ರೈನ್" ಕಾಲ !

ಎಲ್ಲರೂ ಹುಡುಗಿಯ ಅದೃಷ್ಟವನ್ನೇ ಕೊಂಡಾಡುತ್ತಲಿದ್ದರು. ಪಕ್ಕನೆ ಹಿಂದಿನಿಂದ ಯಾವುದೋ ಒಡಕು ಧ್ವನಿಯೊಂದು ಕೇಳಿಬಂದಿತು. ಆ ಧ್ವನಿ ಹಿಂದೆ ಎಲ್ಲೋ ಕೇಳಿದ್ದರ ನೆನಪು. ಕುತೂಹಲದಿಂದ ಹಿಂದಿರುಗಿ ನೋಡಿದೆ. ಮಾಸಲಾದ ಪಂಚೆ; ಬೂದು ಬಣ್ಣದ ಕೋಟು ಹಾಸನದ ಟೋಪಿ ಹಾಕಿಕೊಂಡಿದ್ದ ಶಾಮಣ್ಣ ನನ್ನನ್ನೇ ನೋಡುತ್ತಾ ನಾನೆ ಮೊದಲು ಮಾತಾಡಲೆಂದು ಕಾಯುತ್ತಿದ್ದಂತೆ ಕಂಡರು. ಎಂದೂ ಮಾತಿಗೆ ಮೊದಲು ತಾನೇ ನುಗ್ಗುವ ಮನುಷ್ಯ ಇಂದೇಕೆ ಹಿಂದೇಟು ಹಾಕಿದರು ? ಮುಖದಲ್ಲಿ ಏನೋ ದೈನ್ಯತೆ, ನರದೌರ್ಬಲ್ಯ. ಶಾಮಣ್ಣ ನನ್ನ ಬಲು ದೂರದ ಸಂಬಂಧಿ. ಈಚೆಗೆ ಹತ್ತಾರು ವರ್ಷಗಳಿಂದ ಅವರನ್ನು ಮುಖತಃ ಕಂಡಿರಲಿಲ್ಲ.

ಅವರ ಸಂಕೋಚ ಕಂಡು ಅನುಕಂಪವಾಯಿತು, "ಏನು ಶಾಮಣ್ಣನಲ್ಲವೆ ? ....ನಮಸ್ಕಾರ" ಎಂದೆ.

ಅವರ ಕುಗ್ಗಿದ ಮುಖ ಹಿಗ್ಗಿತು. "... ಜ್ಞಾಪಕದಲ್ಲಿ ಇಟ್ಕೊಂಡಿದ್ದಿಯೇನಪ್ಪಾ !........ ಇನ್ನೂ ಬೊಂಬಾಯಲ್ಲೇನೇ ಇರೋದು ? ...ರಜಕ್ಕೆ ಬಂದದ್ದೆ ? ....ಹುಡುಗಿ ಕಡೆನೋ....ಹುಡುಗನ ಕಡೆಯವರೋ ?...." ಹೀಗೆ ಪ್ರಶ್ನಾವಳಿಗಳನ್ನು ಮಾಡುತ್ತ ಸದರವಾಗಿ ನನ್ನ ಪಕ್ಕಕ್ಕೇ ಬಂದು ಕುಳಿತರು. ಸಂಕೋಚದ ಕಟ್ಟೆ ಬಿರುಕು ಬಿಟ್ಟಯಿತು. ಇನ್ನು ಹಿಂದಲಂತೆಯೇ ಮಾತಿಗೆ ಅಂಟಬಿಡುವರಲ್ಲಾ ಎಂದು ಭಯವಾಯಿತು.

ಧಾರೆ ಮುಗಿದು ಅದೇ ತಾನೇ ಊಟದ ಕೋಣೆಗೆ ಜನ ದಬ್ಬಿಕೊಂಡು ಹೋಗುತ್ತಿದ್ದರು. ಶಾಮಣ್ಣನಿಂದ ತಪ್ಪಿಸಿಕೊಳ್ಳಲು ನಾನೂ ಆ ಗುಂಪಿನಲ್ಲಿ ನುಸುಳಿದೆ. ಈ ಮಹಾಶಯರು ನನ್ನ ಬೆನ್ನನ್ನೇ ಹಿಡಿದುಬಿಟ್ಟರು. ಮಾತಿನ ಸರಪಳಿಯಲ್ಲಿ ಬಿಗಿದರು. ಚಿಕ್ಕಂದಿನಿಂದ ನಾನು ಶಾಮಣ್ಣನನ್ನು ನೋಡಿದ್ದೇನೆ. ಒಂದು ರೀತಿ ತರಳೆ ಮನುಷ್ಯ. ಜಿಗಣೆಗೋತ್ರದವ. ಕಿತ್ತು ಬಿಸಾಡುವ ತನಕ ರಕ್ತ ಹೀರುತ್ತಲೇ ಅಂಟುವವ. ಅವಕ್ಕೆ ಹೆಚ್ಚು ಕಮ್ಮಿ ಅವರ ಸಮೀಪದವರೆಲ್ಲಾ ಶಾಮಣ್ಣನೆಂದರೆ ಹಾರಿ ತಪ್ಪಿಸಿಕೊಂಡು ಹೋಗಲು ಹವಣಿಸುತ್ತಿದ್ದರು. ಬ್ರಿಟೀಷರ ಕಾಲದಲ್ಲಿ ಯಾವುದೇ ಮಿಲ್ಟ್ರಿ ಸಾಮಾನು ಸಪ್ಲೈಯರಾಗಿದ್ದ ಶಾಮಣ್ಣನಿಗೆ ಆರು ಹೆಣ್ಣು ಮಕ್ಕಳು. ಮೂರು ವರ್ಷಕ್ಕೆ ಒಮ್ಮೊಮ್ಮೆ ಸಂತಾನವನ್ನು ನಿರೀಕ್ಷಿಸಿದಾಗಲೂ ಗಂಡೆಂದೇ ನಂಬಿ ಅದು ಹೆಣ್ಣಾಗಿ, ಕೊನೆಗೆ ನಿಜಕ್ಕೂ ಗಂಡು ಸಂತಾನವಾದಾಗ ಅವರ ಪತ್ನಿ ಹಾರ್ಟ್‌ಫೇಲ್

ಆಗಿ ಸತ್ತುಹೋದರು. ತಾಯ ವಿರಹ ಆ ಅಪರೂಪದ ವಂಶೋದ್ಧಾರಕ ತಡೆಯದೆ ಎಂಟೇ ದಿನಕ್ಕೆ ಅದೂ ತಾಯನ್ನು ಹಿಂಬಾಲಿಸಿಬಿಟ್ಟಿತು.

ಬರೇ ಆರು ಹೆಣ್ಣು ಮಕ್ಕಳನ್ನು ಕಟ್ಟಿಕೊಂಡು ಸಂಸಾರ ಸಾಗಿಸುತ್ತಿದ್ದರು ಶಾಮಣ್ಣ. ಮಿಲ್ಟ್ರಿ ಹಣವಿತ್ತು. ಹುಡುಗಿಯರು ಉತ್ತಮ ಪೋಷಕಾಂಶದ ಆಹಾರದಿಂದ ಕೊಬ್ಬಿ ಬೆಳೆದರು. ಹುಡುಗಿಯರಿಗೆ ಮಾತ್ರ ರೂಪು ಇಲ್ಲ, ವಿದ್ಯೆಯೂ ಇಲ್ಲ. ಆದರೆ ಎಲ್ಲರೂ ಮನೆಗೆಲಸದಲ್ಲಿ ಕಟ್ಟಾಣಿಗಳು. ನನಗೆ ತಿಳಿದಂತೆ ಈ ವೇಳೆಗೆ ಅವರ ಕನ್ಯೆಯರು ಇಪ್ಪತ್ತೈದರಿಂದ ನಲವತ್ತರ ತನಕ ಇದ್ದಾರೆ. ಕೆಲವರು ಟೈಪಿಂಗ್, ಕೆಲವರು ಬಿ.ಎ.ಯನ್ನೂ ಮಾಡಿ ಕೊಡಿರಬೇಕು. ಆದರೂ ಎಷ್ಟೇ ಪ್ರಯತ್ನಿಸಿದರೂ ಆ

---

ಶಾಮಣ್ಣನ ಮೂವತ್ತೆರಡು ವರುಷದ ಮಗಳಿಗೆ ಫಾರಿನ್ ವರ ಸಿಕ್ಕಿದ್ದು ಆಶ್ಚರ್ಯ! ಆವಾಗ ಗಂಡಿನೊಡನೆ ಫಾರಿನ್‌ಗೆ ಹೋದಮೇಲೆ ಶಾಮಣ್ಣನ ಹಿಗ್ಗಿಗೆ ಪಾರವೇ ಇರಲಿಲ್ಲ. ಆದರೆ ಆ ಹಿಗ್ಗು ಮಂಜಿನಂತೆ ಕರಗಿಹೋಗಲು ಕಾರಣ....?

---

ಒರಟು ಶರೀರದ ಹುಡುಗಿಯರಿಗೆ ಕೋಮಲವಾದ ಮಲ್ಲಿಗೆ ಹಾರ ಕೊರಳಿಗೆ ಬೀಳಲೇ ಇಲ್ಲ. ಹೀಗಾಗಲಿಕ್ಕೆ ಕಾರಣ, ಅಂತಸ್ತಿಗೆ ಮೀರಿದ ವರಗಳನ್ನೇ ಶಾಮಣ್ಣ ನೋಡುತ್ತಾರೆಂಬುದು ನಾನು ಐದಾರು ವರ್ಷ ಹಿಂದೆ ಇತ್ತಕಡೆ ಬಂದಿದ್ದಾಗಲೇ ಕೇಳಿದ್ದೆ. ನಶ್ಯದ ವಾಸನೆ ಹೊಡೆಯುತ್ತಿದ್ದ ಆತ ನನ್ನ ಪಕ್ಕದ ಎಲೆಯನ್ನೇ ಹಿಡಿದು ಊಟಕ್ಕೆ ಕುಳಿತು ಮಾತು ಬೆಳಸುತ್ತಲೇ ಅಂದರು,

"ಯಾಕೆ ಫಾರಿನ್ ಹುಡಗ್ರೂ ಅಂತ ಬಾಯ್ಬಾಯಿಡ್ತಾರೆ! ...

"ಯಾಕೆ ?" ಅಂದೆ ಅವರ ಡಿಕ್ಲರೇಶನ್ನಿಗೆ ನಸುನಗತ್ತಾ, ಅಪರೂಪಕ್ಕೆ ಆತ ಜವಾಬು ಹೇಳದೆ ಬಾಯಿ ಬಿಗಿದರು. ಬಿಸಿಬಿಸಿಯಾಗಿ ಕುಂಬಳಕಾಯಿ ಹುಳಿ, ಉದ್ದಿನ ಹಪ್ಪಳ ಎಲೆಗೆ ಬಿದ್ದಿತು. ಆ ಖಾರವಾದ ಹುಳಿಯನ್ನು ಬೆರಳಲ್ಲಿ ಅದ್ದಿ ಹಾಗೇ ನಾಲಿಗೆಗೆ ಸವರಿದರು. ಏನು ಚಿಂತಿಸುತ್ತಿದ್ದರೆ! ಅದನ್ನು ಪಾಯಸ ಎಂದು ತಿಳಿದರೆ!

"ನನ್ನ ಮೂರನೇ ಮಗಳಿಗೆ ಮದ್ವೆ ಆಯ್ತು." ಎಂದರು ನೆನಸಿಕೊಂಡಂತೆ, ಅವರ ಮಾತು ಕೇಳಿ ನನಗೆ ಪರಮ ಆಶ್ಚರ್ಯ. ಅವರ ಮೂರನೇ ಮಗಳಿಗೆ ಮೂವತ್ತೆರಡು ವಯಸ್ಸಾಗಿರಬಹುದು. ಮೊದಲಿಬ್ಬರೂ "ಮೆನೋಪಾಸ್"ಗೆ ದಿನಗಳೆಣಿಸುತ್ತಿರಬಹುದಾದರೂ ಈ ಮೂರನೇ ಹುಡುಗಿಗೆ ಮದುವೆ ಆದ ಸುದ್ದಿ ನನಗೆ ತಿಳಿದೇ ಇರಲಿಲ್ಲ. ಅಕ್ಕಂದಿರ ಗತಿ ನೋಡಿ ತನಗ ತಂದೆ ಅದೇ ಚಿರಕನ್ಯೆ ಗತಿ ತೋರುತ್ತಾನೆಂದು ಯಾರನ್ನೋ ಕಟ್ಟಿಕೊಂಡಿರಬಹುದೆಂದುಕೊಂಡೆ.

"ಯಾವಾಗ ?...."

"ಮೂರು ತಿಂಗಳಾಯ್ತು."

"ಬಿಡಿ, ಒಂದು ಜವಾಬ್ದಾರೀನಾದ್ರೂ ಕಳಚ್ತಲ್ಲ, ಮುಂದಿನವರದ್ದೂ ಹೀಗೆ ಆಗಿ ಬಿಡುತ್ತೆ .... ಎಲ್ಲಿಗೆ ಕೊಟ್ರಿ ? ..."

"ಅಮೆರಿಕಾಗೆ ಕೊಟ್ಟೆ."

"ಏನು ? ! ಈ ಶಾಮಣ್ಣನ ಮಗಳಿಗೆ ವಿದೇಶದಲ್ಲಿರುವ ಹುಡುಗನೊಂದಿಗೆ ಮದುವೆಯಾಯಿತೆ ? ! ಇಲ್ಲ, ಮದುವೆ ಆಗಲಿಲ್ಲಿ ಎಂಬ ಕೊರಗಲ್ಲಿ ಈ ದಿನದ ಜೋಡಿ ನೋಡಿ ತಲೆಯೊಳಗೆ ಕೆರಳಿತೆ ?....

ಇಲ್ಲ, ಶಾಮಣ್ಣನ ತಲೆ ಕೆರಳಿರಲಿಲ್ಲ, ಕೆಟ್ಟಿರಲಿಲ್ಲ ... ಎಲ್ಲಾ ವಿವರ ಆಗಿಂದಾಗಲೇ ಹೇಳಿದರು ...

ಮೊದಲನೆಯವರಿಬ್ಬರೂ 'ಇನ್ನೂ ಮುಂದೆ ನಮಗೆ ವರ ಹುಡುಕೋದು ನಿಲ್ಲಿಸು, ಯಾರಾದರೂ ನಕ್ಕಾರು ಇಷ್ಟು ವರ್ಷ ಆಗದಿದ್ದದ್ದು ಈಗ ತಲೆ ನರೆತ ಮೇಲೆ, ಹಲ್ಲು ಅಲುಗಾಡಲಾರಂಭಿಸಿದ ಮೇಲೆ ಆಗುತ್ತದೆಯೇ ? ನಮ್ಮನ್ನು ಮರೆತು ಮೂರನೆಯವಳಿಗೆ ತಕ್ಕ ವರ ವಿಚಾರಿಸಿ ಮದುವೆ ಮಾಡಿ ಮುಗಿಸು' ಅಂದರು. ಇದ್ದವರಲ್ಲಿ ಇವಳು ಸ್ವಲ್ಪ ಲಕ್ಷಣವಂತೆ.

ಅವರೂ ಅವಳಿಗೂ ಹುಡುಕಿ ಹುಡುಕಿ ತಣಿದರು ಶಾಮಣ್ಣ. ಅವರ ವಿಚಿತ್ರ ವ್ಯಕ್ತಿತ್ವವೂ ವರಾನ್ವೇಷ

ಣಕ್ಕೆ ಅಡ್ಡಿ ಬಂದಿರಲಿ ಸಾಕು! ಕೊನೆಗೆ ಯಾರದ್ದೋ ಬ್ರೋಕರ್ ನೆರವನ್ನು ಪಡೆದರು. ಅವನೂ ಎರಡು ನೂರು ಕಡೆ ಹೆಣ್ಣಿನ ಮುಖ ತೋರಿ ಅವಲಕ್ಷಣವೆಂದು ಅನ್ನಿಸಿಬಿಟ್ಟ.

ಬೇಸರದಲ್ಲಿ ಶಾಮಣ್ಣ ಕೈಕಟ್ಟಿ ಕುಳಿತುಬಿಟ್ಟರು. ಆಗ ಇದ್ದಕ್ಕಿದ್ದಂತೆಯೇ ಒಂದು ದಿನ ಬ್ರೋಕರನ ಸವಾರಿ ಚಿತ್ತೈಸಿತು. ಆತನ ಮುಖ ನೋಡಿದರೇ ಉರಿದು ಬೀಳುವ ಹಾಗಾಗಿದ್ದರು ಶಾಮಣ್ಣ. ಆದರೂ ನಾಲಿಗೆ ಹೊರಳಿತು, ಅಭ್ಯಾಸ ಬಲದಿಂದ.

"ಏನ್ರೀ, ಯಾವ್ದಾದ್ರೂ ಹುಡುಗನ್ನ ನೋಡಿದ್ರೇನ್ರಿ?...." ಅದಕ್ಕೆ ಬ್ರೋಕರ್ ಬಾಯಿ ಹಿಗ್ಗಿಹೋಯಿತು .... "ಏನು? .... ಬ್ರೋಕರ್ ಶಂಕರಪ್ಪ ಅಂದ್ರೆ ಅಷ್ಟು ಪಡಪೋಶಿ ಮನುಷ್ಯ ಅಂದ್ಕೊಂಡ್ಬಿಟ್ಟಿದ್ದೀರೇನು?....ಈ ವರ ಸಿಗ್ಲಿ ಅಂತ್ಲೇ ದೇವ್ರು ನಿಮಗೆ ಬೇರೆ ಯಾವ ವರಾನ್ನೂ ಸರಿಯಾಗುವಂತೆ ಮಾಡಿರ್ಲಿಲ್ಲ, ಈಗ ನಿಮ್ಮ ಲಲ್ತಮ್ಮನ ಅದೃಷ್ಟವೇ ಅದೃಷ್ಟ ನೋಡಿ! ಎಂಥ ವರ! ನೀವು ಕನಸು–ಮನಸ್ನಲ್ಲೂ ನೆನಸೋಕಾಗಲ್ಲ!...." ಎಂದಿನ ಥಳಕು ಮಾತು.

"ಏನು ಏನು, ದೇವಲೋಕದಿಂದ ಸೀದ ಇಳಿದುಬಿಟ್ಟಿದ್ದಾರೇನು?"

"ಇಲ್ಲ .. ಅಮೆರಿಕಾದಿಂದ .. ನಿನ್ನೆ ತಾನೇ ಇಳ್ದ.... ನಿನ್ನೆಯೇ ಸಮಾಚಾರ ತಿಳ್ಕೊಂಡು ಸೀದ ಅವ್ರಕ್ಕನ ಮನೆಗೇ ಹೋಗಿ, ಅಲ್ಲಿ ತಂಗಿದ್ದ ಅವರನ್ನ ನೋಡ್ಕಂಡು ಕೂಡ ಬಂದ್ಬಿಟ್ಟೆ!...ಲಲ್ತಮ್ಮಂಗೆ ಸರಿಯಾದ ಈಡು ನೋಡಿ. ಹೇಗೆ ಬೆಳ್ದಿದಾನೆ! ... ಏನು ಜೋರಾಗಿದ್ದಾನೆ. ವಯಸ್ಸು 35 ಇರ್ಬಹುದು .. ತಂದೆ ಇಲ್ಲ. ಒಂದೇ ಅಕ್ಕ. ತಾಯಿ ತೀರ ಮುದ್ಕಿ. ಹೇಗಾದ್ರೂ ಬಂದು ನನ್ನ ಕಣ್ಣ ಮುಂದೆ ಮದ್ವೆ ಆಗಿ ಹೋಗೋ ಅಂತ ಅವನು ಹೋದ ಏಳೆಂಟು ವರ್ಷಗಳಿಂದ ಬರೀ ತಾನೇ ಇದ್ರಂತೆ. ಇವ್ನು ತಳ್ತಾನೇ ಬಂದ....ಸರಿ, ಅಲ್ಲಿ ಇನ್ನಾರನ್ನಾದ್ರೂ ಗಂಟು ಹಾಕಿಕೊಂಡು ಬಿಡ್ತಾನೆ ಅನ್ನೋ ಭಯಕ್ಕೆ ಅಕ್ಕ ಇಲ್ಲಿಂದ ಕೇಬಲ್ ಕಳಿಸದಂತೆ, ತಾಯಿಗೆ ಸಖತ್ ಆಗಿದೆ ಒಡನೆಯೇ ಬಾ, ಬಂದು ಮದ್ವೆ ಆಗಿ ಬಿಡು. ಅಮ್ಮ ಸುಖವಾಗಿ ಕಣ್ಮುಚ್ಚುತ್ತಾಳೆ ಅಂತ....ಅದಕ್ಕೇ ಪಾಪ ಧಡಬಡಿಸಿ ಹದಿನೈದೇ ದಿನದ ರಜದಲ್ಲಿ ಬಂದಿದ್ದಾನೆ .... ಅವ್ರಕ್ಕ ತಿಳ್ಸೋರಿಗೆಲ್ಲಾ ಹೇಳಿದ್ದು... ಏನು!....ಎಂಥೆಂಥಾ ಹುಡುಗೀಯರು ಈವತ್ತು ಬೆಳಗ್ಗನೇ ಕಾರ್ನಲ್ಲಿ ಬಂದಿಳೀತಿದ್ದಾರೇಂತಾ?"

ಶಾಮಣ್ಣನಿಗೆ ಆ ಬ್ರೋಕರ್‌ನ ತೆಗೆದು ಒದೆಯಬೇಕೆನ್ನಿಸಿತು, "ಇದೇನ್ರಿ ತಮಾಷಿ ಮಾಡೋಕೆ ಇಲ್ಲಿ ಬಂದ್ರಾ? .... ಅಥ್ವಾ ಇನ್ನೇನಾದ್ರೂ ಆಟ ಹೂಡಿದ್ದೀರೆ ಹಣಕಸಿಯೋಕೆ.... " ಎಂದವರೇ ಮತ್ತೆ, .... "ನಾನು ಇಲ್ಲರೋ ಬ್ಯಾಂಕ್ ಕ್ಲರ್ಕ್‌ಗಳು, ಫ್ಯಾಕ್ಟರಿ ನೌಕರರಿಗೆ ತೋರಿಸಿಯೇ ನಿರಾಸೆ ಹೊಂದಿರೋವಾಗ ಅಂಥ ದೂರದೇಶದಿಂದ ಬಂದಿರೋ ಹುಡ್ಗ ಇವ್ಳನ್ನ ಒಪ್ಕಂಡು ಬಿಡ್ತಾನೇನ್ರಿ!...."

ಬ್ರೋಕರ್ ಅವರು ರೇಗಿದಷ್ಟೂ ಬಾಯಿ ಹಿಗ್ಗಿಸಿಕೊಂಡು ಹೇಳಿದ.

"ರೀ, ಅದೇ ಇಲ್ಲಿದೆ ಪಾಯಿಂಟು! ಅವನಿಗೆ ಅಲ್ಲಿ ಬಿಳಿತೆಗಲಿ, ನಾಜೋಕು ರೀತಿ ಹುಡ್ಗೀನ್ನ ನೋಡಿ, ಆ ವಿದೇಶಿರೀತಿ ಜೀನ್ನ ಮಾಡಿ ಮಾಡಿ ಚಿಟ್ಟಾಗಿ ಹೋಗಿದ್ದಂತೆ. ಬಂದೊಡನೆಯೇ ಹೇಳ್ಬಟ್ನಂತೆ ಅವನಿಗೆ ಹುಡ್ಗಿ ಬಣ್ಣದಲ್ಲಿ ಹೇಗಿದ್ರೂ ಪರ್ವಾಗಿಲ್ವಂತೆ. ಆದ್ರೆ ಚನ್ನಾಗಿ ಬೆಳ್ದು. ಸೋಮಾರಿತನ ಇಲ್ದೆ ಸಂಸಾರನೆಲ್ಲಾ ತಾನೇ ತೂಗಿಸ್ಕೊಂಡು ಹೇಗೂ ಹೆಚ್ಚು ಪ್ಯಾಷನ್ ಮಾಡದ ಹುಡ್ಗೀನೇ ಆಗ್ಬೇಕಂತೆ ...... ಪಾಪ, ಅವ್ನಗೆ ನಿಜಕ್ಕೂ ಅಲ್ಲಿನ ರೀತಿ ಹೆಣ್ಣು ಮಕ್ಕಳು ರೋಸಿಹೋಗಿರ್ಬೇಕು ..." ನಶ್ಯದ ಡಬ್ಬಿ ಎಳೆದು ಕೊಂಡ ಶಾಮಣ್ಣನವರನ್ನೇ ನೋಡುತ್ತ ಮತ್ತೆ ಅಂದ, "....ಹುಡ್ಗ ಬಹಳ ಬಿಚ್ಚು ಮನಸ್ನೋನು .. ಬಹಳ ಫ್ರೀ...... ನಮ್ಮ ಹಾಗೆ ಒಂದೇ ನೀರು ಕುಡಿದವನೇನು!....ದೇಶ ದೇಶ ಸುತ್ತಿದೇನು ಮನಸ್ನಲ್ಲಿ ಹೊರಗೊಂದು ತಿಳಿದೇನು....ನೋಡಿ, ಅತ್ತ ಕಡೆ ಅಮೇರಿಕಾ ಆ ಕಡೇ ನನ್ನಪ್ಪಾ ಅಂದ್ರೆ ... ಈ ಕೆಲಸ್ದೋರು, ಅಡಿಗೆ ಮಾಡೋಕು ಸಿಗೋದೇ ಇಲ್ವಂತೆ ... ಸಾವ್ರ ಕೊಟ್ರು!....ಹೂಂ...." ಎಂದು ಹುಬ್ಬನ್ನು ಬಾಗಿಸಿ ರಾಗ ಎಳೆದ ಶಂಖರಪ್ಪ ....". ... ಹೀಗಾಗಿ ಇಲ್ಲಿಂದ ಯಾವ್ದಾದ್ರೂ ಗಾಜಿನ ಗೊಂಬೆ ಕಟ್ಕೊಂಡು ಹೋಗಿ ಬಿಟ್ರೆ ಅಲ್ಲಿ ದೇವ್ರೇ ಗತಿನಂತೆ. ಗಂಡ್ನಾದೋನೆ ಮುಲಾಜಿಲ್ಲದೆ ಮುಸ್ರೆ ತೊಳೀಬೇಕು, ಕಸಗುಡಿಸ್ಬೇಕು ಮಕ್ಕಳ್ನ ಆಡಿಸ್ಬೇಕು ... ಯಾಕೆ, ಇಲ್ಲಿಂದ ಎಷ್ಟೇ ಒಳ್ಳೆ ಹಣವಂತ

ಹುಡ್ಗೀರೂ ರೂಪವಂತ ಹುಡ್ಗೀರು ಹೋಗ್ತಾರಲ್ಲ ಮದ್ವೆ ಆಗಿ, .. ಆಲ್ಮೋದ್ಕೊಡ್ಲೆ ಅವೇನಾಗಿ ಬಿಡುತ್ತೋ.... ಹೀಗೆ ವೈಗಳ್ಳರಾಗಿಬಿಟ್ಟು ಗಂಡ್ನ ಹತ್ರ ದುಡುಸ್ತಾರಂತೆ ....ಹೇಳೋರು ಕೇಳೋರು ಯಾರೂ ಇರಲ್ಲ ನೋಡಿ! ....ಆ ಕೆಂಪು ಕಪಿಗಳು ಮಾಡೋ ಸಂಸಾರ ನೋಡಿ ಇವ್ರೂ ಹಾಗೇ ಕಲ್ತು ಬಿಡೋದೆ? ... ಅದಕ್ಕೇ ನೋಡಿ, ಈ ಹುಡ್ಗ ಈ ರೀತಿ ನಿರ್ಧಾರಕ್ಕೆ ಬಂದು ಬಿಟ್ಟಿದ್ದಾನೆ.... ಹುಡ್ಗಿಗೆ ನನ್ನಪ್ಪಾ ಕ್ವಾಲಿಫಿಕೇಶನ್ನೂ ಅಂದ್ರೆ. ಒಳ್ಳೆ ಮನೆಗೆಲಸದಲ್ಲಿ ನುರಿತು ಇರಬೇಕು....ಹುಂ, ಅದಷ್ಟೇ ಅವ್ನು ಕೇಳೋದು....ಅದಕ್ಕೇ ನಾನು ಒಂದು ಹೋಪ್ ಇಟ್ಕೊಂಡು ಇಲ್ಲಿಗೆ ಬಂದಿರೋದು!....ನೋಡಿ, ಇಷ್ಟು ಹೆಣಗಿದ್ದೀರ ಕೊನೇದಾಗಿ ಈ ಛಾನ್ಸನ್ನೂ ಒಂದ್ಸಲ ನೋಡ್ಬಿಡಿ.....ಯಾರ್‍ಯಾರ ಅದೃಷ್ಟ ಎಲ್ಲೆಲ್ಲಿಗೆ ಎಳೆಯುತ್ತೋ...."

ಬ್ರೋಕರ ಮಾತಿಗೆ ನಂಬಿಕೆ ಇಲ್ಲದಿದ್ದರೂ ಶಾಮಣ್ಣ ಮಾರನೇ ದಿನ ಮನಸ್ಸಿಲ್ಲದ ಮನಸ್ಸಿನಲ್ಲಿ, ಈ ಮದುವೆ ಆಗೋ ಅಂಥಾದ್ದಲ್ಲ ಬರೀ ಪರೇಡು ಎಂದುಕೊಂಡೇ, ಒಂದೇ ಸಮ ಗೊಣಗುತ್ತಿದ್ದ ಲಲಿತಳಿಗೆ ಅಕ್ಕಂದಿರಿಂದ ಎರಡು ಬಲವಂತದ ಮಾತುಗಳನ್ನು ಹೇಳಿಸಿ ವರನ ಅಕ್ಕನ ಮನೆಗೆ ಹೋದರು. ಜೊತೆಗೆ ಕೊನೆಯ ತಂಗಿ ಮತ್ತು ಶಂಕರಪ್ಪನೂ ಇದ್ದರು.

ಇಂದೂ ಆ ಮನೆ ದುಂದೆ ಕಾರುಗಳು ಸಾಲಾಗಿ ನಿಂತಿದ್ದವು. ಒಳಗೆ ಕಾಲಿರಿಸಿದಾಗ ಹಜಾರದಲ್ಲಿ ರಂಭೆ, ಊರ್ವಶಿ, ತಿಲೋತ್ತಮೆಯರಂತಿದ್ದ ಹುಡುಗಿಯರನ್ನು ಅವರ ಬೆಲೆ ಖರ್ಚುಮಾಡುವ ಆಧುನಿಕ ಫ್ಯಾಷನನ್ನೂ ಕಂಡು ಶಾಮಣ್ಣ ಮೂಕಾಗಿ ಹೋದರು. ಲಲಿತೆಗೆ ಮುಖದಲ್ಲಿ ಬೆವರು ಬಸಿಯಿತು. ಅಲ್ಲಿ ಸೇರಿದ್ದವರನ್ನೆಲ್ಲಾ ಆ ಹುಡುಗ ಅವನ ಭಾವ-ಅಕ್ಕನೇ ಮಾತಾಡಿಸುತ್ತಿದ್ದರು. ಇವರು ಹೋದಾಗ ಆ ಕೋಣೆಯಲ್ಲಿ ಸ್ಥಳಾಭಾವವಾಗಿ ಅವನ ತಾಯಿ ವಿಶ್ರಮಿಸಿಕೊಳ್ಳುತ್ತಿದ್ದ ಒಳಕೋಣೆಗೇ ಒಯ್ದರು. ಹಾಲಿನಲ್ಲಿ ಕೂತ ಜನರ ತೂಕಕ್ಕೆ ಇವರು ಸರಿದೂಗುತ್ತಲೂ ಇರಲಿಲ್ಲ.

ಹೀನಾಯ ಪಡಿಸಲೆಂದೇ ತಮ್ಮನ್ನು ಹಿಂದಲ ಕೋಣೆಗೆ ದಬ್ಬಿದರು ಎಂದು ಲಲಿತಾ ಕುದಿಯುತ್ತಿದ್ದಳು. ಅಲ್ಲಿದ್ದ ಮುದಿ ತಾಯಿ ಅವಳನ್ನು ಏನೇನೋ ಮಾಡುತ್ತಿತ್ತು. ಹೊರಗೆ ಅವರದ್ದೆಲ್ಲಾ ಮಾತು-ಕತೆ ಮುಗಿಯಲಿ ಜವಾಬು ಹೇಳಿ ಕಳುಹಿಸಲು ಒಂದೆರಡು ಗಂಟೆಗಳೇ ಆದವು. ಒಂದೊಂದೇ ಕಾರುಗಳು ಹೊರಟುಹೋಗಿ ಹೊರಗಡೆ ಹಜಾರದ ಗದ್ದಲ ನಿಂತಾದ ಮೇಲೆ ಮದು ಮಗನಾಗುವವನು ಇವರಿದ್ದ ಕೋಣೆಯ ಹೊಸಲು ದಾಟಿ ಒಳಬಂದ. ಅನೌಪಚಾರಿಕವಾಗಿ ನೇರ ಬಂದು ಶಾಮಣ್ಣನ ಬದಿಗೇ ಕುಳಿತು "ಕ್ಷಮಿಸಿ, ಕಾಯಿಸ್ಬಿಟ್ಟೆ ..." ಎನ್ನುತ್ತಾ ಲಲಿತಳನ್ನೊಮ್ಮೆ ಅಳೆದಂತೆ ನೋಡಿದ.

ಲಲಿತಳಿಗೆ ಸಂಕೋಚದಿಂದ ಮುಖ ಕಗ್ಗಿ ಹೋಯಿತು. ಅನಂತರ ಅವನು ಎದ್ದು ಒಳಗೆ ನುಸುಳಿ ಬಿಟ್ಟ, ಅವನಕ್ಕ ಒಳಗೆ ಹೋಗಿ ಅವನನ್ನು ಸೇರಿಕೊಂಡಳು ಐದಾರು ನಿಮಿಷಗಳ ನಂತರ ಆಕೆ ಪಂಚವಾಳ, ಹಣ್ಣು ವೀಳ್ಯ ತಂದು ಲಲಿತಳಿಗೆ ಕೊಟ್ಟು ಬ್ರೋಕರಿಗೆಂದಳು.

"ಸಂಜೆ ಇತ್ತಕಡೆ ಬನ್ನಿ .... ಅವನ ನಿರ್ಧಾರ ಹೇಳ್ತೀವಿ ..." ಅಂದಳು.

ಈ ರೀತಿ ಜವಾಬು ಎಷ್ಟೋ ಕಡೆ ಆಗಿ ಮುಗಿದಿದ್ದ ಶಾಮಣ್ಣನವರು ಏನೂ ಆಸೆ ಈಗಲೂ ಹೊತ್ತುಕೊಳ್ಳದೆ ಮನೆಗೆ ಹೊರಟುಹೋದರು. ಎಂತೆಂಥಹ ದೊಡ್ಡ ಕಡೆ ಚಂದದ ವಿದ್ಯಾವಂತ ಹುಡುಗೀರು ಬಂದಿರೋ ಕಡೆ ತಾನು ಬಂದಿದ್ದೇ ಅವಿವೇಕ ಎಂದು ಬಯ್ದುಕೊಳ್ಳುತ್ತಲೇ ತಂದೆಯನ್ನು ಹಿಂಬಾಲಿಸಿದ್ದಳು ಲಲಿತಾ.

ಸಂಜೆ ಕಳೆದ ಮೇಲೆ ಮತ್ತೆ ಬ್ರೋಕರ್ ಶಂಕರಪ್ಪ ಮುಂಬಾಗಿಲಿನಲ್ಲಿ ಬಂದು ಹಸನ್ಮುಖರಾಗಿ ಕರೆದಾಗ ಶಾಮಣ್ಣನ ಬತ್ತಿದ ಆಸೆಯೆಲ್ಲಾ ಒಮ್ಮೆಗೇ ಚಿಗುರಿ ಬಿಟ್ಟಿತು.

"ಏನು ಶಂಕ್ರಪ್ಪಾ ...ಬಂದ್ಬಿಟ್ರಿ? ....ಹಣ್ಣೋ? ಕಾಯೋ? "

"ನಾನು ಮನಸ್ಸು ಮಾಡಿದ್ರೆ ಹಿಡಿದ ಕೆಲ್ಸ ಬಿಡೋನೇನ್ರಿ? ....ನಿಮಗೆ ನನ್ನ ಮೇಲೆ ನಂಬಿಕೇನೇ ಇರ್ಲಿಲ್ಲ ಅಲ್ವಾ? ಈಗ್ನೋಡಿ! .... ಲಲ್ತಮ್ಮ ಎಲ್ಲಿಂದೆಲ್ಲಿಗೆ? ... ಮುಂದಲ ಸೋಮವಾರ ಮದ್ವೆ, ಗುರುವಾರ ಜುಂ ಅಂತ ಗಂಡನ ಪಕ್ಕ ಕುಳ್ತು ಏರೋಪ್ಲೇನಿನಲ್ಲಿ ಹಾರ್‍ತಿರ್ತಾಳೆ. ಕರ್ಕೊಂಡೋಗೋ ಏರ್ಪಾಡೂ ಆಗ್ಲೇ ಮಾಡ್ಕೊಂಡ್ಬಿಟ್ಟಿದ್ದಾನಂತೆ. ಬರೀ ಒಂದು ದಿನದ ಮಟ್ಟಿಗೆ ನಾಳೆಯೇ

ಇವಳು ಅವನೊಂದಿಗೆ ಹೋಗಿ ಮದ್ರಾಸಿನಲ್ಲಿ ಅದ್ಯಾವುದೋ .... ಅದೆಂಥದ್ದೋ ಕಾಗ್ದ ಪತ್ರ ಇರ್ತ್ತಾದಲ್ಲ ಹೊರದೇಶಕ್ಕೆ ಹೋಗೋಕೆ .... ಅದಕ್ಕೆ ಒಂದು ರುಜು ಮಾತ್ರ ಮಾಡಬೇಕಷ್ಟೆ.

....ಹುಡ್ಗ ಅದೇನು ಜಾಣ....ಅದೇನು ಚುರುಕು, ಮುಂದಾಲೋಚನೆ ಮಾಡೋದು ನೋಡಿದ್ರಾ....ಎಲ್ಲ ಹೇಗೆ ಪ್ಲಾನ್ ಮಾಡ್ತಾನೆ... ತಿಳ್ದೋರ್ನ ನೋಡಿ ಈ ಕೆಲ್ಸನೆಲ್ಲಾ ಮುಂಚಿಗೆ ಮುಂಚೆಯೇ ತಯಾರು ಮಾಡಿಟ್ಕೊಳ್ದೇ ಹೋದರೆ ಇವನು ಹೋಗಿ ಎಷ್ಟೋ ತಿಂಗಳ ಮೇಲೆ ಲಲ್ತಮ್ಮ ಒಬ್ಬಳೇ ಹೋಗ್ಬೇಕಾಗಿತ್ತು....”

ಹೇಗೂ ಲಲಿತಾ ಅವಳ ಭಾವಿ ಗಂಡ, ಅತ್ತಿಗೆಯೊಡನೆ ಮದ್ರಾಸಿಗೆ ಹೋಗಿ, ಬಂದಳು.

ಬನ್ನೇರುಘಟ್ಟದಲ್ಲಿ ಒಂದು ಶಾಸ್ತ್ರ ಮಾಡಿ ಮುಗಿಸಿ ಕೊಟ್ಟರೆ ಸಾಕು ಆಡಂಬರ ಬೇಡವೆಂದು ಮದು-ಮಗನೇ ಹೇಳಿದ ಪ್ರಕಾರ ಹಬ್ಬದಂತೆ ಮದುವೆಯನ್ನು ಮಾಡಿ, ಮತ್ತೆರಡು ದಿನಗಳಲ್ಲಿ ಏರೋಡ್ರೂಮಿಗೆ ಹೋಗಿ ಮಗಳು - ಅಳಿಯನನ್ನು ಬೀಳ್ಕೊಟ್ಟು, ಬೀಗುತ್ತಾ ಬಂದರು ಶಾಮಣ್ಣ. ಈ ಮದುವೆಯಾದದ್ದು ಅವರ ಮಾತಿನ ಒಡಂಬಡಿಕೆ ಪಕ್ಷಿಗೆ ಒಂದು ಬಣ್ಣದ ಪುಚ್ಚವೇ ಹುಟ್ಟಿಕೊಂಡಂತಾಯಿತು. ನಿಂತಲ್ಲಿ ಕೂತಲೆಲ್ಲಾ ಕೊಚ್ಚಿಕೊಂಡು ಎಲ್ಲರನ್ನೂ ಸಾಕು ಮಾಡಿದರು. ಬ್ರೋಕರ್ ಶಂಕರಪ್ಪನನ್ನು ತಲೆಯ ಮೇಲೆ ಇಟ್ಟುಕೊಂಡು ಉಪಚರಿಸಿ ಉದಾರವಾಗಿ ಬಹುಮಾನ ಕೊಟ್ಟರು.

ಮೂರು ದಿನಗಳ ಮೇಲೆ ಲಲಿತಾ, ಅಳಿಯ ಸುಖವಾಗಿ ತಲುಪಿದ್ದಕ್ಕೆ ಕೇಬಲ್ ಕೂಡ ಬಂದಾಯಿತು.

ಮುಂದೆ ಮಗಳಿಂದ ಪತ್ರ ಬರುವ ತನಕ ಆ ಒಂದು ತಿಂಗಳು ಅವರ ತಲೆಯ ಪುಚ್ಚ ಮೇಲ್ಮೇಲೆ ಬೆಳೆಯುತ್ತಲೇ ಹೋಯಿತು. ಪರಿಚಿತರಿಗೂ ಶಾಮಣ್ಣನ ಈ ಗೆಲ್ಲುವಿಕೆ ಮೂಗಿನ ಮೇಲೆ ಬೊಟ್ಟಿಟ್ಟಂತೆಯೇ ಆಗಿತ್ತು. ಎಲ್ಲರೂ “ಕೊನೆಗೊಮ್ಮೆ ಒಬ್ಬ ಮಗಳಿಗಾದ್ರೂ ದೊಡ್ಡ ಕಡೆಯೇ ಕೊಟ್ಟರಲ್ಲಾ” ಎಂದು ವಿಸ್ಮಯದ ಮಾತು ಹೇಳಿದರೆ ಶಾಮಣ್ಣ ನಕ್ಕು, ಒಬ್ಬ ಮಗಳಿಗೇನು ?....ಮನುಷ್ಯನಿಗೆ ತಾಳ್ಮೆ ಬೇಕು ಕಂಡ್ರಿ !.... ನೋಡಿ, ಮುಂದಿನ ಹುಡುಗೀರ್ಗೂ ದೇವ್ರು ಕೊಡ್ತಾನೋ ಏನೋ ಯಾರಿಗೆ ಗೊತ್ತು !...." ಎಂದು ತುಂಬು ಆತ್ಮ ವಿಶ್ವಾಸದಿಂದ ಹೇಳಿಕೊಂಡರು.

ಯಾವ ಸುಖವೂ ನೆರೆಯುಕ್ಕಿದಂತೆ ಇದ್ದಕ್ಕಿದ್ದಂತೆಯೇ ಬರಬಾರದು ಎನ್ನುತ್ತಾರೆ ಹಲವು ಹಿರಿಯರು. ಮುಂದೆ ಒಂದು ತಿಂಗಳಾದ ವೇಲೆ ವಿದೇಶಿ ಲಕ್ಕೋಟಿಯೊಂದು ಅವರ ಕೈ ತಲುಪಿತು. ಮಗಳು ಲಲಿತಾಳ ಕಾಗದ !

ಸಂಭ್ರಮದಿಂದ ಮಕ್ಕಳನ್ನೆಲ್ಲಾ ಕರೆದು ಆ ಪತ್ರವನ್ನು ಬಿಡಿಸಿ ಓದ ತೊಡಗಿದರು :

“ಅಪ್ಪಾ, ನಮ್ಮ ಕೇಬಲ್ ಈ ವೇಳೆಗೆ ತಲುಪಿ ಬಹುದು. ಈ ವೇಳೆಗೆ ನೀವು ಸಂತೃಪ್ತಿಯ ಶಿಖರವೇರಿ ಕುಳಿತಿರಬಹುದು. ಆದರೆ ಇದನ್ನೀಗ ಬುಡಸಿಹಿತ ಬೀಳಿ ಸಲು ಹೊರಟಿದ್ದೇನೆ. ಅಪ್ಪ, ಕೊನೆಗೂ ನೀನು ಹೆಣ್ಣು ಮಕ್ಕಳಿಗ್ಯಾರಿಗೂ ಮದುವೆ ಮಾಡಸಿಲ್ಲ, ನೀನು ಬನ್ನೇರು ಘಟ್ಟದಲ್ಲಿ ಮಾಡಿದ್ದು ಮದುವೆಯಲ್ಲ !... ನಾಟಕ !.... ನಮ್ಮ ಮುಂದೆ ನಾಟಕ, ಹೆತ್ತ ತಾಯಿ ಮುಂದೆ ನಾಟಕ ಒಳ್ಳೆ ಓದಿದ, ಪ್ರಸಿದ್ಧರಾದ ಮನೆತನದ, ಸುಂದರಿಯರಾದ ನಾಜೂಕಾದ ಹುಡುಗಿಯರನ್ನು ಬಿಟ್ಟು ಈತ ನನ್ನ ಕೈಯನ್ನೇಕೆ ಹಿಡಿದರು ಗೊತ್ತೆ ?....

ಇಲ್ಲಿ ಇವರಿಗೆ ಈಗಾಗಲೇ ಒಂದು ಫ್ರೆಂಚ್ ಹುಡುಗಿಯೊಂದಿಗೆ ಮದುವೆಯಾಗಿದೆ. ಒಂದು ಮುದ್ದಾದ ಮಗುವೂ ಇದೆ. ಆಕೆ ಮತ್ತೆ 7 ತಿಂಗಳ ಬಸುರಿ. ಅವ್ಳು ಕೆಲ್ಸಕ್ಕೆ ಹೋಗ್ತಾಳೆ.

ಇಲ್ಲಿ ಸಂಸಾರ ತೂಗಿಸಲು ಒಬ್ಬಳು ಆಯಾ, ಅಡಿಗೆಯವಳ ಅವಶ್ಯಕತೆ ತೀರಇತ್ತು. ಇಲ್ಲಿ ಅಂಥಹವರು ಸುಲಭದಲ್ಲಿ ಸಿಗೊಲ್ಲ. ಬಹುಶಃ ಹೆಂಡತಿಗೆ ತಾನು ತಾಯನ್ನು ನೋಡಲು ಹೋದಾಗ ಇಂಡಿಯಾದಿಂದ ಒಬ್ಬಳು ಕೆಲಸದವನ್ನು ಕರೆತರುತ್ತೇನೆ. ಅಲ್ಲಿ ಕಾಲ್ಗೊಬ್ಬ ಕೈಗೊಬ್ಬಳು ಕೆಲಸದೋರು ಸಿಕ್ತಾರೆ ಎಂದು ಹೇಳಿ ಬಂದಿರಬಹುದು. ಆಕೆ ನನ್ನನ್ನು ಮೊದಲದಿನ ಕಂಡಾಗಲೇ ನಡೆದುಕೊಂಡ ರೀತಿಯಲ್ಲಿ ಈ ಅನುಮಾನ ಬಂದದ್ದು ಈಗ ಗಾಢವಾಗಿದೆ.

ಅವನ ಒಂದೇ ಏಟಿಗೆ ಎರಡು ಹಕ್ಕಿಗಳು ಉರುಳಿದವು. ಮಗ ಮದುವೆಯಾದನೆಂದು ಸಾಯು

ಮುದುಕಿ ತೃಪ್ತಿ ಹೊಂದಿತು, ಕೆಲಸದವಳು ಸುಲಭವಾಗಿ ಸಿಕ್ಕುವ ಅನುಕೂಲವೂ ಆಯಿತು. ಅದಕ್ಕೆಂದೇ ನನ್ನಂತಹ ಪ್ರಪಂಚವರಿಯದ, ಅಂದ ಚಂದವಿಲ್ಲದ ಒರಟು ಹೆಣ್ಣನ್ನು 'ಮದುವೆ' ಯಾದದ್ದು!. ಈ ವಿಚಾರ ಅವನ ತಾಯಿಗೆ ಹೇಳಬೇಡಿ. ಆ ಮುದ್ಕಿ ಯಾದ್ರೂ ಹಾಯಾಗಿ ಪ್ರಾಣಬಿಡ್ಲಿ....ಈಗ ಸಿಗಹಾಕಿಕೊಂಡು ಬಿಟ್ಟಿದ್ದೇನೆ. ... ನನ್ನ ಮೇಲೆ ಸರ್ಪಕಾವಲು. ಈ ಕಾಗದ ಬರಿಯಲು ಅವರ ಡ್ರಾನಿಂದ ನಮ್ಮ ನಾಡಿಗೆ ಕಳಿಸು ಈ ವಿಶೇಷ ಲಕೋಟೆ ಒಂದು ತೆಗೆದು ನಿಮಗೆ ಬರೆಯಲು ನನಗೆ ಇಷ್ಟುದಿನ ಹೊಂಚು ಹಾಕಬೇಕಾಯಿತು. ....ಮತ್ತೆ ನನ್ನಿಂದ ಪತ್ರ ನಿರೀಕ್ಷಿಸಬೇಡಿ. ಹೇಗೆ ಇಲ್ಲಿಂದ ಬಿಡಿಸಿಕೊಂಡು ಬರುವುದೇ ನಾನರಿಯೆ. ಸುಸಮಯಕ್ಕಾಗಿ ಕಾಯುತ್ತೇನೆ. ಆಧರೆ ಸಧ್ಯಕ್ಕೆ ನನ್ನನ್ನು ಮರೆತುಬಿಡಿ—ಲಲಿತಾ.

ಅವಳು ತನ್ನ ವಿಳಾಸವನ್ನೂ ಸಹ ತಂದೆಗೆ ಕಳುಹಿಸಲಿಲ್ಲ.

o o o o

"ಕಥೆ" ಹೇಳಿಯಾದ ಶಾಮಣ್ಣ ಊಟದ ಕೊನೆಗೆ ಬೇಸಗೆಯಲ್ಲಿ ಕುಡಿಯುತ್ತಿದ್ದ ಉಪ್ಪು ಬೆರಸಿದ ಮಜ್ಜಿಗೆ ನೀರಿನೊಂದಿಗೆ ಆತನ ಕಣ್ಣೀರೂ ಬೆರಸಿ ಕುಡಿಯುತ್ತಿದ್ದರು.

ಆತನಿಗೆ ಹೇಗೆ ಸಮಾಧಾನ ಮಾಡಬೇಕೋ ಅರಿವಾಗಲಿಲ್ಲ. ಪ್ರಪಂಚದಲ್ಲಿ ಇಂಥಹ ದ್ರೋಹಿಗಳೂ ಉಂಟೆ?

ಊಟ ಮುಗಿದಿತ್ತು. ಮೌನವಾಗಿ ಎದ್ದು ಕೈ ತೊಳೆಯಲು ಹೋದೆ. ಶಾಮಣ್ಣ ಮತ್ತೊಂದು ನಲ್ಲಿಗೆ ಕೈ ಒಡ್ಡಿದರು. ಆದರೆ ನಾನು ಕೈ ತೊಳೆದು ತಲೆ ಎತ್ತುವಷ್ಟರಲ್ಲಿ ಗುಂಪು ಅಸಾಧ್ಯವಾಗಿ ಅವರಲ್ಲೇ ಕಣ್ಮರೆಯಾಗಿ ಹೋಗಿದ್ದರು.

---

## ಮಹಾಗ್ರಂಥ

ಎಷ್ಟು ಓದಬೇಕೆಂದರೂ ಇನ್ನು ಎಷ್ಟೋ ಉಳಿದು ಹೋಗುತ್ತಿದೆ
ಎಲ್ಲಾ ಓದಬೇಕೆಂದು ಈ ಆಯುಷ್ಯ ಎಲ್ಲಾ ಸಾಲದೇ ಇದೆ
ಅದಕ್ಕೆ ಸ್ವಲ್ಪ ಸ್ವಲ್ಪ ಓದಿಕೊಂಡು ತಿಳಿಯುತ್ತೇನೆ
ಏನು ಓದಿದರೂ ನಿನ್ನ ತಿಳಿಯುವ ತವಕ ಮಾತ್ರ ಸಾಧ್ಯವಾಗದು
ಯಾವ ಶಾಸ್ತ್ರವಾದರೂ ನೀನು ಸೃಷ್ಟಿಸಿದ ವಿಶ್ವರಹಸ್ಯಕ್ಕಿಂತ ಆದ್ಭುತವಲ್ಲ
ಯಾವ ಯೋಗವಾದರೂ ನಿನ್ನ ಧ್ಯಾನ ಮುದ್ರೆಗಿಂತ ಶಾಂತಿಪ್ರದವಲ್ಲ
ಪ್ರಭೋ ನೀನೊಂದು ಮಹಾಗ್ರಂಥ ನಿನ್ನ ಓದಿ ಅರ್ಥಮಾಡಿಕೊಳ್ಳಲು ಈ ಸ್ವಲ್ಪ ಜನ್ಮ ಸಾಲದು
ಓ ಅಮರ ಗಾಯಕ
ನಾನು ಹಾಡು ಎಂದರೆ ನೀನು ಹಾಡಲಾರೆ
ನಿನ್ನ ಇಷ್ಟ ಬಂದಾಗ ಹಾಡಲೇ
ನಿನ್ನ ಹಾಡಿನಲ್ಲಿ ನನ್ನ ಪೂರ್ವ ಜನ್ಮದ ಜ್ಞಾಪಕ ತರುವೆ
ಪುನಃ ಜನ್ಮ ತೋರಿಸಿ ಭಯ ಹುಟ್ಟಿಸುವೆ
ಹೇಗಪ್ಪಾ ಸ್ವಾಮಿ ! ನಿನ್ನ ವಾದಿಸುವರಾರು
ಯಾವ ವಿಧವಾಗಿ ಪ್ರಭು ! ನಿನ್ನ ಅನುಕರಿಸುವೆ ?
ಎಲ್ಲೋ ಹೋಗುತ್ತಿರುವೆ ನೀನು
ನಿನ್ನ ಹಿಂದೆ ನಾನು. ಆದರೆ ಬೆನ್ನು ಕಾಣುತ್ತಿಲ್ಲ ನನಗೆ
ಎಲ್ಲೂ ನೋಡಿದರೂ ಹಾಳು ಮರುಭೂಮಿ
ಮರುಭೂಮಿಯಲ್ಲಿ ನಿನ್ನ ಪಾದ ಮಾತ್ರ
ನಿನ್ನ ದರ್ಶನ ಸಿಕ್ಕುತ್ತಿಲ್ಲ ಸ್ವಾಮಿ.

—ಹೆಚ್. ಕೆ. ಸಾವಿತ್ರಿ

# ಮಹಿಳೆ ಮತ್ತು ಪತ್ರಿಕೆ

— ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್

ಪತ್ರಿಕೆಯೆಂದರೆ ರಾಷ್ಟ್ರದ ಚತುರ್ಥಾಂಗವೆಂದು ಹಿರಿಯರು ಕರೆದಿದ್ದಾರೆ. ಥಾಮಸ್ ಜಫರ್‌ಸನ್ ಹೇಳಿದ ಮಾತುಗಳಿವು. "ನನಗೇನಾದರೂ ವೃತ್ತ ಪತ್ರಿಕೆಗಳಿಲ್ಲದ ಸರಕಾರ ಬೇಕೋ, ಸರಕಾರವೇ ಇಲ್ಲದೆ ವೃತ್ತ ಪತ್ರಿಕೆಗಳು ಬೇಕೋ" ಎಂದು ಕೇಳಿದರೆ ನಾನು ಸರಕಾರವಿಲ್ಲದಿದ್ದರೂ ವೃತ್ತ ಪತ್ರಿಕೆಗಳಿರಲಿ ಎನ್ನಲು ಹಿಂಜರಿಯುವುದಿಲ್ಲ" ಎಂದು ಹೇಳಿದ ಮಾತು ವರ್ತಮಾನ ಪತ್ರಿಕೆಗಳ ಮಹತ್ವತೆಯ ಬಗೆಗೆ ಸಾರುತ್ತವೆ. ಅದು ಕಾರಣವೇ ಪತ್ರಿಕೋದ್ಯಮವನ್ನು ರಾಷ್ಟ್ರದ ಚತುರ್ಥಾಂಗವೆಂದು ಹೇಳುವುದರಲ್ಲಿ ತಪ್ಪೇನು? ಒಂದು ರಾಷ್ಟ್ರದ ಪ್ರಗತಿಗೆ ವ್ಯಕ್ತಿಯ ಮೂಲಭೂತ ಹಕ್ಕುಗಳ ಕಾಪಾಡುವಿಕೆಯಷ್ಟೇ ವೃತ್ತ ಪತ್ರಿಕೆಗಳ ಸ್ವಾತಂತ್ರ ಮತ್ತು ಆರೋಗ್ಯಕರ ಬೆಳವಣಿಗೆ ಕಾರಣವಾಗಿದೆ.

ಒಂದು ರಾಷ್ಟ್ರವು ಉನ್ನತಿ ಸ್ಥಿತಿಗೆ ಬರಬೇಕಾದರೆ ಸ್ತ್ರೀ-ಪುರುಷರಿಬ್ಬರೂ ಸರಿಸಮಾನರಾಗಿ ತಮ್ಮ ಪಾಲಿನ ಸೇವೆ ಸಲ್ಲಿಸುತ್ತಿರಬೇಕು, ಮಹಿಳೆಯರು ದೇಶಕ್ಕೇನು ಮಾಡಬಲ್ಲರು ? ಅವರಿಂದೇನು ಸಾಧ್ಯ ! ಅಡಿಗೆ, ಮನೆಗೆಲಸಗಳನ್ನು ಮಾಡುವುದನ್ನು ಬಿಟ್ಟು ದೇಶಸೇವೆ ಎಂದು ಹೊರಟರೆ ಸಂಸಾರಗಳ ಗತಿ ಏನು ಎಂದು ತರ್ಕಿಸುವವರು ಇದ್ದಾರೆ. ಅಲ್ಲದೆ ನಮ್ಮಲ್ಲಿ ಗಾದೆ ಇದೆಯಲ್ಲವೇ "ಮನೆಗೆದ್ದು ಮಾರುಗೆಲಿ" ಯೆಂದು. ಆದರೆ ಮನೆಯ ನಾಲ್ಕು ಗೋಡೆಯ ತೆರೆಯ ಮರೆಯಲ್ಲಿ ಇರುವ ಪ್ರಾಣಿಯಲ್ಲ. ಇಂದು ಮಹಿಳೆ ಪುರುಷನಷ್ಟೆ ಪ್ರತಿಯೊಂದು ಕಾರ್ಯರಂಗದಲ್ಲಿ ಕೆಲಸ ಮಾಡುವುದಕ್ಕೆ ಸಮರ್ಥಳಾಗಿದ್ದಾಳೆ. ನಮ್ಮ ನಮ್ಮ ಮನೆಗಳಲ್ಲಿಯೇ ನಾವು ದೇಶ ಸೇವೆಯ ಕಾರ್ಯ ನಡೆಸಿದರೆ ಬೇಕಾದಷ್ಟು ಕೆಲಸ ನಡೆಸ ಬಹುದು. ವಚನಕಾರ ಜಗಜ್ಯೋತಿ ಬಸವಣ್ಣನವರು ಮಾತಿನಲ್ಲಿ ಲೋಕದ ಡೊಂಕ ತಿದ್ದುವ ಮುಂಚೆ ನಮ್ಮ ನಮ್ಮ ಮನವ–ತನುವ ಸಂತೈಸಿಕೊಳ್ಳಬೇಕು. ಪ್ರತಿಯೊಬ್ಬರೂ ತಮ್ಮ ತಮ್ಮ ಮನೆಗಳನ್ನು ಸರಿಪಡಿಸಿಕೊಂಡರೆ ಲೋಕವೇ ಸರಿಯಾಗುವುದಿಲ್ಲವೇ ?

ನಮ್ಮ ಭಾರತದಲ್ಲಿ ವೇದಗಳ ಕಾಲದಿಂದಲೂ ಭಾರತೀಯ ಮಹಿಳೆ ಸಮಾಜದ ಎಲ್ಲ ಪ್ರಕಾರದ ಕಾರ್ಯಗಳಲ್ಲಿ ತನ್ನ ಸೇವೆ ಸಲ್ಲಿಸಿದ್ದಾಳೆ. ಆಧುನಿಕತೆಯ ಸೋಂಕೆ ಇಲ್ಲದ ಕಾಲದಲ್ಲಿಯೂ ವಿದ್ಯಾವತಿಯಾಗಿ–ಶಾಸಕಳಾಗಿ–ಸಮಾಜ ಸುಧಾರಕಳಾಗಿ ಬೆಳಗಿದ್ದಾಳೆ. ಇಂದು ವಿಜ್ಞಾನಿಯಾಗಿ, ಪರ್ವತಾರೋಹಿಯಾಗಿ, ಸೈನಿಕಳಾಗಿ, ನ್ಯಾಯಾಧೀಶಳಾಗಿ ಜೀವನದ ಬಹುತೇಕ ಎಲ್ಲ ರಂಗಗಳಲ್ಲಿ ತನ್ನ ಸೇವೆಯನ್ನು ವಿಸ್ತರಿಸಿದ್ದಾಳೆ. ಅಂತಹ ಮಹಿಳೆಯರು ರಾಷ್ಟ್ರದ ಪ್ರಗತಿಯಲ್ಲಿ ತಮ್ಮ ಪಾಲಿನ ಸೇವೆ ಸಲ್ಲಿಸುತ್ತಿದ್ದಾರೆ.

ಇಂದು ಆಧುನಿಕ ಜಗತ್ತು ಬೆಳೆದಂತೆ ವಿಜ್ಞಾನ ಯುಗದಲ್ಲಿ ಮಾನವನ ಮಾನಸಿಕ ವಿಕಾಸವು ಹೆಚ್ಚಾಗಿ ಬೆಳೆಯುತ್ತ ನಡೆದಿವೆ. ಅಂತೆಯೇ ಪತ್ರಿಕೆಗಳ ಮಹತ್ವತೆಯು ಹೆಚ್ಚುತ್ತಿದೆ. ಇಂದು ಇಡೀ ಜಗತ್ತಿನ ವರ್ತಮಾನವನ್ನು ನಮ್ಮ ಕಣ್ಮುಂದೆ ತಂದಿರಿಸುತ್ತಿವೆ. ಬೆಳಗ್ಗೆ ಎದ್ದೊಡನೆ ದೇಶ–ವಿದೇಶಗಳಲ್ಲಿ ನಡೆದ ಸಮಾಚಾರವನ್ನು ಓದಬಲ್ಲೆವು. ಒಳ ದೇಶಗಳ ಸುದ್ದಿಗಳನ್ನು ಅರಿಯಬಲ್ಲೆವು. ಇದಿಷ್ಟೆ ಅಲ್ಲದೆ ಪತ್ರಿಕೆಗಳಲ್ಲಿ ವೈವಿಧ್ಯತೆ ಮಾರ್ಪಟ್ಟು ಪ್ರತಿಯೊಂದು ವರ್ಗಕ್ಕೆ ಕಸುಬಿಗೆ

ಮೀಸಲಾದ ವಾರಪತ್ರಿಕೆಗಳೂ ನಮಗೆ ರಾಜಕೀಯದ ಅಂತರಂಗ ಬಹಿರಂಗವನ್ನು ಬಿಚ್ಚಿಡುತ್ತವೆ. ಕಲೆ ಸಾಹಿತ್ಯ ಸಂಸ್ಕೃತಿಗಳಿಗೆ ಮೀಸಲಾದ ಪತ್ರಿಕೆಗಳಿವೆ. ಸಣ್ಣ ಕಥೆಗಳಿಗೂ ಕೇವಲ ವಿನೋದಕ್ಕಾಗಿಯೂ ಹಲವು ಪತ್ರಿಕೆಗಳಿವೆ. ಉದ್ಯಮಗಳಲ್ಲಿ ಕೈಗಾರಿಕೆಗಳು, ಮಾರಾಟ ಸಹಕಾರ, ಒಕ್ಕಲುತನ, ತೋಟಗಾರಿಕೆ ಮೊದಲಾದ ಎಲ್ಲಾ ವಿಷಯಗಳಿಗೂ ಆಯಾ ಕಸುಬಿನ ಆಯಾ ವಿಭಾಗದ ಎಲ್ಲಾ ವಿವರಗಳನ್ನು ಅದರಲ್ಲಿ ನಡೆಯುತ್ತಿರುವ ಪ್ರಗತಿಯನ್ನು ವಿವರಿಸುವ ಪತ್ರಿಕೆಗಳೂ ಇತ್ತೀಚೆಗೆ ಪ್ರಕಟವಾಗುತ್ತಲೇ ನಡೆದಿವೆ. ಆದರೆ ಪತ್ರಿಕೆಯ ಕೆಲಸ ಕೇವಲ ಪುರುಷರಿಗೆ ಮಾತ್ರ ಮೀಸಲಾಗಿಲ್ಲ. ಅದನ್ನು ಸ್ತ್ರೀ–ಪುರುಷರಿಬ್ಬರೂ ನಡೆಸಿಕೊಂಡು ಹೋಗಬಹುದು. ಮಹಿಳೆಯರಿಗಾಗಿಯೇ ಪ್ರತ್ಯೇಕ ಪತ್ರಿಕೆಯ ಅಗತ್ಯವಿದೆಯೇ ಎಂದು ಆಲೋಚಿಸಬೇಕು.

ಆಂಗ್ಲ ಭಾಷೆಯಲ್ಲಿ ಇಂಥ ಪತ್ರಿಕೆಗಳು ಮಹತ್ತರವಾದ ಸ್ಥಾನವನ್ನು ಅಲಂಕರಿಸಿವೆ. ಅಲ್ಲದೆ ಪ್ರತಿಯೊಂದು ವಿಭಾಗಕ್ಕೆ ಮೀಸಲಾದ ಪತ್ರಿಕೆಗಳಿವೆ. ಇವು ತಮ್ಮ ವಿಷಯಗಳಲ್ಲಿ ಪರಿಣಿತರಿಂದ ಲೇಖನಗಳನ್ನು ಬರೆಸುತ್ತವೆ. ಅಲ್ಲದೆ ಮಹಿಳೆಯರಿಗೆ ಮೀಸಲಾದ ಪತ್ರಿಕೆಗಳೂ ಕಸೂತಿ, ಕಲೆ, ಪಾಕಶಾಸ್ತ್ರ ಮತ್ತು ಹೊಲಿಗೆ, ಅಲಂಕಾರ, ವೇಷ-ಭೂಷಣ ಮುಂತಾದ ವಿಷಯಗಳಿಗೂ ಪ್ರತ್ಯೇಕ ಪತ್ರಿಕೆಗಳಿವೆ. ಅದಕ್ಕೆ ಸಂಬಂಧಿಸಿದ ಕುಂದುಕೊರತೆಗಳನ್ನು ಚರ್ಚಿಸುತ್ತವೆ. ಇದರಿಂದ ಉದ್ಯಮದ ಪ್ರಗತಿಗೆ ತುಂಬಾ ಅನುಕೂಲವಾಗುತ್ತದೆ. ಆಡಳಿತದ ಪಕ್ಷಕ್ಕೆ ಬಹುಬೇಗ ಲೋಪ–ದೋಷಗಳನ್ನು ಸರಿಪಡಿಸಿಕೊಳ್ಳಲು ಕಾರಣವಾಗುತ್ತದೆ.

ಇನ್ನು ದೇಶದ ಸಂಖ್ಯೆಯಲ್ಲಿ ಸರಿಸಮಾನವಾಗಿ ಅರ್ಧದಷ್ಟು ಇರುವ ಮಹಿಳೆಯರು ತಮ್ಮ ಕುಂದು–ಕೊರತೆ, ತಮ್ಮ ಅಗತ್ಯತೆಗಳನ್ನು ತಿಳಿಸಲು ತಮ್ಮದೇ ಆದ ಒಂದು ಪತ್ರಿಕೆ ಅವರಿಗೆ ಬೇಕು. ಮಹಿಳೆಯರೂ ಹಿಂಜರಿಯದೆ ಪತ್ರಿಕಾ ಪ್ರಪಂಚದಲ್ಲಿ ಭಾಗವಹಿಸಿ ಮಹಿಳಾ ವರ್ಗಕ್ಕೆ ಆದರ್ಶವಿರುವ ವಿಚಾರ ವಿಮರ್ಶೆಗಳನ್ನು ಪ್ರಕಟಿಸಲು ಪ್ರಯತ್ನ ಪಡಬೇಕು. ಅದು ದಿನ ಮೊದಲುಗೊಂಡು ವಾರ, ಪಕ್ಷ, ಮಾಸಿಕಗಳಲ್ಲಿಯೂ ಪ್ರಕಟವಾಗಿ ಹೊರಬೀಳಬೇಕು. ಇಂದು ನಾಡಿನಲ್ಲಿ ಮಹಿಳೆಯರಿಗಾಗಿ ಮಹಿಳೆಯರಿಂದಲೇ ಎಷ್ಟೋ ಪತ್ರಿಕೆಗಳು ಪ್ರಕಟವಾಗುತ್ತಲೇ ಇವೆ. ಆದರೂ ಅವುಗಳು ವಿಶಾಲವಾದ ಮಹಿಳಾ ವೃಂದಕ್ಕೆ ಅತ್ಯಲ್ಪವೆಂದು ಹೇಳಬಹುದು. ಸ್ತ್ರೀ ಇನ್ನು ಹೆಚ್ಚು ಹೆಚ್ಚಾಗಿ ಮುಂದೆ ಬಂದು ಕೆಲಸ–ಕಾರ್ಯಗಳನ್ನು ಮಾಡಬೇಕಾಗಿದೆ. ಜಾನ್ ಕ್ರಿಪ್ಸನ್ ಹಾರ್ಡಿ ಎಂಬುವರು ಈ ರೀತಿ ಹೇಳಿದ್ದಾರೆ. "ಒಬ್ಬ ಹುಡುಗನಿಗೆ ವಿದ್ಯೆ ಕಲಿಸಿದರೆ ಒಬ್ಬ ವ್ಯಕ್ತಿ ವಿದ್ಯಾವಂತನಾಗುವನು. ಆದರೆ ಒಬ್ಬ ಹುಡುಗಿಗೆ ವಿದ್ಯೆ ಕಲಿಸಿದರೆ ಒಂದು ಸಂಸಾರವೇ ವಿದ್ಯಾವಂತವಾದೀತು." ಇದರಿಂದ ಮಹಿಳೆಯರ ಪ್ರಾಮುಖ್ಯತೆ ಎಷ್ಟೊಂದಿದೆಯೆನ್ನುವುದು ಕಂಡುಬರುತ್ತದೆ.

ಇಂದು ಮಹಿಳೆಯರು ಕೇವಲ ಮನೆಗೆಲಸಗಳಲ್ಲದೆ ಸಾಮಾಜಿಕ ರಂಗದಲ್ಲಿ, ಶಿಕ್ಷಣ ರಂಗದಲ್ಲಿ, ರಾಜಕೀಯ ಕ್ಷೇತ್ರದಲ್ಲಿ ಮಹತ್ತರ ಸೇವೆ ಸಲ್ಲಿಸುತ್ತಿದ್ದಾರೆ. "ತೊಟ್ಟಿಲು ತೂಗುವ ಕೈ ರಾಜ್ಯವನ್ನು ಆಳೀತು" ಎಂಬುದನ್ನು ಆಗಮಾಡಿ ತೋರಿಸಿದ್ದಾರೆ. ಅಂದಮೇಲೆ ರಾಷ್ಟ್ರದ ಪ್ರಗತಿಗೆ ಅಗತ್ಯವಾದ ಪತ್ರಿಕೆಗಳು ಮಹಿಳೆಯರಿಗೂ ಆಗತ್ಯವೇ ಆಯಿತು. ಅದಕ್ಕಾಗಿಯೇ ಅವರಿಗೆ ಪ್ರತ್ಯೇಕವಾದ ತಮ್ಮ ಹಕ್ಕು-ಬಾಧ್ಯತೆಗಳನ್ನು ರಕ್ಷಿಸಬಲ್ಲ-ಆದಕ್ಕಾಗಿಯೇ ಹೋರಾಡಬಲ್ಲ ಕುಂದು–ಕೊರತೆಗಳನ್ನು ತೋರ್ಪಡಿಸಬಲ್ಲ ಪ್ರತ್ಯೇಕ ಪತ್ರಿಕೆಗಳು ಅತ್ಯಗತ್ಯವಾಗಿವೆ.

ಇಂದು ಭಾರತೀಯ ನಾರಿಯರಲ್ಲಿ ಅನಕ್ಷರಸ್ಥರು ಬಹಳ ಮಂದಿ. ಅವರಿಗೆ ವೃತ್ತಪತ್ರಿಕೆಗಳು ಬಹು ಹೆಚ್ಚಿನ ಸೇವೆ ಮಾಡಬಲ್ಲವು. ಚಿತ್ರರಂಗ, ರಂಗಭೂಮಿ, ವೃತ್ತಪತ್ರಿಕೆ ಈ ಸಾಧನ ನಾವು ಬಿಡಲಾರದಂತಹವು. ಜನರು ತಮ್ಮ ತಮ್ಮ ತಪ್ಪು ತಡೆಗಳನ್ನು ಇವೆರಡೂ ಸಾಧನಗಳ ಮುಖಾಂತರ ತಿಳಿದುಕೊಂಡು ಒಳ್ಳೆ ಮಾರ್ಗದಲ್ಲಿ ಮುಂದೊರೆಯಲು ಪ್ರಯತ್ನಿಸಬಹುದು.

ಮಹಿಳೆಯರಲ್ಲಿ ಮೂಡಿರುವ ಅಂಧಶ್ರದ್ಧೆಗಳ ನಿವಾರಣೆಗಾಗಿ, ಅಕ್ಷರ ಪ್ರಚಾರಕ್ಕಾಗಿ, ಕುಶಲ ಕಲೆ ಪ್ರಗತಿಗಾಗಿ ಊಟ ಉಪಚಾರಗಳಲ್ಲಿಯ ವೈವಿಧ್ಯತೆಯ ಅರಿವಿಗಾಗಿ ಸಾಮಾಜಿಕ ನಡವಳಿಕೆ, ಆರೋಗ್ಯಪಾಲನೆ, ಗೃಹ ವಿಜ್ಞಾನ ಮುಂತಾದ ಉಪಯುಕ್ತ ವಿಷಯಗಳನ್ನು ಅರಿತು

ಕೊಳ್ಳಲು ಪತ್ರಿಕೆ ಬೇಕು. ಶಿಶು ಸಂಗೋಪನೆ ಮಹಿಳೆಯರು ಮಕ್ಕಳನ್ನು ಚಿಕ್ಕಂದಿನಲ್ಲಿ ಸಾಕುವ ವಿಧಾನ ಅವುಗಳ ಪೋಷಣಾ ರೀತಿ-ನೀತಿ, ಮನೆಗೆಲಸದಲ್ಲಿ ಒಂದು ವ್ಯವಸ್ಥೆ, ಅಚ್ಚುಕಟ್ಟುತನ, ಆರ್ಥಿಕ ಉಳಿತಾಯ ಸಂಸಾರ ನಿರ್ವಹಣೆಯಲ್ಲಿ ಮಿತವ್ಯಯ, ಪೌರನೀತಿಯ ಪ್ರಥಮ ಪಾಠಗಳು ಇವೆಲ್ಲವುಗಳನ್ನು ಪತ್ರಿಕೆಯ ಮೂಲಕದಿಂದ ಅರಿವುಮಾಡಿಕೊಳ್ಳಬೇಕು. ಆದರೆ ಇದು ಸಾಧ್ಯವಾಗುವುದು ಕೇವಲ ಮಹಿಳೆಯರಿಗಾಗಿ ಮೀಸಲಾಗಿರುವ ಪ್ರತ್ಯೇಕ ಪತ್ರಿಕೆಗಳಿಂದ ಮಾತ್ರವೆನ್ನಬಹುದು. ಮಹಿಳೆಯರ ಹೆಸರಿನಲ್ಲಿ ಪುರುಷರಿಂದಲೇ ನಡೆಸಲ್ಪಡುವ ಪತ್ರಿಕೆಗಳಿಂದಲ್ಲ. ಮಹಿಳೆಯರಿಂದಲೇ ಸಂಪಾದಿತವಾಗಿ ಮಹಿಳೆಯರಿಂದಲೇ ಬರೆಯಲ್ಪಟ್ಟ ಲೇಖನಗಳಿಂದ ಕೂಡಿ ಅವರಿಂದಲೇ ತಮ್ಮ ಪ್ರಗತಿಯ ಚಿಂತನೆಯಾಗಬೇಕು. ಈ ವಿಚಾರ ವಿಮರ್ಶೆಗೆ ಪತ್ರಿಕೆಗಳು ಮಹತ್ತರ ಸೇವೆ ಸಲ್ಲಿಸುವುದು ಸಾಧ್ಯ.

ಮಹಿಳೆಯರಿಗಾಗಿ ಪತ್ರಿಕೆಯೆಂದರೆ ಪ್ರತ್ಯೇಕವಾಗಿ ವಿಶೇಷವಾಗಿ ಪ್ರಕಟವಾಗಬೇಕು. ಮನೆ ಮನೆಯಲ್ಲಯೂ ಒಂದು ಮಹಿಳಾ ಪತ್ರಿಕೆ ಇದ್ದು ಗೃಹಿಣಿಗೆ ಮನೆಗೆ ಒಂದು ಕನ್ನಡಿಯಂತೆ ಶೋಭಿಸಬೇಕು. ಪ್ರತ್ಯೇಕ ಪತ್ರಿಕೆಯನ್ನು ಮಹಿಳೆಯರೇ ಹೊರಡಿಸುವುದೆಂದರೆ ಪ್ರಾರಂಭದಲ್ಲಿ ಸ್ವಲ್ಪ ಕಷ್ಟ ಸಾಧ್ಯವೆಂದು ತೋರಬಹುದು. ಆದರೆ ಪ್ರಯತ್ನಿಸಿದರೆ ಪುರುಷರಂತೆಯೇ ಸುಂದರವಾಗಿ ಒಂದು ಪತ್ರಿಕೆಗೆ ಜೀವ ಕಳೆಯನ್ನು ತುಂಬಿ ಅದನ್ನು ಒಂದು ಆದರ್ಶ ಪತ್ರಿಕೆಯನ್ನಾಗಿ ಮಾಡಬಹುದು. ಇದಕ್ಕೆ ಸಮಾಜದ ಜನತೆಯ ಆದರದ ಸಹಾಯವೂ ಅತ್ಯಗತ್ಯವೆನ್ನುವುದನ್ನು ಮರೆಯಕೂಡದು.

ಇನ್ನು ಪತ್ರಿಕೆಗಳ ಸ್ಥಾನ-ಮಾನಗಳನ್ನು ವಿಚಾರಿಸುವ ಮೊದಲು ಆರ್ಥಿಕ ಪರಿಸ್ಥಿತಿಯೂ ನಮ್ಮ ಕಣ್ಣೆದುರಿಗೆ ಬಂದು ನಿಲ್ಲುತ್ತದೆ. ಅಲ್ಲದೆ ಇದು ಮುಖ್ಯವಾದ ವಿಷಯವೂ ಅಹುದು. ಯಾವುದಕ್ಕೂ "ಕಾಂಚಾಣಂ ಕಾರ್ಯ ಸಿದ್ಧಿ" ಅಲ್ಲವೆ ? ಪತ್ರಿಕೆಗಳನ್ನು ನಡೆಸುವವರ ಕಷ್ಟ-ಸುಖಗಳು ಪತ್ರಿಕಾ ಪ್ರಪಂಚದಲ್ಲಿ ಹಗಲಿರುಳು ದುಡಿಯುವವರಿಗೆ ಗೊತ್ತು. ಮಹಿಳೆಯರಿಗಾಗಿ ಪ್ರತ್ಯೇಕ ಪತ್ರಿಕೆ ಬೇಕು, ನಿಜ. ಆದರೆ ಪತ್ರಿಕೆಯಷ್ಟೇ ಓದುವ ಮಹಿಳೆಯರೂ ಬೇಕಲ್ಲವೇ ? ಅದರಲ್ಲಿಯೂ ದುಡ್ಡು ಕೊಟ್ಟು ಕೊಂಡು ಓದುವವರ ಬಳಗ ಹೆಚ್ಚಬೇಕು. ಅಂದರೇನೇ ಪತ್ರಿಕೆಗೆ ನಿಜವಾಗಿ ಪ್ರೋತ್ಸಾಹನೆ ಕೊಟ್ಟಂತಾಗುವುದು. ಆದ್ದರಿಂದ ಮೊದಲು ಅಕ್ಕ-ತಂಗಿಯರಲ್ಲಿ ಓದುವ ಲಾಲಸೆ ಹೆಚ್ಚಾಗಬೇಕು. ಅಲ್ಲದೆ ಮಹಿಳೆಯರಲ್ಲಿ ಅಡಗಿಕೊಂಡಿರುವ ಸಂಕುಚಿತ ಭಾವನೆಯು ಮಾಯವಾಗಬೇಕು. ಹೃದಯ, ಸಾಗರದಂತೆ ವಿಶಾಲವಾಗಿ ನೀರಿನಂತೆ ತಿಳಿಯಾಗಬೇಕು. ಹಣ್ಣಿನಂತೆ ಪರಿಪಕ್ವವಾಗಬೇಕು. ಅದಕ್ಕಾಗಿಯೇ ಮಹಿಳೆಯರ ಪ್ರಗತಿಪರ ಯೋಗ್ಯವಾದ ಪ್ರತ್ಯೇಕ ಪತ್ರಿಕೆಗಳನ್ನು ಓದಿ ಮನನ ಮಾಡಿಕೊಳ್ಳಬೇಕು.

---

# ಬಿಲುಪ್ಪರದಲ್ಲಿ ಆರಾಮವರ್ಷ

—ಟಿ. ಸುನಂದಮ್ಮ

(ಶ್ರೀಪತಿರಾಯನ ಮನೆ, ಮಧ್ಯಮ ವರ್ಗದ ಸಂಸಾರದ ರಂಗಸಜ್ಜಿಕೆ, ಗೋಡೆಯ ಮೇಲೆರಡು ಪಠಗಳು, ಕ್ಯಾಲೆಂಡರ್, ಮೂರು ಕುರ್ಚಿ, ಅದರ ಮೇಲೆ ಗಡಿಯಾರ, ಒಂದು ಟೀ–ಪಾಯ್, ರಂಗದ ಮೇಲಿನ ಎರಡು ಬಾಗಿಲುಗಳಲ್ಲಿ ಒಂದು ತೆರೆದಿದೆ. ಒಂದು ಅಡಿಗೆ ಮನೆ ಎಂದು ಸೂಚಿಸಲು ಕೆಲವು ಪಾತ್ರೆಗಳು, ಡಬ್ಬಗಳು, ಪಾಕಗೃಹ ಸಲಕರಣೆಗಳು ಕಾಣಿಸುತ್ತಿವೆ. ಸಣ್ಣ ಮೇಜಿನ ಮೇಲೆ ಸೀಮೇಎಣ್ಣೆ ಸ್ಟವ್, ಅದರ ಮೇಲೊಂದು ಕೊಳದಪ್ಪಲೆ, ತೆರೆ ತೆಗೆದಾಗ ಶ್ರೀಪತಿರಾಯ, ಸೌಟು ಪಾಣಿಯಾಗಿ ಸ್ಟವ್ ಮುಂದೆ ನಿಂತಿರುತ್ತಾನೆ. ತೊಟ್ಟಿರುವುದು ನೆಟ್ ಬನಿಯನ್, ಭುಜದ ಮೇಲೆ ಅರೆಕೊಳೆ ಟವಲ್, ಪಂಚೆ ಕೊಂಚ ಮೇಲೆತ್ತಿ ಕಟ್ಟಿರುತ್ತಾನೆ.)

ಶ್ರೀಪತಿರಾಯ : (ಗಡಿಯಾರದ ಬಳಿ ಬಂದು ಬಗ್ಗಿ ನೋಡಿ ಗಾಭರಿಯಿಂದ) ಹನ್ನೊಂದೂ ಮುಕ್ಕಾಲೇ ಆಗಲೇ ?....ಹನ್ನೆರಡಕ್ಕೆ ಸರಿಯಾಗಿ ಬರ್ತೀನಿ ಅಂತ ಹೇಳಿ ಹೋಗಿದ್ದಾಳೆ ! (ಅಡಿಗೇ ಮನೆಗೆ ಓಡಿ ಕೊಳದಪ್ಪಲೆ ಮುಚ್ಚಳದ ತಟ್ಟೆ ಎತ್ತಿ ಕೈಸುಟ್ಟಿತೆಂದು ತಕ ತಕ ಎಗರಿ ಕೈ ಕೊಡವಿಕೊಳ್ಳುತ್ತ ರಂಗಕ್ಕೆ ಬಂದು) ಕರ್ಮ ! ಉರಿಯೋ ಘಾಯಕ್ಕೆ ಉಪ್ಪು ಹಾಕಿದ ಹಾಗಾಯ್ತು ! (ಉರುಬಿಕೊಳ್ಳುತ್ತ) ಅಥವಾ.... ಉಪ್ಪು ಹಾಕಕ್ಕೆ ಮುಂಚೇನೇ ಉರೀತು ! ಹೇಳ್ತಿದ್ರಾಳೆ ಪಾಪ ಲಕ್ಷ್ಮೀ–"ಬರೀ ಕೈಲಿ ಬಿಸಿ ಮುಟ್ಟಬೇಡಿ, ಬಟ್ಟೇಲಿ ಹಿಡೀರಿ ಅಂತ, ಮರೆತೇ ಹೋಗುತ್ತೆ ! "ಅಭ್ಯಾಸವಿಲ್ಲದವ ಅಗ್ನಿಹೋತ್ರ ಮಾಡಿ ಗಡ್ಡ-ಮೀಸೆ ಸುಟ್ಕೊಂಡ ಹಾಗೆ"—ಯಾರಿಗೆ ರೂಢಿ ಇದೆಲ್ಲ ?

ಹುಂ ! ಬೆಂದಷ್ಟೇ ಸಾಕು, ಉಪ್ಪು, ಕಾರ ಹಾಕಿ ಬಿಡೋಣ, ಬರೋ ಹೊತ್ತಾಯ್ತು, ಉಪ್ಪು? (ಡಬ್ಬಗಳನ್ನು ಒಂದೊಂದೇ ತೆಗೆದು ನೋಡಿ, ಕಡೆಗೊಂದನ್ನು ಹಿಡಿದು ಹೊರ ತರುತ್ತ) ಇದು ಉಪ್ಪೋ, ಸಕ್ಕರೆಯೋ ? ಮೇಲೆ ಬರೆದಿರೋದು S-u-g-a-r , ಶುಗರ್ ! ನೋಡಕ್ಕೆ ಉಪ್ಪಿದ್ದ ಹಾಗಿದೆ. (ಒಂದು ಚೂರು ಬಾಯಿಗೆ ಹಾಕಿ ಸಿಂಡರಿಸಿ) ಉಪ್ಪೇ ಗ್ಯಾರಂಟಿ ; (ಬಟ್ಟೆಯಿಂದ ಮುಚ್ಚಳ ತೆಗೆದು ಉಪ್ಪು ಹಾಕುವನು) ಸಾರಿನ ಪುಡಿ ? (ಮತ್ತೆ ಹುಡುಕಾಟ ; ಇನ್ನೊಂದು ಡಬ್ಬಿ ಹಿಡಿದು ಹೊರಬಂದು) ಈ ಪ್ಲಾಸ್ಟಿಕ್ ಭರಣಿ ತಯಾರಿಸಿದೋರು ಹಚ್ಚಿರೋ ಅಕ್ಷರಗಳು Coffee Powder, ಕಾಫೀ ಪುಡಿ ಅಂತ, ನನ್ನ ಅರ್ಧ ಅಂಗಿ ಇದರಲ್ಲಿರಿಸಿರೋದು, Chilli

ಪಾತ್ರವರ್ಗ :

| | |
|---|---|
| ಶ್ರೀಪತಿರಾಯ<br>ಲಕ್ಷ್ಮಿ | ದಂಪತಿಗಳು |
| ಸೀಮಾ : | ಇವರ ಮಗಳು |
| ಗೋವಿಂದಯ್ಯ | |
| ರಮೇಶ : | ಅವರ ಮಗ |
| ಸುಬ್ಬತ್ತೆ | |



Powder ಅಥಾರ್ತ್ ಮೆಣಸಿನ ಪುಡಿ ! (ನಗುತ್ತ) ಅಲ್ಲ ! ಈ ಹೆಂಗಸರಿಗೆ ಆಯಾ ಡಬ್ಬೀಲಿ ಅದದೇ ಪದಾರ್ಥ ? ಯಾಕೆ ತುಂಬಕ್ಕಾಗಲ್ವೋ ? (ಎನ್ನುತ್ತ ಒಳಗೆ ಹೋಗಿ, ಸಾರಿನ ಪುಡಿಯನ್ನು ಕೊಳದಪ್ಪಲೆಗೆ ಹಾಕುವನು, ಹೊರಗೆ ಬರುತ್ತ) ಇನ್ನೇನು ? ಉಪ್ಪು....ಕಾರ... ಹುಳಿ ? ಅರೆರೆ ! ಹುಣಿಸೇ ಹಣ್ಣೇ ನೆನೆಸಿಟ್ಟುಕೊಳ್ಳಲಿಲ್ಲ–ಗ್ರಹಚಾರ ! ಈ ಚಕ್ರವ್ಯೂಹದಲ್ಲಿ ಅದು ನನ್ನ ಕೈಗೆ ಸಿಕ್ಕಿ, ನನೆಸಿ, ಅದು ನೆಂದು... (ಮತ್ತೆ ಡಬ್ಬ, ಪಾತ್ರೆ ಹುಡುಕುತ್ತಿರುವಾಗ ಕರೆಗಂಟೆ ಸದ್ದು ; ಸರ್ರನೆ ಹೊರ ಬರುತ್ತ) ಆಗಲೇ ಬಂದೇ ಬಿಟ್ಳೋ ಏನ್ಕತೆ ? ಆ ಮೀಟಿಂಗ್ ಇನ್ನೂ ಒಂದರ್ಧ ಗಂಟೆ ನಡೀ ಬಾರದಿತ್ತೇ? (ರಂಗದ ಮುಗ್ಗುಲಿಗೆ ಹೋಗುವನು ; ಬಾಗಿಲು ತೆಗೆದ ಸದ್ದು) ಆ ? ಯ....ಯಾರು ? ಗೋ....ಗೋ....ಗೋವಿಂದಯ್ಯ, ಸು....ಸು....ಸುಬ್ಬತ್ತೇ!? (ಎನ್ನುತ್ತ ರಂಗಕ್ಕೆ ಹಿಂದಿರುಗಿದಾಗ, ಕಿಟ್‌ಬ್ಯಾಗ್ ಹಿಡಿದ ಗೋವಿಂದಯ್ಯ, ಉದ್ದನೆಯ ಕೈಚೀಲ ಕಂಕುಳಲ್ಲಿ ತಿರುಪಿನ ತಂಬಿಗೆ ಇರುಕಿದ ಸುಬ್ಬತ್ತೆ ಹಿಂಬಾಲಿಸುವರು) ನೀವು ಹೇಗೆ....? ಗೋ....ಗೋವಿಂದಯ್ಯ ? ಎಲ್ಲಿಂದ... ?

ಸುಬ್ಬತ್ತೆ : ಅದ್ಯಾಕೆ ಹಾಗೆ ನಡುಕ ಬಂದೋನ ಹಾಗೆ ತೊದಲ್ತೀಯೋ ಶ್ರೀಪತಿ ? ಹುಷರಾಗಿದೀ ತಾನೇ ?

ಶ್ರೀಪತಿ : ಹಿಹಿ....ಇದೀನಿ... ಹಿಹಿ....

ಸು : ಮತ್ತೆ ? ಈ ಅದುರುವಾಯು ನರ್ತನ ಯಾಕೆ ? ನಿಮ್ಮಗಳನ್ನ ನೋಡಿ ಬಹಳ ದಿವ್ಸ ಆಗಿತ್ತು; ನಾಲಕ್ದಿನ ಇದ್ದು ಹೋಗೋಣಾಂತ ಬಂದೆ. ಈ ಗೋವಿಂದಯ್ಯನೂ ಅದೇ ಬಸ್ಸಿನಲ್ಲಿ ಕೂತಿದ್ದ–ನಿಮ್ಮನೇಗೇ ಹೊರಟದೀನಿ ಅಂತಲೂ ಹೇಳಿದ !....ಸರಿ, ಒಂದೇ ಊರಿನೋರು ಒಂದೇ ಬಸ್ ಪ್ರಯಾಣ, ಒಂದೇ ವಾಹನದಲ್ಲೇ ಇಲ್ಲೀ ತನಕ ಬಂದ್ವು. ಆಯ್ತಾ ?

ಗೋ : ಹೌದು ಶ್ರೀಪತಿ.

ಶ್ರೀಪತಿ : ಸಂತೋಷ, ಕೂತ್ಕೊಳ್ಳಿ, ಬಹಳ ವರ್ಷಗಳೇ ಆಗಿಹೋಯ್ತು ನಿಮ್ಮನ್ನ ನೋಡಿ ಗೋವಿಂದಯ್ಯ.

ಗೋ : (ಕುರ್ಚಿಯಲ್ಲಿ ಕೂರುತ್ತ) ಹುಂ! ಆಯ್ತು ಆರು ವರ್ಷ ! ಅದ್ಸರಿ ! ನನಗ್ಯಾಕೆ ಬಹುವಚನ ? ಚಿಕ್ಕಂದಿನಲ್ಲಿ ಜತೇಲಿ ಮಾವಿನ ಮರ ಹತ್ತಿ, ಸೀಬೇಕಾಯಿ ಕದ್ದು-ಅಂದ್ರೆ ಸೀಬೆ ಮರದಲ್ಲಿ ಮಾವಿನ ಮರದಲ್ಲಲ್ಲ! ಹಿಹಿ ! ಚಿನೀ-ದಾಂಡು, ಗೋಲಿ-ಬುಗುರಿ ಆಡಿದೋನಲ್ವಾ? (ಸುಬ್ಬಮ್ಮನೂ ಕುರ್ಚಿಯಲ್ಲಿ ಕೂರುವಳು.)

ಶ್ರೀಪತಿ : ಹೌದೂನ್ನು (ನಗುವರು ಮೆಲ್ಲನೆ) ಆದರೆ ಅತ್ತೆ ಎದುರಿಗೆ ಅದೆಲ್ಲ ಹೇಳಬೇಡ.

ಗೋ : ಈಗ....ಬರಬೇಕಾದ ತುರ್ತು ಪ್ರಸಂಗ ಬಂತು ನಿಮ್ಮ ಮನೇವರೆಗೆ !....

ಸು : ಬಂದ !... (ಧ್ವನಿ ಬದಲಾಯಿಸಿ) ಅಲ್ವೋ ಶ್ರೀಪತಿ ? ಇದು ಯಾಕೋ ನಿನ್ನ ಕೈಲಿರೋದು ?

ಶ್ರೀಪತಿ : (ಕೈ ನೋಡಿಕೊಂಡು) ಸೌಟು ಸುಬ್ಬತ್ತೆ.

ಸು : ಅದು ನನಗೂ ಗೊತ್ತು, ಕಾಣಿಸ್ತಿದೆ ; ಇದು ನಿನ್ನ ಕೈಲಿ ಯಾಕೇ ಅಂತ ನಾನ್ಕೇಳಿದ್ದು. ಲಕ್ಷ್ಮಿ ಎಲ್ಲಿ?

ಶ್ರೀಪತಿ : ಅವಳಿಲ್ಲ. (ಗೋವಿಂದಯ್ಯ ಆತಂಕದಿಂದ ಹಾ ! ಎನ್ನುವನು.)

ಸು : (ಬೆದರಿ) ಅಂದರೆ ? ಏನಾಯ್ತು ಅವಳಿಗೆ ? ಏನಾಯ್ತು ಅವಳಿಗೆ ? (ಥಟ್ಟನೆ ಎದ್ದು ನಿಲ್ಲುವಳು.)

ಶ್ರೀಪತಿ : ಏ.. ಏನೂ ಆಗಿಲ್ಲ, ಮೀಟಿಂಗ್‌ಗೆ ಹೋಗಿದ್ದಾಳೆ.

ಸು : ಹಾಗೇ ? ಹೆದರಿ ಬಿಟ್ಟೆ ನಾನು !... ಆಯ್ತು, ಇದೇನು ನಿನ್ನ ಅವತಾರ–ಕೈಲಿ ಸೌಟು.

ಗೋ : ಮುಖದ ಮೇಲೆ ಮಸಿ, ಪಂಚೆ half–mastಉ ಮೊಣಕಾಲ್ಮೇಲೆ.

ಸು : ಅದೆಂಥಾ ಕಟ್ಟೆ ಕಡಿಯೋ ಕೆಲ್ಸ ಅಲ್ಲಿ ಅವಳಿಗೆ, ಮನೆ ಅನ್ನಪೂರ್ಣೆ ಹಸ್ತದಲ್ಲಿರಬೇಕಾದ ಅಸ್ತ್ರ ಯಜಮಾನನ ಕೈಗೆ ವರ್ಗಾವಣೆ ಆಗಬೇಕಾದರೆ ?

ಶ್ರೀಪತಿ : ಇದು ಅವರಿಗೆ..ಆರಾಮು ವರ್ಷವಂತೆ ಸುಬ್ಬತ್ತೆ.

ಗೋ : ಆರಾಮು ವರ್ಷ ? ಹಾಗಂದ್ರೇನು ಶ್ರೀಪತಿ ? ಈ ವರ್ಷ ಎಲ್ಲ ಅವರಿಗೆ rest ಏನು ? ಕಾಯಿಲೆ ಏನಾದರೂ....?

ಶ್ರೀಪತಿ : ಕಾಯಿಲೇನೂ ಇಲ್ಲ ಕಸಾಲೇನೂ ಇಲ್ಲ !... ನಿನಗೆ ಗೊತ್ತಿಲ್ವೆ ಗೋವಿಂದಯ್ಯ ! ಆರಾಮು ವರ್ಷ ಅರ್ಥಾತ್ ಅಂತರ್‌ರಾಷ್ಟ್ರೀಯ ಮಹಿಳಾ ವರ್ಷ !

ಗೋ : ಹೌದಲ್ಲ ! ಪೇಪರ್‌ನಲ್ಲಿ ಬಂದಿತ್ತು, ನಮ್ಮ ಬುದ್ಧಿ ಪಟ್ಟಣದಲ್ಲೂ ಏನೇನೋ ಚಟುವಟಿಕೆಗಳು ನಡೀತಿವೆ.

ಸು : ಉಂ....ಹಾಗಾದರೆ ಈ ವರ್ಷ ಹೆಂಗಸರು ಯಾರೂ ಅಡಿಗೆ ಮಾಡೋಡಿಲ್ವೇನು ?

ಗೋ : ಮಾಡಬಾರದು ಅಂತಲ್ಲ ಅತ್ತೆ; ಮೀಟಿಂಗುಗಳು ಮೆರವಣಿಗೆಗಳೂ, ಭಾರೀ ಸಭೆಗಳೂ–ಏನೇನೋ ಮಾಡ್ತಿದಾರೆ. ಲಕ್ಷ್ಮಿ ಆದರಲ್ಲೇ ಸೇರ್ಕ್ಕೊಂಡುಬಟ್ಟಿದ್ದಾಳೆ, ಪುರುಸೊತ್ತೇ ಇರಲ್ಲ!

ಗೋ : (ನಗುತ್ತ) ಆದಕ್ಕೆ ಶ್ರೀಪತಿರಾಯರಿಗೆ ಬಾಣಸಿಗನ ಪಟ್ಟಾ ! .... ಅಲ್ವೋ ಶ್ರೀಪತಿ? ಆಫೀಸಿನ ಗತಿಯೇನು? ಹೀಗೆ ನಳ-ಭೀಮರ ಡಿಪಾರ್ಟ್‌ಮೆಂಟಿನ ಚಾರ್ಜ್ ತೆಗೆದುಕೊಂಡು ಕೂತರೆ, ನೀನಿರೋ ಇಂಡಸ್ಟ್ರೀಸ್ ಡಿಪಾರ್ಟ್‌ಮೆಂಟ್ ಕೆಲಸ.

ಶ್ರೀಪತಿ : ಆಫೀಸು ಇಲ್ಲ ಪೀಪಿಯೂ ಇಲ್ಲ; ಹಲ್ಲು ಕಿತ್ತ ಹಾವು ನಾನೀಗ.

ಗೋ : ಅಂದರೆ....ರಿಟೈರಾಯ್ತೋ ?

ಶ್ರೀಪತಿ : ಹುಂ! ಕಳೆದ ತಿಂಗಳೇ ಕೊರಳಿಗೊಂದು ಖರ್ಚಿ ಶಾಕಡಾಹಾರ ಕೂರಿಸಿ, ಕೈಗೆರಡು ನಿಂಬೇಕಾಯಿ ತುರುಕಿ, ಕಛೇರಿ ಮೆಟ್ಟಿಲಿಳಿಸಿ ಕಳಿಸಿದರು; ಅದಕ್ಕೇ ಲಕ್ಷ್ಮೀ ಅರಾಮಕ್ಕೆ ನಾನು ಹರಾಮನಾಗೆ ನಿಂತಿರೋದು.

ಸು : ಉಂ....ಅಮ್ಮ ಆ ದಾರಿ ಆಯ್ತು; ಮಗಳು ? ಸೀಮಾ ಎಲ್ಲಿ ?

ಶ್ರೀ : ಸುಬ್ಬತ್ತೇ -- ನಲವತ್ತೈದು ದಾಟಿದ ನಾರೀಗೆ ಇಷ್ಟು ಉತ್ಸಾಹ ಆದರೆ, ಬಿಸಿ ರಕ್ತದ ಹುಡುಗಿ, ಅವಳ ಚಟುವಟಿಕೆ ಎಷ್ಟಿರಬಹುದು ನೀನೇ ಯೋಚಿಸು ! ಅವಳನ್ನ ನಾನು ನೋಡೋದು ದಿನಕ್ಕೆ ಒಂದೇ ಸಲ, ಬೆಳಗ್ಗೆ ಊಟಕ್ಕೆ ಬಂದಾಗ.

ಸು : ರಾತ್ರಿ ?

ಶ್ರೀ : ಅವಳು ಘೇರಾವ್‌ಗಳು, ಘೋಷಣೆಗಳು, ಧಾರಣಾ ಸತ್ಯಾಗ್ರಹ, ಹರತಾಳ, ತಿವ ಸಂಘವನೆಲ್ಲ ಮುಗಿಸ್ಕೊಂಡು ಮನೆಗೆ ಬಂದಾಗ, ಬೆಳಿಗಿನಿಂದ ಚಾಕರಿ ದುಡಿದ ನಾನು ದಣಿದು ನಿದ್ದೆ ಹೋಗಿಬಿಟ್ಟಿರ್ತೀನಿ.

ಗೋ : (ಥಟ್ಟನೆ) ಹಾಂ ! ಅಲ್ಲೇ... ಅದರಲ್ಲೇ... ಅವಾಗಲೇ ಟೋಪಿ ಬಿದ್ದಿರೋದು.

ಸು : ಯಾವ ಟೋಪಿ ? ಯಾರಿಗೆ ಟೋಪಿ ? ನೀನೇ ಎಲ್ರಿಗೂ ಟೋಪಿ ಹಾಕೋನಿನ್ನೇವಾ !

ಗೋ : ಟೋಪಿ ಹಾಕೊಂಡಿರೋನು, ನನ್ನ ಮಗ ರಮೇಶ — ಇಲ್ಲಿ ಎಂ. ಎಸ್. ನ ಓದ್ತಿದ್ದಾನೆ. ನಮ್ಮೂರು ಕಾಲೇಜಿನಲ್ಲಿ. ಅವನಾರಿಸಿಕೊಂಡಿರೋ ವಿಚಿತ್ರ Subject ಇಲ್ಲ ಅಂತ; ಹಾಸ್ಟಲ್‌ನಲ್ಲಿದಾನೆ. ಪರೀಕ್ಷೆ ಮುಗೀತು. ಅನಂತಲಕ್ಷ್ಮೀನ ತಂದ್ಕೊಳ್ಳೋದು ಅಂತ ಚಿಕ್ಕಂದಿನಿಂದಲೇ ನಿರ್ಧರಿಸಿಬಿಟ್ಟಿದ್ದೆವು.
(ನಿಟ್ಟುಸಿರಿಡುತ್ತ ಅನ್ಯಮನಸ್ಕನಾಗಿ ಕೂರುವನು)

ಸು : ಮೊನ್ನೆ ನಮ್ಮ ರಸ್ತೆ ರಿಪೇರಿ ಮಾಡಿದಾಗ; ಹೀಗೇ ಭುಸಗುಡುತ್ತಿತ್ತು........

ಗೋ : (ಬೆಚ್ಚಿ) ಏನು ?

ಸು : ರೋಡಿಂಜಿನ್ನು; ಅಲ್ಲ, ಆತಂಕ ಮಾತಾಡಿ ಶ್ರೀಪತಿ ಮನೆ ಗೋಡೆಮೇಲಿನ ಜೇಡನಪರೆ ನೋಡ್ತಾ ಉಸಿರು ಬಿಡ್ತಿದಿಯಲ್ಲ ಮತ್ತೆ ? ಈಗೇನಾಯ್ತು ಹೇಳು.

ಗೋ : (ನಾಚಿ) ಕ್ಷಮಿಸಿ ಸುಬ್ಬಮ್ಮನೋರೇ !.... ದಿಢೀರನೆ ದಪ್ಪಪತ್ರ ಕಂಡು ಮೊನ್ನೆ ರಮೇಶನಿಂದ (ಜೇಬಿನಿಂದ ತೆಗೆಯುವನು)—ಈ ಊರು ಮಹಿಳಾ ಕಾಲೇಜಿನಲ್ಲಿ ಓದ್ತಿರೋ 'ಸೀಮಾ' ಅನ್ನೋ ಹುಡುಗೀನೆ ನಾನು ಮದುವೆ ಆಗೋದು ಅಂತ ಬರೆದಿದ್ದಾನೆ; ಕಾಗದದತುಂಬ ಅವಳ ವರ್ಣನೇನೇ ? ಶ್ರೀಪತಿ ಮಗಳು ಅಂತ ಪತ್ತೆಹಚ್ಚಿ, ವಿಳಾಸ ಕಳಿಸಿದೋನು ಅವನೇ !

ಸು : ಅಲ್ಲ ! ಇವಳ್ಯಾವುದೋ ಕಾಲೇಜು, ಅವನ್ಯಾವುದೋ ಕಾಲೇಜು, ಅವಳ್ನ ಹೇಗೆ ನೋಡಿದ ?

ಶ್ರೀ : ಸುಬ್ಬತ್ತೆ ! ನಮ್ಮ ಹುಡುಗರ ಕಾರ್ಯಕ್ರಮ ಅದು—ದಿನಕ್ಕೊಂದುಸಾರಿ ಆದರೂ ಮಹಿಳಾ ಕಾಲೇಜಿನ ದರ್ಶನ ಮಾಡೋದು, ಆಸು, ಪಾಸು ಕಳಾಯಿಸೋದು.

ಸು : ಓದೋದು ಯಾವಾಗ !

ಶ್ರೀ : (ನಗುತ್ತ), ಹೇಳಿದೆನಲ್ಲ, ಘೇರಾವ್-ಘೋಷಣೆ ವಗೈರೆ ವಗೈರೆ—ಅವ್ಯಾವುದೂ ಇಲ್ಲದ ಅಪರೂಪದ ದಿನ ಕ್ಲಾಸ್‌ಗೆ ಹಾಜರುತಿ ಹಾಕೋದು !

ಸು : ಅಯ್ಯೊಪ್ಪ; ಸೀಮಾನೇ ಅವನಿಗೆ ಹೇಗೆ ಕಣ್ಣಿಗೆ ಬಿದ್ದಳು ?

ಗೋ : ಕಣ್ಣಿಗೆ ಬೀಳೋದೇ ? ಪೂಜೆ, ಆರಾಧನೆ ! (ಶ್ರೀಪತಿ ಕೈಲಿದ್ದ ಸೌಟು; ಡಬ್ಬದ ಮುಚ್ಚಳ ಬಡಿಯುತ್ತ ಸಣ್ಣಗೆ 'ರೂಪತೇರಾ ಮಸ್ತಾನಾ ಪ್ಯಾರ್ ಮೇರಾ ದೀವಾನಾ' ಎಂದು ಹಾಡುವನು). ಈ ಕಾಗದದ ತುಂಬ (ಕವರ್ ಬಡಿಯುತ್ತ) ಅವಳ ಪ್ರಶಂಸೇನೆ ! ಅವಳು, ಝಾನ್ಸೀರಾಣಿ ಲಕ್ಷ್ಮೀಬಾಯಿ, ಕತ್ತೂರುರಾಣಿ ಚೆನ್ನಮ್ಮ, ವೀರವನಿತೆ ಓಬವ್ವೆ ಶೂರಸಿಂಹಿಣಿ ಚಾಂದಬೀಬಿ — ಎಲ್ಲರನ್ನೂ ಬೆರೆಸಿ ಕಲೆಸಿ ಕುದಿಸಿ ಭಟ್ಟಿ ಇಳಿಸಿದಂಥಾ ಧೀರೆ ಅಂತೆ ! ಚಳುವಳಿಗಳಲ್ಲಿ ಅವಳ ಆವೇಶ, ಕೂಗು, ದಿಟ್ಟತನ, ಧೈರ್ಯ, ನೋಡಿ ಮರುಳಾಗಿಬಿಟ್ಟಿದ್ದಾನಂತೆ. ಅವಳ ತಂದೆ ತಾಯಿ ಹತ್ತಿರ ಮಾತಾಡಿ ಮದುವೆ ಗೊತ್ತು ಮಾಡಿ ಮಹೂರ್ತ ನಿಶ್ಚೈಸಿ ಮಾಂಗಲ್ಯ—ಮಂಗಳಾ ಭರಣ—ಭಾಸಿಂಗ—ಬೆನಾರಸ್ ಸೀರೆ ಸಿದ್ಧಮಾಡಿದರೋ ಸರಿ, ಇಲ್ಲದಿದ್ದರೆ (ಅಳುಧ್ವನಿಯಲ್ಲಿ) ಸಮೀಪದಲ್ಲೇ ಇರೋ ಮಂಕೀ ಟ್ಯಾಂಕ್‌ನಲ್ಲಿ ಮುಳುಗಿ ಪ್ರಾಣಬಿಡ್ತೀನಿ—ಅಂತಲೂ ಬರೆದುಬಿಟ್ಟಿದ್ದಾನೆ. (ಕಣ್ಣೊರೆಸಿಕೊಳ್ಳುವನು)

ಶ್ರೀ : ನಮ್ಮ ಸೀಮಾ....ಒಪ್ಪಿದಾಳಂತೇನಪ್ಪ ಗೋವಿಂದಯ್ಯ ?

ಗೋ : ಯಾರಿಗೆ ಗೊತ್ತು ? ಇವನು ಅವಳ ಕೈಲಿ ಮಾತಾಡೇ ಇಲ್ಲವಂತೆ.

ಸು : ಮಾತೇ ಆಡಿಲ್ವೇ ? (ನಗುತ್ತ) ಹಾಗಾದರೆ ಅದೇನೋ ಗಾದೆ ಹೇಳಿದ ಹಾಗಾಯ್ತು—"ಲೇ ! ಅಸ್ನಕ್ಕೆ ಮಡದೀನೇ ಇಲ್ಲ, ಮಗು ಹೆಸ... ಮದು ಸೂದನ" ಅಂತ.

ಗೋ : (ಪಿಸುಗುಟ್ಟುತ್ತ) ಹುಡುಗನಿಗೆ ಹೆದರಿಕೆಯಂತೆ ಪಾಪ !

(ಲಕ್ಷ್ಮಿ ಸರಸರನೆ ಪ್ರವೇಶಿಸುವಳು, ಕೈಗೆ ದೊಡ್ಡ Hand-bag ತೂಗು ಹಾಕಿದೆ ; ಕಣ್ಣಿಗೆ ಕೂಲಿಂಗ್ ಗ್ಲಾಸ್)

ಲಕ್ಷ್ಮಿ : ಇದೇನು ಬೀದಿ ಬಾಗಿಲು ಹಾರು ಹೊಡೆದು ಒಳಗೆ ಸೇರಿ ಕೊಂಡಿದೀರಿ ? ಯಾರು ನ... ಏನು ದೋಚ್ಕೊಂಡ್... (ಗೋವಿಂದಯ್ಯ ಸುಬ್ಬಮ್ಮನನ್ನು ನೋಡಿ ಥಟ್ಟನೆ ಸುಮ್ಮನಾಗುತ್ತಾಳೆ) ಓ! ಸುಬ್ಬತ್ತೆ ? (ಮುಖದಲ್ಲಿ ಅಸಮಾಧಾನ ಕಾಣುವುದು) ನೋಡಲೇ ಇಲ್ಲ ! ಯಾವಾಗ ಬಂದಿರಿ ? (ಗೋವಿಂದಯ್ಯನ ಕಡೆ ಅನುಮಾನ ದೃಷ್ಟಿಯಿಂದ ನೋಡುವಳು)

ಸು : ಒಂದರ್ಧ ಗಂಟೆ ಆಯ್ತಮ್ಮ ; ಇವರು... ಗೋವಿಂದಯ್ಯ ; ನಮ್ಮೂರಿನೋರೇ. (ನಮಸ್ಕಾರ ಪ್ರತಿ ನಮಸ್ಕಾರಗಳು)

ಶ್ರೀ : ಇವನೂ ನಾನೂ ಬಾಲ್ಯ ಸ್ನೇಹಿತರು ಲಚ್ಚು.

ಲ : ಹಾಗೇನು ? .....(ಗಡಿಯಾರ ನೋಡಿಕೊಳ್ಳುತ್ತ) 2 ಗಂಟೆಗೆ ಸರಿಯಾಗಿ ಮೀಟಿಂಗು ಇದೆ.

ಶ್ರೀ : (ಗಾಭರಿಯಿಂದ) ಇಗೋ ಅಡಿಗೆ ಆಯ್ತು; ನೀನು ಊಟ ಮಾಡಿ ಬಿಡು. ಆಮೇಲೆ ಸುಬ್ಬತ್ತೆ, ಹಿಹಿ ... ಅವರಿಬ್ಬರಿಗೂ ಮಾಡ್ಕೋಳ್ತಾಳೆ-ಅಲ್ವೇ ಸುಬ್ಬತ್ತೆ ? (ಸುಬ್ಬಮ್ಮ ಉತ್ತರ ಕೊಡದೆ ಲಕ್ಷ್ಮಿಯ ಹಿಂದೆ ಅಣಕಿಸುವಂತೆ ಕೈ ಆಡಿಸುವಳು ; ಶ್ರೀಪತಿ ಅಡಿಗೆ ಮನೆಗೆ ಹೋಗಿ ತಟಪಟ ಓಡಾಡಿ ಕೆಲಸ ಮಾಡುವನು. ಲಕ್ಷ್ಮಿ ಕುರ್ಚಿಯಲ್ಲಿ ಕೂತು ಕರ್ಚೀಪಿನಿಂದ ಮುಖದ ಬೆವರೊರೆಸುತ್ತ "ಗೋವಿಂದಾ, ಗೋವಿಂದ !" ಎನ್ನುವಳು ; ಗೋವಿಂದಯ್ಯ ಆ ? ಎಂದಾಗ ನಿಮ್ಮನ್ನೇನೂ ಕರೀಲಿಲ್ರೀ !" ಎಂದು ಸಿಂಡರಿಸುವಳು)

ಸು : ಅಲ್ವೇ ಲಕ್ಷ್ಮೀ ? (ಎದ್ದು ಅವಳ ಮುಂದೇ ನಿಂತು) ನಾಚಿಕ್ಕೇಡು ? ಗಂಡಸು ಅಡಿಗೆ ಮಾಡೋದು, ಹೆಂಗಸು ಆಚೆ ತಿರುಗೋದು ?

ಲ : ಅದರಲ್ಲಿ ನಾಚಿಕ್ಕೇಡು ಏನು ಬಂತು ? ಇದು ..

ಗೋ : (ವ್ಯಂಗವಾಗಿ) ಆರಾಮ ವರ್ಷ !

ಲ : ಹೌದು, ಆ-ರಾ-ಮ ವರ್ಷ, ಮಹಿಳಾ ಸಂವತ್ಸರ ! ಈಗ ನಾವು ಗಂಡಸರಿಗೆ ಸರಿಸಮ ಅಥವಾ ಇನ್ನೂ ಹೆಚ್ಚು. ಇದುವರೆಗೂ ಅವರ ದಬ್ಬಾಳಿಕೆ ಸಹಿಸಿ ಆಯ್ತು ; ಇನ್ನೂ ಮೇಲೆ ನಾವು ಸರ್ವಸ್ವತಂತ್ರರಾಗಬೇಕೆಂದು ಪ್ರತಿಜ್ಞೆ ಮಾಡಿ ಬಿಟ್ಟಿದೀವಿ. ಬೆಳಗ್ಗೆ ಗಂಡಸರಿಂದ ಉದ್ಯೋಗಗಳನ್ನು ಹೇಗೆ ವಶಪಡಿಸಿಕೊಳ್ಳುವುದು ಅಂತ ಚರ್ಚಿಸಿದೆವು. ಮಧ್ಯಾಹ್ನ

ರಾಜಕೀಯ ರಂಗದಲ್ಲಿ ಮಹಿಳೆ ಯಾವ ರೀತಿ ಪುರುಷನನ್ನು ಉಚ್ಚಾಟನೆ ಮಾಡಬೇಕು ಅನ್ನೋ ಬಗ್ಗೆ ನಿರ್ಧರಿಸಲಿಕ್ಕೆ ಮೀಟಿಂಗ್ ನಡೆಸ್ತೀವಿ.

(ಶ್ರೀಪತಿ ಪ್ರವೇಶ, ಟ್ರೇನಲ್ಲಿ ಮೂರು ಕಪ್ ಕಾಫಿ ತಂದು ಗೋವಿಂದಯ್ಯ ಸುಬ್ಬಮ್ಮನಿಗೆ ಕೊಟ್ಟ ನಂತರ ಲಕ್ಷ್ಮಿಗೆ ಕೊಡುತ್ತ)

ಶ್ರೀ : ಕಾಫಿ ತೊಗೋ, ಹುಳಿ ಕುದೀತಿದೆ. ಇನ್ನೊಂದು 10 ನಿಮಿಷ, ಊಟ ಮಾಡಬಹುದು.

(ಲಕ್ಷ್ಮಿ ಕಾಫಿ ಕುಡಿಯುತ್ತ, "ಸಕ್ಕರೆ ಪಾನಕ ! ಗೋವಿಂದ !" ಎನ್ನುವಳು. ಗೋವಿಂದಯ್ಯ ಮತ್ತೆ "ಕೆ ರೆ ದಿ ರಾ ?" ಎಂದಾಗ ಲಕ್ಷ್ಮಿ "ಕರೀಲಿಲ್ಲ ! ಕರೀಲಿಲ್ಲ !" ಎಂದು ಸಿಟ್ಟಿನಿಂದ ಅನ್ನುವಳು)

ಸು : ದೇವರನ್ನ ವ್ಯಂಗವಾಗಿ ಕರೆದಳು ಪಾಪ !.... ಅಂದ ಹಾಗೆ ಲಕ್ಷ್ಮೀ, ಈತ ಬಂದಿರೋದು ಯಾಕೆ ಗೊತ್ತೇ ? (ಲಕ್ಷ್ಮಿ ಪ್ರಶ್ನಾರ್ಥವಾಗಿ ನೋಡುವಳು) ನಿನ್ನ ಮಗಳು ಸೀಮಾನ ಅವನ ಮಗ ರಮೇಶನಿಗೆ ತಂದ್ಕೊಳ್ಳೋದಕ್ಕೆ; ಅದರ ವಿಚಾರ ಮಾತಾಡಕ್ಕೆ.

ಲ : (ಗಹಗಹಿಸಿ ನಕ್ಕು) ನೋಡಿದಿರಾ ಗಂಡಿನ ಶ್ರೇಷ್ಠತೆ ಅಟಾಟೋಪ ? "ತಂದ್ಕೊಳ್ಳೋದಂತೆ"! ಹುಡುಗೀನೆ ಯಾಕೆ ತಂದ್ಕೊಳ್ಳಬೇಕು ? ಹುಡುಗನ್ನೇ ಹುಡುಗಿಗೆ ಯಾಕೆ ಕೊಡಬಾರದು ?

(ಶ್ರೀಪತಿ ಸಣ್ಣಗೆ "ಯಾಕೆ ತಂದ್ಕೊಳ್ಳಬೇಕು ?.... ಯಾಕೆ ಕೊಡಬಾರದ ?" ಎಂದು ಲಕ್ಷ್ಮಿಯ ಮಾತುಗಳನ್ನು ಅನುಕರಿಸಿದಾಗ)

ಸು : (ಮೆಲ್ಲನೆ) ಸಾಕು ಸುಮ್ನಿರೋ; ನೋಡಲಾರೆ ನಿನ್ನ ಅವಸ್ಥೇನ!

(ಲಕ್ಷ್ಮಿಗೆ) ನೋಡು ಲಕ್ಷ್ಮಿ, ಯಾಕೆ ಏನು ಅಂತ ಪಶ್ನಿಸಿ ಪ್ರಯೋಜನ ಇಲ್ಲ; ಇವೆಲ್ಲ ಹಿಂದಿನಿಂದ ಬಂದಿರೋ ಪದ್ಧತಿಗಳು.

ಗೋ : ಹಾಗೆ ನೋಡಿದರೆ ಹೆಣ್ಣಿನ ಮನೆಯೋರು ಗಂಡು ಹುಡುಕಿಕೊಂಡು ಬರಬೇಕು; ವಿಧಿ ಇಲ್ಲದೆ ನಾನು ನಿಮ್ಮ ಮನೇಗೆ ಬಂದಿದೀನಿ.

ಸು : ಹೆಣ್ಣು ಎಷ್ಟಾದರೂ.... (ಹೊರಬಾಗಿಲನ್ನು ಸೂಚಿಸುವ ರಂಗದ ಆ ಮಗ್ಗುಲಲ್ಲಿ ನೋಡಿ, ಧ್ವನಿ ಬದಲಾಯಿಸಿ) ಅದ್ಯಾರು ನಿಮ್ಮನೆ ಗೇಟ್ ತೆಗೆದುಕೊಂಡು ಬರ್ತಿರೋದು ? ಮುಂದೆ ಒಂದು ಹು ಡು ಗ.... ಎಲ್ಲೋ ನೋಡಿದ ಮುಖ; ಹಿಂದೆ....ಇನ್ನೊಂದು ಹುಡುಗ !

ಶ್ರೀ : (ಎಲ್ಲರೂ ಆ ಕಡೆ ನೋಡುತ್ತಿದ್ದಾಗ) ಹುಡುಗ ಅಲ್ಲ ಸುಬ್ಬತ್ತೆ (ನಗುತ್ತ) ಹುಡುಗಿ ! ನಮ್ ಸೀಮಾ !

ಸು : ಸೀಮಾನೇ ?.... ಹಿಂದೆ ಬಂದಿರೋ ಹುಡುಗ್.... ಅಲ್ಲ ಹುಡುಗಿ ?

ಗೋ : ( ನ ಗು ತ್ತ ) ಅದು ಹುಡುಗಾನೇ; ನಮ್ಮ ರಮೇಶ.

ಸು : (ನಗುತ್ತ) ಓ !....ಈಗ ಇವರು ಹಾಕೋ ಡ್ರೆಸ್‌ನಲ್ಲಿ ಹುಡುಗಯಾರು ಹುಡುಗಿಯಾರು ಅಂತಲೇ ಗೊತ್ತಾಗಲ್ಲ ಕಣಪ್ಪ ಶ್ರೀಪತಿ; ಒಂದೇತರಹ ತಲೆಗೂದಲು, ಒಂದೇತರಹ ಬಟ್ಟೆ,

ಗೋ : ಒಂದೇತರಹ ಎತ್ತರ ಹಿಮ್ಮಡಿ ಜೋಡು ! (ನಗುವರು)

(ಸೀಮಾ ಪ್ರವೇಶ. ಅತ್ಯಾಧುನಿಕ ಉಡಿಗೆ ತೊಡಿಗೆ; ಘಂಟೆತಳ ಷರಾಯಿ, ಷರ್ಟ್. ಸೊಂಟದಲ್ಲಿ ಅಗಲವಾದ ಬೆಲ್ಟು).

ಸೀ : (ಸಿಟ್ಟಿನಿಂದ) ಛೀ ! Nonsence ! ಅವನು ಯಾವೊನೋ ಆಗಿನಿಂದ ನನ್ನನ ಹಿಂಬಾಲಿಸ್ತಾ ಇದಾನೆ !

(ರಮೇಶ ಪ್ರವೇಶಿಸಿ ರಂಗದ ತುದಿಯಲ್ಲಿ ನಿಲ್ಲುವನು; ಅವನದೂ ಯಥಾಪ್ರಕಾರ ಘಂಟೆತಳ ಷರಾಯಿ, ಷರ್ಟ್ ಉಡಿಗೆ) Mummy ! ನೋಡು, ಇವನೇ ! ಎಷ್ಟು ಧೈರ್ಯ ? ಒಳಗೇ ಬಂದು ನಿಂತಿದಾನೆ ! (ಎರಡೂ ಕೈ ಸೊಂಟದಮೇಲಿರುವ ರಮೇಶನ ಬಳಿ ಹೋಗುತ್ತ) ರೀ ಮಿಸ್ಟರ್ !....

ಗೋ : (ಮಧ್ಯೆ ಬಂದುನಿಂತು) ಇವನು 'ಇ ವ ನು ಯಾವನೋ' ಅಲ್ಲ ಮಿಸ್; ನನ್ನಮಗ, ರಮೇಶ ಅಂತ ನಾಮಧೇಯ.

ಲ : (ಮೆಲ್ಲನೆ) ಇವನೇನೋ ಇವರ ಮಗ ?....ಹುಂ.... ಪರವಾಗಿಲ್ಲ ಲಕ್ಷಣವಾಗಿದಾನೆ.

ಶ್ರೀ : ಇವರು ಗೋವಿಂದಯ್ಯ ಅಂತ ಸೀಮಾ; ನಮ್ಮೂರಿನೋರು. ಸುಬ್ಬತ್ತೇನೂ ಅವರೂ ಸ್ವಲ್ಪ ಹೊತ್ತಿಗೆ ಮುಂಚೆ ಬಂದರು.

ಸು : ಸುಮ್ಮನೆ ಬಂದಿಲ್ಲಕಣೇ ಸೀಮಾ; ನಿನ್ನ ಮದುವೆ ಆಗ್ತಾನಂತೆ ಇವನು.

ಸೀ : ಹಹಹಹ ! ಮೊನ್ನೆ ನಾನು ನೋಡಿದ ಪಿಕ್ಚರ್ ನಲ್ಲಿ ಹೀಗೆ ಇತ್ತು.

ಗೋ : ಹೇಗೆ ? ಏನು ?

ಸೀ : ಕತ್ತೆ ! ಮುಖಾನೆ ನೋಡಿಲ್ಲದೆ ಮುದುವೆ ಆಗೋ ಕತ್ತೆ ! (ನಗುವಳು)

ರ : ನೀವು ನನ್ನಮುಖ ನೋಡಿಲ್ಲದಿರಬಹದು ಮಿಸ್ ಸೀಮಾ ! ಆದರೆ ನಾನು....ಹಿಹಿ....ದಿನಾ ನಿಮ್ಮ ಮುಖ ನೋಡ್ತಿರ್ತೀನಿ.

ಶ್ರೀ : ನಿನ್ನಮುಖ ನೋಡ್ತಿದ್ದು, ನಿನ್ನ ಅವಾಂತರಗಳ advice ಮಾಡಿ ...

ಲ : ಅವಾಂತ; (ಸಿಟ್ಟಿನಿಂದ) ಹಾಗಂದ್ರೇನ್ರೀ ? ಅವಳು ಅವಳೇನ್ರೀ ಅಂಥಾದ್ದು ಮಾಡಿದ್ದು ?

ಶ್ರೀ : ಅಲ್ಲ...ಅಲ್ಲ...activities, ಚಟುವಟಿಕೆಗಳನ್ನ ಮೆಚ್ಚಿ,—

ಗೋ : ನನ್ನನ ಇಲ್ಲಿಗೆ ಕರೆಸಿ, ತಾನೂ ಅದೇ ಉದ್ದೇಶ ದಿಂದ ಇಲ್ಲಿಗೆ ಈಗ ಬಂದು,

ಶ್ರೀ : ಕೂತ್ಕೋಪ್ಪ, ನಿಂತೇ ಇದಿಯಲ್ಲ ? (ರಮೇಶ ಕೂರುವನು)

ಲ : ಹುಂ....ನನಗೆ ಹೊತ್ತಾಯ್ತು ...

ಶ್ರೀ : (ಅವಳಬಳಿ ಬಂದು ಮೆಲ್ಲಗೆ) ಲಕ್ಷ್ಮೀ ! ನಿನ್ನ ಮೀಟಿಂಗ್ ಹಾಗಿರಲಿ, ಕೊಂಚ ಯೋಚಿಸು. ಈ ಗೋವಿಂದಯ್ಯ ಸಾಮಾನ್ಯ ಅಲ್ಲ. ಭಾರಿಕುಳ ! (ಸೀಮಾನೂ ಹತ್ತಿರಬಂದು ಕೇಳಿಸಿಕೊಳ್ಳುವಳು) ಎರಡು ಅಕ್ಕಿ ಗಿರಣಿ, ಸಿನಿಮಾ ಥಿಯೇಟರು ಇನ್ನೂ ಏನೇನೋ ಬಿಸಿನೆಸ್; ನನಗೆ ತಿಳಿದಹಾಗೆ ಒಬ್ಬನೇ ಮಗ ...

ಗೋ : ಏನಮ್ಮ ಸೀಮಾ ! ಈ ಮರುಳ ನಿನ್ನ ಮೋಹಿಸಿ ಕೂತಿದಾನೆ; ಅಂದಮಾತ್ರಕ್ಕೇ ದಡ್ಡ ಅಂದುಕೊಳ್ಳ ಬೇಡ; ಬಿ.ಎಸ್.ಸಿ., (ಮಗನಿಗೆ) ಹೇಳೋ ಏನು ಓದಿದೀ ಅಂತ !

ರ : ಬಿ.ಎಸ್.ಸಿ. ಫಸ್ಟ್ ರ್‍ಯಾಂಕು, ಫೈನಲ್ ಎಂ.ಎಸ್.ಸಿ.ಲಿದೀನಿ.

ಸು : ವರಸಾಮ್ಯ ಚೆನ್ನಾಗಿದೆ; ವಧೂಪರೀಕ್ಷೆ ಮಾಡಿ ಸಮ್ಮತ ಆದರೆ ಓಲಗ ಊದಿಸಿಬಿಡೋದಂತೆ !

ಲ : ವಧು ಪರೀಕ್ಷೆ ?

ಸೀ : ವಧುಪರೀಕ್ಷೆ ಅಲ್ಲ ಸುಬ್ಬತ್ತೆ; ವರಪರೀಕ್ಷೆ ನಡೀ ಬೇಕು

ಸು : ಅಂದರೆ ?

ಲ : ಅಂದರೆ, ಹುಡುಗನ್ನ ಹುಡುಗೀ ಪರೀಕ್ಷಿಸಬೇಕು.

ಸು : ಉಂಟೇನಮ್ಮಾ ! ಗಂಡಿನೋರು ಹೆಣ್ಣಿನ ಪರೀಕ್ಷೆ ಮಾಡೋದು ವಾಡಿಕೆ, ಧರ್ಮ.

ಸೀ : No, ಈಗ ಅದು ಧರ್ಮ ! ಮರೆತು ಬಿಟ್ರಾ ಇದು ಮಹಿಳಾ ವರ್ಷ ಅನ್ನೋದನ್ನ ? ನಾನು.... ಕೇಳಿದ ಪ್ರಶ್ನೆಗಳಿಗೆ ಉತ್ತರ ಹೇಳ್ತಿರು Mr. ರಮೇಶ್!

ರ : ಓಹೋ ! Carry on please ! ಪ್ರಾರಂಭಿಸಿ ವೈವಾಓನೇ !

ಸೀ : ತಿಂಗಳಿಗೆ ಎಷ್ಟು ಪಿಕ್ಚರ್ ನೋಡಬಲ್ಲರಿ ?

ರ : ಎಷ್ಟು ನೋಡಲಾರಿರಿ ಅಂತ ಕೇಳಿ.

ಸೀ : ನಿಮ್ಮ ಶರ್ಟಿನ ಗುಂಡಿ ಕಿತ್ತು ಹೋದರೆ ನೀವೇ ಹೊಲಿದು ಕೊಳ್ಳಬಲ್ಲಿರಾ ?

ರ : ಕಿತ್ತುಹೋಗಲ್ಲ, ಗುಂಡೀನೇ ಹಾಕಿಸಲ್ಲ, Zip ! ಜಿಪ್ ಇಡಿಸಿ ಬಿಟ್ಟಿರ್ತೀನಿ.

ಸೀ : ರೈಟ್ ! (ಒಂದೇ ಉಸರಿಗೆ) ಕಾಶ್ಮೀರದ ಮುಖ್ಯ ಮಂತ್ರಿ ಯಾರು ? ಪ್ರಧಾನಿಗಳ ಮೊಮ್ಮಕ್ಕಳ ಹೆಸ ರೇನು ? ಅಮೇರಿಕಾ ಅಧ್ಯಕ್ಷ-ಹತ್ಯೆ ಪ್ರಸಂಗದ ಹಿಂದೆ ಕೊಲೆ ಆದರಲ್ಲ ಅವರ ಹೆಂಡತಿಯ ಮರು ಮದುವೆ ಆಗಿರೋದು ಯಾರನ್ನ ?

ರ : ಷೇಕ್ ಅಬ್ದುಲ್ಲಾ ಕಾಶ್ಮೀರದ ಮುಖ್ಯಮಂತ್ರಿ, ಉಂ....ಉಂ....

ಸೀ : (ಗಡಿಯಾರ ನೋಡಿಕೊಂಡು) Sorry Mr. Ramesh ! ಸಂದರ್ಶನ ಸಂಜೆಗೆ ಮುಂದುವರಿ ಸೋಣ. ಈಗ ನನಗೆ ಕುಸ್ತೀ ಪಂದ್ಯಕ್ಕೆ ಹೊತ್ತಾಯ್ತು !

ಸು : ಕುಸ್ತೀ ಪಂದ್ಯ ?

ಗೋ : ಕುಸ್ತೀ ಪಂದ್ಯ ?

ಸೀ : ಹುಂ ! ಯಾಕೆ ಹಾಗೆ ಆಶ್ಚರ್ಯ ಪಡ್ತೀರಿ ?

ಸು : ಅಲ್ವೇ ಸೀಮೇ, ನೀನು ಯಾವ ಸೀಮೇ ಹೆಣ್ಣೇ ? ಹೆಂಗಸ್ರೆಲ್ಲಾದರೂ ಕುಸ್ತಿ ಆಡ್ತಾರೇನೇ ?

ಲ : ಯಾಕೆ ಆಡಬಾರದು ? ಅದು ಬರೀ ಗಂಡಸ್ರಿಗೆ ಗುತ್ತಿಗೆ ಏನು ? ಈಗಾಗಲೇ ಕ್ರಿಕೆಟ್ ಆಡ್ತಿಲ್ವೇ ಹೆಣ್ಣು ಮಕ್ಕಳು ?

ಸೀ : ನೋಡಿ ಪಾಂಪ್ಲೆಟ್ಟು ! (ಪರ್ಸಿನಿಂದ ಪಾಂಪ್ಲೆಟ್ ತೆಗೆದುಕೊಟ್ಟಾಗ, ಗೋವಿಂದಯ್ಯ ಓದುವನು) ಮಹಿಳಾ ವರ್ಷದ ವೈಶಿಷ್ಟ್ಯ ಕಾರ್ಯಕ್ರಮ ! ಭಾರೀ ಕುಸ್ತೀ ಪಂದ್ಯ ! ಪೈಲವಾನಿಣಿ ಮಾಲಾ ಮತ್ತು ಪೈಲವಾನಿಣಿ ಸೀಮಾರವರ ಮಧ್ಯೆ ಮಧ್ಯಾಹ್ನ ಎರಡು ಗಂಟೆಗೆ ಗಾಂಧೀ ಮೈದಾನದ ಅಖಾಡದಲ್ಲಿ !"

ಶ್ರೀ : (ಮೆಲ್ಲನೆ) ಸಂತೃಪ್ತನಾಗುತ್ತಾನೆ ಗಾಂಧೀತಾತ !

ಲ : ಬಾ ಸೀಮಾ; ನಾವಿಬ್ರೂ ಊಟ ಮಾಡಿ ಹೋಗೋಣ. ಸುಬ್ಬತ್ತೆ; ಬಾಯ್ಲರ್‌ನಲ್ಲಿ ಬಿಸಿ ನೀರಿದೆ. ಮಡಿ ಉಟ್ಕೊಂಡು, ಏನಾದರೂ ಒಂದಷ್ಟು ಮಾಡ್ಕೊಳ್ಳಿ; ಹೊತ್ತಾಯ್ತು ಪಾಪ.

ಸು : ಆಗಲಮ್ಮ ತಾಯಿ, (ಲಕ್ಷ್ಮಿ, ಸೀಮಾ ಅಡಿಗೆ ಮನೆಯೊಳಕ್ಕೆ ಹೋಗುವರು. ಸುಬ್ಬಮ್ಮ, ಗೋವಿಂದಯ್ಯ ರಮೇಶರನ್ನು ಹತ್ತಿರ ಕರೆದು ಅದೇನೋ ಪಿಸುಗುಡುವಳು; ಅವರು ತಲೆ ಆಡಿಸುವರು. ಸುಬ್ಬಮ್ಮ ಚೀಲದಿಂದ ಏನೇನೋ ತೆಗೆದು ಮುಚ್ಚಿಕೊಡುವಳು; ಗೋವಿಂದಯ್ಯ ರಮೇಶ ಬೆನ್ನ ಹಿಂದೆ ಅದನ್ನಿರಿಸಿಕೊಂಡು ಮೆಲ್ಲನೆ ನಡೆಯುತ್ತ ಹೊರ ಬಾಗಿಲು ಸೂಚಿಸುವ ರಂಗದ ಮಗ್ಗುಲಿಗೆ ಹೊರಟು ಹೋಗುವರು)

ಸು : ಊರಿನ ಹೆಸರು ಐಲುಪುರ ! ಇಲ್ಲೀ ಹೆಂಗಸ್ರೂ ಅಷ್ಟೇ ಐಲು ! (ಎನ್ನುತ್ತ ರಂಗದಿಂದ ಇನ್ನೊಂದು ಮಗ್ಗುಲೊಳಕ್ಕೆ ಹೋಗುವಳು; ಎರಡು ಮೂರು ನಿಮಿಷಗಳ ನಂತರ ಲಕ್ಷ್ಮಿ, ಸೀಮಾ, ಕೈ ಒರೆಸಿಕೊಳ್ಳುತ್ತ ಹೊರಬಂದು ಚಪ್ಪಲಿ ಮೆಟ್ಟಿ)

ಲ : ಹೋಗಿಬರ್ತೀನಿ; (ವ್ಯಂಗವಾಗಿ) ನಿಮ್ಮ ಅತಿಥಿಗಳನ್ನು ನೋಡ್ಕೊಳ್ಳಿ

ಸೀ : Bye Papa !...ಶ್ರೀಪತಿ ಒಳಗಿನಿಂದಲೇ 'Bye' ಎಂದಾಗ) ನನಗೆ Good luck wish ಮಾಡಲ್ವಾ?

ಶ್ರೀ : (ಹೊರ ಬರುತ್ತ) Wish you the best of Luck ! (ತಾಯಿ–ಮಗಳು ಹೊರ ಹೋಗುವರು) ಎಲ್ಲಿ ಹೋದರು ನನ್ನ ಅಥಿತಿಗಳು ? ಸುಬ್ಬತ್ತೆ ಸ್ನಾನಕ್ಕೆ ಹೋಗಿರಬೇಕು ; ಗೋವಿಂದಯ್ಯ ?.... (ನಗುತ್ತ) ಸಿಗರೇಟ್ ಸೇವನೆಗೆಲ್ಲೋ ಆಚೆ ಹೋಗಿದಾನೆ ಅಂತ ಕಾಣುತ್ತೆ. (ಅಡಿಗೆ ಮನೆಗೆ ಹೋಗುವನು)

(ರಂಗದಲ್ಲಿ ಕೆಲಕಾಲ ಯಾರೂ ಇರುವುದಿಲ್ಲ. ಇದ್ದಕ್ಕಿದ್ದಂತೆ "Help !"...."Help !".... "ಅಪ್ಪಾ ! ಎಲ್ಲಿದೀರೀಂದ್ರೇ ! ಎಂದು ಆರ್ತರಾಗಿ ಕೂಗುತ್ತ ಲಕ್ಷ್ಮಿ, ಸೀಮಾ, ಓಡೋಡಿ ಬರುವರು, ಅದೇ ಸಮಯಕ್ಕೆ ಸುಬ್ಬಮ್ಮ, ಶ್ರೀಪತಿ ರಂಗಕ್ಕೆ ಬರುವರು)

ಶ್ರೀ : ಏನಾಯ್ತು ಲಕ್ಷ್ಮೀ ?

ಸು : ಏನಾಯ್ತಮ್ಮ ಸೀಮಾ ? ಯಾಕೆ ಹೀಗೆ ಹೆದರಿದೀರಿ ?

ಲ : (ಗಾಭರಿಯಿಂದ) ನಾವಿಬ್ರೂ ಈ ರಸ್ತೆ ತಿರುಗಿ Open field ಪಕ್ಕ ಹೋಗ್ತಿದ್ವಲ್ಲಾಂದ್ರೆ, ಮಗ್ಗುಲ ಗಲ್ಲಿಯಿಂದ ಇಬ್ಬರು,

ಸೀ : (ನಡುಗುತ್ತ) ಕರೀ ಬಟ್ಟೆ ಮುಖಕ್ಕೆ ಕವಿಚ್ಕೊಂಡು

ಲ : ನಮ್ಮ ಮೇಲೆ ಆಕ್ರಮಣ ಮಾಡಕ್ಕೇ ಬಂದು ಬಿಟ್ಟರು !

ಸೀ : (ಅಳು ಧ್ವನಿಯಲ್ಲಿ) ಒಬ್ಬ ಅಂತೂ ಚಾಕು ತೆಗೆದು ತೋರಿಸಿದ ! (ಕರಿ ಬಟ್ಟೆ ಕವಚಿಕೊಂಡ ಎರಡು ವ್ಯಕ್ತಿಗಳು ಮೆಲ್ಲನೆ ಬಂದು ನಿಂತಾಗ ಲಕ್ಷ್ಮೀ ಸೀಮಾ ಕಿಟಾರನೆ ಕಿರುಚಿ, ಶ್ರೀಪತಿಯ ಎರಡೂ ಪಕ್ಕಕ್ಕೆ ಹೋಗಿ ಅವನನ್ನು ಅತುಕೊಂಡು ನಿಲ್ಲುವರು. "ಇಲ್ಲೇ ಬಂದು ಬಿಟ್ರು," ಎನ್ನುವರು. ಗೋವಿಂದಯ್ಯ–ರಮೇಶ ಮುಖದ ಮೇಲಿನ ಬಟ್ಟೆ ತೆಗೆದು ನಗುತ್ತ ನಿಲ್ಲುವರು)

ಲ :<br>ಸೀ : } ನೀವೇ ?

ಗೋ :<br>ರ : } ಹ..! ನಾವೇ ?

ಶ್ರೀ : ಏನು ಹುಡುಗಾಟ ನಿಮ್ಮದು ಗೋವಿಂದಯ್ಯ ?

ಸು : ಹುಡುಗಾಟ ಅಲ್ಲ, ದೊಡ್ಡಾಟ .... ಏನ್ರಿ ! ಹೆಂಗಸ್ರು ? ನಾವೇನು ಕಡಿಮೆ ಅಂತಿದ್ದಿರಿ, ಗಂಡಸರಿಗೆ ಹೆದರಿ ಬಿಟ್ರಲ್ಲ ?

ಲ : (ತೊದಲುತ್ತ) ಮತ್ತೆ ...ಮತ್ತೆ....

ಸೀ : (ಲ) ಇವರ್ನ .... ಇವರ್ನ .... ಹಾಗೆ ಮಾಡು ಅಂದೋರು ಯಾರು ?

ಸು : ನಾನು ನಿಮ್ಮ ಕಣ್ಣು ಬಿಡಿಸಬೇಕು ಅಂತ ಚೀಲದಲ್ಲಿದ್ದ ಕರೀ ಸೀರೆ ತೆಕ್ಕೊಟ್ಟು ಹೀಗೆ ಮಾಡಿ ಅಂತ ಹೇಳ್ಕೊಟ್ಟೆ.

ಶ್ರೀ : ಹಾಗಾದರೆ .... ಬಾಕು ? ಅದೆಲ್ಲಿಟ್ಟಿದ್ದ ಈ ರಮೇಶ ?

ಸು : (ನಗುತ್ತ) ಬಾಕುವೂ ಅಲ್ಲ ಬಾಚಿಯೂ ಅಲ್ಲ ! ನಮ್ಮೂರಲ್ಲಿ ಅದೆಂಥದೋ ಎಗ್ಜಿಬಿಷನ್ ಆಯ್ತು ; ದೊಡ್ಡದೊಂದು ತರಕಾರಿ ಹೆಚ್ಚೋ ಚಾಕು ತೆಗೆದ್ಕೊಂಡಿದ್ದೆ, (ರಮೇಶನ ಕೈಯಿಂದ ತೆಗೆದುಕೊಂಡು) ಲಕ್ಷ್ಮೀಗೆ ಉಪಯೋಗ ಆದೀತು, ಕೊಡೋಣ ಅಂತ ಚೀಲದಲ್ಲಿ ಹಾಕಿದ್ದೆ ! (ಗಂಡಸು ನಗುವರು) ಈಗ ಅರ್ಥವಾಯ್ತಾ ಗಂಡಸು ಗಂಡಸೇ ಹೆಂಗಸು ಹೆಂಗಸೇ ಅಂತ ? ಹುಚ್ಚು ಹುಚ್ಚಾಗಿ ಆಡ್ತಿದೀರಲ್ಲ ?....ಅಂದ ಹಾಗೇ, ಈ (ಶ್ರೀಪತಿಯನ್ನ ತೋರಿಸುತ್ತ) ಗಂಡಸನ್ನೇಕೆ ಹಾಗೆ ಆಶ್ರಯಿಸಿ ನಿಂತಿದೀರಿ ? (ಲಕ್ಷ್ಮೀ, ಸೀಮಾ ಕೈ ಬಿಟ್ಟು ನಾಚುತ್ತ ನಿಲ್ಲುವರು)

ಸೀ : ಮತ್ತೆ...ಅಂತರ ರಾಷ್ಟ್ರೀಯ ಮಹಿಳಾ ವರ್ಷ ?

ಲ : ಸರಿಸಮಾನತೆ ?

ಸು : ಅದನ್ನ ಆಚರಿಸೀಂತ ಹೇಳಿದ ಹಿರಿಯರ ಉದ್ದೇಶ ನಿಮಗೆ ಅರ್ಥವಾಗಿಲ್ಲ. ನಗರಗಳಲ್ಲಿರೋ ನಿಮಗೆ ಈಗೇನು ಕಮ್ಮಿ ಆಗಿದೆ ? ವಿದ್ಯಾವಂತೇರಾಗಿದೀರಿ, ಕೆಲಸಗಳನ್ನ ಮಾಡ್ತೀರಾ, ಸ್ವತಂತ್ರರಾಗೇ ಇದೀರಿ ।

ಗೋ : ಗಂಡಸ್ರಿಗೆ ಸರಿಸಮಾನತೇನೂ ಇದೆ. ಯಾವ ಕಾರ್ಯಕ್ರಮದಲ್ಲಿ ಈಗ ಹೆಂಗಸರು ಭಾಗವಹಿಸಲ್ಲ ಹೇಳಿ ?

ಸು : ಹಿಂದುಳಿದಿರೋ ಹೆಂಗಸ್ರಿಗೆ, ಅನಾಥೆಯರಿಗೆ, ವಿಧವೆಯರಿಗೆ ನೆರವಾಗೋ ಅಂಥಾ ಯೋಜನೆಗಳನ್ನ ಕಂಡು ಹಿಡೀರಿ, ಅನಕ್ಷರಸ್ಥರಾಗಿರೋ ಹೆಂಗಸರಿಗೆ ವಿದ್ಯಾಭ್ಯಾಸ ಮಾಡಿಸಿ, ಬಡತನದಲ್ಲಿ ಮುಳುಗಿರೋ ಹಳ್ಳಿ ಹೆಣ್ಣು ಮಕ್ಕಳ ಪರಿಸ್ಥಿತಿ ಸುಧಾರಿಸಿ, ಅವರ ಕಾಲ ಮೇಲೆ ಅವರು ನಿಂತುಕೊಳ್ಳೋ ಹಾಗೆ ಮಾಡಿ ಅಂತ ಅವರು, ಈ ವರ್ಷಕ್ಕೊಂದು ವಿಶೇಷತೆ ಕೊಟ್ಟಿರೋದು !

ಗೋ : ಇನ್ನೂ ಕೆಲವು ಸಮಸ್ಯೆಗಳಿವೆ ಸುಬ್ಬವ್ವೋರೇ, ಆಸ್ತಿ ವಿಭಾಗ, ಹಕ್ಕು–ಬಾಧ್ಯತೆಗಳು, ವರದಕ್ಷಿಣೆ, ವೇತನದ ವಿಚಾರ–ಇಂಥಾವು ; ಮಾತಿಗೆ ಹೇಳ್ತೇನಿ, ನಮ್ಮೂರ ಆ ಫ್ಯಾಕ್ಟರಿಯ ನೋಡಿ–ಒಂದೇ ತರಹ ಕೆಲಸ ಮಾಡಿದರೂ ಗಂಡಸರಿಗೆ ಹೆಚ್ಚು ಸಂಬಳ ! ಈ ತರಹದ ಅನೇಕ ಸಮಸ್ಯೆಗಳನ್ನು ವಿದ್ಯಾವಂತೇರಾಗಿರೋ ಹೆಂಗಸರು ಬಿಡಿಸಲಿ ಅನ್ನೋದೂ ಈ ಅ.ರಾ.ಮ. ವರ್ಷದ ಧ್ಯೇಯ !

ಸು : ಅದು ಬಿಟ್ಟು, 'ಗಂಡಸ್ರನ್ನ ಅಲಕ್ಷಿಸಿ, ಅವರನ್ನ ವಿರೋಧಿಸಿ, ಅವರನ್ನ ಕಡೆಗಾಣಿಸಿ' ಅಂತಲ್ಲ ಅವರು ಹೇಳಿರೋದು.

ಶ್ರೀ : 'ಅವರ ಕೈಲಿ ಅಡಿಗೆ ಮಾಡಿಸಿ'–ಅದು ಬಿಟ್ಟಿಲ್ಲ ಸುಬ್ಬತ್ತೆ ?

ಗೋ : ಸಮಯ-ಸಂದರ್ಭ ಅಂದ್ರೆ ಮಾಡಿದರೇನೂ ತಪ್ಪಿಲ್ಲ ಶ್ರೀಪತಿ; ಇದು Mutual Co-operation ಯುಗ ; ಆದರೆ, ಪ್ರಕೃತೀನ ವಿರೋಧಿಸೋ ಪ್ರಯತ್ನ ಮೂರ್ಖತನ ಅಷ್ಟೆ....ಅಂದ ಹಾಗೇ, ನಮ್ಮ ಬುದ್ಧಿ ಪಟ್ಟಣದಲ್ಲೂ ಈ ದಿಶೇಲಿ ಬೇಕಾದಷ್ಟು ಕೆಲಸ ಆಗ್ತಿದೇವ್ವ ; ಸುಬ್ಬವ್ವನೋರೂ (ನಗುತ್ತ) ಒಬ್ರು ಮುಂದಾಳು !

ಸೀ : ಸುಬ್ಬತ್ತೇನೇ ?

ಸು : ಹೌದು ಕಣೇ ಹುಡುಗಿ. ನಮ್ಮ ನಗರದ ಹೆಂಗಸರು ಅಲ್ಲೊಂದು ಹಳ್ಳೀಲಿ ಈ ತರಹ ಕೆಲಸ ಪ್ರಾರಂಭಿಸಿದ್ದಾರೆ. ನನ್ನ ಸೊಸೇನು ಸೇರಿದ್ದಾಳೆ. ನನಗೆ ತಾನೆ ಸಂಜೆ ಹೊತ್ತು ಮನೇಲೇನು ಕೆಲಸ ? ಅವರ ಜೊತೆ ಹೋಗಿ ಹೆಂಗಸರಿಗೆ ಮಕ್ಕಳಿಗೆ ಎಷ್ಟು ಶ್ಲೋಕ, ಪದ್ಯ

ಕಲಿಸಿ ಪುರಾಣದ ಕತೆ ಹೇಳಿ ಬರ್ತೀನಿ !... ಅಂದ ಹಾಗೆ ಶ್ರೀಪತಿ ?

ಶ್ರೀ : ಏನತ್ತೆ ?

ಸು : ನನಗೆ ಬದಲಿ ಸೀರೆ ಬರಬೇಕು, (ಗೋವಿಂದಯ್ಯನ ಕೈಯಿಂದ ತೆಗೆದುಕೊಂಡು ತೋರಿಸುತ್ತ) ಇದು.... ನೀವು ಆದೇನೋ ಹೇಳ್ತಿರಲ್ಲ ಹೋಟೆಲ್ ಭಾಷೆ.... "ಒನ್-ಬೈಂ-ಟು" ಆಗಿಹೋಯ್ತು !

ಶ್ರೀ : (ನಗುತ್ತಾ) ಅಷ್ಟೇ ತಾನೇ? Sanctioned

ರ : (ಸೀಮಾಳ ಬಳಿ ಬಂದು ಮೆಲ್ಲನೆ) ವರಪರೀಕ್ಷೆ....?

ಸೀ : (ನಗುತ್ತ, ಮೆಲ್ಲನೆ) ಮುಂದುವರಿಸೋ ಅಗತ್ಯವಿಲ್ಲ ನೀವು ಪಾಸಾಗಿದೀರಿ !

ರ : Oh ! how happy I am !

(ಎಲ್ಲರೂ ವಾಸನೆ ನೋಡಿದಂತೆ ಮೂಗೆಳೆಯುವರು)

ಲ : ಇದೇನು ಸೀದ ವಾಸನೆ ?

ಶ್ರೀ : ಅರೆರೆ ! ಇವರಿಬ್ಬರಿಗೂ ಸಾರಿಗೆ ಅಂತ ಬೇಳೆ ಬೇಯ್ಸಾಕಿದ್ದೆ; ಸೀದು ಹೋಯ್ತೇನೋ ?

(ಓಡಿ ಹೋದಾಗ ಸುಬ್ಬಮ್ಮ ತಡೆದು ನಿಲ್ಲಿಸುವಳು "ನಿಂತ್ಕೋ ನಿಂತ್ಕೋ" ಕೂಗುವಳು)

ಸು : (ನಾಟಕೀಯವಾಗಿ) ಎಲೈ ಶ್ರೀಮನ್ನಾರಾಯಣ ! ಶ್ರೀಪತಿ ! ನಿನ್ನ ಕೈಗಳಲ್ಲಿರುವ "ಶಂಖಚಕ್ರ"ಗಳನ್ನು ನಿನ್ನ ಅರ್ಧಾಂಗಿ ಲಕ್ಷ್ಮೀದೇವಿಗೆ ಒಪ್ಪಿಸಿ ವಿಶ್ರಮಿಸಿಕೋ !

(ಶ್ರೀಪತಿ, ಸೌಟು ಜಾಲರಿ ತಟ್ಟೆಗಳನ್ನು ಲಕ್ಷ್ಮಿಗೆ ಕೊಡುವನು)

ಲ : (ನಾಟಕೀಯವಾಗಿ) ಶ್ರೀಮನ್ಮಹಾಲಕ್ಷ್ಮಿ ಇನ್ನು ಅರ್ಧ ತಾಸಿನೊಳಗೆ ರುಚಿ-ಶುಚಿ ಪಾಕ ತಯಾರಿಸಿ ಅತಿಥಿಗಳಿಗೆ ಬಡಿಸುವಳು !

ಗೋ : ತಥಾಸ್ತು ! (ಎಲ್ಲರೂ ನಗುತ್ತಿರುವಾಗ)

(ಈ ನಾಟಕ ಅಭಿನಯಿಸುವವರು ಹತ್ತು ರೂಪಾಯಿಗಳ ಗೌರವ ಧನದೊಂದಿಗೆ ಲೇಖಕಿಯ ಅನುಮತಿ ಪಡೆಯಬೇಕು)

---